ತಾ || ನ್ಯಾಯಸುಧಾ — (1) ಸಮವಾಯಿಕಾರಣ ಪ್ರತ್ಯಾಸನ್ನತ್ವಾದಿಗಳು ಇದ್ದರೂ ಅಸಮವಾಯಿಕಾರಣತ್ವವಿಲ್ಲವಾದರೆ ಆಗ ಅತಿವ್ಯಾಪ್ತಿ ಬರುವುದರಿಂದ ಇದು ಅಲಕ್ಷಣವಾಗುವುದು. ತಥಾಚ ಅಂತಹ ಮಹತ್ವಾದಿಗಳಿಗೂ ಅಸಮವಾಯಿಕಾರಣತ್ವವು ಬರುವುದು. (2) ದ್ವ್ಯಣುಕಾದಿ ಪರಿಮಾಣದಲ್ಲಿ ಅಸಮವಾಯಿಕಾರಣಲಕ್ಷಣವಿಲ್ಲವೆನ್ನುವ ೨ನೇ ಕಲ್ಪದಲ್ಲಿ ೧ ಸಮವಾಯಿಕಾರಣ ಪ್ರತ್ಯಾಸತ್ತಿಯಿಲ್ಲವ್ರೋ? ೨ ಸಾಮರ್ಥ್ಯಾನವಧಾರಣವ್ರೋ? ೧ನೇದ್ದು ಕೂಡಲಾರದು. ದ್ವ್ಯಣುಕಾದಿ ಪರಿಮಾಣಕ್ಕೆ ತ್ರ್ಯಣುಕಾದಿ ಪರಿಮಾಣ ಸಮವಾಯಿಕಾರಣಕ್ಕೆ ಸಮವಾಯಿಕಾರಣವಾದ ದ್ವ್ಯಣುಕಾದಿಗಳಲ್ಲಿ ಸಮವೇತತ್ವವು ಪ್ರಮಿತವಾಗಿದೆ. ಸಮವಾಯಿಕಾರಣ ಸಮವೇತತ್ವವಿಲ್ಲದಿರುವುದರಿಂದ ದ್ವ್ಯಣುಕಾದಿಪರಿಮಾಣ, ತ್ರ್ಯಣುಕಾದಿಪರಿಮಾಣಕ್ಕೆ ಉತ್ಪತ್ತಿಯಾಗದಿರುವುದಾದರೆ ಆಗ ತ್ರ್ಯಣುಕಾದಿಗಳಲ್ಲಿರತಕ್ಕ ಮಹತ್ವ, ದೀರ್ಘತ್ವಗಳಿಂದ ಚತುರಣುಕಾದಿ ಪರಿಮಾಣವೂ ಹುಟ್ಟದೆ ಹೋಗುವುದು. ಅದೂ ಸಮವಾಯಿಕಾರಣ ಸಮವೇತವಲ್ಲ. ೨ನೇದ್ದೂ ಕೂಡಲಾರದು. ಅನನ್ಯಥಾಸಿದ್ಧವಾದ ನಿಯತ ಪೂರ್ವಭಾವಿತ್ವದಿಂದ ಸಾಮರ್ಥ್ಯವನ್ನು ನಿಶ್ಚಯಿಸಬೇಕು. ಅದು ದ್ವ್ಯಣುಕಾದಿ ಪರಿಮಾಣದಲ್ಲಿ ಇದೆ. ಹೀಗಾದಾಗ್ಯೂ ಸಮವಾಯಿಕಾರಣ, ಸಮವೇತತ್ವವಿಲ್ಲದಿರುವುದರಿಂದ ಅದರಿಂದ ತ್ರ್ಯಣುಕಾದಿ ಪರಿಮಾಣಾದಿಗಳ ಉತ್ಪತ್ತಿಯಾಗದಿದ್ದರೆ ಆಗ ಮಹತ್ವ, ದೀರ್ಘತ್ವಗಳಿಂದಲೂ, ಚತುರಣುಕಪರಿಮಾಣವೂ ಹುಟ್ಟದೇನೇ ಹೋಗುವುದು || ೬೩ ||

ಪರಮಾಣು ಪರಿಮಾಣದ್ವೇಷಿಯಿಂದ ದ್ವ್ಯಣುಕ ಪರಿಮಾಣಕ್ಕೆ ಉತ್ಪತ್ತಿಯು, ಅದರಿಂದ ತ್ರ್ಯಣುಕ ಪರಿಮಾಣಕ್ಕೆ ಉತ್ಪತ್ತಿಯು. ಅವುಗಳಿಗಾದರೂ ಏಕ ಜಾತೀಯತ್ವವು ಇದೆ ಎಂದು ಅನುಮಾನದಿಂದ ಯಾವುದು ಸಾಧಿತವಾಗಿದೆಯೋ ಅದು ಅಯುಕ್ತವು. ಹೇಗೆಂದರೆ- ಪ್ರತಿ ತರ್ಕದಿಂದ ಪರಾಹತವಾಗಿದೆ. ಅಂದರೆ, ೧ ಪರಮಾಣುಪರಿಮಾಣದ್ವೇಷಿಯಿಂದ ದ್ವ್ಯಣುಕದಲ್ಲಿಯೂ ದ್ವ್ಯಣುಕಪರಿಮಾಣದ್ವೇಷಿಯಿಂದ ತ್ರ್ಯಣುಕದಲ್ಲಿಯೂ ಸಜಾತೀಯ ಪರಿಮಾಣವಾದ ಅಣುತ್ವಕ್ಕೆ ಉತ್ಪತ್ತಿಯು ಸಾಧಿಸಲ್ಪಡುತ್ತದೋ, ೨ ಅಥವಾ ಮಹತ್ವಕ್ಕೆ ಉತ್ಪತ್ತಿಯು ಸಾಧಿಸಲ್ಪಡುತ್ತದೋ, ೩ ಅಥವಾ ಹ್ರಸ್ವತ್ವಕ್ಕೆ ಉತ್ಪತ್ತಿಯು ಸಾಧಿಸಲ್ಪಡುತ್ತದೋ, ೪ ಅಥವಾ ದೀರ್ಘತ್ವಕ್ಕೆ ಉತ್ಪತ್ತಿಯು ಸಾಧಿಸಲ್ಪಡುತ್ತದೋ? ಈ ಎಲ್ಲಾ ಪಕ್ಷಗಳೂ ದುಷ್ಟಗಳಾಗಿವೆವೆನ್ನುತ್ತಾರೆ—

**ಮೂ || ಸದೃಶಸ್ಯ ಹಿ ಕಾರ್ಯಸ್ಯ ನೈವ ಯೋಗಃ ಕಥಂಚನ ।**
**ಅಪ್ರತ್ಯಕ್ಷತ್ವಮೇವ ಸ್ಯಾದ್ಯತಃ ಕಾರ್ಯೇಷ್ವಣುತ್ವತಃ || ೬೪ ||**

ಅ || (ಪರಮಾಣುಪರಿಮಾಣದ್ವೇಷಿಯಿಂದ ಅಣುತ್ವದಿಂದ ಸಜಾತೀಯವಾದ ಪರಿಮಾಣವು ದ್ವ್ಯಣುಕದಲ್ಲಿಯೂ, ದ್ವ್ಯಣುಕಪರಿಮಾಣದ್ವೇಷಿಯಿಂದ ತ್ರ್ಯಣುಕದಲ್ಲಿಯೂ ಪರಿಮಾಣವು ಹುಟ್ಟುವುದಾದರೆ ಆಗ) ಕಾರ್ಯೇಷು=ಎಲ್ಲಾ ಕಾರ್ಯಗಳಲ್ಲಿಯೂ, ಅಣುತ್ವತಃ=ಅಣುತ್ವ ಬರಬೇಕಾಗುವುದರಿಂದ, ಅಪ್ರತ್ಯಕ್ಷತ್ವಮೇವ=ಅಸ್ಮದಾದ್ಯಪ್ರತ್ಯಕ್ಷತ್ವವೇ, ಯತಃ=ಯಾವ ಕಾರಣದ್ವೇಷಿಯಿಂದ, ಸ್ಯಾತ್ ಆಗುವುದೋ, (ಆದುದರಿಂದ ೧ನೇ ಪಕ್ಷವು ಅಯುಕ್ತವು.) (ತಸ್ಮಾತ್= ಆದಕಾರಣ,) ಸದೃಶಸ್ಯ ಕಾರ್ಯಸ್ಯ=ಸದೃಶವಾದ ಕಾರ್ಯಕ್ಕೆ, ಯೋಗಃ=ಘಟನೆಯು, ಕಥಂಚನ=ಹಿಂದಿನ ಪ್ರಕಾರಗಳಲ್ಲಿ ಯಾವ ಪ್ರಕಾರದಿಂದಲೂ, ನೈವ=ಆಗುವುದೇ ಇಲ್ಲ.

ತಾ || ದ್ವ್ಯಣುಕಕ್ಕೆ ಅಪ್ರತ್ಯಕ್ಷತ್ವವು ಇಷ್ಟವೇ ಎಂದರೆ ಸರ್ವಕಾರ್ಯಗಳಿಗೂ ಅಪ್ರತ್ಯಕ್ಷತ್ವವೇ ಬರಬೇಕಾಗುವುದು. ಯಾವ ಬಹಿರ್ದ್ರವ್ಯದಲ್ಲಿ ಮಹತ್ವವಿದ್ದು ಉದ್ಭೂತರೂಪವಾಗಲೀ

ಉದ್ಭೂತಸ್ಪರ್ಶವಾಗಲೀ ಇದೆಯೋ ಅಲ್ಲಿ ಅಸ್ಮದಾದಿ ಪ್ರತ್ಯಕ್ಷತ್ವವು ಸಿದ್ಧವಾಗಿದೆ. ತಥಾಚ ತ್ರ್ಯಣುಕಾದಿಗಳಿಗೆ ಅಣುತ್ವವಿರುವುದಾದರೆ ಮಹತ್ವವಿಲ್ಲವಿರುವುದರಿಂದ ಅಪ್ರತ್ಯಕ್ಷತ್ವವು ಬರಬೇಕಾಗುವುದು. ೩ನೇದ್ದೂ ಅಯುಕ್ತವು. ತ್ರ್ಯಣುಕಾದಿಗಳಿಗೂ ಹ್ರಸ್ವತ್ವವಿರುವುದಾದರೆ ಮಹತ್ವವಿಲ್ಲದಿರುವುದರಿಂದ ಅಪ್ರತ್ಯಕ್ಷತ್ವವು ಬರಬೇಕಾಗುವುದು. ೨ನೇದ್ದೂ ಅಯುಕ್ತವು. ಪರಮಾಣು ದ್ವ್ಯಣುಕಗಳಿಗೂ ಮಹತ್ವವಿರುವುದಾದರೆ ಪ್ರತ್ಯಕ್ಷತ್ವವು ಬರಬೇಕಾಗುವುದು. ೪ನೇದ್ದೂ ಅಯುಕ್ತವು. ದೀರ್ಘತ್ವವಿರುವುದಾದರೆ ಮಹತ್ವವೂ ಇರಲೇಬೇಕು. ಯದ್ಯಪಿ ಪರಿಮಾಣಾವಾಂತರಜಾತಿಗಳಾದ ಅಣುತ್ವಾದಿಗಳು ಅಪ್ರಾಮಾಣಿಕಗಳು ಎಂದು ಹೇಳುವುದರಿಂದ ಇದು ಪರಿಹೃತವೇ ಆಗುವುದು. ಆದಾಗ್ಯೂ ಆ ಅರ್ಥವನ್ನೇ ಸ್ಪಷ್ಟೀಕರಿಸುವುದಕ್ಕಾಗಿ ಪುನಃ ಆಶಂಕಿಸಿಕೊಂಡದ್ದು. ಆದಕಾರಣ ದೋಷವಿಲ್ಲ ॥ ೬೪ ॥

ಈಗ ವಿಕಲ್ಪಿಸಿದ ನಾಲ್ಕು ಪಕ್ಷಗಳಲ್ಲಿ ಮಹತ್ವಪಕ್ಷವನ್ನು ತಿರಸ್ಕರಿಸುತ್ತಾರೆ—

**ಮೂ ॥ ಇತಿ ಚೇನ್ನ ಮಹತ್ವಂ ಚ ಪರಮಾಣಾವಣಾವಪಿ ।**
**ಕಥಂ ದ್ವ್ಯಣುಕಪೂರ್ವೇಷು ನಾಣುತ್ವಮಪಿ ಕಥ್ಯತೇ ॥ ೬೫ ॥**

**ಅ ॥** ಇತಿ ಚೇತ್=ಹೀಗೆ ಹೇಳುವುದಾದರೆ, ಪರಮಾಣೌ=ಪರಮಾಣುವಿನಲ್ಲಿಯೂ, ಅಣಾವಪಿ=ದ್ವ್ಯಣುಕದಲ್ಲಿಯೂ ಕೂಡ, ಮಹತ್ವಂ ಚ=ಮಹತ್ವವೂ, ದೀರ್ಘತ್ವವೂ ಕೂಡ, ಕಥಂ=ಹೇಗೆ, ನ ಕಥ್ಯತೇ=ಹೇಳಲ್ಪಡುವುದಿಲ್ಲ. ದ್ವ್ಯಣುಕಪೂರ್ವೇಷು=ದ್ವ್ಯಣುಕ ಮೊದಲಾದವುಗಳಲ್ಲಿ, ಅಣುತ್ವಮಪಿ=ಅಣುತ್ವವೂ ಕೂಡ, ಕಥಂ=ಹೇಗೆ, ನ ಕಥ್ಯತೇ=ಹೇಳಲ್ಪಡುವುದಿಲ್ಲ.

**ತಾ ॥** (1) ಅಣುತ್ವಕ್ಕೆ ಉತ್ಪತ್ತಿಯು ಸಾಧಿಸಲ್ಪಡುತ್ತದೋ, ಇತ್ಯಾದಿ ಪ್ರಕಾರ ಯಾವುದು ಹೇಳಲ್ಪಟ್ಟದೋ, ಆ ವಿಷಯದಲ್ಲ ಪರಮಾಣು ಮಹತ್ವದಿಂದ ದ್ವ್ಯಣುಕದಲ್ಲಿ ಮಹತ್ವವು, ದ್ವ್ಯಣುಕ ಮಹತ್ವದಿಂದ ತ್ರ್ಯಣುಕದಲ್ಲಿ ಮಹತ್ವವು ಹುಟ್ಟುತ್ತದೆ. (2) ಪರಮಾಣುವಿಗೆ ಅಣುತ್ವವಿದ್ದಪ್ರಯುಕ್ತ ದ್ವ್ಯಣುಕದಲ್ಲಿ ಅಣುತ್ವವು, ದ್ವ್ಯಣುಕಾಣುತ್ವದಿಂದ ತ್ರ್ಯಣುಕದಲ್ಲಿ ಅಣುತ್ವವು, ಅದರಿಂದ ಚತುರಣುಕದಲ್ಲಿ ಅಣುತ್ವವು, ಹೀಗೆ ಪೂರ್ವಾರ್ಧದಿಂದ ಎರಡು ಪಕ್ಷಗಳನ್ನು, ಉತ್ತರಾರ್ಧದಿಂದ ಅಣುತ್ವರೂಪ ಪಕ್ಷವನ್ನು ಇಟ್ಟುಕೊಂಡರು. ॥ ೬೫ ॥

(1) ಹೀಗಾದರೆ ಮಹತ್ವ, ಅಣುತ್ವರೂಪ ಎರಡು ಪಕ್ಷಗಳಲ್ಲಿ ಹೇಳಿದ ದೋಷಗಳೂ ಬರಬೇಕಾಗುವವು, ವ್ಯಾಹತಿಯೊಂದು ಅಧಿಕವಾಗಿ ಬರುವುದು. ಹೇಗೆಂದರೆ— ಪರಮಾಣುವನ್ನು ಆರಂಭಿಸಿ. ಅಂತ್ಯಾವಯವಿಪರ್ಯಂತವಾಗಿ ಉದ್ಭೂತರೂಪಸ್ಪರ್ಶಗಳುಳ್ಳದ್ದಕ್ಕೆ ಮಹತ್ವವಿದ್ದರೆ ಎಲ್ಲಾದಕ್ಕೂ ಪ್ರತ್ಯಕ್ಷತ್ವವು ಬರಬೇಕಾಗುವುದು. ಅಣುತ್ವವಿದ್ದರೆ ಅಪ್ರತ್ಯಕ್ಷತ್ವವು ಬರಬೇಕಾಗುವುದು. ಪರಮಾಣ್ವಾದಿಗಳಿಗೆ ಪ್ರತ್ಯಕ್ಷತ್ವವೂ, ತ್ರ್ಯಣುಕಾದಿಗಳಿಗೆ ಅಪ್ರಕ್ಷತ್ವವೂ ಯುಕ್ತವಲ್ಲ. ಪ್ರತ್ಯಕ್ಷತ್ವ, ಅಪ್ರತ್ಯಕ್ಷತ್ವಗಳು ಪರಸ್ಪರ ವ್ಯಾಹತಗಳಾಗಿವೆ. ಯಾವುವು ಪ್ರತ್ಯಕ್ಷವಾದ ಘಟಾದಿಗಳೋ ಅವುಗಳು ಅಪ್ರತ್ಯಕ್ಷವಲ್ಲ. ಯಾವುದು ಅಪ್ರತ್ಯಕ್ಷವಾದ ಆಕಾಶಾದಿಗಳೋ ಅವು ಪ್ರತ್ಯಕ್ಷವಲ್ಲ. ಹೀಗೆ ಅವುಗಳು ಪರಸ್ಪರವಾಗಿ ಬಿಟ್ಟುಕೊಂಡೇ ಇರುತ್ತವೆ. (೭) ಮತ್ತು ಮಹತ್ವ, ಅಣುತ್ವಗಳು ಪರಸ್ಪರ ವಿರುದ್ಧಗಳಾಗಿರುವುದರಿಂದ ಹೇಗೆ ಒಂದೇ ಕಡೆಯಲ್ಲಿ ಅಂಗೀಕರಿಸಲಿಕ್ಕೆ ಉಚಿತಗಳಾಗುತ್ತವೆ? ಪರಿಮಾಣವು ದ್ರವ್ಯವಿರುವ ತನಕ ಇರತಕ್ಕುದಾದಪ್ರಯುಕ್ತ ಕಾಲಭೇದದಿಂದ ವಿರೋಧವನ್ನು ಪರಿಹರಿಸಲಿಕ್ಕೂ ಕೂಡದು, ಎಂದಾಶಂಕಿಸಿ

ಪ್ರತ್ಯಕ್ಷತ್ವ, ಅಪ್ರತ್ಯಕ್ಷತ್ವಗಳು ಬರಬೇಕಾಗುವವು. ಎನ್ನುವುದು ಇಷ್ಟವೇ ಎಂದು ಹೇಳುತ್ತಾ ವ್ಯಾಹತಿಯನ್ನು ಪರಿಹರಿಸುತ್ತಾರೆ.

**ಮೂ ॥ ಪ್ರತ್ಯಕ್ಷತ್ವತದನ್ಯತ್ವೇ ಪುರುಷಾಪೇಕ್ಷಯಾಽಖಿಲೇ ।**
**ಅಣುತ್ವಂ ಚ ಮಹತ್ವಂ ಚ ಯತೋ ವಸ್ತ್ವ್ಯಪೇಕ್ಷಯಾ ॥ ೬೬ ॥**

ಅ ॥ ಅಖಿಲೇ = ಪರಮಾಣು ಮೊದಲಾದ ಎಲ್ಲಾ ದ್ರವ್ಯಗಳಲ್ಲಿಯೂ, ಪ್ರತ್ಯಕ್ಷತ್ವ ತದನ್ಯತ್ವೇ=ಪ್ರತ್ಯಕ್ಷತ್ವ ಅಪ್ರಕ್ಷತ್ವಗಳು (ಇವೆ. ಈ ಪ್ರಸಂಗಗಳು ಯುಕ್ತಗಳಲ್ಲ.) ಪುರುಷಾಪೇಕ್ಷಯಾ=ಪುರುಷಭೇದವನ್ನು ಅಪೇಕ್ಷಿಸಿ.(ವ್ಯವಸ್ಥೆಯು ಕೂಡುತ್ತದೆ.) (ಈಗ ಅಣುತ್ವಮಹತ್ವಗಳಿಗೆ ವ್ಯಾಹತಿಯನ್ನು ಪರಿಹರಿಸುತ್ತಾರೆ ) ಅಣುತ್ವಂ ಚ=ಅಣುತ್ವವೂ,ಮಹತ್ವಂ ಚ=ಮಹತ್ವವೂ ಕೂಡ, ಅಖಿಲೇ=ಎಲ್ಲಾ ವಸ್ತುಗಳಲ್ಲಿಯೂ, (ಇರುತ್ತವೆ ವಿರುದ್ಧಗಳಲ್ಲ. ಹೇಗೆಂದರೆ—) ಯತಃ=ಯಾವಕಾರಣಗ್ದೆಶೆಯಿಂದ, ವಸ್ತ್ವ್ಯಪೇಕ್ಷಯಾ = ವಸ್ತುದ್ರವ್ಯಗಳನ್ನು ಅಪೇಕ್ಷಿಸಿ, (ಅಣುತ್ವವೂ, ಮಹತ್ವವೂ ಕೂಡ ಅದೇವೇ ಹೇಳಲ್ಪಡುತ್ತದೆ.)

ತಾ ॥ (1) ಪರಮಾಣು ಮೊದಲಾದ ಎಲ್ಲಾ ದ್ರವ್ಯಗಳಲ್ಲಿ ಅಣುತ್ವಮಹತ್ವಗಳನ್ನು ಅಂಗೀಕರಿಸಿದರೆ ವಿರೋಧವು ಬರುತ್ತಿತ್ತು. ರೂಪದಲ್ಲಿ ನೀಲತ್ವ, ಪೀತತ್ವಗಳಂತೆಯೇ ಪರಿಮಾಣದಲ್ಲಿ ಅಣುತ್ವ ಮಹತ್ವಾದಿ ಜಾತಿಯೋಗವು ಇರುತ್ತಿದ್ದರೆ ವಿರೋಧವು ಬರುತ್ತಿತ್ತು. ಪ್ರಮಾಣವೇ ಇಲ್ಲದಿರುವುದರಿಂದ ಆ ಜಾತಿಯೇ ಇಲ್ಲ. ಆದರೆ ಹೇಗೆ ತ್ರ್ಯಣುಕಾದಿಗಳಲ್ಲಿ ಏಕಜಾತೀಯವೇ ಆದ ಮಹತ್ವವನ್ನು ಉತ್ಕರ್ಷ-ಅಪಕರ್ಷವುಳ್ಳದ್ದೆಂದು ಪರರು ಅಂಗೀಕರಿಸಿರುವರೋ ಹೇಗೆ ಅಣುತ್ವವನ್ನು ಪರಮಾಣುದ್ವ್ಯಣುಕಗಳಲ್ಲಿ ಅಂಗೀಕರಿಸಿರುವರೋ, ಹೀಗೆಯೇ ಅವಾಂತರಜಾತಿ ರಹಿತವೇ ಆದ ಪರಿಮಾಣವು ಎಲ್ಲಾ ದ್ರವ್ಯಗಳಲ್ಲಿಯೂ ಉತ್ಕರ್ಷ-ಅಪಕರ್ಷವುಳ್ಳದ್ದಾಗಿರುತ್ತದೆ. ತಥಾ ಚ ಒಂದು ಕಡೆ ಇರತಕ್ಕ ಪರಿಮಾಣವು ದ್ರವ್ಯಾಂತರದಲ್ಲಿರತಕ್ಕ ಉತ್ಕೃಷ್ಟಪರಿಮಾಣವನ್ನು ಅಪೇಕ್ಷಿಸಿ ಅಣುವೆನ್ನಿಸುತ್ತದೆ. ಅದೇವೇ ದ್ರವ್ಯಾಂತರದಲ್ಲಿರತಕ್ಕ ಅಪಕೃಷ್ಟ ಪರಿಮಾಣವನ್ನು ಅಪೇಕ್ಷಿಸಿ ಮಹತ್ವವೆಂದು ಹೇಳಲ್ಪಡುತ್ತದೆ. ಆದ ಕಾರಣ ವಿರೋಧವಿಲ್ಲ. (2) ಹೀಗೆಯೇ ಪ್ರತ್ಯಕ್ಷತ್ವ ಅಪ್ರತ್ಯಕ್ಷತ್ವಗಳಿಗೂ ವಿರೋಧವನ್ನು ನಿರಾಕರಿಸಬೇಕು. ॥ ೬೬ ॥

ಹೀಗೆ ಪರಿಮಾಣದಲ್ಲಿ ಅವಾಂತರಜಾತ್ಯಭಾವವು ಇರಲಿ. ಆದಾಗ್ಯೂ ಎಲ್ಲಾ ಕಡೆಗಳಲ್ಲಿಯೂ ಮಹತ್ವವನ್ನೂ, ಅಣುತ್ವವನ್ನೂ ಅಂಗೀಕರಿಸುವುದು ಯುಕ್ತವಾಗುವುದಿಲ್ಲ. ಉತ್ಕೃಷ್ಟ ಅಪಕೃಷ್ಟ ಪರಿಮಾಣವನ್ನೂ ಅಪೇಕ್ಷಿಸಿ ಮಧ್ಯದಲ್ಲಿರುವ ಪರಿಮಾಣವು ಅಣುತ್ವವು ಮಹತ್ವವೂ ಎಂದೆನ್ನಿಸಿಕೊಳ್ಳುತ್ತದೆ ಎಂದುಕ್ತವಾಗಿದೆ. ಅದಾದರೂ ದ್ವಣುಕಾದಿಪರಿಮಾಣದಲ್ಲಿ ಕೂಡುತ್ತದೆ. ಪರಮಾಣು ಪರಿಮಾಣದಲ್ಲಿ ಕೂಡುವುದಿಲ್ಲ. ಪರಮಾಣು ಪರಿಮಾಣದ್ದೆಶೆಯಿಂದ ನಿಕೃಷ್ಟಪರಿಮಾಣವು ಇಲ್ಲವಷ್ಟೆ. ಯಾವುದನ್ನು ಅಪೇಕ್ಷಿಸಿಕೊಂಡು ಅದು ಮಹತ್ವವಾಗುವುದು. ಆದುದರಿಂದ ಪರಮಾಣುವಿಗೆ ಅಣುತ್ವವೇ. ತಥಾಚ 'ನ ಮಹತ್ವಂಚ' ಇತ್ಯಾದಿಗಳಿಂದ ಹೇಳಿದ್ದು ಅಯುಕ್ತವೆಂದರೆ—

**ಮೂ ॥ ತಾರತಮ್ಯಸ್ಥಿತಾ ಯಸ್ಮಾತ್ಸದಾರ್ಥಾಃ ಸರ್ವ ಏವ ಚ ।**
**ಯಥಾ ಮಹತ್ವವಿಶ್ರಾಂತಿಸ್ತಥಾಽಣುತ್ವಸ್ಯ ಚೇಷ್ಯತೇ ॥**
**ಪರಿಮಾಣತ್ವತಶ್ಚೇನ್ನ ಮಹತ್ವಸ್ಯಾಪಿ ವಿಶ್ರಮಃ ॥ ೬೭ ॥**

ಅ || ಯಸ್ಮಾತ್=ಯಾವಕಾರಣದ್ದೆಶೆಯಿಂದ, ಸರ್ವ ಏವ ಚ ಪದಾರ್ಥಾಃ=ಎಲ್ಲಾ ಪದಾರ್ಥಗಳೂ, ತಾರತಮ್ಯಸ್ಥಿತಾಃ=ಪರಿಮಾಣತಾರತಮ್ಯದಿಂದಲೇಇರುತ್ತಾವೋ, (ತನ್ನ ಪರಿಮಾಣಕ್ಕಿಂತ ಉತ್ಕೃಷ್ಟ ಅಪಕೃಷ್ಟ ಪರಿಮಾಣವುಳ್ಳವುಗಳು. ಎಲ್ಲಾದ್ರವ್ಯಗಳೂ ಯಾವುದೋ ಒಂದು ಪರಿಮಾಣದ್ದೆಶೆಯಿಂದ ಉತ್ಕೃಷ್ಟವಾದ ಪರಿಮಾಣದಿಂದಲೂ ಅಪಕೃಷ್ಟಪರಿಮಾಣದಿಂದಲೂ ಕೂಡಿದವುಗಳು. ಆದುದರಿಂದ ಪರಮಾಣುವಿಗೂ ಮಹತ್ವವು ಯುಕ್ತವಾಗುತ್ತದೆ.) (ಪರಮಾಣುವಿಗೂ ಉತ್ಕೃಷ್ಟಪರಿಮಾಣಾಶ್ರಯತ್ವವುಯಾವುದು ಉಕ್ತವಾಗಿದೆಯೋ ಅದನ್ನಾಕ್ಷೇಪಿಸುತ್ತಾರೆ) ಯಥಾ = ಹೇಗೆ, ಮಹತ್ವವಿಶ್ರಾಂತಿಃ = ಮಹತ್ವಕ್ಕೆ (ಪರಿಮಾಣೋತ್ಕರ್ಷಕ್ಕೆ) ವಿಶ್ರಾಂತಿಯುದೆಯೋ, ತಥಾ=ಹಾಗೆಯೇ, ಪರಿಮಾಣತ್ವತಃ=ಪರಿಮಾಣತಾರತಮ್ಯವಿದ್ದಪ್ರಯುಕ್ತ ಅಣುತ್ವಸ್ಯಚ = ಅಣುತ್ವಕ್ಕೂಕೂಡ (ಪರಿಮಾಣಾಪಕರ್ಷಕ್ಕೂ) ವಿಶ್ರಾಂತಿಃ=ವಿಶ್ರಾಂತಿಯು, ಇಷ್ಯತೇ ಚೇತ್=ಇಚ್ಛಿಸಲ್ಪಡುವುದಾದರೆ, ಮಹತ್ವಸ್ಯಾಪಿ=ದೃಷ್ಟಾಂತೀಕೃತವಾದ ಮಹತ್ವಕ್ಕೂ, ಪರಿಮಾಣೋತ್ಕರ್ಷತಾರತಮ್ಯಕ್ಕೂ, ವಿಶ್ರಮಃ=ವಿಶ್ರಾಂತಿಯು, ನ=ಇಲ್ಲ.

ತಾ || (1)'ಪರಮಾಣುಃ ಕುತಶ್ಚಿತ್ ಉತ್ಕೃಷ್ಟೇನ ಪರಿಮಾಣೇನ ಯುಕ್ತಃ ಸ್ವಪರಿಮಾಣಾಪೇಕ್ಷಯಾ ಅಪಕೃಷ್ಟಪರಿಮಾಣವಾನ್ ವಾ ದ್ರವ್ಯತ್ವಾತ್ ತಂತುವತ್'=ಪರಮಾಣುವು ಯಾವುದೋ ಒಂದರಿಂದ ಉತ್ಕೃಷ್ಟವಾದ ಪರಿಮಾಣದಿಂದ ಯುಕ್ತವಾಗಿದೆ; ಅಥವಾ ತನ್ನಪರಿಮಾಣಕ್ಕಿಂತ ಅಪಕೃಷ್ಟಪರಿಮಾಣವುಳ್ಳ ದ್ರವ್ಯದಿಂದಕೂಡಿದ್ದು ದ್ರವ್ಯವಾಗಿರುವುದರಿಂದ ತಂತುವಿನಂತೆ. ಹೀಗೆ ಪರಮಾಣು ದ್ವ್ಯಣುಕಾದಿಪರಿಮಾಣಗಳಿಗೆ ವೈಜಾತ್ಯವು 'ಇಲ್ಲದಿರುವುದರಿಂದ 'ಮಹದ್ದೀರ್ಘವದ್ವಾ' ಎನ್ನುವಸೂತ್ರದಲ್ಲಿ ಹೇಳಲ್ಪಟ್ಟ ನಾಲ್ಕು ಅನುಮಾನಗಳು ಸಾಧುವೆಂದು ಸಿದ್ಧವಾಯಿತು. (2) 'ಪರಿಮಾಣಾಪಕರ್ಷತಾರತಮ್ಯಂ ಕ್ವಚಿದ್ವಿಶ್ರಾಂತಂ ಪರಿಮಾಣತಾರತಮ್ಯತ್ವಾತ್ ಪರಿಮಾಣೋತ್ಕರ್ಷತಾರತಮ್ಯವತ್'=ಪರಿಮಾಣನಿಕೃಷ್ಟತಾರತಮ್ಯವು ಎಲ್ಲಿಯಾದರೂ ಒಂದುಕಡೆ ವಿಶ್ರಾಂತವಾಗಿದೆ. ಪರಿಮಾಣತಾರತಮ್ಯವಾಗಿರುವುದರಿಂದ ಪರಿಮಾಣೋತ್ಕರ್ಷತಾರತಮ್ಯದಂತೆ ಎನ್ನುವ ಅನುಮಾನದಿಂದ ಪರಿಣಾಮಾಪಕರ್ಷ ತಾರತಮ್ಯಕ್ಕೆ ಎಲ್ಲಿಯಾದರೂ ಒಂದುಕಡೆ ವಿಶ್ರಾಂತಿಯು ಸಿದ್ಧವಾದರೆ ಎಲ್ಲಿ ಇದು ವಿಶ್ರಾಂತವಾಗಿದೆಯೋ ಯಾವುದಕ್ಕಿಂತ ಅತ್ಯಣುವು ಇಲ್ಲವೋ ಅದು ಪರಮಾಣುವು ಎಂದು ಪರಿಮಾಣಾಪಕರ್ಷಕದ ಅವಧಿಗೆ ಆಶ್ರಯವಾಗಿ ಸಿದ್ಧವಾದ ಪರಮಾಣುವಿಗೆ ಉತ್ಕೃಷ್ಟಪರಿಮಾಣಾಖ್ಯವಾದ ಮಹತ್ವವನ್ನು ಸಾಧಿಸಲಿಕ್ಕೆ ಹೇಗೆ ಶಕ್ಯವಾಗುವುದು? ಧರ್ಮಿಗ್ರಾಹಕ ಪ್ರಮಾಣದಿಂದಲೂ ಸ್ವವಚನದಿಂದಲೂ ವ್ಯಾಹತಿಯು ಎಂದರೆ ವಿಶ್ರಾಂತಿಯೆಂದರೆ ಯಾವುದು? (೧) ಇಯತ್ತಾಪರಿಚ್ಛೇದವೋ (ತ್ರ್ಯಣುಕಪರಿಮಾಣದ್ದೆಶೆಯಿಂದ ಆರನೇಭಾಗವೇ ಪರಮಾಣುವು, ಅದಕ್ಕಿಂದ ಅಪಕೃಷ್ಟವಿಲ್ಲವೆಂದೋ) (೨) ಅಥವಾ ಅಪಕರ್ಷತಾರತಮ್ಯವು ಇಯತ್ತಾವಚ್ಛೇದರಹಿತವಾದುದೆಯೋ? ಆದರೆ ಅನಂತಾಂಶಗಳಿಂದ ಕೂಡಿದಾಗ್ಯೂ ಅವೆಲ್ಲವೂ ಎಲ್ಲಿಯಾದರೂ ಆಶ್ರಿತವೇ ಆಗದೆಯೋ? ಅದರಲ್ಲಿ ಒಂದನೇಸಾಧ್ಯದಲ್ಲಿ ದೃಷ್ಟಾಂತವು ಸಾಧ್ಯವಿಕಲವಾಗಿದೆ. ದೃಷ್ಟಾಂತೀಕೃತವಾದ ಮಹತ್ವಕ್ಕೂ ಪರಿಮಾಣೋತ್ಕರ್ಷತಾರತಮ್ಯಕ್ಕೂ ವಿಶ್ರಾಂತಿಯೇ ಇಲ್ಲ. || ೬೭ ||

ಏಕೆ ವಿಶ್ರಾಂತಿಯಿಲ್ಲವೆಂದರೆ—

**ಮೂ || ದೃಶ್ಯತೇಽನಂತ ಇತ್ಯೇವ ತಥಾಽನಂತ್ಯಮಣಾವಪಿ || ೬೮ ||**
**ನ ಮಹತ್ತ್ವಗುಣತ್ವ ಏತಾವಾನಿತಿ ಹೀಶ್ವರಃ |**
**ಪರಿಚ್ಛಿನ್ನಸ್ತಥಾಣೋಶ್ಚ ನೈತಾವದ್ಭಾಗತಾ ಕ್ವಚಿತ್ || ೬೯ ||**

**ವಿಶ್ರಾಂತೋ ಯದ್ಯನಂತಾಂಶಃ ಕ್ವಚಿದಸ್ತೀತಿ ಗಮ್ಯತೇ ।**
**ನಾವಸಾದಯಿತುಂ ಶಕ್ಯೋ ವಿರೋಧಾದೇವ ಕೇವಲಂ ॥ ೭೦ ॥**

**ಅ ॥** (ಪರಿಮಾಣೋತ್ಕರ್ಷತರತಮಭಾವವು) ಅನಂತ ಇತ್ಯೇವ=ನಿರವಧಿಕವೆಂದೇ, ದೃಶ್ಯತೇ=ಕಾಣಲ್ಪಡುತ್ತದೆ. (ಬಾಧಕಪ್ರಮಾಣವಿದ್ದಪ್ರಯುಕ್ತವೂ, ಸಾಧಕಪ್ರಮಾಣವಿಲ್ಲದಿರುವುದರಿಂದಲೂ ಇಯತ್ತಾಪರಿಚ್ಛೇದವುಳ್ಳದ್ದಲ್ಲ.) (ಈ ಪಕ್ಷದಲ್ಲಿ ಅನುಮಾನವು ಬಾಧಿತವೆನ್ನುತ್ತಾರೆ) ತಥಾ=ಹಾಗೆಯೇ, ಅಂದರೆ ಕೇವಲ ಪರಿಮಾಣೋತ್ಕರ್ಷತರತಮಭಾವವು ನಿರವಧಿಕವೆಂದು ಕಾಣಲ್ಪಡುವುದಲ್ಲ. ಮತ್ತೆ ಅಣಾವಪಿ=ಪರಿಮಾಣಾಪಕರ್ಷ ತಾರತಮ್ಯದಲ್ಲಿಯೂ, ಆನಂತ್ಯಂ=ನಿರವಧಿಕತ್ವವು, ದೃಶ್ಯತೇ=ಕಾಣಲ್ಪಡುತ್ತದೆ. ('ದೃಶ್ಯತೇಽನಂತ ಇತ್ಯೇವ' ಎಂದು ಇಯತ್ತಾಪರಿಚ್ಛೇದವು ದೃಷ್ಟಾಂತದಲ್ಲಿ ಕಾಣಲ್ಪಡುವುದಿಲ್ಲ ಎಂದು ಏವ ಶಬ್ದದಿಂದ ಹೇಳಲ್ಪಟ್ಟಿತು. ಅದನ್ನು ವಿಶದೀಕರಿಸುತ್ತಾರೆ.) ಮಹತ್ತತ್ವಗುಣತಃ=ಮಹತ್ತತ್ವಾದಿಗಳ ಪರಿಮಾಣವನ್ನು ಗಣನೆಮಾಡಿ, ಈಶ್ವರಃ=ಈಶ್ವರಾದಿಯು. ಏತಾವಾನ್=ಐದು ಗುಣಪರಿಮಾಣವುಳ್ಳವನು, ಅಥವಾ ಆರುಗುಣ ಪರಿಮಾಣವುಳ್ಳವನು, ಇತಿ=ಹೀಗೆ, ಪರಿಚ್ಛಿನ್ನಃ=ಪರಿಚ್ಛಿನ್ನನು, ನ ಸ್ಯಾತ್=ಆಗಲಾರನು, ಹಿ=ಪರಿಚ್ಛಿನ್ನನಾಗಿದ್ದರೆ ಪರಮ ಮಹತ್ವವೇ ಕೂಡಲಾರದು. (ಯಾವ ಕಾರಣದ್ದೆಶೆಯಿಂದ ದೃಷ್ಟಾಂತದಲ್ಲಿ ಇಷ್ಟುಗುಣಗಳುಳ್ಳ ಪರಿಮಾಣವೇ ಸೆಳೆಯಲ್ಪಡುತ್ತದೋ ಇದರಿಂದ ಹೆಚ್ಚುಯಿಲ್ಲ. ಆದಕಾರಣ ಸಾಧ್ಯವಿಲ್ಲ. ಆದುದರಿಂದ) ತಥಾ=ಆ ದೃಷ್ಟಾಂತದಿಂದ, ಅಣೋಶ್ಚ=ಅಣುತ್ವಕ್ಕೂ ಪರಿಮಾಣಾಪಕರ್ಷಕ್ಕೂ, ಏತಾವದ್ಭಾಗತಾ = ತ್ರ್ಯಣುಕ ಪರಿಮಾಣದ್ದೆಶೆಯಿಂದ ಆರನೇ ಭಾಗವೇ ಪರಿಮಾಣವು ಅಪಕರ್ಷಿಸಲ್ಪಡುತ್ತದೆ. ಇದರಿಂದ ಹೆಚ್ಚು ಇಲ್ಲ. ಎಂದು ಅವಧಿಯು, ಕ್ವಚಿತ್=ಯಾವ ದ್ರವ್ಯದಲ್ಲಿಯೂ, ನ=ಸಿದ್ಧಿಸುವುದಿಲ್ಲ. (ಅಥವಾ ಇದರಿಂದ 'ಪರಿಮಾಣಾಪಕರ್ಷ ತಾರತಮ್ಯಂ ಕ್ವಚಿನ್ನ ವಿಶ್ರಾಂತಂ ಪರಿಮಾಣ ತಾರತಮ್ಯತ್ವಾತ್ ಪರಿಮಾಣೋತ್ಕರ್ಷ ತಾರತಮ್ಯವತ್'=ಪರಿಮಾಣಾಪಕರ್ಷತಾರತಮ್ಯವು ಎಲ್ಲಿಯೂ ವಿಶ್ರಾಂತಿಯನ್ನು ಹೊಂದಲಿಲ್ಲ. ಪರಿಮಾಣ ತಾರತಮ್ಯತ್ವವಿದ್ದಪ್ರಯುಕ್ತ ಪರಿಮಾಣೋತ್ಕರ್ಷ ತಾರತಮ್ಯದಂತೆ.) (೨ನೇದ್ದನ್ನು ಕೆಲವು ದ್ರವ್ಯದಲ್ಲಿರುತ್ತದೆ. ಅಪಕರ್ಷತಾರತಮ್ಯವು ಇಯತ್ತಾನವಚ್ಛೇದರಹಿತವೇ ಆಗಿದೆ. ಆದರೆ ಅನಂತಾಂಶಗಳಿಂದ ಕೂಡಿದ್ದರೂ ಅವೆಲ್ಲವೂ ಎಲ್ಲಿಯಾದರೂ ಆಶ್ರಿತವೇ ಆಗಿದೆ. ಎನ್ನುವುದನ್ನು) ಶಂಕಿಸುತ್ತಾರೆ. ವಿಶ್ರಾಂತಃ=ತ್ರ್ಯಣುಕಾದಿಗಳನ್ನು ಅಪೇಕ್ಷಿಸಿ ಪರಿಮಾಣದ್ದೆಶೆಯಿಂದ, ಅನಂತಾಂಶಃ=ಅನಂತಾಂಶಗಳುಳ್ಳ ದ್ರವ್ಯವಿಶೇಷವು, ಕ್ವಚಿದಸ್ತೀತಿ ಗಮ್ಯತೇ ಯದಿ=ಎಲ್ಲಿಯಾದರೊಂದುಕಡೆ ಇದೆ ಎಂದು ಅರ್ಥವು ಎಂದು ೨ನೇ ಪಕ್ಷವು ಅಂಗೀಕರಿಸಲ್ಪಡುವುದಾದರೆ,(ಅಂದರೆ ಪರಿಮಾಣಾಪಕರ್ಷ ತಾರತಮ್ಯವು ಇಯತ್ತಾನವಚ್ಛಿನ್ನವೇ, ಆದರೆ ಅನಂತಾಂಶ ರೂಪಗಳುಳ್ಳದ್ದಾಗ್ಯೂ ಅದು ಎಲ್ಲಿಯಾದರೂ ಒಂದುಕಡೆ ಆಶ್ರಿತವೇ ಆಗಿದೆ ಎಂದಾದರೆ) (ತರ್ಹಿ=ಹಾಗಾದರೆ) ಅವಸಾಯಯಿತುಂ= (ಹೀಗೆ ಸಾಧಿಸಿದರೆ ಯಾವುದಾದರೊಂದು ದ್ರವ್ಯವಿಶೇಷವು.) ಇದೆ ಎಂದು ನಿಶ್ಚಯಪಡಿಸಲಿಕ್ಕೆ, ನ ಶಕ್ಯಃ=ಶಕ್ಯವಲ್ಲ. ಅಂದರೆ, ಇದೇವೇ ಸರ್ವಕ್ಕಿಂತಲೂ ಅಪಕೃಷ್ಟ ಪರಿಮಾಣವುಳ್ಳದ್ದು, ಇದಕ್ಕಿಂತ ಅಪಕೃಷ್ಟ ಪರಿಮಾಣವುಳ್ಳದ್ದು ಇಲ್ಲ. ಹೀಗೆ ಸರ್ವಕ್ಕಿಂತಲೂ ಅಂತ್ಯವಾಗಿ ತಿಳಿಯಲಿಕ್ಕೆ ಯಾವುದೂ ಶಕ್ಯವಾಗುವುದಿಲ್ಲ.) ಕೇವಲಂ=ಸಾಕ್ಷಾತ್ತಾಗಿ, ವಿರೋಧಾತ್=ವಿರೋಧವಿದ್ದಪ್ರಯುಕ್ತವೇ (ಪರಿಮಾಣಾಪಕರ್ಷವೂ, ಅನಂತವೂ, ಪರ್ಯವಸಿತವೂ ಆಗಿದೆ ಎನ್ನುವುದು ವಿರುದ್ಧವು.) ಏವ=ವಿರೋಧವು ಅಪರಿಹಾರ್ಯವೇ ॥ ೬೮ ॥ ೬೯ ॥ ೭೦ ॥

ಪರಿಮಾಣೋತ್ಕರ್ಷತಾರತಮ್ಯಕ್ಕೆ ಆನಂತ್ಯವು ಕಾಣಲ್ಪಡುತ್ತದೆ ಎಂದುಕ್ತವಾಗಿದೆ. ಅದು ಯಾವ ಪ್ರಮಾಣದಿಂದ ಎಂದಾಶಂಕಿಸಿದರೆ ಕಾಲ ಆಕಾಶ ಈಶ್ವರ ಮೊದಲಾದ ದ್ರವ್ಯಗಳು

ಪ್ರತೀತತ್ವಮಾತ್ರದಿಂದ ಸತ್ಯತ್ವನಿಶ್ಚಯವು ಆಗಲಾರದಷ್ಟೆ, ಪ್ರತೀತತ್ವಮಾತ್ರದಿಂದ ಸತ್ಯತ್ವ ನಿಶ್ಚಯವಾಗುವುದಾದರೆ ಶುಕ್ತಿರಜತಾದಿಗಳಿಗೂ ಸತ್ಯತ್ವನಿಶ್ಚಯವು ಆಗಬೇಕಾಗುವುದು. ಹೀಗೆ ಅತಿಪ್ರಸಂಗವು ಬರುವುದು ಎಂದು ಶಂಕಿಸಿದ್ದನ್ನು ನಿರಾಕರಿಸುತ್ತಾರೆ.

**ಮೂ ॥ ಮಹತ್ವಾಣುತ್ವಯೋರ್ನೈವ ವಿಶ್ರಾಂತಿರುಪಲಭ್ಯತೇ ।**
**ಅನ್ಯದೇವ ಹ್ಯನಂತತ್ವಂ ಮಹತ್ವಾಣುತ್ವಯೋಃ ಸಮಂ ॥ ೭೪ ॥**

ಅ ॥ ಮಹತ್ವಾಣುತ್ವಯೋಃ = ಕಾಲಾದಿಗಳಲ್ಲಿ ಪರಿಮಾಣೋತ್ಕರ್ಷಾಪಕರ್ಷಗಳಿಗೆ, ವಿಶ್ರಾಂತಿಃ=ಇಯತ್ತಾವಚ್ಛೇದವು, (ಬಲಿಷ್ಠಪ್ರಮಾಣದಿಂದ) ನೈವ ಉಪಲಭ್ಯತೇ=ಹೊಂದಲ್ಪಡುವುದೇಇಲ್ಲ. ಅನಂತತ್ವಂ ಹಿ=ಅನಂತತ್ವವೆಂದರೆ (ಅನಲ್ಪತ್ವವಲ್ಲ, ಮತ್ತೆ) ಅನ್ಯದೇವ=ಪರಿಚ್ಛೇದಾಭಾವರೂಪವೇ, (ಆದುದರಿಂದ) ಮಹತ್ವಾಣುತ್ವಯೋಃ = ಪರಿಮಾಣೋತ್ಕರ್ಷಾಪಕರ್ಷಗಳಿಗೆ, ಸಮಂ=ಸಮಾನಧರ್ಮವೆನ್ನುವುದು (ವಿಶೇಷಣೀಭೂತವಾದ ಧರ್ಮವೆನ್ನುವುದು) (ಕೂಡುತ್ತದೆ)

ತಾ ॥ ನ್ಯಾಯಸುಧಾ— (1) ಹೇಗೆ ಕಾಲಾದಿಗಳಲ್ಲಿ ಪರಿಮಾಣೋತ್ಕರ್ಷದ ಅನಂತ್ಯವು ಸಾಕ್ಷ್ಯಾದಿಗಳಿಂದ ತಿಳಿಯಲ್ಪಟ್ಟದ್ದಾಗಿ ವಿಪರೀತಗ್ರಾಹಕವಾದ ಪ್ರಮಾಣವಿಲ್ಲದಿರುವುದರಿಂದ ಸತ್ಯವೇಆಗಿದೆಯೋ, ಹಾಗೆಯೇ ಪರಿಮಾಣಾಪಕರ್ಷದ ಆನಂತ್ಯವೂ ಸತ್ಯವೇಆಗಿದೆ. (2)ಬಾಧಕವಿಲ್ಲದೆ ಸಾಕ್ಷ್ಯಾದಿಗಳಿಂದ ಸಿದ್ಧವಾದ ಪರಿಮಾಣಾಪಕರ್ಷಾನಂತ್ಯವು ಕಾಲಾದಿಗಳಲ್ಲಿ ಅಸತ್ಯವಾದರೆ ಪರಿಮಾಣೋತ್ಕರ್ಷಾನಂತ್ಯವೂ ಕಾಲಾದಿಗಳಲ್ಲಿ ಅಸತ್ಯವಾಗಬೇಕಾಗುವುದು. ವಿಶೇಷವಿಲ್ಲವಷ್ಟೆ. ಅಂತೂ ಅಪರಿಚ್ಛಿನ್ನಪರಿಮಾಣತ್ವಾಂಗೀಕಾರವು ಭಗ್ನವಾಗುವುದು (3) ಹಾಗಾದರೆ ಪರಿಮಾಣಾಪಕರ್ಷಕ್ಕೆ ಆನಂತ್ಯವನ್ನು ಅಂಗೀಕರಿಸಿದರೆ ಬಾಧಕವಿದೆ. ಹೇಗೆಂದರೆ—ಅಪಕರ್ಷವೆಂದರೆ ಅಲ್ಪತ್ವವು. ಆನಂತ್ಯವೆಂದರೆ ಅನಲ್ಪತ್ವವು, ವಿರುದ್ಧಗಳಿಗೆ ವಿಶೇಷಣ ವಿಶೇಷ್ಯಭಾವವು ಕೂಡಲಾರದು. ಆದುದರಿಂದ ಬಾಧಕವಿದ್ದಪ್ರಯುಕ್ತ ಅಪಕರ್ಷಾನಂತ್ಯವು ಪ್ರತೀತವಾದಾಗ್ಯೂ ಅದನ್ನು ಬಿಡುತ್ತೇವೆಂದರೆ, ಆನಂತ್ಯವೆಂದರೆ ಅನಲ್ಪತ್ವವಲ್ಲ. ಮತ್ತೆ ಪರಿಚ್ಛೇದಾಭಾವರೂಪವು ಆದುದರಿಂದ ಪರಿಮಾಣೋತ್ಕರ್ಷಾಪಕರ್ಷಗಳಿಗೆ ಸಮಾನ ಧರ್ಮವೆನ್ನುವುದು ಯುಕ್ತವಾಗುತ್ತದೆ. (4) ಅನಂತತ್ವವೆಂದರೆ ಅನಲ್ಪತ್ವವೆಂದು ಆಗಿದ್ದರೆ ಆಗ ಉತ್ಕರ್ಷಕ್ಕೂ ವಿಶೇಷಣವು ಆಗದೇ ಹೋಗುತ್ತಿತ್ತು. ಪೀತಃ ಪೀತಃ ಎಂದು ಕಾಣದೆ ಇದ್ದ ಪ್ರಯುಕ್ತ ಅದಕ್ಕೆ ಅದೇವೇ ವಿಶೇಷಣವಾಗುವುದಿಲ್ಲ. ಆದುದರಿಂದ ಅಲ್ಲಿ ಆನಂತ್ಯವೆಂದರೆ ಪರಿಚ್ಛೇದಾಭಾವವೆಂದು ಸ್ವೀಕರಿಸಿ ವಿಶೇಷಣ ವಿಶೇಷ್ಯಭಾವವನ್ನು ಸಮರ್ಥಿಸಬೇಕು. ಹಾಗೆಯೇ ಪ್ರಕೃತದಲ್ಲಿಯೂ. ಹೇಗೆ ಪರಿಮಾಣೋತ್ಕರ್ಷವು ಗಗನಾದಿಗಳಲ್ಲಿ ನಿರವಧಿಕವೋ ಹಾಗೆಯೇ ಪರಿಮಾಣಾಪಕರ್ಷವೂ ನಿರವಧಿಕವೇ ಆಗಿದೆ. ವಿಶೇಷಣ ವಿಶೇಷ್ಯಭಾವವನ್ನು ಅಂಗೀಕರಿಸಿದರೆ ಯಾವ ದೋಷವೂ ಇಲ್ಲ ॥ ೭೪ ॥

ಆನಂತ್ಯವೆಂದರೆ ಅನಲ್ಪತ್ವದ್ದಕ್ಕಿಂತ ಬೇರೆ ಎನ್ನುವುದನ್ನು ತಿಳಿಸಿಕೊಡುವುದಕ್ಕಾಗಿ ಬೇರೆ ದೃಷ್ಟಾಂತವನ್ನು ಹೇಳುತ್ತಾರೆ—

**ಮೂ ॥ ಬಹುತ್ವಾಲ್ಪತ್ವಯೋರ್ಯದ್ವತ್ಸಂಖ್ಯಯಾಮುಪಲಭ್ಯತೇ ।**
**ಅನಂತ್ಯಮೇಕಭಾಗಾನಾಂ ತಾವತ್ವಂ ಹೇವ ಗಣ್ಯತೇ ॥ ೭೫ ॥**

ಅ || ಯದ್ವತ್=ಹೇಗೆ, ಸಂಖ್ಯಾಯಾಂ=ಸಂಖ್ಯೆಯಲ್ಲಿ, ಬಹುತ್ವಾಲ್ಪತ್ವಯೋಃ=ಬಹುತ್ವ ಅಲ್ಪತ್ವಗಳಿಗೆ, (ವಿಶೇಷಣವಾಗಿ) ಅನಂತ್ಯಂ=ಅನಂತ್ಯವು, ಉಪಲಭ್ಯತೇ=ಬಹುತ್ವವೂ ಅನಂತವು, ಅಲ್ಪತ್ವವೂ ಅನಂತವು ಎಂದು ಹೊಂದಲ್ಪಡುತ್ತದೋ, (ಹಾಗೆಯೇ ಪ್ರಕೃತದಲ್ಲಿಯೂ.) (ಹಾಗಾದರೆ ಸಂಖ್ಯೆಯಲ್ಲಿ ಬಹುತ್ವ ಅಲ್ಪತ್ವಗಳಿಗೆ ಅನಂತ್ಯವು ಇಲ್ಲವೇ ಇಲ್ಲ. ಬಹುತ್ವವು ಪರಾರ್ಧಸಂಖ್ಯೆಯಲ್ಲಿಯೇ ಪರ್ಯವಸಿತವಾದುದು. ಅಲ್ಪತ್ವವು ಏಕಾವಧಿಕವಾದುದು. ಆದುದರಿಂದ ಈ ದೃಷ್ಟಾಂತವು ಹೇಗೆ ಕೂಡುತ್ತದೆಂದರೆ) ಏಕಭಾಗಾನಾಂ = ಒಂದೊಂದು ಭಾಗಗಳಿಗೆ, ತಾವತ್ತ್ವಂ ಏವ=ನಿರವಧಿಕತ್ವವೇ, ಹಿ=ಯಾವಕಾರಣದ್ದೆಶೆಯಿಂದ, ಗಣ್ಯತೇ=ಗಣನಮಾಡಲ್ಪಡುತ್ತದೋ (ಆದುದರಿಂದ ಹೀಗೆ ತಿಳಿಯಲ್ಪಡುತ್ತದೆ).

ತಾ || ನ್ಯಾಯಸುಧಾ— (1) ಅನಂತತ್ವವೆಂದರೆ ಅನಲ್ಪತ್ವವಾಗಿದ್ದರೆ ಆಗ ಬಹುತ್ವಕ್ಕೆ ವಿಶೇಷಣವು ಆಗದೆ ಹೋಗುತ್ತಿತ್ತು. ಅದಕ್ಕೆ ಅದು ವಿಶೇಷಣವು ಆಗಲಾರದು. ವಿರೋಧ ಬರುವುದರಿಂದ ಅಲ್ಪತ್ವಕ್ಕೂ ವಿಶೇಷಣವು ಆಗಲಾರದು ಆದಕಾರಣ ಅನಂತತ್ವವೆಂದರೆ ಅವಚ್ಛೇದಾಭಾವವೇ ಎಂದಂಗೀಕರಿಸಿ 'ಬಹುತ್ವವೂ ಅಲ್ಪತ್ವವೂ ಅನಂತವು ಎಂದು ವಿಶೇಷಣ ವಿಶೇಷ್ಯಭಾವವನ್ನು ತಿಳಿಯತಕ್ಕದು. ಹಾಗೆಯೇ ಪರಿಮಾಣೋತ್ಕರ್ಷಾಪಕರ್ಷಗಳಿಗೂ ವಿಶೇಷಣ ವಿಶೇಷ್ಯಭಾವವನ್ನು ತಿಳಿಯತಕ್ಕದು. (2) ಸಂಖ್ಯೆಯನ್ನು ಅಧಿಕರಿಸಿಕೊಂಡು ಗಣಿತಶಾಸ್ತ್ರವು ಪ್ರವೃತ್ತವಾಗಿದೆ. ಅದರಲ್ಲಿ ಕಲಾಸವರ್ಣನ, ಪ್ರಭಾಗ, ಭಾಗಾನುಬಂಧ, ಭಾಗಾಪವಾಹ, ಭಾಗಭಾಗ, ಮೊದಲಾದ ಪ್ರಕರಣಗಳಲ್ಲಿ ಒಂದೊಂದು ಬಾಗಗಳೂ ನಿರವಧಿಕಗಳೆಂದು ಗಣನ ಮಾಡಲ್ಪಡುತ್ತವೆ. ಆದುದರಿಂದ ಏಕತ್ವದಿಂದಲೂ ಅಪಕೃಷ್ಟವಾದ ನಿರವಧಿಕವಾದ ಸಾಂಖ್ಯೆಯು ಇದೆ ಎಂದು ತಿಳಿಯತಕ್ಕದು. ಪರಾರ್ಧಕ್ಕಿಂತ ಮೇಲೆಯೂ ಸಂಖ್ಯೆ ಇದೆ ಎಂದು ಸ್ಪಷ್ಟವೇ ಆಗಿರುವುದರಿಂದ ಉಪಪಾದಿಸಲಿಲ್ಲ. ಇತರರಿಗೂ ಈಶ್ವರನ ಅಪೇಕ್ಷಾಬುದ್ಧಿಯಿಂದ ಪರಮಾಣ್ವಾದಿಗಳಲ್ಲಿ ಪರಾರ್ಧಕ್ಕಿಂತ ಮೇಲೆಯೂ ಸಂಖ್ಯೋತ್ಪತ್ತಿಯು ಕೂಡಬಹುದಷ್ಟೆ. ಆದರೆ ಗಣಕರಿಗೆ ಪ್ರಯೋಜನವಿಲ್ಲದಿರುವುದರಿಂದ ಆ ಮೇಲೆ ಸಂಜ್ಞೆಯನ್ನು ಮಾಡಲಿಲ್ಲ || ೭೫ ||

ಹೀಗೆ ಕಾಲ ಆಕಾಶಗಳ ಪರಿಮಾಣೋತ್ಕರ್ಷಾಪಕರ್ಷಗಳ ಅನಂತ್ಯವನ್ನು ಸಾಕ್ಷಿಯಿಂದ ಪ್ರಸಾಧಿಸಿ ಈಗ ಈಶ್ವರನಲ್ಲಿ ಆ ಆನಂತ್ಯವನ್ನು ಆಗಮದಿಂದ ಸಾಧಿಸುತ್ತಾರೆ.

ಮೂ || ಅಣೀಯಾಂಶ್ಚ ಮಹೀಯಾಂಶ್ಚ ಭಗವಾನಾಗಮೋದಿತಃ |
ಆನಂತ್ಯವಾಚಕಃ ಶಬ್ದೋ ದ್ವಿಧಾನಂತ್ಯೇಽಪಿ ಮಾನತಾಂ || ೭೬
ಯಾತಿ ನೈವ ಗುಣಾಲ್ಪತ್ವಂ ಕಾಲಾಲ್ಪತ್ವಂ ಚ ಮಾನಗಂ
ಸರ್ವಕಾಲಗತಸ್ಯಾಲ್ಪಕಾಲೋಽಪಿಸ್ಯಾದವಸ್ಥಿತಿಃ || ೭೭ ||
ಮಹಾಗುಣಸ್ಯ ಚಾಲ್ಪೋಽಪಿ ಗುಣಃ ಸ್ಯಾದಿತಿ ಚೇದ್ಭವೇತ್ |
ತಾವತ್ತ್ವಮೇವ ನೈವ ಸ್ಯಾದ್ದೇಶೇಽಪ್ಯೇತನ್ನ ನೋ ಮತಂ || ೭೮ ||

ಅ || ಭಗವಾನ್=ಶ್ರೀಹರಿಯು, ಅಣೀಯಾಂಶ್ಚ, ಮಹೀಯಾಂಶ್ಚ=ಅಣುಪದಾರ್ಥದಿಂದಲೂ, ಅತ್ಯಣುವಾದವನು ಮಹತ್ಪದಾರ್ಥದಿಂದಲೂ ದೊಡ್ಡವನು ಎಂದು, ಆಗಮೋದಿತಃ='ಅಣೋರಣೀಯಾನ್ ಮಹತೋ ಮಹೀಯಾನ್' ಎನ್ನುವ ಆಗಮದಿಂದ ಹೇಳಲ್ಪಟ್ಟಿದ್ದಾನೆ. (ಬೇರೆ ಶ್ರುತಿಯೂ ಕೂಡ ಈಶ್ವರನಲ್ಲಿ ಪರಿಮಾಣೋತ್ಕರ್ಷಾಪಕರ್ಷಗಳಿಗೆ ಆನಂತ್ಯವನ್ನು ಪ್ರತಿಪಾದಿಸುತ್ತದೆನ್ನುತ್ತಾರೆ.) ಆನಂತ್ಯವಾಚಕಃ='ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದು ಬ್ರಹ್ಮ

ನಿಗೆ ಪರಿಮಾಣಾನಂತ್ಯವನ್ನು ಹೇಳತಕ್ಕ, ಶಬ್ದಃ=ಅನಂತಶಬ್ದವು, ದ್ವಿಧಾ=ಎರಡು ಪ್ರಕಾರ, ಅಂದರೆ ಉತ್ಕರ್ಷಾಪಕರ್ಷಗಳಿಂದ, ಆನಂತ್ಯೇಽಪಿ=ಆನಂತ್ಯವಿಷಯದಲ್ಲಿಯೂ, ಮಾನತಾಂ= ಪ್ರಾಮಾಣ್ಯವನ್ನು, ಯಾತಿ=ಹೊಂದುತ್ತದೆ. (ಒಂದನೇದ್ದನ್ನು ದೂಷಿಸುತ್ತಾರೆ.) ಗುಣಾಲ್ಪತ್ವಂ=ಗುಣಗಳಿಂದ ಅಲ್ಪತ್ವವೂ, ಕಾಲಾಲ್ಪತ್ವಂ ಚ=ಕಾಲಾಲ್ಪತ್ವವೂ ಕೂಡ, ಮಾನಗಂ= 'ಅನಂತಂ ಬ್ರಹ್ಮ' ಎನ್ನುವ ಶ್ರುತಿಪಾದ್ಯವಾದುದು, ನೈವ=ಸರ್ವಥಾ ಆಗಲಾರದು. (೨ನೇದ್ದನ್ನು ಆಶಂಕಿಸಿ ಅಂಗೀಕರಿಸುತ್ತಾರೆ.) ಸರ್ವಕಾಲಗತಸ್ಯ=ಎಲ್ಲಾ ಕಾಲಗಳಲ್ಲಿದ್ದವನಿಗೆ, ಅಲ್ಪಕಾಲೇಽಪಿ=ಅತ್ಯಲ್ಪಕಾಲದಲ್ಲಿಯೂ, ಅವಸ್ಥಿತಿಃ=ಅವಸ್ಥಾನವು, ಸ್ಯಾತ್=ಆಗುವುದು. ಮಹಾಗುಣಸ್ಯ = ಮಹಾಗುಣಕ್ರಿಯಾದಿಗಳುಳ್ಳವನಿಗೆ, ಅಲ್ಪೋಽಪಿ ಗುಣಃ = ಅಲ್ಪವಾದ ಗುಣವೂ, (ಕ್ರಿಯಾದಿಯೂ) ಸ್ಯಾತ್=ಆಗುವುದು. ಇತಿ ಚೇತ್=ಹೀಗೆ ಆಪಾದಿಸುವುದಾದರೆ, ಭವೇತ್= (ಅದು) ಆಗುವುದು. (ಹಾಗಾದರೆ ಕಾಲಾಲ್ಪತ್ವವನ್ನೂ ಗುಣಾಲ್ಪತ್ವವನ್ನೂ ಅಂಗೀಕರಿಸುವುದಾದರೆ 'ನೈವಗುಣಾಲ್ಪತ್ವಂ' ಎಂದು ನಿರಾಕರಣವು ಹೇಗೆ ಎಂದರೆ ಅಭಿಪ್ರಾಯವನ್ನು ಪ್ರಕಟೀಕರಿಸುತ್ತಾರೆ.) ತಾವತ್ವಮೇವ=ಅಲ್ಪತ್ವವೇ, ನೈವ ಸ್ಯಾತ್=ಸರ್ವಥಾ ಆಗಲಾರದು. (ಎಂದು ಮೊದಲು ಹೇಳಲ್ಪಟ್ಟದೆ.) (ಏಕೆ ಆಗಲಾರದೆಂದರೆ ಆಪಾದಕವಿಲ್ಲದಿರುವುದರಿಂದ ಎನ್ನುತ್ತಾರೆ.) ದೇಶೇಽಪಿ=ಪರಿಮಾಣದಲ್ಲಿಯೂ, ಏತತ್=ಈ ಅಲ್ಪತ್ವವೇ, ನಃ=ನಮಗೆ, ಮತಂ=ಸಮ್ಮತವಾದುದು, ನ=ಅಲ್ಲ.

**ತಾ ||** **ನ್ಯಾಯಸುಧಾ—** (1) 'ಅಣೋರಣೀಯಾನ್ಮಹತೋ ಮಹೀಯಾನ್' ಎನ್ನುವ ಶ್ರುತಿಯಲ್ಲಿ ಈಶ್ವರನು ಅಣುಪದಾರ್ಥದಿಂದಲೂ ಅತ್ಯಣುವೆಂದೂ, ದೊಡ್ಡ ಪದಾರ್ಥದಿಂದಲೂ ಅತಿದೊಡ್ಡವನೆಂದೂ ಹೇಳಿಸಿಕೊಳ್ಳಲ್ಪಟ್ಟದ್ದಾನೆ. ಈ ಶ್ರುತಿಯಲ್ಲಿ ಅಣುಶಬ್ದದಿಂದ ಪರಮಾಣುರೂಪದ್ರವ್ಯವೇ ಮಹತ್ ಶಬ್ದದಿಂದ ಗಗನರೂಪದ್ರವ್ಯವೇ ಎನ್ನುವ ನಿಯಮವಿಲ್ಲ. ಆದ ಕಾರಣ ಯಾವುದು ಯಾವುದು ಅಪಕೃಷ್ಟಪರಿಮಾಣವುಳ್ಳದ್ದೋ ಆ ಎಲ್ಲಾದಕ್ಕಿಂತಲೂ ಅಪಕೃಷ್ಟಪರಿಮಾಣವುಳ್ಳವನು, ಯಾವುದು ಯಾವುದು ಉತ್ಕೃಷ್ಟಪರಿಮಾಣವುಳ್ಳದ್ದೋ ಆ ಎಲ್ಲಾದಕ್ಕಿಂತಲೂ ಉತ್ಕೃಷ್ಟಪರಿಮಾಣವುಳ್ಳವನು, ಎಂದುಕ್ತವಾಯಿತು. ತಥಾಚ ಈಶ್ವರನಲ್ಲಿರತಕ್ಕ ಪರಿಮಾಣೋತ್ಕರ್ಷಾಪಕರ್ಷಗಳಿಗೆ ನಿರವಧಿಕತ್ವವೇ ಲಭಿಸುವುದು. (2) 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದು ಬ್ರಹ್ಮನಿಗೆ ಆನಂತ್ಯವನ್ನು ಹೇಳತಕ್ಕ ಅನಂತ ಶಬ್ದವಾದರೂ ದೇಶದಿಂದಲೂ, ಕಾಲದಿಂದಲೂ, ವಸ್ತುವಿನಿಂದಲೂ ಆನಂತ್ಯವನ್ನು ಹೇಳುತ್ತದೆ. ಅದರಲ್ಲಿ ೧ ದೇಶಾನಂತ್ಯವೆಂದರೆ— ನಿರವಧಿಕಪರಿಮಾಣವತ್ವವು. ೨ ಕಾಲಾನಂತ್ಯವೆಂದರೆ— ಕಾಲತ್ರಯದಲ್ಲಿರುವಿಕೆಯು. ೩ ವಸ್ತ್ವಾನಂತ್ಯವೆಂದರೆ— ಅಪರಿಚ್ಛಿನ್ನಸಂಖ್ಯಾಗುಣಕರ್ಮವಿಗ್ರಹವಿರುವಿಕೆಯು. ಅದರಲ್ಲಿ ಯಾವಾಗ ಅನಂತಶಬ್ದವು ಪರಿಮಾಣಾನಂತ್ಯವನ್ನು ಹೇಳುತ್ತದೋ ಆಗ ಉತ್ಕರ್ಷಾಪಕರ್ಷಗಳಿಂದ ಆನಂತ್ಯದಲ್ಲಿಯೂ ಪ್ರಾಮಾಣ್ಯವನ್ನು ಹೊಂದುತ್ತದೆ. ಉತ್ಕರ್ಷಾನಂತ್ಯಮಾತ್ರದಲ್ಲಿ ಅಲ್ಲ. (3) ಹಾಗಾದರೆ ಕಾಲದಿಂದಲೂ, ಗುಣದಿಂದಲೂ ಆನಂತ್ಯವನ್ನು ಹೇಳತಕ್ಕ ಅನಂತಶಬ್ದಕ್ಕೆ ಅಲ್ಪಕಾಲತ್ವವೂ, ಅಲ್ಪಗುಣತ್ವವೂ ಅರ್ಥವಾಗುವುದು. ಇಲ್ಲವಾದರೆ ಅನಂತಶಬ್ದಾರ್ಥದಿಂದ ವಿಶೇಷವಿಲ್ಲದಿರುವುದರಿಂದ ಅಲ್ಪಪರಿಮಾಣವತ್ವವೂ ಅರ್ಥವಾಗದೆ ಹೋಗುವುದು. ಎಂದರೆ— ಕಾಲದಿಂದಲೂ, ಗುಣದಿಂದಲೂ ಅಲ್ಪತ್ವವನ್ನು ಆಪಾದಿಸಬೇಕೆಂದರೆ ಎಂತಹುದದು? ೧ ಬ್ರಹ್ಮನಿಗೆ ಅಲ್ಪಗುಣಗಳೇ ಇವೆ, ಹೆಚ್ಚು ಗುಣಗಳಿಲ್ಲ. ಹಾಗೆಯೇ ಅಲ್ಪಕಾಲೀನವೇ ಆದ ಸತ್ತಾ ಇರುತ್ತದೆ ಹೆಚ್ಚು ಕಾಲದಲ್ಲಿ ಸತ್ತಾ ಇರುವುದಿಲ್ಲ

ವೆಂದೋ, ೨ ಅಥವಾ ಸರ್ವಕಾಲದಲ್ಲಿದ್ದವನಿಗೆ ಅಲ್ಪಕಾಲದಲ್ಲಿಯೂ ಅವಸ್ಥಿತಿಯು ಇರುವುದು. ಮಹಾಗುಣಗಳುಳ್ಳವನಿಗೆ ಅಲ್ಪಗುಣವೂ ಇರುವುದು ಎಂದೋ, ಇದರಲ್ಲಿ ಒಂದನೇದ್ದನ್ನು 'ನೈವ ಗುಣಾಲ್ಪತ್ವಂ' ಎನ್ನುವುದರಿಂದ ದೂಷಿಸಿದರು. ೨ನೇದ್ದನ್ನು ಆಶಂಕಿಸಿಕೊಂಡು 'ಸರ್ವಕಾಲ ಗತಸ್ಯ' ಎನ್ನುವುದರಿಂದಂಗೀಕರಿಸಿದರು ॥ ೭೬ ॥ ೭೭ ॥ ೭೮ ॥

ಹಾಗಾದರೆ ಈಶ್ವರಾದಿಗಳಿಗೆ ನಿರವಧಿಕವಾದ ಉತ್ಕೃಷ್ಟ ಅಪಕೃಷ್ಟ ಪರಿಮಾಣವು ಇದೆ ಎಂದು ಸಮರ್ಥಿಸಿದ್ದು ಅಯುಕ್ತವು. ಸೂತ್ರಕಾರರು ಎಲ್ಲಿಯೂ ಹೇಳಲಿಲ್ಲ. ಅಂತೂ ಅಪ ಸಿದ್ಧಾಂತವು. ಹೇಗೆಂದರೆ— ಮಹದ್ದೀರ್ಘವದ್ವಾ ಎನ್ನುವ ಸೂತ್ರವು 'ಸಂಖ್ಯಾಪರಿಮಾಣಗಳನ್ನು ಅವರೇ ಅಂಗೀಕರಿಸಿರುವುದರಿಂದ ವಿಜಾತೀಯಗಳಿಗೂ ಕಾರ್ಯಕಾರಣಭಾವವಿದೆ ಎಂದುಪ ಪಾದಿಸುತ್ತದೆ ಎಂದಾಗಲೀ, ಆಕಾಶಾದಿಗಳಲ್ಲಿಯೇ ನಿರವಚ್ಛಿನ್ನವಾದ ಉತ್ಕರ್ಷವು ಪರಮಾಣು ಗಳಲ್ಲಿಯೇ ನಿರವಚ್ಛಿನ್ನವಾದ ಪರಿಮಾಣಾಪಕರ್ಷವು ಎಂದುಪಪಾದಿಸುತ್ತದೆ ಎಂದಾಗಲೀ ಸಮರ್ಥಿಸಲಿಕ್ಕೆ ಶಕ್ಯವಾಗುತ್ತದೆ ಎಂದಾಶಂಕಿಸಿದರೆ—

**ಮೂ ॥ ಮಹತೋಽಲ್ಪತ್ವಮಪಿ ಹಿ ವ್ಯೋಮವತ್ಪ್ರಾಹ ವೇದವಿತ್ ।**
**ಯದ್ಯಲ್ಪದೇಶಸಂಸ್ಥಾನಂ ನ ಸರ್ವತ್ರಾಪಿ ನೋ ಭವೇತ್ ॥ ೭೯ ॥**
**ಸ್ಥಿತಸ್ಯ ಹ್ಯಲ್ಪದೇಶೇಷು ಸರ್ವಗತ್ವಂ ಭವೇದ್ಧ್ರುವಂ ।**
**ಏಕತ್ರಾಪ್ಯನವಸ್ಥಸ್ಯ ಕುತ ಏವಾಖಿಲಸ್ಥತಾ ॥ ೮೦ ॥**
**ಶೂನ್ಯತ್ವಮೇವ ತಸ್ಯಸ್ಯಾದ್ಯಸ್ಯೈಕತ್ರಾಪಿ ನ ಸ್ಥಿತಿಃ ।**
**ಅತೋ ನಾಣುತ್ವವಿಶ್ರಾಂತಿರ್ನ ಮಹತ್ವಸ್ಯ ಚ ಕ್ವಚಿತ್ ॥ ೮೧ ॥**

ಅ ॥ ಮಹತಃ = ನಿರವಧಿಕ ಪರಿಮಾಣೋತ್ಕರ್ಷವಿದ್ದವನಾದಾಗ್ಯೂ ಬ್ರಹ್ಮನಿಗೆ, ಅಲ್ಪತ್ವಮಪಿ=ಅಲ್ಪಪರಿಮಾಣವತ್ವವೂ ಕೂಡ, ವ್ಯೋಮವತ್='ಅರ್ಭಕೌಕಸ್ತ್ವಾತ್ತದ್ವ್ಯಪದೇಶಾ ನ್ನೇತಿಚೇನ್ನನಿಚಾಯ್ಯತ್ವಾದೇವಂ ವ್ಯೋಮವಚ್ಚ' ಎನ್ನುವ ಸೂತ್ರದಿಂದ ಆಕಾಶವನ್ನು ದೃಷ್ಟಾಂ ತೀಕರಿಸಿಕೊಂಡು, ವೇದವಿತ್=ಸೂತ್ರಕಾರರು, ಪ್ರಾಹ=ಹೇಳಿದರು, (ಆದುದರಿಂದ ಬ್ರಹ್ಮನಿಗೂ ಆಕಾಶಕ್ಕೂ ನಿರವಧಿಕವಾದ ಪರಿಮಾಣೋತ್ಕರ್ಷ ಅಪಕರ್ಷವಿದೆಯೆನ್ನುವುದು ಸೂತ್ರಕಾರರ ಸಿದ್ಧಾಂತವು ಆಗಿಯೇಆಗುತ್ತದೆ.) (ಮತ್ತು ಯಾವ ಅರ್ಥವು ನಿರವಕಾಶಪ್ರಮಾಣ ಸಿದ್ಧವಾ ಗಿದೆಯೋ, ಯಾವುದನ್ನು ಬಿಟ್ಟರೆ ಅನಿಷ್ಟವಿದೆಯೋ ಅವೆಲ್ಲವೂ ಸೂತ್ರಕಾರರ ಸಿದ್ಧಾಂತವೇ. ಅದರಲ್ಲಿ ಕಾಲಾಕಾಶಗಳಲ್ಲಿಯೂ ಈಶ್ವರನಲ್ಲಿಯೂ ನಿರವಧಿಕವಾದ ಪರಿಮಾಣೋತ್ಕರ್ಷಾ ಪಕರ್ಷವಿದೆ ಎನ್ನುವುದು ಸಾಕ್ಷಿಯಿಂದಲೂ 'ಸಏಷೋಽನಂತಃ' 'ಅಣೋರಣೀಯಾನ್' 'ಸತ್ಯಂಜ್ಞಾನಮನಂತಂಬ್ರಹ್ಮ' ಇದುಮೊದಲಾದ ಆಗಮಗಳಿಂದಲೂ ಸಿದ್ಧವಾಗಿದೆಎಂದುಕ್ತ ವಾಗಿದೆ. ಅದಕ್ಕೆ ವ್ಯತ್ಯಾಸವಾದರೆ ಬಾಧಕವನ್ನು ಹೇಳುತ್ತಾರೆ.) ಯದಿ=ಯಾವಪಕ್ಷದಲ್ಲಿ, (ಕಾಲಾದೇಃ=ಕಾಲಮೊದಲಾದುದಕ್ಕೆ,) ಅಲ್ಪದೇಶಸಂಸ್ಥಾನಂ=ಅಲ್ಪದೇಶದಲ್ಲಿರುವಿಕೆಯು, ನ ಭವೇತ್=ಆಗಲಾರದೋ,(ಹಾಗಾದರೆ)ಸರ್ವತ್ರಾಪಿ=ಸರ್ವಕಡೆಗಳಲ್ಲಿಯೂ, ಸಂಸ್ಥಾನಂ=ಇರು ವಿಕೆಯು, ನೋಭವೇತ್=ಆಗಲಾರದು, (ಅಂದರೆ ಕಾಲಾದಿಗಳಿಗೆ ಸರ್ವಗತತ್ವವನ್ನು ಪರರು ಅಂಗೀಕರಿಸಿರುವರು. ಸರ್ವಗತತ್ವವೆಂದರೆ ಎಲ್ಲಾದೇಶಗಳಲ್ಲಿಯೂ ಇರುವಿಕೆಯು. ತಥಾಚ ಕಾಲಾದಿಗಳಿಗೆ ಅಲ್ಪ ಅಲ್ಪತರದೇಶಗಳಲ್ಲಿ ಸಂಸ್ಥಾನವಿಲ್ಲವಾದರೆ ಆಗ ಎಲ್ಲಾಕಡೆಗಳಲ್ಲಿ ಅವಸ್ಥಿ ತಿಯೂ ಇರಲಾರದು. ಏಕಂದರೆ) ಅಲ್ಪದೇಶೇಷು=ಅಲ್ಪದೇಶಗಳಲ್ಲಿ, ಸ್ಥಿತಸ್ಯಧ್ರುವಂ=ಇದ್ದವನಿ

ಗೇನೇ, ಸರ್ವಗತ್ವಂ = ಸರ್ವತ್ರ ಇರುವಿಕೆಯು, ಭವೇತ್ = ಆಗುವುದು, ಹಿ = ಪ್ರಸಿದ್ಧವು. (ಹೇಗೆ ಒಂದೊಂದು ವರ್ಣವನ್ನು ಉಚ್ಚರಿಸುವವನಿಗೇನೇ ಸರ್ವವೇದೋಚ್ಚಾರಣವು, ಒಂದೂ ವರ್ಣವನ್ನು ಉಚ್ಚರಿಸದೆ ಇದ್ದವನಿಗೆ ಸರ್ವವೇದೋಚ್ಚಾರಣವಾಗಲಾರದೋ ಹಾಗೆಯೇ ಅಲ್ಪಾಲ್ಪತರ ದೇಶಗಳಲ್ಲಿ ಇದ್ದವನಿಗೇನೇ ಸರ್ವದೇಶಗತತ್ವವು ಆಗುವುದು.) ಏಕತ್ರಾಪಿ = ಒಂದೊಂದು ದೇಶದಲ್ಲಿಯೂ, ಅನವಸ್ಥಸ್ಯ = ಇಲ್ಲದಿದ್ದವನಿಗೆ, ಅಖಿಲಸ್ಥತಾ = ಅಖಿಲದೇಶಗಳಲ್ಲಿರುವಿಕೆಯು, ಕುತ ಏವ = ಹೇಗೆತಾನೆ, ಭವೇತ್ = ಆಗುವುದು. (ಅಲ್ಪ ಅಲ್ಪತರದೇಶಗಳಲ್ಲಿ ಇಲ್ಲವಾದರೆ ಸರ್ವಗತತ್ವವಿಲ್ಲವೆಂದಾಗಬೇಕಾಗುವುದು ಎಂದು ಮಾತ್ರವಲ್ಲ. ಮತ್ತೆ ಶಶವಿಷಾಣಾದಿಗಳಂತೆಯೇ ಸತ್ವವೂ ಇಲ್ಲದೆಹೋಗುವುದೆನ್ನುತ್ತಾರೆ.) ಯಸ್ಯ = ಯಾವುದಕ್ಕೆ, ಏಕತ್ರಾಪಿ = ಒಂದುಕಡೆಯಲ್ಲಿಯೂ, ಸ್ಥಿತಿಃ = ಸ್ಥಿತಿಯು, ನ = ಇಲ್ಲವೋ, ತಸ್ಯ = ಅದಕ್ಕೆ, ಶೂನ್ಯತ್ವಮೇವ = ಸರ್ವಥಾ ಇಲ್ಲದಿರುವಿಕೆಯೇ, ಸ್ಯಾತ್ = ಆಗುವುದು. (ಏವಂಚ ಕಾಲಾದಿಗಳಿಗೆ ಅಲ್ಪ ಅಲ್ಪತರದೇಶಗಳಲ್ಲಿ ಅವಸ್ಥಿತಿಯಿದ್ದರೆ ಅಲ್ಪ ಅಲ್ಪತರ ಪರಿಮಾಣವೂ ಆವಶ್ಯಕವೇ, ಆದಕಾರಣ ನಿರವಧಿಕ ಪರಿಮಾಣಾಪಕರ್ಷ ಸಿದ್ಧಿಯಾಗುವುದು. ನಿರವಧಿಕ ಉತ್ಕರ್ಷವನ್ನು ಪರರೂ ಅಂಗೀಕರಿಸಿರುವರು. ಆದಕಾರಣ ಅದನ್ನು ವ್ಯತ್ಯಾಸಪಡಿಸುವುದರಲ್ಲಿ ಬಾಧಕವನ್ನು ಹೇಳಲಿಲ್ಲ. ಪರಮ ಮಹತ್ವವಿಲ್ಲವಾದರೆ ಸರ್ವಗತತ್ವವೂ ಕೂಡಲಾರದು.) (ಕಾಲಾದಿಗಳಲ್ಲಿ ಪರಿಮಾಣೋತ್ಕರ್ಷಾಪಕರ್ಷಗಳ ಆನಂತ್ಯವನ್ನೂ ಉಪಪಾದಿಸಿ ಉಪಸಂಹಾರ ಮಾಡುತ್ತಾರೆ) ಅತಃ = ಆದಕಾರಣ, ಅಣುತ್ವವಿಶ್ರಾಂತಿಃ = ಅಣುತ್ವಕ್ಕೆ ವಿಶ್ರಾಂತಿಯು, ನ = ಇಲ್ಲ, ಮಹತ್ವಸ್ಯಚ = ಮಹತ್ವದ ವಿಶ್ರಾಂತಿಯೂ, ಕ್ವಚಿತ್ = ಎಲ್ಲಿಯೂ (ಕಾಲ ಆಕಾಶ ಈಶ್ವರರಲ್ಲಿಯೂ,) ನ = ಇಲ್ಲ. ॥ ೭೯ ॥ ೮೦ ॥ ೮೧ ॥

ಕಾಲ ಆಕಾಶ ಈಶ್ವರರಲ್ಲಿ ಪರಿಮಾಣೋತ್ಕರ್ಷ ಅಪಕರ್ಷಗಳಿಗೆ ಆನಂತ್ಯವಿದೆ ಎಂದು ಹೇಳಲ್ಪಟ್ಟದೆ ಅವುಗಳಲ್ಲಿ ಮಾತ್ರವಲ್ಲ. ಮತ್ತೆ ಪ್ರಕೃತಿಮೊದಲಾದ ಸರ್ವಗತವಾದ ಪರಮ ಮಹತ್ತಾದ ಬೇರೆ ದ್ರವ್ಯದಲ್ಲಿಯೂ ಆನಂತ್ಯವಿದೆ ಎನ್ನುತ್ತಾರೆ—

**ಮೂ ॥ ಉಭಯಾನಂತ್ಯಯುಕ್ತಸ್ಮಾದ್ಯದಿ ಮುಖ್ಯಂ ಮಹದ್ಭವೇತ್ ।**

**ತಚ್ಚ ಬ್ರಹ್ಮ ಪರಂ ಸಾಕ್ಷಾತ್ಸರ್ವಾನಂತ್ಯಯುತಂ ಸದಾ ॥ ೮೨ ॥**

ಅ ॥ ಉಭಯಾನಂತ್ಯಯುಕ್ = ಪರಿಮಾಣೋತ್ಕರ್ಷಾಪಕರ್ಷಗಳ ಆನಂತ್ಯದಿಂದ ಕೂಡಿದ್ದು, ತಸ್ಮಾತ್ = ಕಾಲಾದಿಗಳಲ್ಲಿ ಹೇಳಿದ ನ್ಯಾಯದಿಂದ, ಯದಿ = ಯಾವಪಕ್ಷದಲ್ಲಿ, ಮುಖ್ಯಂ ಮಹತ್ = ಪರಮಮಹತ್ತಾದುದು, ಭವೇತ್ = ಆಗುವುದೋ, (ಅಂದರೆ ಕಾಲಾದಿಗಳಿಗೂ ಆನಂತ್ಯವಿದ್ದರೆ, ಹಾಗಾದರೆ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದು ಆನಂತ್ಯವು ಬ್ರಹ್ಮನಿಗೆ ಲಕ್ಷಣವೆಂದು ಹೇಗೆ ಹೇಳಲ್ಪಡುತ್ತದೆ? ಅತಿವ್ಯಾಪ್ತವಾದುದು ಲಕ್ಷಣವಾಗುವುದಿಲ್ಲ ಎಂದರೆ—) (ಯದ್ಯಪಿ ಕಾಲಾದಿಗಳೂ ಅನಂತವೇ. ಆದಾಗ್ಯೂ) ಬ್ರಹ್ಮಪರಂ = ಬ್ರಹ್ಮವೇ, ಸಾಕ್ಷಾತ್ = ಪರಾಧೀನತ್ವವಿಲ್ಲದಿರುವುದರಿಂದ ಆನಂತ್ಯವಿದ್ದಪ್ರಯುಕ್ತ, ತತ್ ಚ = ಅನಂತವೆಂದು ಹೇಳಲ್ಪಡುತ್ತದೆ. ಸದಾ = ಯಾವಾಗಲೂ, ಸರ್ವಾನಂತ್ಯಯುತಂ = ಎಲ್ಲಾದಕ್ಕೂ ಆನಂತ್ಯದಿಂದ ಯುಕ್ತವಾದುದು. ಅಂದರೆ ಈ ಶ್ರುತಿಯಲ್ಲಿ ಆನಂತ್ಯಮಾತ್ರವು ಲಕ್ಷಣವೆಂದು ಹೇಳಲ್ಪಡುವುದಲ್ಲ ಮತ್ತೆ ದೇಶದಿಂದಲೂ ಕಾಲದಿಂದಲೂ ಗುಣಾದಿಗಳಿಂದಲೂ ಬ್ರಹ್ಮನೇ ಅನಂತನು. **ದೇಶತಃ ಕಾಲತಶ್ಚೈವ ಗುಣತಶ್ಚ ತ್ರಿಧಾ ತತಿಃ । ಸಾ ಸಮಸ್ತಾ ಹರೇರೇವ ನ ಹ್ಯನ್ಯೇ ಪೂರ್ಣಸದ್ಗುಣಾಃ,** ಎಂದು ಶ್ರುತಿಯು ॥ ೮೨ ॥

ಪರಮಾಣುವಿನಲ್ಲಿಯೂ ಪರಿಮಾಣಾಪಕರ್ಷ ತಾರತಮ್ಯಕ್ಕೆ ವಿಶ್ರಾಂತಿಯು ಇಲ್ಲವೆಂದು ಹೇಳಲ್ಪಟ್ಟದೆ. ಅದು ಅಯುಕ್ತವು. ಪರಿಮಾಣವು ದ್ರವ್ಯವನ್ನು ಆಶ್ರಯಿಸಿಕೊಂಡಿರುವುದು. ಪರಮಾಣುವಿನಿಂದಲೂ ಅಪಕೃಷ್ಟವಾದ ಪರಿಮಾಣವನ್ನು ಆಶ್ರಯಿಸಿಕೊಂಡು ಇರುವ ದ್ರವ್ಯವು ಇಲ್ಲ ಎಂದರೆ ಹೀಗೆ ಹೇಳಕೂಡದು. ಪರಮಾಣುವಿಗೆ ಭಾಗಗಳು ಇವೆ. ಭಾಗಗಳಿಗೂ ಭಾಗವಿದ್ದಪ್ರಯುಕ್ತ ಪರಮಾಣುಭಾಗಗಳಲ್ಲಿ ವಿಶ್ರಾಂತಿಯು ಇಲ್ಲ. ಅವಿಶ್ರಾಂತವಾದ ಭಾಗ ಪರಂಪರೆಯು ಯಾವುದರಿಂದ ಸಿದ್ಧವಾಯಿತೆಂದರೆ ಸಾಕ್ಷಿರೂಪ ಪ್ರಮಾಣದಿಂದ ಸಿದ್ಧ ವಾಯಿತೆಂದು ಹೇಳುವುದಕ್ಕಾಗಿ ಸಾಕ್ಷಿಯೆನ್ನುವ ಪ್ರಮಾಣವೇ ಇಲ್ಲ ಎಂದು ಹೇಳುವವನಿಗೆ ಬಾಧಕವನ್ನು ಹೇಳುತ್ತಾರೆ—

**ಮೂ ॥ ಯದಿ ಸಾಕ್ಷೀ ಸ್ವಯಂ ಭಾತೋ ನ ಮಾನಂ ಕೇನ ಗಮ್ಯತೇ ।**
**ಅಕ್ಷಜಾದೇಶ್ಚ ಮಾನತ್ವಮನವಸ್ಥಾಽನ್ಯಥಾ(ಥವಾ)ಭವೇತ್ ॥ ೮೩ ॥**
**ಅತಃ ಸರ್ವಪದಾರ್ಥಾನಾಂ ಭಾಗಾಃ ಸಂತ್ಯೇವ ಸರ್ವದಾ ।**
**ಸರ್ವದಿಕ್ಷ್ವಪಿ ಸಂಬಂಧಾದವಿಭಾಗಃ ಪರಾಣುತಾ ॥ ೮೪ ॥**

ಅ ॥ ಸ್ವಯಂಭಾತಃ = ಸ್ವಯಂಪ್ರಕಾಶಮಾನವಾದ, ಸಾಕ್ಷೀ ಮಾನಂ = ಸಾಕ್ಷಿ ಯೆನ್ನುವ ಪ್ರಮಾಣವು, ಯದಿ=ಯಾವ ಪಕ್ಷದಲ್ಲಿ, ನ=ಇಚ್ಛಿಸಲ್ಪಡುವುದಿಲ್ಲವೋ, (ತದಾ=ಆಗ) ಅಕ್ಷಜಾದೇಃ=ಪ್ರತ್ಯಕ್ಷ ಮೊದಲಾದ ಜ್ಞಾನಕ್ಕೆ, ಮಾನತ್ವಂ=ಪ್ರಾಮಾಣ್ಯವು, ಚ=ಮತ್ತು ಬಾಹ್ಯಾಕಾಶಾದಿಗಳೂ ಆಂತರಸುಖಾದಿಗಳೂ ಕೂಡ, ಕೇನ = ಯಾವ ಪ್ರಮಾಣದಿಂದ ಗಮ್ಯತೇ=ತಿಳಿಯಲ್ಪಡುತ್ತವೆ. (ಅದನ್ನು ತಿಳಿಸಿಕೊಡತಕ್ಕ ಪ್ರಮಾಣಾಂತರವೇ ಇಲ್ಲವಿರುವುದ ರಿಂದ ಯಾವ ಪ್ರಮಾಣದಿಂದಲೂ ತಿಳಿಯಲ್ಪಡಲಾರದು. ಅದು ಬೇಡವೆಂದನ್ನಕೂಡದು. ವ್ಯವಹಾರವೇ ಇಲ್ಲವೆಂದಾಗಬೇಕಾಗುವುದು.) (ಹಾಗಾದರೆ ಸಾಕ್ಷಿಯನ್ನು ಅಂಗೀಕರಿಸದೆ ಇದ್ದವನಿಗೆ ಇದು ಬಾಧಕವಾಗಲಿ, ಸಾಧಕಯಾವುದೆಂದರೆ— 'ಸ್ವಯಂಭಾತಃ'=ಯಾವನು ಸ್ವಯಂ ಪ್ರಕಾಶಮಾನವಾದಾಗ್ಯೂ ಸಾಕ್ಷಿವಿಷಯದಲ್ಲಿ ವಿಪ್ರತಿಪತ್ತಿಯನ್ನು ಮಾಡುತ್ತಾನೋ, ಆತನನ್ನು 'ಅಕ್ಷಜಾದೇರ್ಮಾನತ್ವಂ ಸಪ್ರಮಾಣಕಂ ವಸ್ತುತ್ವಾತ್ ಘಟವತ್' ಎಂದು ಪ್ರಸಂಗ ಸೂಚಿತವಾದ ಅನುಮಾನದಿಂದ ಬೋಧಿಸಬೇಕು.) (ಸಾಕ್ಷಿಯನ್ನು ಅಂಗೀಕರಿಸದೆ ಇದ್ದರೂ ಪ್ರತ್ಯಕ್ಷಾದಿ ಜ್ಞಾನಪ್ರಾಮಾಣ್ಯವು ಅಪ್ರಾಮಾಣಿಕವೆಂದಾಗುವುದಿಲ್ಲ. ಫಲವತ್ತಾದ ಪ್ರವೃತ್ತಿ ಯನ್ನು ಹುಟ್ಟಿಸತಕ್ಕ ಜ್ಞಾನಕ್ಕೆ ಸಮರ್ಥ ಪ್ರವೃತ್ತಿಯನ್ನು ಹುಟ್ಟಿಸುವಿಕೆಯಿಂದಾಗಲೀ ತಜ್ಜಾತೀಯತ್ವದಿಂದಲಾಗಲೀ ಎಂಬುವ ಅನುಮಾನದಿಂದ ಪ್ರಾಮಾಣ್ಯವು ಸಿದ್ಧಿಸುವುದೆಂದರೆ—) ಅನ್ಯಥಾ=ಸಾಕ್ಷಿಯಿಂದ ಇತರವಾದ ಪ್ರಮಾಣದಿಂದ ವೇದ್ಯತ್ವವನ್ನು ಅಂಗೀಕರಿಸಿದರೆ, ಅನ ವಸ್ಥಾ=ಅನವಸ್ಥೆಯು, ಭವೇತ್=ಆಗುವುದು. (ಸಾಕ್ಷಿಪ್ರಾಮಾಣ್ಯವನ್ನು ಮತ್ತೊಂದರಿಂದ ಗ್ರಹಿಸಬೇಕಾಗುವುದರಿಂದ ಅನವಸ್ಥೆಯೇ ಎಂದು ಹೇಳಕೂಡದು. ಸಾಕ್ಷಿಯೂ ಸ್ವಪ್ರಕಾಶ ವಾಗಿರುವುದರಿಂದ ತನ್ನನ್ನೂ ತನ್ನ ಪ್ರಾಮಾಣ್ಯವನ್ನೂ ತಾನೇ ಗ್ರಹಿಸುತ್ತದೆ ಎನ್ನುವ ಅಭಿಪ್ರಾಯ ದಿಂದ 'ಸ್ವಯಂಭಾತಃ' ಎಂದು.) ಅತಃ=ಸಾಕ್ಷಿಯದ್ದೆಶೆಯಿಂದ, ಸರ್ವಪದಾರ್ಥಾನಾಂ= ಎಲ್ಲಾ ಪದಾರ್ಥಗಳಿಗೆ, ಪರಮಾಣುವಿಗೂ ಪರಮಾಣುಭಾಗಗಳಿಗೂ, ಭಾಗಾಃ=ಭಾಗಗಳು, ಸಂತ್ಯೇವ=ಇವೆ. (ಎಂದು ಸಿದ್ಧವಾಯಿತು.) ಅಥವಾ 'ಸರ್ವಪದಾರ್ಥಾನಾಂ' ಎನ್ನುವುದ ರಿಂದ 'ಪರಮಾಣುಃ ಸಭಾಗಃ ಪದಾರ್ಥತ್ವಾತ್ ಘಟವತ್' ಎನ್ನುವ ಅನುಮಾನವು ಸೂಚಿತ ವಾಯಿತು.) (ಅನುಮಾನಾಂತರವನ್ನು ಹೇಳುತ್ತಾರೆ.) ಸರ್ವದಾ=ಏಕಕಾಲದಲ್ಲಿ, ಸರ್ವದಿಕ್ಷು=

ಎಲ್ಲಾ ದಿಕ್ಕುಗಳಲ್ಲಿರತಕ್ಕ ದ್ರವ್ಯಗಳಿಂದ ಸಂಬಂಧಾದಪಿ=ಸಂಯೋಗದ್ವೆಶೆಯಿಂದಲೂ ಕೂಡ, ಭಾಗಾಃ =ಭಾಗಗಳು, ಸಂತೀತಿ=ಇವೆ ಎಂದು, (ತಿಳಿಯಲ್ಪಡುತ್ತವೆ.) ('ತಥಾಚ ಪರಮಾಣುಃ ದಶಭಾಗವಾನ್ ಯುಗಪತ್ ದಶಮೂರ್ತಸಂಯೋಗಿತ್ವಾತ್ ಪಟವತ್'' ಎಂದು ಅನುಮಾನವು ಉಕ್ತವಾಯಿತು.) (ಹಾಗಾದರೆ 'ಪರಮಾಣುಃ ಸಾವಯವಃ' ಎಂದು ಸ್ವವ್ಯಾಹತಿಗೆ ಮುಖ್ಯ ವಾದ ಉದಾಹರಣೆಯು. ಯಾವುದು ಎಲ್ಲಾದಕ್ಕಿಂತಲೂ ಅಪಕೃಷ್ಟವಾಗಿದೆಯೋ ಯಾವುದ ಕ್ಕಿಂತ ಮುಖ್ಯವಾದ ಅಣುವು ಇಲ್ಲವೋ ಅದನ್ನು ಪರಮಾಣುವೆನ್ನುತ್ತಾರೆ. ಅದಕ್ಕೂ ಅವಯವ ವಿದ್ದರೆ ಅವಯುಪಯದ್ವೆಶೆಯಿಂದ ಅವಯುವಗಳಿಗೆ ಅಪಕೃಷ್ಟಪರಿಮಾಣವತ್ವವು ಆವಶ್ಯಕವಾಗಿರು ವುದರಿಂದ ಹೇಗೆ ತಾನೇ ವ್ಯಾಹತಿಯಿಲ್ಲದಿರುವುದೆಂದರೆ) ಅವಿಭಾಗಃ=ವಿಭಾಗವಿಲ್ಲದಿರುವುದು, ಪರಾಣುತಾ=ಪರಮಾಣುಶಬ್ದ ಪ್ರವೃತ್ತಿನಿಮಿತ್ತವು. ಅಂದರೆ— ನೀವು ಹೇಳಿದ್ದು ಪರಮಾಣು ಪದಪ್ರವೃತ್ತಿನಿಮಿತ್ತವಾಗಿದ್ದರೆ ಈ ವಿರೋಧವು ಬರುತ್ತಿತ್ತು. ಹೀಗೆ ಇಲ್ಲ. ಪರಮಾಣುವಿಗೆ ಅವಯುವಗಳಿವೆ ಎಂದು ಸಾಕ್ಷಿಸಿದ್ಧವಾಗಿರುವುದರಿಂದ ವಿರೋಧವು ಕೂಡಲಾರದು. ಮತ್ತೆ ಅವಿಭಾಗವೇ ಪರಮಾಣು ಪದಪ್ರವೃತ್ತಿನಿಮಿತ್ತವು. ಆದಕಾರಣ ವ್ಯಾಹತಿ ಇಲ್ಲ ತಥಾಚ ಯಾವುದಕ್ಕೆ ವಿಭಿನ್ನ ಅವಯುವಗಳಿದ್ದರೂ ಅವುಗಳಿಗೆ ವಿಭಾಗವು ಯಾವಾಗಲೂ ಆಗಲಿಕ್ಕೆ ಯೋಗ್ಯವಾಗುವುದಿಲ್ಲವೋ ಅದು ಪರಮಾಣುವು. ಅಥವಾ ಯಾವುದಕ್ಕೆ ತನ್ನ ಅವಯವ ಹೊರತು ಸ್ವತಂತ್ರವಾದ ಅವಯುವರೂಪವಾದ ಅಪಕೃಷ್ಟಪರಿಮಾಣವುಳ್ಳ ವಸ್ತು ಇಲ್ಲವೋ ಅದು ಪರಮಾಣುವು ॥ ೮೩ ॥ ೮೪ ॥

ಸೂತ್ರಕಾರರು ಪರಿಮಾಣಾಸಮವಾಯಿಕಾರಣ ವಿಷಯದಲ್ಲಿ ಯಾವುದೊಂದು ದೂಷಣ ವನ್ನು ಹೇಳಿರುವರೋ, ಅದು ಉಪಲಕ್ಷಣಮಾತ್ರವು. ಬೇರೆ ಕಡೆಯಲ್ಲಿಯೂ ಅಸಮವಾಯಿ ಕಾರಣವಿಷಯದಲ್ಲಿ ದೂಷಣಗಳನ್ನು ತಾನೇ ಊಹಿಸಬೇಕು ಎನ್ನುವ ಅಭಿಪ್ರಾಯದಿಂದ ದ್ರವ್ಯ ಗಳಿಗೆ ಅಸಮವಾಯಿಕಾರಣವಾದ ಸಂಯೋಗವಿಷಯದಲ್ಲಿ ಅನ್ಯಥಾಪ್ರತಿಪತ್ತಿಯನ್ನು (ದ್ವ್ಯಣು ಕಾದಿಕಾರ್ಯದಲ್ಲಿ ವಿಷಯವೈಪರೀತ್ಯದಿಂದ ಅಂಗೀಕಾರವನ್ನು) ನಿರಾಕರಿಸುತ್ತಾರೆ—

**ಮೂ ॥ ತತ್ಸಂಯೋಗಾದನಿಯತಾತ್ಪದಾರ್ಥಾನಾಂ ಜನಿರ್ಭವೇತ್ ।**
**ದ್ವಯೋರೇವ ತು ಸಂಯೋಗ ಇತಿ ಕೇನಾವಸೀಯತೇ ॥ ೮೫ ॥**

**ಅ ॥** (ಅವಯುವ ಸಂಯೋಗವು ದ್ರವ್ಯಗಳಿಗೆ ಅಸಮವಾಯಿಕಾರಣವು ಎಂದು ಹೇಳುವ ವೈಶೇಷಿಕಾದಿಗಳು ಪರಮಾಣುವಿನಿಂದ ಕಾರ್ಯವು ಹುಟ್ಟುವ ವಿಷಯದಲ್ಲಿ ಸಜಾತೀಯಗಳೇ ಆದ ಎರಡೇ ಪರಮಾಣುಗಳ ಸಂಯೋಗಕ್ಕೆ ಅಸಮವಾಯಿಕಾರಣತ್ವವೆಂದು ಹೇಳುತ್ತಾರೆ. ಅದನ್ನು ನಂಬಕೂಡದು. ಮತ್ತೆ) ಅನಿಯತಾತ್ = ಹಿಂದೆ ಹೇಳಿದ ನಿಯಮವಿಲ್ಲದಿರುವ, ತತ್ಸಂಯೋಗಾತ್=ಆ ಕಾರಣಗಳ ಸಂಯೋಗದ್ವೆಶೆಯಿಂದ, ಪದಾರ್ಥಾನಾಂ=ಪದಾರ್ಥಗಳ, ಜನಿಃ=ಉತ್ಪತ್ತಿಯು, ಭವೇತ್=ಆಗುವುದು. ದ್ವಯೋರೇವ ತು=ಎರಡು ಸಜಾತೀಯಗಳೇ ಆದ ಪರಮಾಣುಗಳಿಗೆ, ಸಂಯೋಗಃ = ಸಂಯೋಗವು, (ಆದಿಕಾರ್ಯಕ್ಕೆ ಅಸಮವಾಯಿ ಕಾರಣವು,) ಇತಿ = ಹೀಗೆ, ಕೇನ = ಯಾವ ಪ್ರಮಾಣದಿಂದ, ಅವಸೀಯತೇ=ನಿಶ್ಚಯಿಸ ಲ್ಪಡುತ್ತದೆ.

**ತಾ ॥ ನ್ಯಾಯಸುಧಾ**— (1) ಕೆಲವು ಕಾರ್ಯವು ಎರಡು ಪರಮಾಣುಗಳ ಸಂಯೋಗ ದೆಶೆಯಿಂದ ಹುಟ್ಟುತ್ತದೆ. ಅದು ದ್ವ್ಯಣುಕವೆನ್ನಿಸುತ್ತದೆ. ಮೂರು ಪರಮಾಣುಗಳ ಸಂಯೋಗ

ದಿಂದ ಹುಟ್ಟಿದ್ದು ತ್ರ್ಯಣುಕವೆನ್ನಿಸುತ್ತದೆ. ನಾಲ್ಕು ಪರಮಾಣುಗಳಿಂದ ಆರಬ್ಧವಾದುದು ಚತುರಣುಕವು. ಹೀಗೆಯೇ ಇತರವಾದುದನ್ನು ತಿಳಿಯತಕ್ಕದು. (2) ಹಾಗೆಯೇ ಕೆಲವು ಕಾರ್ಯಗಳು ಸಜಾತೀಯಗಳಾದ ಪರಮಾಣುಗಳ ಸಂಯೋಗದಿಂದಲೂ ಕೆಲವು ವಿಜಾತೀಯಗಳಾದ ಪರಮಾಣುಗಳ ಸಂಯೋಗದಿಂದಲೂ ಹುಟ್ಟುತ್ತವೆ. (3) ಹೀಗೆಯೇ ಕೆಲವು ಕಾರ್ಯಗಳು ಪರಮಾಣುಗಳ ಸಂಯೋಗದಿಂದಲೇ, ಕೆಲವು ಪರಮಾಣು ದ್ವ್ಯಣುಕಗಳ ಸಂಯೋಗದಿಂದಲೇ ಹುಟ್ಟುತ್ತವೆ. ಹೀಗೆಯೇ ಸಜಾತೀಯಗಳೇ ಆದ ಮೂರೇ ದ್ವ್ಯಣುಕಗಳಿಂದ ತ್ರ್ಯಣುಕವು ಹುಟ್ಟುತ್ತದೆ. ಇತ್ಯಾದಿಪ್ರಕಾರ ತಿಳಿಯತಕ್ಕದು. ಹೀಗೆಯೇ ದ್ವ್ಯಣುಕಕಾರ್ಯೋತ್ಪತ್ತಿಯಲ್ಲಿಯೂ ನಿಯಮವಿಲ್ಲವೆಂದು ತಿಳಿಯತಕ್ಕದು. ಏಕೆಂದರೆ ಹಿಂದಿನ ನಿಯಮದಲ್ಲಿ ಪ್ರಮಾಣವೇ ಇಲ್ಲ ॥ ೮೫ ॥

ಹಾಗಾದರೆ ಸಜಾತೀಯ ಸಂಯೋಗವೇ ಆರಂಭಕವು ಎನ್ನುವ ನಿಯಮದಲ್ಲಿ ಪ್ರಮಾಣವಿಲ್ಲವೆಂದಲ್ಲ. ಪರಮಾಣು ಕಾರ್ಯದಲ್ಲಿ ಗಂಧಾದಿಗಳ ಉತ್ಪತ್ತಿಯೇ ಆ ವಿಷಯದಲ್ಲಿ ಪ್ರಮಾಣವಾಗಿದೆ. ಹೇಗೆಂದರೆ— ಪಾರ್ಥಿವ ಜಲೀಯ ಪರಮಾಣುಗಳಿಂದ ಒಂದು ಕಾರ್ಯವು ಹುಟ್ಟುವುದಾದರೆ ಆಗ ಅದು ಗಂಧರಹಿತವಾಗಿಯೂ ಸ್ನೇಹರಹಿತವಾಗಿಯೂ ಆಗಬೇಕಾಗುವುದು. ಪಾರ್ಥಿವ-ತೈಜಸಪರಮಾಣುಗಳಿಂದ ಹುಟ್ಟಿದ್ದು ಗಂಧರಹಿತವಾಗಿಯೂ ರೂಪರಹಿತವಾಗಿಯೂ ಆಗಬೇಕಾಗುವುದು. ಒಂದಕ್ಕೆ ಗಂಧಾದ್ಯಾರಂಭಕತ್ವವಿರುವುದಿಲ್ಲ. ಆದುದರಿಂದ ಗಂಧಾದಿಗಳು ಹುಟ್ಟಿರುವುದರಿಂದಲೇ ಸಜಾತೀಯ ಸಂಯೋಗಕ್ಕೆ ಆರಂಭಕತ್ವವು ಸಿದ್ಧಿಸುತ್ತದೆಂದರೆ—

**ಮೂ ॥ ಕಾರಣಸ್ಯ ಗುಣಾಸ್ತೇನ ಭವೇಯುಃ ಕಾರ್ಯಗಾ ಅಪಿ ।**
**ತಾರತಮ್ಯೇನ ಸರ್ವೇಽಪಿ ಮಹಾಂತಶ್ಚಾಣವೋ ಯತಃ ॥ ೮೬ ॥**

ಅ ॥ ತೇನ='ದ್ವಯೋರೇವ ಸಂಯೋಗಃ' ಎನ್ನುವ ನಿಯಮವಿಲ್ಲದಿರುವುದರಿಂದ, ಕಾರಣಸ್ಯ ಗುಣಾಃ = ಕಾರಣದಲ್ಲಿದ್ದ ಗಂಧಮೊದಲಾದ ಗುಣಗಳು ಸಜಾತೀಯಗಳಾಗಿ, ಕಾರ್ಯಗಾ ಅಪಿ=ಕಾರ್ಯದಲ್ಲಿದ್ದ ಗಂಧಾದಿಗಳಿಗೆ ಆರಂಭಕಗಳೂ ಕೂಡ, ಭವೇಯುಃ= ಆದಾವು. ಯತಃ = ಯಾವಕಾರಣದ್ದೆಶೆಯಿಂದ, ತಾರತಮ್ಯೇನ = ತರತಮಭಾವದಿಂದ, ಸರ್ವೇಽಪಿ=ಎಲ್ಲಾ ಅರ್ಥಗಳೂ, ಮಹಾಂತಶ್ಚ=ಮಹತ್ತುಗಳೆಂದೂ, ಅಣವಶ್ಚ=ಅಣುಗಳೆಂದೂ (ಸಮರ್ಥಿತಗಳಾಗಿವೆ).

**ತಾ ॥ ನ್ಯಾಯಸುಧಾ**— (1) ಎರಡೇ ಪರಮಾಣುಗಳ ಸಂಯೋಗವು ಕಾರ್ಯಾರಂಭಕವು ಎನ್ನುವ ನಿಯಮದಲ್ಲಿ ಪ್ರಮಾಣವಿದ್ದರೆ ವಿಜಾತೀಯಾರಂಭಕತ್ವದಲ್ಲಿ ಬಾಧಕವು ಆಗುತ್ತಿತ್ತು. ಹೀಗೆ ಇಲ್ಲ. ತಥಾಚ ಅನೇಕ ವಿಜಾತೀಯಗಳಾದ ಪರಮಾಣುಗಳ ಸಂಯೋಗದ್ದೆಶೆಯಿಂದ ಕಾರ್ಯಾರಂಭವಾಗುವಾಗ ಕಾರಣದಲ್ಲಿರತಕ್ಕ ಗಂಧಮೊದಲಾದಗುಣಗಳು ಸಜಾತೀಯಗಳಾಗಿ ಕಾರ್ಯದಲ್ಲಿರತಕ್ಕ ಗಂಧಾದಿಗಳಿಗೆ ಆರಂಭಕಗಳೂ ಕೂಡ ಆಗುವವು. ದೋಷವೇನು? ಇದು ಪರಮತದ ರೀತಿಯಾಗಿ. ವಸ್ತುತಸ್ತು ಕಾರಣಗಳೇ ಕಾರ್ಯಾಕಾರವಾಗಿ ಹುಟ್ಟುವುದರಿಂದ ಕಾರಣಗುಣಗಳೇ ಕಾರ್ಯದಲ್ಲಿರತಕ್ಕವುಗಳು ಆಗುವವು. ಅಂತೂ ವಿಜಾತೀಯಾರಂಭಕತ್ವವಿದ್ದರೂ ದೋಷವಿಲ್ಲ. (2) ಆದರೆ ಅನೇಕ ಪರಮಾಣುಗಳ ಸಂಯೋಗಕ್ಕೆ ಆರಂಭಕತ್ವವಿದ್ದರೆ ಇದು ಆಗಬಹುದು. ಹೀಗೆ ಇಲ್ಲ. 'ಆರಂಭಕಸಂಖ್ಯಾಪ್ರಕರ್ಷತಾರತಮ್ಯಂ ಕ್ವಚಿದ್ವಿಶ್ರಾಂತಂ ತಾರತಮ್ಯತ್ವಾತ್ ಪರಿಮಾಣತಾರತಮ್ಯವತ್' ಎನ್ನುವ ಅನುಮಾನದಿಂದ ಆರಂಭಕವಾದ ಸಂಖ್ಯಾಪ್ರಕರ್ಷಕ್ಕೆ ಎಲ್ಲಿಯಾದರೂ ವಿಶ್ರಾಂತಿಯು ಸಿದ್ಧಿಸಿದರೆ ಒಂದಕ್ಕೇನೇ

ಆರಂಭಕತ್ವವು ಇದ್ದರೆ ಸರ್ವದಾ ಉತ್ಪತ್ತ್ಯಾದಿಗಳು ಬರಬೇಕಾಗುವುದರಿಂದ ಮೂರು, ನಾಲ್ಕು ಮೊದಲಾದುದನ್ನು ಕಲ್ಪಿಸಿದರೆ ಗೌರವವು ಬರುವುದರಿಂದ ಎರಡೇ ಪರಮಾಣುಗಳ ಸಂಯೋಗವು ದ್ರವ್ಯಾರಂಭಕವು ಎನ್ನುವ ನಿಯಮವು ಸಿದ್ಧಿಸುತ್ತದೆ ಎಂದರೆ— ತರತಮಭಾವದಿಂದ ಎಲ್ಲಾ ವಸ್ತುಗಳೂ ಮಹತ್ತುಗಳಿಂದೂ ಅಣುಗಳಿಂದೂ ಸಮರ್ಥಿಸಲ್ಪಟ್ಟವೆ. ಆದಕಾರಣ 'ಪರಿಮಾಣ ತಾರತಮ್ಯವತ್' ಎನ್ನುವ ದೃಷ್ಟಾಂತಕ್ಕೆ ಸಾಧ್ಯವೈಕಲ್ಯವು ಬರುವುದರಿಂದ ಎರಡೇ ಪರಮಾಣು ಗಳಿಗೆ ಸಂಯೋಗವೆಂದು ಯಾವುದರಿಂದ ನಿಶ್ಚಿತವಾಗುತ್ತದೆ ॥ ೮೬ ॥

ಹೀಗೆ ಹಿಂದಿನ ನಿಯಮಗಳಲ್ಲಿ ಪ್ರಮಾಣವಿಲ್ಲವೆನ್ನುವುದು ಆಗಲಿ, ಆದಾಗ್ಯೂ ನಿಯಮ ವಿಲ್ಲದೇನೇ ಸೃಷ್ಟಿಯಾಗುತ್ತದೆ ಎನ್ನುವಲ್ಲಿ ಏನು ಪ್ರಮಾಣವು ಎಂದರೆ— ಸಾಕ್ಷಿಯು. ಮತ್ತು ನಿಯತ ಸಂಖ್ಯೆಇಲ್ಲದಿರುವವುಗಳು ವಿಜಾತೀಯಗಳೂ ವಿಸದೃಶಗಳೂ ಆದವುಗಳಿಂದ ಲೋಷ್ಟ ಮೊದಲಾದ ಕಾರ್ಯಗಳಿಗೆ ಆರಂಭವು ಕಾಣುವುದರಿಂದ 'ದ್ವ್ಯಣುಕಾದಿಕಾರ್ಯಂ ದ್ವಾಭ್ಯಾ ಮೇವೇತ್ಯಾದಿ ನಿಯಮಶೂನ್ಯಕಾರಣಜನ್ಯಂ ಕಾರ್ಯದ್ರವ್ಯತ್ವಾತ್ ಲೋಷ್ಟಾದಿವತ್=ದ್ವ್ಯಣು ಕಾದಿಕಾರ್ಯವು ಎರಡರಿಂದಲೇ, ಮೂರರಿಂದಲೇ ಇದುಮೊದಲಾದ ನಿಯಮವಿಲ್ಲದಿರುವ ಕಾರಣ ದಿಂದ ಹುಟ್ಟಿದ್ದು ಕಾರ್ಯದ್ರವ್ಯವಾಗಿರುವುದರಿಂದ ಲೋಷ್ಟಾದಿಗಳಂತೆಯೇ ಎನ್ನುವ ಅನು ಮಾನವೂ ಕೂಡ. ಮತ್ತು ಈ ವಿಷಯದಲ್ಲಿ **'ತಾಸಾಂ ತ್ರಿವೃತಂ ತ್ರಿವೃತಮೇಕೈಕಾಂ' 'ನಿತ್ಯಾನ್ಯೇತಾನಿ ಸೌಕ್ಷ್ಮ್ಯೇಣ ಹೀಂದ್ರಿಯಾಣಿ ತು ಸರ್ವಶಃ । ತೇಷಾಂ ಭೂತೈರುಪ ಚಯಃ ಸೃಷ್ಟಿಕಾಲೇ ವಿಧೀಯತೇ' 'ಪ್ರಾಣಾ ವಾ ಇದಮಗ್ರ ಆಸುಃ ತೇಭ್ಯೋ ಭೂತಾನಿ ಜಜ್ಞಿರೇ'** ಇದು ಮೊದಲಾದ ಆಗಮಗಳೂ ಕೂಡ ಅನೇಕ ಇರುತ್ತವೆ. ಭ್ರಾಂತಿ ಯೆಂದರೆ (೧) ನಿಯಮಗ್ರಾಹಕಪ್ರಮಾಣವಿರೋಧವಿಂದ ಹೀಗೆ ಹೇಳುವುದೋ (೨) ಅಥವಾ ಕೇವಲವಾಗಿ ವೈಶೇಷಿಕಾದಿಗಳ ಕಲ್ಪನೆಯಿಂದ ವಿರೋಧಬರುವುದರಿಂದಲೋ. ೧ನೇದ್ದನ್ನು ದೂಷಿಸುತ್ತಾರೆ—

**ಮೂ ॥ ನ ಚ ತತ್ಪ್ರೋಕ್ತಸೃಷ್ಟೌ ತು ಮಾನಂ ಕೇವಲಕಲ್ಪನಾ ।**
**ಕಥಂ ಸಾಕ್ಷಿಮಿತಸ್ಯಾಸ್ಯ ಶಕ್ನುಯಾದ್ವಾರಣೇ ಕ್ವಚಿತ್ ॥ ೮೭ ॥**

ಅ ॥ ತತ್ಪ್ರೋಕ್ತಸೃಷ್ಟೌ ತು=ಸಜಾತೀಯಗಳಿಂದಲೇ, ಎರಡರಿಂದಲೇ, ಪರಮಾಣು ಗಳಿಂದಲೇ ಇದು ಮೊದಲಾದ ನಿಯಮವುಳ್ಳ ತಾರ್ಕಿಕರು ಹೇಳಿದ ಸೃಷ್ಟಿಯಲ್ಲಿ ಆದರೂ; ಮಾನಂ=ಪ್ರಮಾಣವು, ನ ಚ=ಇಲ್ಲ. (೨ನೇದ್ದನ್ನು ದೂಷಿಸುತ್ತಾರೆ.) ಕೇವಲಕಲ್ಪನಾ= ವೈಶೇಷಿಕಾದಿಗಳ ಕಲ್ಪನೆಯು ನಿರ್ಮೂಲವಾದುದು. ಕ್ವಚಿತ್=ಎಲ್ಲಿಯಾದರೂ, ಸಾಕ್ಷಿಮಿತಸ್ಯ= ಸಾಕ್ಷಿ ಅನುಮಾನ ಆಗಮಗಳಿಂದ ಸಿದ್ಧವಾದ, ಅಸ್ಯ=ನಮಗೆ ಅಭಿಮತವಾದ ಸೃಷ್ಟಿಪ್ರಕಾರ ವನ್ನ ಅಥವಾ ಅಸ್ಯ = ಅನಿಯಮಾರಂಭವನ್ನ, ವಾರಣೇ = ಬಾಧಿಸುವ ವಿಷಯದಲ್ಲಿ, ಕಥಂ=ಹೇಗೆ, ಶಕ್ನುಯಾತ್=ಸಮರ್ಥವಾಗುವುದು. ಕಲ್ಪನಾಮಾತ್ರವು ಪ್ರಮಾಣಸಿದ್ಧ ವಾದುದನ್ನು ತಡೆಯುವುದಾದರೆ ಬೌದ್ಧಸಾಂಖ್ಯಾದಿಕಲ್ಪನೆಯಿಂದಲೂ ಈಶ್ವರಮೊದಲಾದ ಪ್ರಾಮಾಣಿಕಾರ್ಥವನ್ನು ನಿವಾರಣಮಾಡಬೇಕಾಗುವುದು.

**ಟಾ ॥ ನ್ಯಾಯಸುಧಾ—** (1) ಪ್ರಕೃತಿಯದ್ವೇಶೆಯಿಂದ ಮಹತ್ತತ್ತ್ವವು, ಮಹತ್ತತ್ತ್ವ ದ್ವೇಶೆಯಿಂದ ಅಹಂಕಾರತತ್ತ್ವವು, ಅಹಂಕಾರತತ್ತ್ವದ್ವೇಶೆಯಿಂದ ಕ್ರಮವಾಗಿ ಆಕಾಶ ಮೊದಲಾದ ಮಹಾಭೂತಗಳು ಹೀಗೆ ಶ್ರುತ್ಯಾದಿಪ್ರಸಿದ್ಧವಾದ ಪ್ರಕ್ರಿಯೆಯನ್ನು ಬಿಟ್ಟು ವಾಯುಮೊದಲಾದ ನಾಲ್ಕರ ಅನ್ಯೋನ ನಿರಪೇಕ್ಷವೇ ಆದ ಸೃಷ್ಟಿಯು ವ್ಯುತ್ಕ್ರಮವಾಗಿಯೂ ಅಂದರೆ ಅನಾದಿ

ನಿತ್ಯವಾದ ಆಕಾಶದಲ್ಲಿ ಪ್ರಥಮತಃ ವಾಯುಸೃಷ್ಟಿಯು. ಆ ಮೇಲೆ ಆಧಾರವಾಗಿ ನೀರಿಗೂ ಆ ಮೇಲೆ ಪೃಥಿವಿಗೂ ಸೃಷ್ಟಿಯು, ಆ ಮೇಲೆ ತೇಜಸ್ಸಿಗೆ ಸೃಷ್ಟಿಯು ಎಂದು ಹೇಳಲ್ಪಟ್ಟಿದೆ. ಬಾಧಕವಿಲ್ಲದೇನೇ 'ಆಕಾಶಾದ್ವಾಯುಃ' 'ವಾಯೋರಗ್ನಿಃ' ಇದು ಮೊದಲಾದ ಪಾಠಕ್ರಮವು ಅಮುಖ್ಯವಾಗಿ ಸ್ವೀಕರಿಸಲ್ಪಟ್ಟಿದೆ. ಅತ್ಯಂತಾಸಕ್ತಿಗೇನೇ ಉತ್ಪತ್ತಿಯು ಅಂಗೀಕರಿಸಲ್ಪಟ್ಟಿದೆ. (2) ಎಲ್ಲಾ ಸೃಷ್ಟಿಯು ಸಮವಾಯಿಕಾರಣ ಅಸಮವಾಯಿಕಾರಣ ನಿಮಿತ್ತಕಾರಣಗಳ ಅಧೀನ ವೆಂದಂಗೀಕರಿಸಲ್ಪಟ್ಟಿದೆ. ಅವರಲ್ಲಿ ಸಮವಾಯವಿಷಯದಲ್ಲಿಯೇ ಪ್ರಮಾಣವಿಲ್ಲವೆಂದು ಮುಂದೆ ಹೇಳುವುದರಿಂದ ಸಮವಾಯಿಕಾರಣವೂ ಅಸಮವಾಯಿಕಾರಣವೂ ಅಯುಕ್ತವು. ಮತ್ತು ಸಮವಾಯಿಕಾರಣದಲ್ಲಿಯೂ ನಿಮಿತ್ತಕಾರಣದಲ್ಲಿಯೂ ಅತಿವ್ಯಾಪ್ತಿಯು ಬರುತ್ತದೆ. ಹೇಗೆಂದರೆ ತಂತು ಪಟಗಳಿಂದ ಹುಟ್ಟಿದ ದ್ವಿತ್ವಕ್ಕೆ ಪಟವು ಸಮವಾಯಿಕಾರಣವು. ಆ ಪಟವು ದ್ವಿತ್ವ ಸಮವಾಯಿಕಾರಣವಾದ ತಂತುವಿನಲ್ಲಿ ಸಮವೇತವಾದಪ್ರಯುಕ್ತ ಸಮವಾಯಿಕಾರಣಪ್ರತ್ಯಾಸನ್ನವಾಯಿತು. ಸಮವಾಯಿಕಾರಣವಾಗಿರುವುದರಿಂದ ನಿಶ್ಚಿತಸಾಮರ್ಥ್ಯವುಳ್ಳದ್ದೂ ಆಗಿದೆ. ಶರೀರ ಆತ್ಮರಿಂದ ಹುಟ್ಟಿದ ದ್ವಿತ್ವಕ್ಕೆ ಅಪೇಕ್ಷಾಬುದ್ಧಿಯು ನಿಮಿತ್ತಕಾರಣವು. ಆ ಅಪೇಕ್ಷಾ ಬುದ್ಧಿಯು ದ್ವಿತ್ವಕ್ಕೆ ಸಮವಾಯಿಕಾರಣವಾದ ಆತ್ಮನಲ್ಲಿ ಸಮವೇತವಾದಪ್ರಯುಕ್ತವೂ ನಿಮಿತ್ತ ವಾದಪ್ರಯುಕ್ತವೂ ಹಿಂದಿನಲಕ್ಷಣಗಳಿಂದ ಕೂಡಿರುತ್ತದೆ. ಹೀಗೆ ತುರೀತಂತುಸಂಯೋಗಾದಿ ಗಳಲ್ಲಿಯೂ ಅತಿವ್ಯಾಪ್ತಿಯನ್ನು ಊಹಿಸಬೇಕು. ಅಂತೂ ತಾರ್ಕಿಕರ ಪ್ರಕ್ರಿಯೆಯು ನಿರ್ಮೂಲವೆಂದು ಸಿದ್ಧವೇ ಆಯಿತು ॥ ೮೭ ॥

ಹಾಗಾದರೆ ಪರಮಾಣುದ್ವ್ಯಣುಕಗಳೇ ಸಾಕ್ಷಿಸಿದ್ಧಗಳಲ್ಲ. ಪರಮಾಣುದ್ವ್ಯಣುಕಗಳ ಆರಂಭಪ್ರಕಾರವು ಸುತರಾಂ ಸಾಕ್ಷಿಸಿದ್ಧವಾಗಲಾರದು. ಆದಕಾರಣ 'ಸಾಕ್ಷಿಮಿತಸ್ಯ' ಎಂದು ಹೇಗೆ ಹೇಳಿದ್ದು ಎಂದರೆ— ಆ ವಿಷಯದಲ್ಲಿ ಹೇಳುತ್ತಾರೆ.

**ಮೂ ॥ ಯದಿ ಸಾಕ್ಷಿಮಿತಂ ನೈತನ್ನಾನುಮಾ ತತ್ರ ವರ್ತತೇ ।**
**ಪಕ್ಷೀಕರ್ತುಮಶಕ್ಯತ್ವಾತ್ಕುತ ಏವಾನುಮಾ ಭವೇತ್ ।**
**ಯತ್ರ ನಾಸ್ತಿ ಪದನ್ಯಾಸಃ ಕಸ್ತಂ ವಿಷಯಮಾಪ್ನುಯಾತ್ ॥ ೮೮ ॥**

ಅ ॥ ಏತತ್=ಈ ಪರಮಾಣುಮೊದಲಾದುದು, ಯದಿ=ಯಾವಪಕ್ಷದಲ್ಲಿ, ಸಾಕ್ಷಿ ಮಿತಂ=ಸಾಕ್ಷಿಸಿದ್ಧವಾದುದು, ನ=ಅಲ್ಲವೋ, (ತರ್ಹಿ=ಹಾಗಾದರೆ, ತತ್=ಅದು, ಅಪ್ರಾಮಾಣಿಕಮೇವ = ಪ್ರಮಾಣಸಿದ್ಧವಲ್ಲವೆಂದೇ, ಆಪದ್ಯತೇ ಪ್ರಾಪ್ತವಾಗುವುದು.) (ಯದ್ಯಪಿ ಮಹತ್ವವಿಲ್ಲದಿರುವುದರಿಂದ ಪರಮಾಣುಮೊದಲಾದುದು ಚಕ್ಷುರಾದಿಗಳಿಗೆ ವಿಷಯವಾಗಲಾರದು. ಬಾಹ್ಯಾರ್ಥದಲ್ಲಿ ಸ್ವಾತಂತ್ರ್ಯವಿಲ್ಲದಿರುವುದರಿಂದ ಮನಸ್ಸಿಗೂ ಗೋಚರವಾಗಲಾರದು. ಆಗಮ ಮೊದಲಾದುದಾದರೂ ಅನುಮಾನದಿಂದ ಭಿನ್ನವಲ್ಲ. ಭೇದವಿದ್ದರೂ ಅತೀಂದ್ರಿಯದಲ್ಲಿ ಸಂಕೇತವೇ ಕೂಡದಿರುವುದರಿಂದ ಆಗಮಕ್ಕೆ ವಿಷಯವು ಆಗಲಾರದು. ಆದಾಗ್ಯೂ ಆ ವಿಷಯದಲ್ಲಿ ಅನುಮಾನವು ಪ್ರಮಾಣವಾಗುವುದು. ಆದಕಾರಣ ಪರಮಾಣ್ವಾದಿಗಳಿಗೆ ಸಾಕ್ಷಿವೇದ್ಯತ್ವ ವಿಲ್ಲವಾದರೆ ಅಪ್ರಾಮಾಣಿಕತ್ವವು ಹೇಗೆ ಪ್ರಾಪ್ತವಾಗುವುದೆಂದರೆ) ಅನುಮಾ = ಅನುಮಾನವು, ತತ್ರ ಆ ವಿಷಯದಲ್ಲಿ, ನ ವರ್ತತೇ=ಇರುವುದಿಲ್ಲ. ಹೇಗೆಂದರೆ—ಪರಮಾಣ್ವಾದಿಗಳನ್ನೇ ಪಕ್ಷೀಕರಿಸಿಕೊಂಡು ಅಪ್ರಾಮಾಣಿಕತ್ವವನ್ನು ಸಾಧಿಸುತ್ತೀರೋ ಅಥವಾ ಬೇರೆ ಯಾವುದಾದರೊಂದನ್ನು ಪಕ್ಷೀಕರಿಸಿಕೊಂಡು ಸಾಧಿಸುತ್ತೀರೋ, ೧ನೇ ಕಲ್ಪದಲ್ಲಿ ಅದು ಪ್ರಮಾಣಾಂತರದಿಂದ ಸಿದ್ಧವಾಗಿದೆಯೋ ಇಲ್ಲವೋ, ಎರಡು ಕಲ್ಪಗಳಲ್ಲಿಯೂ ದೋಷವನ್ನು ಹೇಳುತ್ತಾರೆ.)ಪಕ್ಷೀಕರ್ತುಂ=

ಪಕ್ಷೀಕರಿಸಲಿಕ್ಕೆ, ಅಶಕ್ಯತ್ವಾತ್=ಅಶಕ್ಯತ್ವವಿದ್ದುದರಿಂದ, ಅನುಮಾ=ಅನುಮಾನವು, ಕುತ ಏವ=ಯಾವಕಾರಣದಿಂದ, ಭವೇತ್=ಆಗುವುದು. (ಅಂದರೆ ಪ್ರಮಾಣಾಂತರದಿಂದ ಸಿದ್ಧ ವಾಗಿದ್ದರೆ ಸಂದಿಗ್ಧಸಾಧ್ಯಧರ್ಮವತ್ವರೂಪವಾದ ಪಕ್ಷಲಕ್ಷಣವಿಲ್ಲದಿರುವುದರಿಂದಲೂ, ಪ್ರಮಾ ಣಾಂತರದಿಂದ ಸಿದ್ಧವಾಗದೆ ಇದ್ದರೆ ನ್ಯಾಯವಿಷಯವಾಗದಿರುವುದರಿಂದ ಪರಮಾಣು ಮೊದಲಾ ದುದನ್ನು ಪಕ್ಷೀಕರಿಸಲಿಕ್ಕೆ ಸಾಧ್ಯವಿಲ್ಲದಿರುವುದರಿಂದ ಅನುಮಾನವು ದೂರತಃ ನಿರಸ್ತವಾಯಿತು.) (ಹಾಗಾದರೆ ಪಕ್ಷೀಕರಿಸಲಿಕ್ಕೆ ಬಾರದಿರುವುದಾದರೆ ಅನುಮಾನವು ಕೂಡದಿರುವುದು ಹೇಗೆಂದರೆ—) ಯತ್ರ=ಯಾವ ವಿಷಯ (ದೇಶ) ದಲ್ಲಿ, ಪದನ್ಯಾಸಃ=ಪದನ್ಯಾಸವು, ನಾಸ್ತಿ= ಇಲ್ಲವೋ, ತಂ ವಿಷಯಂ=ಆ ದೇಶವನ್ನು, ಕಃ=ಯಾವನು, ಆಪ್ನುಯಾತ್=ಹೊಂದಿಯಾನು. (ಅಂದರೆ ಹೇಗೆ ದೇಶಪ್ರಾಪ್ತಿಗೆ ಪದನ್ಯಾಸವು ಕಾರಣವೋ, ಆದಕಾರಣ ಪದನ್ಯಾಸವಿಲ್ಲವಾದರೆ ದೇಶಪ್ರಾಪ್ತಿಯೂ ಆಗುವುದಿಲ್ಲವೋ ಹಾಗೆಯೇ ಅನುಮಾನವು ಹುಟ್ಟಲಿಕ್ಕೆ ಪಕ್ಷೀಕರಣವು ಕಾರಣವು, ಪರ್ವತಾದಿಗಳಾಗಲೀ ವಹ್ನ್ಯಾದಿಗಳಾಗಲೀ ಅನುಮಾನಕ್ಕೆ ವಿಷಯವಾಗಲಾರವು ಮತ್ತೆ ಪರ್ವತ ವಹ್ನಿಸಂಬಂಧವು. ಸಂಬಂಧಜ್ಞಾನವಿಲ್ಲದೆ ಸಂಬಂಧಿಜ್ಞಾನವು ಕೂಡಲಾರದು. ಆದುದರಿಂದ ಪಕ್ಷೀಕರಿಸದಿದ್ದರೆ ಅನುಮಾನೋತ್ಪತ್ತಿಯೇ ಕೂಡುವುದಿಲ್ಲ.) (೨ನೇ ಪಕ್ಷವನ್ನು ಅಂದರೆ ಬೇರೆ ಯಾವುದನ್ನಾದರೂ ಪಕ್ಷೀಕರಿಸಿಕೊಂಡು ಸಾಧಿಸುವುದು ಎನ್ನುವುದನ್ನು ನಿರಾಕರಿ ಸುತ್ತಾರೆ.) ಪಕ್ಷೀಕರ್ತುಂ = (ದ್ವ್ಯಣುಕವನ್ನು ಪಕ್ಷೀಕರಿಸಿಕೊಂಡು ಪರಮಾಣುವನ್ನು ಅನುಮೇಯಿಸಬೇಕು. ಈ ವಿಷಯದಲ್ಲಿ ಕಾರ್ಯವೇ ಪ್ರಮಾಣವೆಂದು ತಾರ್ಕಿಕರು ಹೇಳಿರು ವರು. ಅದು ಈಗಲೂ ಅಸಿದ್ಧವಾಗಿದೆ. ಆದಪ್ರಯುಕ್ತ) ಪಕ್ಷೀಕರಿಸಲಿಕ್ಕೆ, ಅಶಕ್ಯತ್ವಾತ್= ಅಶಕ್ಯತ್ವವಿರುವುದರಿಂದ, ಕುತ ಏವ=ಯಾವುದರಿಂದ, ಅನುಮಾ=ಅದಕ್ಕೆ ಕಾರಣವಾದ ಪರಮಾಣುವಿನ ಅನುಮಾನವು, ಭವೇತ್=ಆಗುವುದು. (ಅನುಮಿತವಾದ ದ್ವ್ಯಣುಕವನ್ನು ಪಕ್ಷೀಕರಿಸಿಕೊಂಡು ಪರಮಾಣುವನ್ನು ಅನುಮೇಯಿಸುತ್ತೇವೆಂದರೆ ಹಾಗೆ ಹೇಳಕೂಡದು. ಆಗಲೂ ಪರಮಾಣುವನ್ನು ಪಕ್ಷೀಕರಿಸಿಕೊಂಡು ಸಾಧಿಸುವುದಾದರೆ ಆಗ ಹಿಂದೆ ಹೇಳಿದ ದೋಷವೇ ಬರುತ್ತದೆ ಎನ್ನುತ್ತಾರೆ.) ಪಕ್ಷೀಕರ್ತುಂ ಅಶಕ್ಯತ್ವಾತ್=ಈಗಲೂ ಅಸಿದ್ಧವಾದ ಪರಮಾಣುವನ್ನು ಪಕ್ಷೀಕರಿಸಲಿಕ್ಕೆ ಅಶಕ್ಯತ್ವವಿರುವುದರಿಂದ, ಅನುಮಾ=ಪರಮಾಣುಕಾರ್ಯ ವಾದ ದ್ವ್ಯಣುಕಾನುಮಾನವು, ಕುತ ಏವ ಭವೇತ್=ಯಾವುದರಿಂದ ಆಗುವುದು?

**ತಾ ||** (1) 'ಅಣುಪರಿಮಾಣತಾರತಮ್ಯಂ ಕ್ವಚಿದ್ವಿಶ್ರಾಂತಂ ಪರಿಮಾಣತಾರತಮ್ಯ ತ್ವಾತ್ ಮಹತ್ಪರಿಮಾಣತಾರತಮ್ಯವತ್' ಎನ್ನುವ ಅನುಮಾನದಿಂದ ಪರಮಾಣುಸಿದ್ಧಿಯಾಗು ವುದು ಎಂದರೆ ಹಾಗೆ ಹೇಳಕೂಡದು. ವಿಕಲ್ಪಮಾಡಿದರೆ ಯಾವ ವಿಕಲ್ಪವೂ ಕೂಡುವುದಿಲ್ಲ. ಹೇಗೆಂದರೆ— ಅಣುಪರಿಮಾಣಶಬ್ದದಿಂದ ೧ ಪರಿಮಾಣಾಪಕರ್ಷವು ಹೇಳಲ್ಪಡುತ್ತದೋ, ೨ ಅಥವಾ ಪರಮಾಣು ಪರಿಮಾಣವೋ, ೩ ಅಥವಾ ದ್ವ್ಯಣುಕ ಪರಿಮಾಣವೋ ೪ ಅಥವಾ ಉಭಯ ಪರಿಮಾಣವೋ, ಇವುಗಳಲ್ಲಿ ೧ನೇದ್ದನ್ನು 'ನ ಮಹತ್ವಸ್ಯಾಪಿ ವಿಶ್ರಮಃ' ಇತ್ಯಾದಿಗಳಿಂದ ಸಾಧ್ಯ ವೈಕಲ್ಯ, ಬಾಧಮೊದಲಾದ ದೋಷಗಳು ಬರುತ್ತವೆಂದು ದೂಷಿಸಿರುತ್ತೇವೆ. (2) ಮೇಲಿನ ಮೂರು ಪಕ್ಷಗಳೂ ಅಯುಕ್ತವು. ಹೇಗೆಂದರೆ—ಪರಮಾಣುದ್ವ್ಯಣುಕಗಳು ಸಿದ್ಧಗಳಾಗದಿದ್ದರೆ ಅವುಗಳ ಪರಿಮಾಣವೂ ಅಸಿದ್ಧವಾಗಿದೆ. ಒಂದೊಂದುಕಡೆ ತಾರತಮ್ಯವೂ ಇರುವುದಿಲ್ಲ. (3) ಯಾವುದೊಂದು ಕಿಟಕಿನ ಒಳಗೆ ಸೂರ್ಯಕಿರಣದಲ್ಲಿರತಕ್ಕದು ಎಲ್ಲಾದಕ್ಕಿಂತಲೂ ಅತಿ ಸೂಕ್ಷ್ಮವಾದುದು ಕಾಣಲ್ಪಡುತ್ತದೋ ಅದು ತ್ರ್ಯಣುಕವೆನ್ನಿಸುತ್ತದೆ. ೧ ಈ ತ್ರ್ಯಣುಕವು ಮಹ ತ್ತಾದುದು ಚಾಕ್ಷುಷದ್ರವ್ಯವಾಗಿರುವುದರಿಂದ ಘಟದಂತೆಯೇ. ೨ ಮತ್ತು ತ್ರ್ಯಣುಕವು ಕಾರ್ಯವೂ

ಆಗಿದೆ. ಮಹತ್ತಾಗಿದ್ದು ಕಣ್ಣಿಗೆ ಕಾಣತಕ್ಕುದಾದಪ್ರಯುಕ್ತ, ಅಥವಾ ಮಹತ್ತಾಗಿದ್ದು ಕ್ರಿಯೆಯುಳ್ಳದ್ದಾಗಿರುವುದರಿಂದ. ಮತ್ತು ೩ ತ್ರ್ಯಣುಕವು ಅವಯವಗಳಿಂದೊಡಗೂಡಿದ್ದು, ಕಾರ್ಯದ್ರವ್ಯವಾಗಿರುವುದರಿಂದ. ೪ ಮತ್ತು ತ್ರ್ಯಣುಕದ ಅವಯವಗಳೂ ದ್ವ್ಯಣುಕವೆಂದು ಹೆಸರುಳ್ಳವುಗಳು, ಆ ದ್ವ್ಯಣುಕಗಳೂ ಕಾರ್ಯಗಳೂ ಸಾವಯವಗಳೂ ಆಗಿವೆ, ಮಹತ್ತಾದ ದ್ರವ್ಯಾರಂಭಕಗಳಾಗಿರುವುದರಿಂದ ತಂತುವಿನಂತೆ. (4) ಯಾವುದು ದ್ವ್ಯಣುಕದ ಅವಯವವೋ ಅದೇ ಪರಮಾಣುವು. ಪರಮಾಣುವಿಗೂ ಅವಯವವನ್ನು ಕಲ್ಪಿಸಲಿಕ್ಕೆ ಪ್ರಮಾಣವಿಲ್ಲ. ಅನವಸ್ಥಾರೂಪಬಾಧಕವೂ ಇದೆ. ಆದಕಾರಣ ಅನುಮಾನದಿಂದಲೇ ಪರಮಾಣುದ್ವ್ಯಣುಕಗಳು ಸಿದ್ಧಿಸುತ್ತವೆಂದರೆ ಪ್ರತ್ಯಕ್ಷವಾದ ತ್ರ್ಯಣುಕಕ್ಕೇನೇ ಪರಮಾಣುತ್ವವು ಕೂಡುವುದರಿಂದ ತ್ರ್ಯಣುಕಕ್ಕೆ ಕಾರ್ಯತ್ವವನ್ನೂ ಸಾವಯವತ್ವವನ್ನೂ ಸಾಧಿಸುವುದಕ್ಕಾಗಿ ಪಕ್ಷೀಕರಿಸಲಿಕ್ಕೆ ಅಸಾಧ್ಯವಾಗಿರುವುದರಿಂದ ದ್ವ್ಯಣುಕ ಪರಮಾಣುಗಳ ಅನುಮಾನವು ಹೇಗೆ ಆಗುವುದು? (5) ಅಥವಾ ತ್ರ್ಯಣುಕಕ್ಕೆ ಅವಯವಗಳಿರಲಿ, ಅವುಗಳೇ (ದ್ವ್ಯಣುಕಗಳೇ) ಪರಮಾಣುಗಳು. ಅವುಗಳಿಗೆ ಪುನಃ ಅವಯವಗಳನ್ನು ಸಾಧಿಸಲಿಕ್ಕೆ (ಪಕ್ಷೀಕರಿಸಲಿಕ್ಕೆ) ಸಾಧ್ಯವಿಲ್ಲದಿರುವುದರಿಂದ ಅನುಮಾನವು ಹೇಗೆ ಆಗುವುದು? (6) ಹಾಗಾದರೆ ಮಹತ್ತಾದ ದ್ರವ್ಯವನ್ನು ಆರಂಭಿಸುವುದರಿಂದ ದ್ವ್ಯಣುಕಗಳೂ ಸಾವಯವಗಳೇ ಎಂದು ಹೇಳಕೂಡದು. ಅವಯವವಿಲ್ಲದಿದ್ದದ್ದಕ್ಕೆ ಮಹತ್ತಾದ ದ್ರವ್ಯಾರಂಭಕತ್ವವಿದ್ದರೆ ಬಾಧಕವಿಲ್ಲ. ಬಹುತ್ವದಿಂದಲೇ ಮಹತ್ವಕ್ಕೆ ಆರಂಭವು ಕೂಡಬಹುದು. ದ್ರವ್ಯಾರಂಭದಲ್ಲಿ ಸಾವಯವತ್ವಕ್ಕೆ ಉಪಯೋಗವಿಲ್ಲ. ಅಥವಾ ದ್ವ್ಯಣುಕಕ್ಕೂ ಅವಯವಗಳಿರಲಿ, ಅವುಗಳೂ ಏಕೆ ಪರಮಾಣುಗಳಾಗಬೇಕು? ಮಹತ್ತಾದ ದ್ರವ್ಯಕ್ಕೆ ಆರಂಭಕಗಳಾಗಿರುವುದರಿಂದ ಅವುಗಳಿಗೂ ಸಾವಯವತ್ವವು ಅನುಮಿತವಾಗುತ್ತದೆ. ಅನವಸ್ಥೆಯು ಬಾಧಕವು ಎಂದು ಹೇಳಕೂಡದು. ದ್ವ್ಯಣುಕದ ಅವಯವಗಳಾದ ಪರಮಾಣುಗಳಿಗೂ ಅದರ ಅವಯವಗಳಿಗಾಗಲೀ ಅವಯವವಿಲ್ಲದಿರುವುದರಿಂದ ಅಲ್ಲಿಯೇ ವಿಶ್ರಾಂತಿಯಾಗುವುದು. ಆದಕಾರಣ ತಾರ್ಕಿಕರ ಪರಮಾಣುವಾದವು ಅಯುಕ್ತವು ॥ ೮೮ ॥

ಹೀಗೆ ಪರಮಾಣು ದ್ವ್ಯಣುಕಗಳು ಅನುಮಾನದಿಂದ ಸಿದ್ಧಿಸುವುದಿಲ್ಲವೆಂದು ಹೇಳಿ ಪ್ರಸಂಗ ಸಂಗತಿಯಿಂದ ಆಕಾಶ ಮೊದಲಾದವುಗಳ ಪರಿಮಾಣೋತ್ಕರ್ಷಸಂತ್ಯವೂ ಆನುಮಾನಿಕವಾಗುವುದಿಲ್ಲವೆಂದು ಯಾವುದು 'ಯದಿ ನೋ ಸಾಕ್ಷಿಗಮ್ಯಂ ತನ್ಮಹತ್ವಂ ಕೇನ ಗಮ್ಯತೇ' ಇತ್ಯಾದಿಗಳಲ್ಲಿ ಹೇಳಲ್ಪಟ್ಟದೋ ಅದನ್ನು ವಿಶದೀಕರಿಸುತ್ತಾರೆ—

**ಮೂ ॥ ದೇಶಾಂತರಾದಿಶಬ್ದಾಶ್ಚ ಶಶಶೃಂಗಾದಿಶಬ್ದವತ್ ।**
**ಸದೃಶಂ ಚ ಸಜಾತೀಯಂ ನಾಸ್ಮತ್ಪಕ್ಷೇ ಕಿಮೇವ ಹಿ ॥ ೮೯ ॥**

ಅ ॥ ದೇಶಾಂತರಾದಿಶಬ್ದಾಶ್ಚ = (ಯಾವುದೊಂದು ಯೋಜನಾದಿಗಳಿಂದ ಪರಿಚ್ಛಿನ್ನವಾದ ದೇಶವು ನಿಶ್ಚಿತವಾಗಿದೆಯೋ ಅದು ತನ್ನಪೇಕ್ಷೆಯಿಂದ ಸ್ಥೂಲವಾದ ದೇಶಾಂತರದಿಂದ ಕೂಡಿದ್ದಾಗಿದೆ, ದೇಶವಾಗಿರುವುದರಿಂದ ಹಸ್ತಾದಿದೇಶದಂತೆ, ಇದುಮೊದಲಾದ ಅನುಮಾನಗಳಿಂದ ಆಕಾಶಾದಿಗಳ ಪರಿಮಾಣೋತ್ಕರ್ಷಕ್ಕೆ ಅನಂತ್ಯವನ್ನು ಸಾಧಿಸಬೇಕು. ಆ ಈ ದಾವ) ದೇಶಾಂತರಾದಿಗಳನ್ನು ಸಾಧಿಸಿಕೊಡುವ ಅನುಮಾನಪ್ರಯೋಜನಗಳು, ಶಶಶೃಂಗಾದಿಶಬ್ದವತ್= ಶಶಶೃಂಗಾದಿಗಳನ್ನು ಸಾಧಿಸಿಕೊಡುವ ಅನುಮಾನಪ್ರಯೋಗಗಳಿಂದ ತುಲ್ಯವಾಗಿರುತ್ತವೆ. (ಇದೇಪ್ರಕಾರ ಶಶಶೃಂಗಾದಿಗಳನ್ನು ಅನುಮೇಯಿಸಲಿಕ್ಕೆ ಶಕ್ಯಗಳಾಗುತ್ತವೆ.) ಸದೃಶಂ= ಸಂಪ್ರತಿಪನ್ನದೇಶಾದಿಗಳಿಂದ ಸದೃಶವಾದುದೂ, ಸಜಾತೀಯಂ ಚ= ಸಜಾತೀಯವಾದುದೂ

ಕೂಡ, ಅಸ್ಮತ್ಪಕ್ಷೇ=ಗಗನಾದಿಗಳ ಪರಿಮಾಣೋತ್ಕರ್ಷಕ್ಕೆ ಅನಂತ್ಯವನ್ನು ಅಂಗೀಕರಿಸುವವರ ಪಕ್ಷದಲ್ಲಿ, ಕಿಮೇವ ನ ಹಿ=ಏಕೆ ತಾನೇ ಆಗುವುದಿಲ್ಲ? ಮತ್ತೆ ಆಗಿಯೇ ಆಗುತ್ತದೆ.

**ತಾ ||** (1) ಆಕಾಶಾದಿಗಳ ಪರಿಮಾಣೋತ್ಕರ್ಷಕ್ಕೆ ಆನಂತ್ಯವನ್ನು ಸಾಧಿಸುವ ಅನುಮಾನವು 'ಪರಿಮಾಣೋತ್ಕರ್ಷತಾರತಮ್ಯಂ ಇಯತ್ತಾವತ್ ಪರಿಮಾಣತಾರತಮ್ಯತ್ವಾತ್ ಪರಿಮಾಣಾಪಕರ್ಷತಾರತಮ್ಯವತ್' ಎನ್ನುವ ಪ್ರತಿಪಕ್ಷದಿಂದ ಕೂಡಿದ್ದು ಮಾತ್ರವಲ್ಲ, ಮತ್ತೆ 'ಸಂಪ್ರತಿಪನ್ನಾನಿ ಸರ್ವಶೃಂಗಾಣಿ ಶೃಂಗಾಂತರವಂತಿ ಶೃಂಗತ್ವಾತ್ ಗೋ ಶೃಂಗವತ್' ಶಿ 'ವಿಮತಾಃ ಸರ್ವೇ ಪುತ್ರಾಃ ಪುತ್ರಾಂತರೋಪೇತಾಃ ಪುತ್ರತ್ವಾತ್ ದೇವದತ್ತಪುತ್ರವತ್' ಎಂದು ಶಶಶೃಂಗಾದಿಗಳನ್ನು ಸಾಧಿಸುವ ಅನುಮಾನಗಳಿಂದ ಆಭಾಸಸಮಾನಯೋಗಕ್ಷೇಮವೂ ಆಗಿರುತ್ತದೆ. (2) ಹಾಗಾದರೆ ನಾವು ಹೀಗೆ ಆಕಾಶಾದಿಗಳ ಪರಿಮಾಣೋತ್ಕರ್ಷಕ್ಕೆ ಆನಂತ್ಯವನ್ನು ಅನುಮೇಯಿಸುವುದಿಲ್ಲ. ಮತ್ತೆ 'ವಿಪ್ರತಿಪನ್ನೋ ದೇಶಃ ಸ್ವತಃ ಸ್ಥೂಲೇನ ಸದೃಶೇನ ಸಜಾತೀಯೇನ ವಾ ದ್ರವ್ಯಾಂತರೇಣ ಯುಕ್ತಃ ದೇಶತ್ವಾತ್ ಹಸ್ತಾದಿದೇಶವತ್' ಅದೂ ಹೀಗೆಯೇ (3) ಹೀಗೆಯೇ ಕಾಲದಲ್ಲಿಯೂ ಅನುಮೇಯಿಸತಕ್ಕದು. ಹೀಗೆಯೆ ಶಶಶೃಂಗವನ್ನು ಅನುಮೇಯಿಸಲಿಕ್ಕೆ ಸಾಧ್ಯವಿಲ್ಲ. ಅತ್ಯಂತಾಸತ್ತಾದ ಎಲ್ಲಿಯೂ ತೋರದಿರುವ ಶಶಶೃಂಗಕ್ಕೆ ಗವಾದಿಗಳ ಶೃಂಗಗಳಿಂದ ಸಾದೃಶ್ಯವೂ ಸಾಜಾತ್ಯವೂ ಇರುವುದಿಲ್ಲ. ಆಕಾಶಾದಿಗಳೂ ಒಂದೊಂದೇ ಆಗಿರುವುದರಿಂದ ಸಾದೃಶ್ಯಾದಿಗಳು ಇಲ್ಲವೆಂದು ಹೇಳಕೂಡದು ಔಪಾಧಿಕ ಭೇದವಿದ್ದಪ್ರಯುಕ್ತ ಕೂಡಬಹುದೆಂದರೆ ಸಾದೃಶ್ಯವೂ ಸಾಜಾತ್ಯವೂ ನಮ್ಮ ಮತದಲ್ಲಿ ಯುಕ್ತವೇ ಆಗುವುದು ತಥಾಚ ಸಂಪ್ರತಿಪನ್ನವಾದ ದೇಶವು ಅದಕ್ಕಿಂತ ಸ್ಥೂಲವೂ, ಸದೃಶವೂ, ಸಜಾತೀಯವೂ ಆದ ವಸ್ತುವಿನಿಂದ (ಅಂದರೆ ಜೀವನಿಂದ ಯಾ ಈಶ್ವರನಿಂದ) ಯುಕ್ತತ್ವವು, ಸಿದ್ಧವಾಗಿರುವುದರಿಂದ ಸಿದ್ಧಸಾಧನತ್ವವು ಬರುವುದು. ಆಕಾಶಾದಿಗಳ ಪರಿಮಾಣೋತ್ಕರ್ಷಾನಂತ್ಯವು ಸಿದ್ಧಿಸದೆ ಇರುವುದರಿಂದ ಅರ್ಥಾಂತರತ್ವವೂ ಬರುವುದು. (4) ಹೀಗೆ ಪರಮಾಣುದ್ವ್ಯಣುಕಗಳಿಗೂ ಆಕಾಶಾದಿ ಪರಿಮಾಣೋತ್ಕರ್ಷಾನಂತ್ಯಕ್ಕೂ ಸಾಕ್ಷಿಸಿದ್ಧತ್ವವನ್ನು ಅಂಗೀಕರಿಸದೆಕೇವಲವಾಗಿ ಅನುಮಾನವೇದ್ಯತ್ವವನ್ನು ಸ್ವೀಕರಿಸಿದ್ದು ಅಯುಕ್ತವೆಂದು ಸಮರ್ಥಿಸಲ್ಪಟ್ಟಿತು ॥ ೮೯ ॥

**ಹೀಗೆ ಆಕಾಶಾದಿಗಳ ಪರಿಮಾಣಾನಂತ್ಯಾನುಮಾನಕ್ಕೆ ಆಭಾಸಸಾಮ್ಯವನ್ನು ಹೇಳಿ ಸಾಕ್ಷಿಸಿದ್ಧತ್ವವನ್ನು ಸಮರ್ಥಿಸಿದರು.**

ಹೀಗೆ ಆಗಮವನ್ನು ಲಕ್ಷೀಕರಿಸದೆ ಈಶ್ವರ, ಧರ್ಮಾದಿಗಳನ್ನು ಸಾಧಿಸುವುದಕ್ಕಾಗಿ ಪ್ರವರ್ತಿಸುವ ಅನುಮಾನವೂ ಕೂಡ ಅಯುಕ್ತವೆಂದು ಪ್ರಸಂಗಸಂಗತಿಯಿಂದ ಹೇಳುತ್ತಾರೆ.

**ಮೂ ॥ ಯೇನೈವ ಚ ಪ್ರಕಾರೇಣಾತ್ಯಸಿದ್ಧಮನುಮೀಯತೇ ॥ ೯೦ ॥**
**ತೇನೈವ ಶಶಶೃಂಗಾದೇಃ ಶಕ್ಯಮಸ್ತಿತ್ವಕಲ್ಪನಂ ।**
**ಪ್ರತ್ಯಕ್ಷಮಾಗಮೋ ವಾಽಪಿ ಭವೇದ್ಯತ್ರ ನಿಯಾಮಕಃ ।**
**ಸೈವ ವ್ಯಾಪ್ತಿರ್ಭವೇನ್ನಾನಂ ನಾನ್ಯಾ ಸಂದಿಗ್ಧಮೂಲತಃ ॥ ೯೧ ॥**

**ಅ ||** ಯೇನೈವ ಚ ಪ್ರಕಾರೇಣ=ಯಾವ ಪ್ರಕಾರದಿಂದ, ಅತ್ಯಸಿದ್ಧಂ=ಆಗಮಾದಿಗಳಿಂದ ಅತ್ಯಸಿದ್ಧವಾದುದು, ಅನುಮೀಯತೇ=ಅನುಮೇಯಿಸಲ್ಪಡುತ್ತದೋ, ತೇನೈವ=ಅದೇ ಪ್ರಕಾರ

ದಿಂದಲೇ, ಶಶಶೃಂಗಾದೇಃ = ಶಶಶೃಂಗವೊದಲಾದ ಅಪ್ರಾಮಾಣಿಕವಾದ ಪದಾರ್ಥಕ್ಕೂ ಕೂಡ, ಅಸ್ತಿತ್ವಕಲ್ಪನಂ=ಸತ್ವಕಲ್ಪನವು, ಶಕ್ಯಂ=ಸಾಧ್ಯವಾದುದು. ಪ್ರತ್ಯಕ್ಷಂ=ಪ್ರತ್ಯಕ್ಷವು, ಅಪಿ=ಅನುಮಾನವು, ಆಗಮೋ ವಾ=ಆಗಮವೂ ಕೂಡ, ಯತ್ರ=ಎಲ್ಲಿ, ನಿಯಾಮಕಃ= ವ್ಯಾಪ್ತಿಗ್ರಾಹಕವಾಗುತ್ತದೋ, ಸೈವ ವ್ಯಾಪ್ತಿಃ=ಅದೇ ವ್ಯಾಪ್ತಿಯು, ಮಾನಂ=ಅನುಮಾನ ಪ್ರಾಮಾಣ್ಯಕ್ಕೆ ಉಪಯುಕ್ತವಾದುದು, ಭವೇತ್=ಆಗುವುದು. ಅನ್ಯಾ=ಪ್ರತ್ಯಕ್ಷಾದ್ಯಗೃಹೀತ ವಾದ ವ್ಯಾಪ್ತಿಯು, ಸಂದಿಗ್ಧಮೂಲತಃ=ಸಂದಿಗ್ಧವಾದ ಅವ್ಯಭಿಚಾರತ್ವವಿದ್ದಪ್ರಯುಕ್ತ, ನ ಮಾನಂ=ಅನುಮಾನದ ಪ್ರಾಮಾಣ್ಯಕ್ಕೆ ಉಪಯುಕ್ತವಾದುದು ಆಗುವುದಿಲ್ಲ.

ತಾ || **ನ್ಯಾಯಸುಧಾ**— (1) ಶಶಶೃಂಗಾದ್ಯನುಮಾನಪ್ರತಿಬಂದಿಯುರೋಣಮಾತ್ರ ದಿಂದ ಈ ಅನುಮಾನಗಳಿಗೆ ಅಪ್ರಾಮಾಣ್ಯವನ್ನು ಹೇಳುವುದು ಯುಕ್ತವಲ್ಲ. ಹಾಗಿದ್ದರೆ ಧೂಮಾದ್ಯನುಮಾನಕ್ಕೂ ಅಪ್ರಾಮಾಣ್ಯವು ಬರಬೇಕಾಗುವುದು. ಧೂಮವಿದ್ದಪ್ರಯುಕ್ತ ಪರ್ವತದಲ್ಲಿ ಅಗ್ನಿಯಿರುವುದಾದರೆ ಆಗ ಪಶುತ್ವವಿದ್ದಪ್ರಯುಕ್ತ ಶಶ (ಮೊಲ) ಕ್ಕೂ ಕೋಡು ಇರಬೇಕಾಗುವುದು ಎಂದು ಅಲ್ಲಿಯೂ ಇಂತಹ ಪ್ರತಿಬಂದಿಯನ್ನು ಹೇಳಲಿಕ್ಕೆ ಶಕ್ಯವಾಗುವುದು. (2) ಹಾಗಾದರೆ ಸಮಾನ ಯೋಗಕ್ಷೇಮವಿದ್ದರೇನೇ ಅಂದರೆ ಸಾಮ್ಯವಿದ್ದರೇನೇ ಪ್ರತಿಬಂದಿ ಯನ್ನು ತೆಗೆದುಕೊಳ್ಳುವುದು. ಇಲ್ಲಿ ಧೂಮಾನುಮಾನಕ್ಕೆ ವ್ಯಾಪ್ತ್ಯಾದಿ ಸಾಮರ್ಥ್ಯವಿದ್ದ ಪ್ರಯುಕ್ತವೂ ಶಶಶೃಂಗಾದ್ಯನುಮಾನಕ್ಕೆ ವ್ಯಾಪ್ತ್ಯಾದಿ ಸಾಮರ್ಥ್ಯವಿಲ್ಲದಿರುವುದರಿಂದಲೂ ಅವು ಗಳಿಗೆ ಸಾಮ್ಯವಿರುವುದಿಲ್ಲ ಎಂದರೆ—ಈಶ್ವರಾದ್ಯನುಮಾನದಲ್ಲಿಯೂ ಇದು ಸಮಾನವೇ. ಅಂದರೆ ಪ್ರಸ್ತುತಗಳಾದ ಅನುಮಾನಗಳಿಗೂ ವ್ಯಾಪ್ತ್ಯಾದಿಗಳು ಇವೆ ಎಂದರೆ— ಪ್ರತ್ಯಕ್ಷಾದಿಗಳು ಇಲ್ಲಿ ಗ್ರಾಹಕಗಳಾಗುತ್ತವೋ ಅದೇ ವ್ಯಾಪ್ತಿಯು ಪ್ರಮಾಣವಾಗುವುದು. ಪ್ರತ್ಯಕ್ಷಾದಿಗಳಿಂದ ಅಗೃಹೀತ ವಾದುದು ಪ್ರಮಾಣವಲ್ಲ. ಅಂದರೆ— ವ್ಯಾಪ್ತ್ಯಾದಿಗಳು ಪ್ರತ್ಯಕ್ಷಾದಿಗಳಿಂದ ನಿಶ್ಚಿತವಾಗಿದ್ದರೆ ಅನುಮಾನಪ್ರಾಮಾಣ್ಯಕ್ಕೆ ಅಂಗವಾಗುವುದು. 'ಮಹದ್ದ್ರವ್ಯಾರಂಭಕಂ ಸಾವಯವಂ' ಇದು ಮೊದಲಾದ ತನ್ನ ಶಾಸ್ತ್ರದಿಂದ ಮಾತ್ರ ಸಿದ್ಧವಾದುದಲ್ಲ. ಸಾಮಾನ್ಯವಾಗಿ ಸಮಯಗಳು ಸಂದಿಗ್ಧಮೂಲವುಳ್ಳವುಗಳು ಧೂಮಾದ್ಯನುಮಾನಗಳಿಗೆ ಪ್ರಮಾಣದಿಂದ ನಿಶ್ಚಿತವಾದ ವ್ಯಾಪ್ತ್ಯಾದಿ ಗಳು ಇವೆ. ಕೇವಲ ಪ್ರತಿಬಂಧೀಜ್ಞಾನದಿಂದ ಆ ವ್ಯಾಪ್ತ್ಯಾದಿಗಳ ಭಂಗವಾಗಲಾರದು. ಪರಮಾಣ್ವಾದ್ಯನುಮಾನಗಳಿಗೆ ಪ್ರಮಾಣದಿಂದ ನಿಶ್ಚಿತವಾದ ವ್ಯಾಪ್ತ್ಯಾದಿಗಳು ಇಲ್ಲ. ಆದ ಕಾರಣ ಪ್ರತಿಬಂದಿಯಿಂದ ಸಂಬದ್ಧವಾಗಿರುವುದರಿಂದ ಅಪ್ರಾಮಾಣ್ಯವೇ || ೯೦ || ೯೧ ||

ಹಾಗಾದರೆ ವ್ಯಾಪ್ತ್ಯಾದಿಗಳು ಇಲ್ಲವಾದರೆ ಪ್ರತಿಬಂದಿಯನ್ನು ಹೇಳಿ ಏನು ಪ್ರಯೋಜನವು? ವ್ಯಾಪ್ತ್ಯಾದಿಗಳೂ ಇಲ್ಲದಿರುವುದರಿಂದಲೇ ಅಪ್ರಾಮಾಣ್ಯವು ಸಿದ್ಧಿಸುವುದು ಎಂದರೆ— ಪ್ರತ್ಯಕ್ಷಾದಿ ಗಳಿಂದ ವ್ಯಾಪ್ತ್ಯಾದಿಗಳು ನಿಶ್ಚಿತವಾಗದೆ ಇದ್ದದ್ದಕ್ಕೂ ಪ್ರಾಮಾಣ್ಯವಿದ್ದರೆ ಅತಿಪ್ರಸಂಗವಾಗಲೀ, ಅಂತಹದಕ್ಕೆ ಅಪ್ರಾಮಾಣ್ಯವಿದೆ ಎನ್ನುವಲ್ಲಿ ದೃಷ್ಟಾಂತವಾಗಲೀ ಪ್ರತಿಬಂದೀಗ್ರಹದಿಂದ ತಿಳಿಸ ಲ್ಪಡುತ್ತದೆ. ಆದಕಾರಣ ದೋಷವಿಲ್ಲವೆಂದರೆ— ಸತ್ಯವೇ. ಪ್ರತ್ಯಕ್ಷಾದಿಗಳಿಂದ ನಿಶ್ಚಿತವೇ ಆದ ವ್ಯಾಪ್ತಿಯು ಅನುಮಾನಪ್ರಾಮಾಣ್ಯಕ್ಕೆ ಉಪಯುಕ್ತವಾಗುವುದು. ಆ ವ್ಯಾಪ್ತಿಯು ಧೂಮಾನು ಮಾನದಂತೆ ಪರಮಾಣ್ವಾದ್ಯನುಮಾನಗಳಲ್ಲಿಯೂ ಉಂಟೇ ಉಂಟು. ಧೂಮಕ್ಕೆ ಅಗ್ನಿಯಿಂದ ಸಾಹಚರ್ಯವಿದ್ದಂತೆಯೇ ಮಹದಾರಂಭಕತ್ವ ಮೊದಲಾದವುಗಳಿಗೆ ಸಾವಯವತ್ವಾದಿಗಳಿಂದ ಸಾಹಚರ್ಯವು ಕಂಡದೆ ಎಂದರೆ—

**ಮೂ ॥ ಸಹದರ್ಶನಮಾತ್ರೇಣ ನ ವ್ಯಾಪ್ತಿರವಸೀಯತೇ ॥ ೯೨ ॥**
**ಯದ್ಯೈವಾನ್ಯತಿರೇಕೇಽಸ್ಯ (ಕಸ್ಯ) ಹ್ಯಕ್ಷಜಂ ವಾಗಮೋ ಭವೇತ್ ।**
**ತನ್ನಿರ್ಧಾರಿತಯುಕ್ತಿರ್ವಾ ವ್ಯಾಪ್ತಿಃ ಸೈವಾಪರಾ ನ ಹಿ ॥ ೯೩ ॥**

ಅ ॥ ಸಹದರ್ಶನಮಾತ್ರೇಣ=(ಧೂಮಾದಿಗಳಿಗೂ ಕೂಡ ಅಗ್ನ್ಯಾದಿಗಳಿಂದ) ಸಾಮಾನಾಧಿಕರಣ್ಯದರ್ಶನಮಾತ್ರವಿದ್ದುದರಿಂದ, ವ್ಯಾಪ್ತಿಃ=ವ್ಯಾಪ್ತಿಯು, ನ ಅವಸೀಯತೇ = ನಿಶ್ಚಿತವಾಗುವುದಿಲ್ಲ. (ಆದುದರಿಂದ ಮಹದಾರಂಭಕತ್ವಾದಿಗಳಿಗೂ ಸಾವಯವತ್ವಾದಿಗಳಿಂದ ಸಾಮಾನಾಧಿಕರಣ್ಯಮಾತ್ರದಿಂದ ವ್ಯಾಪ್ತಿಯು ನಿಶ್ಚಿತವಾಗುವುದು ಹೇಗೆ? ಹಾಗಿದ್ದರೆ ಅಗ್ನ್ಯಾದಿಗಳಿಗೆ ಧೂಮಾದಿಗಳಿಂದಲೂ ಕೂಡ ವ್ಯಾಪ್ತಿನಿಶ್ಚಯವಾಗಬೇಕಾಗುವುದು. ಸಹದರ್ಶನಮಾತ್ರವು ಅಲ್ಲಿಯೂ ಇದೆ. ವ್ಯಭಿಚಾರವು ತೋರದೆಇದ್ದು ಸಾಮಾನಾಧಿಕರಣ್ಯ ಕಾಣುವುದು ವ್ಯಾಪ್ತಿನಿಶ್ಚಯಕ್ಕೆ ಕಾರಣವು ಎಂದರೆ— (೧) ಎಲ್ಲಾ ದೇಶ ಕಾಲಗಳಲ್ಲಿಯೂ ವ್ಯಭಿಚಾರವು ಕಾಣದೆ ಇರುವುದೋ, (೨) ದೇಶಕಾಲವಿಶೇಷದಲ್ಲಿ ವ್ಯಭಿಚಾರವು ತೋರದಿರುವುದೋ?, ೧ನೇದ್ದೂ ಕೂಡಲಾರದು. ಅಸ್ಮದಾದಿಗಳಿಗೆ ತಿಳಿಯಲು ಅಶಕ್ಯವಾಗಿದೆ. ೨ನೇದ್ದೂ ಕೂಡಲಾರದು. ಅತಿಪ್ರಸಂಗವು ಬರುವುದು. ಹೇಗೆಂದರೆ— ಮಹಾನಸಾದಿರೂಪ ದೇಶವಿಶೇಷದಲ್ಲಿ ವ್ಯಭಿಚಾರವು ತೋರದಿರುವುದರಿಂದ ವಹ್ನಿಯಲ್ಲಿಯೂ ಧೂಮವ್ಯಾಪ್ತಿನಿಶ್ಚಯವು ಬರಬೇಕಾಗುವುದು. ಹಾಗಾದರೆ ವ್ಯಾಪ್ತಿನಿಶ್ಚಯ ಹೇಗೆ ಆಗುವುದೆಂದರೆ, ಯದ್ಯೈವ=ಯಾವಾಗಲೇ, ಅಸ್ಯ=ಸಾಧನಾಭಿಮತವಾದ ಧರ್ಮಕ್ಕೆ, ಅವ್ಯತಿರೇಕೇ=ಸಾಧ್ಯಾಭಿಮತ ವ್ಯತಿರೇಕದಿಂದ ಅಸತ್ವವಿರುವುದರಲ್ಲಿ ಅಂದರೆ ಸಾಧ್ಯಾತ್ಯಂತಾಭಾವವದವೃತ್ತಿತ್ವವಿರುವುದರಲ್ಲಿ, ಅಕ್ಷಜಂ ವಾ = ಪ್ರತ್ಯಕ್ಷವಾಗಲೀ, ಆಗಮೋ ವಾ=ಆಗಮವಾಗಲೀ, ತನ್ನಿರ್ಧಾರಿತ ಯುಕ್ತಿರ್ವಾ=ಪ್ರತ್ಯಕ್ಷದಿಂದಲಾಗಲೀ ಆಗಮದಿಂದಲಾಗಲೀ, ನಿರ್ಧಾರಿಸಲ್ಪಟ್ಟ ವ್ಯಾಪ್ತಿಯುಳ್ಳ ಯುಕ್ತಿಯಾಗಲೀ, ಭವೇತ್ = ಇರುವುದೋ, ಸೈವ=ಆ ವ್ಯಾಪ್ತಿಯೇ, ವ್ಯಾಪ್ತಿಃ=ವ್ಯಾಪ್ತಿಯು, (ವ್ಯಾಪ್ತಿಜ್ಞಾನಕ್ಕೆ ಉಪಯುಕ್ತವಾದುದು) ಅಪರಾ=ಸಾಮಾನಾಧಿಕರಣ್ಯ ದರ್ಶನಮಾತ್ರನಿಬಂಧನವುಳ್ಳದ್ದು, ನ ಹಿ=ಅಲ್ಲವಷ್ಟೆ ॥ ೯೨ ॥ ೯೩ ॥

(1) ಹಾಗಾದರೆ ಅದೇ ನ್ಯಾಯದಿಂದ ಮಹದಾರಂಭಕತ್ವಾದಿಗಳಿಗೂ ವ್ಯಾಪ್ತಿನಿಶ್ಚಯವು ಕೂಡುವುದರಿಂದ ಪರಮಾಣ್ವಾದಿಗಳಲ್ಲಿ ಅನುಮಾನಪ್ರವೃತ್ತಿಯು ಆಗದಿರುವುದು ಹೇಗೆಂದರೆ ಹೀಗೆ ಹೇಳಕೂಡದು. ಅಲ್ಲಿ ಪಕ್ಷೇತರತ್ವರೂಪ ಉಪಾಧಿ ಕೂಡುವುದರಿಂದ ವ್ಯಭಿಚಾರವಿಲ್ಲವೆಂದು ನಿಶ್ಚಯವಾಗುವುದಿಲ್ಲ. (2) ಹಾಗಾದರೆ ಎಲ್ಲಾ ಅನುಮಾನಗಳಿಗೂ ಅಪ್ರಾಮಾಣ್ಯವು ಬರಬೇಕಾಗುವುದರಿಂದ ಪಕ್ಷೇತರತ್ವಕ್ಕೆ ಉಪಾಧಿತ್ವವು ಇಲ್ಲವೆಂದು ಹೇಳುವುದಾದರೆ ಆಗ ಬಾಧಕವನ್ನು ಹೇಳುತ್ತಾರೆ—

**ಮೂ ॥ ಅನ್ಯಥಾ ಸಪ್ತಮ ರಸ ಭಾವೋಽಪ್ಯನುಮಯಾ ಪತೇತ್ ।**
**ಅನಿಷ್ಟಾನಿ ಚ ಸರ್ವಾಣಿ ಹ್ಯನುಮಾ ಕಾಮಚಾರಿಣೀ ॥ ೯೪ ॥**

ಅ ॥ ಅನ್ಯಥಾ=ಪಕ್ಷೇತರತ್ವಕ್ಕೆ ಉಪಾಧಿತ್ವವನ್ನು ಲಕ್ಷೀಕರಿಸದೆ ಪ್ರಮಾಣಾಂತರದಿಂದ ಸಹಕೃತವಾಗದೇನೇ ಇರುವ ಅನುಮಾನದಿಂದ ಪರಮಾಣ್ವಾದಿ ಸಿದ್ಧಿಯನ್ನು ಅಂಗೀಕರಿಸಿದರೆ, ಅನುಮಯಾ='ಮಧುರೋ ರಸಃ ಲವಣಾದಿ ರಸಪಂಚಕವ್ಯತಿರಿಕ್ತ ರಸಾನ್ಯೋನ್ಯಾಭಾವವಾನ್ ರಸತ್ವಾತ್ ಲವಣವತ್'=ಮಧುರರಸವು ಲವಣಮೊದಲಾದ ಐದು ರಸಗಳಿಂದ ವ್ಯತಿರಿಕ್ತವಾದ ರಸದಿಂದ ಭೇದವುಳ್ಳದ್ದು ರಸತ್ವವಿದ್ದಪ್ರಯುಕ್ತ ಲವಣರಸದಂತೆಯೇ ಇದುಮೊದಲಾದ

ಮಾನದಿಂದ, ಸಪ್ತಮ ರಸಭಾವೋಽಪಿ=ಏಳನೇ ರಸವಿದೆ ಎನ್ನುವುದೂ, ಪತೇತ್=ಬೀಳುವುದು. (ಆಗುವುದು.) ಅನಿಷ್ಟಾನಿ ಚ ಸರ್ವಾಣಿ = ಅನಿಷ್ಟಗಳಾದವುಗಳೆಲ್ಲವೂ, ಅಗ್ನಿಶೈತ್ಯಾದಿಗಳೂ, (ಬೆಂಕಿಯು ತಣ್ಣಗಿದೆ ಇದುಮೊದಲಾದವುಗಳೂ) ಆಪತೇಯುಃ=ಪ್ರಾಪ್ತಗಳಾಗಬೇಕಾಗುವವು, ಹಿ=ಯಾವಕಾರಣದ್ದೆಶೆಯಿಂದ, ಅನುಮಾ=ಇಂತಹ ಅನುಮಾನವು, ಕಾಮಚಾರಿಣೀ=ಇಚ್ಛಾನುಸಾರಿಯಾದುದು. (ಆದುದರಿಂದ ಪರಮಾಣ್ವಾದಿಗಳಿಗೆ ಸಾಕ್ಷಿವೇದ್ಯತ್ವವನ್ನು ಅಂಗೀಕರಿಸಿ, ಸಪ್ತಮರಸಾದಿಗಳು ಸಾಕ್ಷಿವೇದ್ಯವಲ್ಲವಾದುದರಿಂದ ಆ ಅನುಮಾನಗಳಿಗೆ ಅಪ್ರಾಮಾಣ್ಯವು ಪರಮಾಣ್ವಾದಿಗಳಾದರೂ ಸಾಕ್ಷಿವೇದ್ಯವಾದುದರಿಂದ ಆ ಅನುಮಾನವು ಪ್ರಮಾಣವು ಹೀಗೆ ಹೇಳಿ) ಆ ಪ್ರತಿಬಂಧಿಯನ್ನು ಪರಿಹರಿಸಬೇಕು. ಆದಕಾರಣ ಪರಮಾಣ್ವಾದಿಗಳಿಗೆ ಸಾಕ್ಷಿವೇದ್ಯತವೆಂದೇ ಸಿದ್ಧವಾಯಿತು ॥ ೯೪ ॥

ಅಸಮವಾಯಿಕಾರಣವನ್ನು ನಿರಾಕರಿಸಿ ನಿಮಿತ್ತಕಾರಣವನ್ನು ನಿರಾಕರಿಸುತ್ತಾರೆ—

### "ಓಂ ಉಭಯಥಾಽಪಿ ನ ಕರ್ಮಾತಸ್ತದಭಾವಃ ಓಂ" ॥ ಸೂ.೧೨ ॥

ಈಶ್ವರನ ಇಚ್ಛೆಗೆ ನಿತ್ಯತ್ವವಿದ್ದರೂ ಅನಿತ್ಯತ್ವವಿದ್ದರೂ ಪರಮಾಣುಗಳಲ್ಲಿ ಕ್ರಿಯೆಯು ಕೂಡುವುದಿಲ್ಲ. ಪರಮಾಣುಗಳಲ್ಲಿ ಕ್ರಿಯೆಯು ಕೂಡದಿರುವುದರಿಂದ ದ್ವ್ಯಣುಕ ಮೊದಲಾದ ಕಾರ್ಯವು ಇಲ್ಲವೆಂದಾಗಬೇಕಾಗುತ್ತದೆ. ತಥಾ ಚ ಈಶ್ವರನ ಇಚ್ಛೆಯು ನಿತ್ಯವಾದರೆ ಪ್ರಲಯಕಾಲದಲ್ಲಿ ಪರಮಾಣು ಕರ್ಮವಿಲ್ಲದಿರುವುದರಿಂದ ಅನ್ವಯವ್ಯಭಿಚಾರವು. ಅನಿತ್ಯವಾದರೆ ಪ್ರಲಯಕಾಲದಲ್ಲಿ ಈಶ್ವರೇಚ್ಛೆಯನ್ನು ಹುಟ್ಟಿಸತಕ್ಕ ಸಾಮಗ್ರಿಯು ಇಲ್ಲದಿರುವುದರಿಂದ ಇಚ್ಛೆಯೇ ಇಲ್ಲ.

ಸಮವಾಯಿಕಾರಣವನ್ನು ನಿರಾಕರಿಸುತ್ತಾರೆ—

### "ಓಂ ಸಮವಾಯಾಭ್ಯುಪಗಮಾಚ್ಚ ಸಾಮ್ಯಾದನವಸ್ಥಿತೇಃ ಓಂ" ॥ ಸೂ. ೧೩ ॥

ಅತ್ಯಂತ ಭಿನ್ನಗಳೆಂದು ಅಂಗೀಕರಿಸಲ್ಪಟ್ಟ ಪಟತಂತು ಮೊದಲಾದ ಕಾರ್ಯಕಾರಣಗಳಿಗೂ ಗುಣಗುಣ್ಯಾದಿಗೂ ನಿರ್ವಾಹವಾಗುವುದಕ್ಕಾಗಿಯೂ ವಿಶಿಷ್ಟಬುದ್ಧಿನಿರ್ವಾಹಕ್ಕೋಸ್ಕರವೂ ಸಮವಾಯವೆನ್ನುವ ನಿತ್ಯಸಂಬಂಧವನ್ನು ಸ್ವೀಕರಿಸಿರುವುದರಿಂದಲೂ, ಸಮವಾಯಕ್ಕೂ ಸಮವಾಯಿಗಳಿಂದ ಭೇದವು ಸಮಾನವಾಗಿರುವುದರಿಂದಲೂ, 'ಮೃತ್ ಘಟಸಮವಾಯಃ' ಇದು ಮೊದಲಾದ ವಿಶಿಷ್ಟಬುದ್ಧಿಯು ಕೂಡುವುದಕ್ಕಾಗಿ ಸಮವಾಯಾಂತರವನ್ನು ಅಪೇಕ್ಷಿಸಿದರೆ ಅಲ್ಲಿಯೂ ಹೀಗೆ, ಈ ಪ್ರಕಾರ ಸಮವಾಯಪರಂಪರಾಂಗೀಕಾರಪ್ರಯುಕ್ತವಾಗಿ ಅನವಸ್ಥಾದೋಷವು ಬರುವುದರಿಂದಲೂ ಸಮವಾಯಾಂಗೀಕಾರವು ಯುಕ್ತವಲ್ಲ.

'ಉಭಯಥಾಽಪಿ ನ ಕರ್ಮಾತಸ್ತದಭಾವಃ' ಎನ್ನುವ ಸೂತ್ರವು 'ನಿತ್ಯಮೇವ ಚ ಭಾವಾತ್' ಎನ್ನುವ ಮುಂದಿನ ಸೂತ್ರವ್ಯಾಖ್ಯಾನನ್ಯಾಯದಿಂದಲೇ ವ್ಯಾಖ್ಯಾತವಾಗುವುದೆಂದು ತಿಳಿಯುತ್ತಾ ಅದನ್ನು ಬಿಟ್ಟು ಹೇತ್ವಂತರದಿಂದ ವೈಶೇಷಿಕಾದಿ ಸಮಯವನ್ನು ತಿರಸ್ಕರಿಸುತ್ತಾ 'ಸಮವಾಯಾಭ್ಯುಪಗಮಾಚ್ಚ ಸಾಮ್ಯಾದನವಸ್ಥಿತೇಃ' ಎನ್ನುವ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

**ಮೂ ॥ ಕಾರ್ಯಕಾರಣಯೋಶ್ಚೈವ ಗುಣಾದೇಃ ಪಂಚಕಸ್ಯ ಚ ।**
**ಭಿನ್ನಸ್ಯೈವ ತು ಸಂಬಂಧಃ ಸಮವಾಯೋಽನ್ಯ ಈರ್ಯತೇ ॥ ೯೫ ॥**

ಅ || ಕಾರ್ಯಕಾರಣಯೋಶ್ಚೈವ = ಕಾರ್ಯಕಾರಣಗಳಿಗೂ, ಗುಣಾದೇಃ ಪಂಚಕಸ್ಯ ಚ = ಗುಣಮೊದಲಾದ ಐದಕ್ಕೂ. (ಗುಣ ಅವಯವಿ ಕ್ರಿಯಾ ಸಾಮಾನ್ಯ ವಿಶೇಷಗಳಿಗೂ) ಗುಣಿ ಮೊದಲಾದ ಐದಕ್ಕೂ. ಭಿನ್ನಸ್ಯೈವ ತು = ಭಿನ್ನವಾದುದಕ್ಕೇನೇ, ಸಂಬಂಧಃ = ಸಂಬಂಧವು, ಸಮವಾಯಃ = ಸಮವಾಯವು, ಅನ್ಯಃ = ಭಿನ್ನವೆಂದು, ಈರ್ಯತೇ = ವೈಶೇಷಿಕಾದಿಗಳಿಂದ ಹೇಳಲ್ಪಡುತ್ತದೆ (ಆದುದರಿಂದಲೂ ವೈಶೇಷಿಕಾದಿಗಳ ಮತವು ಅಯುಕ್ತವು.)

ತಾ || ನ್ಯಾಯಸುಧಾ— ವೈಶೇಷಿಕಾದಿಗಳು ಅವಯವ ಅವಯವಿಗಳಿಗೂ, ಗುಣ ಗುಣಿಗಳಿಗೂ, ಕ್ರಿಯಾ ಕ್ರಿಯೆಯುಳ್ಳವುಗಳಿಗೂ, ಜಾತಿವ್ಯಕ್ತಿಗಳಿಗೂ, ವಿಶೇಷನಿತ್ಯದ್ರವ್ಯಗಳಿಗೂ ಅತ್ಯಂತ ಭೇದವನ್ನು ಅಂಗೀಕರಿಸಿ ಅತ್ಯಂತಭಿನ್ನವೇ ಆದ ಸಮವಾಯಾಖ್ಯ ಸಂಬಂಧವನ್ನು ಅಂಗೀಕರಿಸುತ್ತಾರೆ. ಆದುದರಿಂದಲೂ ಅನುಪಪನ್ನಭಾಷಿಗಳು || ೯೫ ||

ಹಾಗಾದರೆ ಗುಣಗುಣ್ಯಾದಿಗಳಿಗೆ ಅತ್ಯಂತಭೇದವಾದರೂ ವ್ಯಪದೇಶ ಮೊದಲಾದ ಪ್ರಮಾಣಗಳಿಂದ ಸಿದ್ಧವಾಗಿದೆ. ವ್ಯಪದೇಶಭೇದಾದಿರೂಪ ಪ್ರಮಾಣವಿದ್ದರೂ ಭೇದವಿಲ್ಲವಾದರೆ ಸ್ತಂಭಕುಂಭಾದಿಗಳಿಗೂ ಅತ್ಯಂತವಾಗಿ ಭೇದವು ಇಲ್ಲದೆ ಹೋಗುವುದು. ಈ ತಂತುಗಳಲ್ಲಿ ಪಟವು, ಈ ಪಟದಲ್ಲಿ ರೂಪವು, ಈ ಮೂರ್ತ(ಕ್ರಿಯೆಯುಳ್ಳದ್ದು)ದಲ್ಲಿ (ಪೃಥಿವೀ-ಜಲ ತೇಜಸ್ಸು-ವಾಯು-ಮನಸ್ಸುಗಳಲ್ಲಿ) ಕರ್ಮವು. ಈ ಗೋವಿನಲ್ಲಿ ಗೋತ್ವವು, ಈ ನಿತ್ಯದ್ರವ್ಯದಲ್ಲಿ ವಿಶೇಷವು ಹೀಗೆ ಅಬಾಧಿತವಾದ ಪ್ರತ್ಯಯವು ಇದೆ. 'ಇಲ್ಲಿ ಈ ವಸ್ತುವಿದೆ' ಎನ್ನುವ ಪ್ರತ್ಯಯ (ಅನುಭವ)ವು ಅತಿರಿಕ್ತವಾದ ಸಂಬಂಧವಿಲ್ಲದೆ ಕೂಡಲಾರದು. ಈ ಕುಂಡದಲ್ಲಿ ಬದರಗಳು ಎನ್ನುವ ಪ್ರತೀತಿಯು ಸಂಯೋಗಪೂರ್ವಕವಾಗಿಯೇ ದೃಷ್ಟವಾಗಿದೆ ಈ ಸಂಬಂಧವು ಅಯುತ ಸಿದ್ಧಗಳ ಸಂಬಂಧವಾಗಿರುವುದರಿಂದ ಸಂಯೋಗದಿಂದ ಭಿನ್ನವಾಗಿದೆ. ಯುತಸಿದ್ಧಗಳ ಸಂಬಂಧವು **ಸಂಯೋಗವು**. ದ್ರವ್ಯದಲ್ಲಿಮಾತ್ರ ಇರತಕ್ಕುದು. ಸಮವಾಯವು ಗುಣಾದಿಗಳಲ್ಲಿಯೂ ಇದೆ. ಹೀಗೆ ಪ್ರಮಾಣಸಿದ್ಧವಾದ ಸಮವಾಯವನ್ನು ಅಂಗೀಕರಿಸಿದರೆ ವೈಶೇಷಿಕಾದಿಗಳು ಅಯುಕ್ತವಾದಿಗಳು ಹೇಗೆ ಆಗುವರು. ಎಂದರೆ—

**ಮೂ || ಭಿನ್ನತ್ವಸಾಮ್ಯತಸ್ತಸ್ಯ ತಾಭ್ಯಾಂ ಯೋಗೋ ಭವೇದ್ಧ್ರುವಂ |**
**ಸ ಸ್ವನಿರ್ವಾಹಕಶ್ಚೇತ್ಸ್ಯಾದ್ದ್ರವ್ಯಮೇವ ತಥಾ ನ ಕಿಂ || ೯೬ ||**

ಅ || ಭಿನ್ನತ್ವಸಾಮ್ಯತಃ = ಭಿನ್ನತ್ವವು ಸಮಾನವಾಗಿರುವುದರಿಂದಲೂ, 'ಇಹಸಮವಾಯಃ' ಎಂಬ ಇಹ ಪ್ರತ್ಯಯವು ಸಮಾನವಾಗಿರುವುದರಿಂದಲೂ. ತಸ್ಯ = ಸಮವಾಯಕ್ಕೆ, ತಾಭ್ಯಾಂ = ಅವಯವ ಅವಯವಿ ಮೊದಲಾದ ಸಂಬಂಧಿಗಳಿಂದ ಕೂಡಿಕೊಂಡು, ಯೋಗಃ = ಸಂಬಂಧವು, ಧ್ರುವಂ = ನಿಶ್ಚಯವಾಗಿ, ಭವೇತ್ = ಇರಬೇಕಾಗುವುದು. (ಹಾಗಾದರೆ ಸಮವಾಯದಲ್ಲಿಯೂ 'ಇಹ ಸಮವಾಯಃ' ಎನ್ನುವ ಅನುಭವವು ಸಮವಾಯದ ಅಧೀನವೇ. ಹೀಗೆ ಸಮವಾಯವನ್ನು ಒಪ್ಪಿದರೆ ಅಪಸಿದ್ಧಾಂತವಾಗಲೀ ಸಮವಾಯಪರಂಪರಾಪ್ರಯುಕ್ತ ಅನವಸ್ಥೆಯಾಗಲೀ ಬರುವುದಿಲ್ಲ. ಆ ಸಮವಾಯವೇ ಸ್ವನಿರ್ವಾಹಕವು. ಯಾವ ಸಮವಾಯವು ಅವಯವಾದಿಗಳಲ್ಲಿ ಅವಯವ್ಯಾದಿಗಳಿಗೆ ಸಂಬಂಧವೋ, ಅದೇವೇ ಅವಯವ ಅವಯವ್ಯಾದಿಗಳಲ್ಲಿ ತಾನೇ ತನಗೂ ಸಂಬಂಧವಾಗುತ್ತದೆ. ಆದುದರಿಂದ ಸಮವಾಯಪರಂಪರೆಯಿಲ್ಲದಿರುವುದರಿಂದ ಅನವಸ್ಥೆಯಿಲ್ಲ ಎಂದಾಶಂಕಿಸುತ್ತಾರೆ.) ಸಃ = ಅವಯವ ಅವಯವ್ಯಾದಿಸಮವಾಯವು, ಸ್ವನಿರ್ವಾಹಕಶ್ಚೇತ್ = ಸ್ವನಿರ್ವಾಹಕವಾದರೆ, ತರ್ಹಿ = ಹಾಗಾದರೆ, ದ್ರವ್ಯಮೇವ = ದ್ರವ್ಯವೇ, ತಥಾ = ಹಾಗೆ ಸ್ವನಿರ್ವಾಹಕವಾದುದು, ಕಿಂ = ಯಾವ ಕಾರಣದಿಂದ, ನ ಸ್ಯಾತ್ = ಆಗಲಾರದು.

ಕಾ ॥ ನ್ಯಾಯಸುಧಾ— (1) 'ಇಹ ತಂತುಷು ಪಟಃ ಇತ್ಯಾದಿ ಪ್ರತ್ಯಯಃ ಸಂಬಂಧಪೂರ್ವಕಃ ಅಬಾಧಿತೇಹಪ್ರತ್ಯಯತ್ವಾತ್ ಇಹ ಕುಂಡೇ ಬದರಾಣೀತಿ ಪ್ರತ್ಯಯವತ್' ಇಲ್ಲಿ ತಂತುಗಳಲ್ಲಿ ಪಟವಿದೆ ಇತ್ಯಾದಿ ಪ್ರತ್ಯಯವು ಸಂಬಂಧಪೂರ್ವಕವಾಗಿದೆ, ಅಬಾಧಿತವಾದ ಇಹ (ಇಲ್ಲಿ) ಎನ್ನುವ ಪ್ರತ್ಯಯತ್ವವಿದ್ದಪ್ರಯುಕ್ತ ಇಲ್ಲಿ ಕುಂಡದಲ್ಲಿ ಬದರಗಳು ಎನ್ನುವ ಪ್ರತ್ಯಯದಂತೆ, ಎಂದು ಸಮವಾಯವನ್ನು ಅನುಮೇಯಿಸುವವನು 'ಯಾವುದು ಅಬಾಧಿತವಾದ ಇಹ ಎನ್ನುವ ಪ್ರತ್ಯಯವೋ ಅದು ಸಂಬಂಧಪೂರ್ವಕವಾಗಿದೆ ಎನ್ನುವ ವ್ಯಾಪ್ತಿಯನ್ನು ಅವಶ್ಯವಾಗಿ ಅಂಗೀಕರಿಸಬೇಕು' 'ಇಹ ತಂತುಪಟಯೋಃ ಸಮವಾಯಃ' ಎಂದು ಅಬಾಧಿತವಾದ ಇಹ ಎನ್ನುವ ಪ್ರತ್ಯಯವಿದೆ. ಆದುದರಿಂದ ಸಮವಾಯಕ್ಕೂ ತಂತುಪಟಗಳಿಂದ ಸಮವಾಯವನ್ನು ಅಂಗೀಕರಿಸಬೇಕಾಗುವುದು. ಅಂಗೀಕರಿಸುವುದಿಲ್ಲ. ಆದಕಾರಣ ಅಲ್ಲಿ ಅನುಮಾನಕ್ಕೆ ವ್ಯಭಿಚಾರವು. (2) ಕೆಲವು ಕಡೆ ಸ್ವನಿರ್ವಾಹಕವಾಗಿರುವುದರಿಂದ 'ಇಹ ಇದಂ' ಎನ್ನುವ ಬುದ್ಧಿಯು ಅವಶ್ಯವಾಗಿ ಸ್ವಾತಿರಿಕ್ತವಾದ ಸಂಬಂಧವನ್ನು ಅಪೇಕ್ಷಿಸಿಕೊಂಡು ಇಲ್ಲದೆ ಕೂಡುವುದಾದರೆ ಹಾಗಾದರೆ ಗುಣಾದಿಗಳಲ್ಲಿ 'ಇಹ ಇದಂ' ಎನ್ನುವ ಪ್ರತ್ಯಯವೂ ಅತಿರಿಕ್ತವಾದ ಸಂಬಂಧಾಧೀನವನ್ನಾಗಿ ಅಂಗೀಕರಿಸಬೇಕಾಗಿಲ್ಲ. ದ್ರವ್ಯಕ್ಕೇನೇ ಸ್ವನಿರ್ವಾಹಕತ್ವವಿಟ್ಟುಕೊಂಡರೂ ಅದು ಕೂಡಬಹುದು. (3) ಸಮವಾಯವು ಸಂಬಂಧರೂಪವಾಗಿರುವುದರಿಂದ ಸ್ವನಿರ್ವಾಹಕವು, ದ್ರವ್ಯವು ಸ್ವನಿರ್ವಾಹಕವಲ್ಲ ಎಂದರೆ ಹಾಗೆ ಹೇಳಕೂಡದು. ದ್ರವ್ಯಕ್ಕೆ ಸ್ವನಿರ್ವಾಹಕತ್ವವು ಸಿದ್ಧಿಸದೆ ಇದ್ದರೆ ಸಂಬಂಧತ್ವವೂ ಸಿದ್ಧಿಸಲಿಕ್ಕಿಲ್ಲ. ಸಂಯೋಗಕ್ಕೂ ಕೂಡ ಸ್ವನಿರ್ವಾಹಕತ್ವವು ಬರಬೇಕಾಗುವುದು. ಸಂಯೋಗಕ್ಕೆ ಅನಿತ್ಯತ್ವವಿದ್ದ ಪ್ರಯುಕ್ತ ಸ್ವನಿರ್ವಾಹಕತ್ವವು ಇಲ್ಲವೆಂದರೆ ಹಾಗೆ ಹೇಳಕೂಡದು. ಸಮವಾಯಕ್ಕೆ ನಿತ್ಯತ್ವವೂ ಸಿದ್ಧವಾಗಲಿಲ್ಲ ॥ ೯೫ ॥

ಹೀಗೆ ದ್ರವ್ಯದ್ವೇಶಿಯಿಂದ ಗುಣಾದಿಗಳಿಗೆ ಅತ್ಯಂತ ಭೇದವಿದ್ದರೂ ದ್ರವ್ಯಗುಣಗಳಿಗೆ ಸಮವಾಯರೂಪವಾದ ಅತಿರಿಕ್ತ ಸಂಬಂಧವು ಸಿದ್ಧಿಸುವುದಿಲ್ಲ. ಏಕೆಂದರೆ—ಸಮವಾಯದಂತೆ ದ್ರವ್ಯಕ್ಕೇನೇ ಸ್ವನಿರ್ವಾಹಕತ್ವವು ಕೂಡಬಹುದಾದುದರಿಂದಲೂ, ಕಲ್ಪನಾ ಲಾಘವವೂ ಇದ್ದುದರಿಂದಲೂ ಎಂದು ಹೇಳಲ್ಪಟ್ಟದೆ. ಈಗ ಗುಣಾದಿಗಳಿಗೆ ದ್ರವ್ಯದ್ವೇಶಿಯಿಂದ ಅತ್ಯಂತ ಭೇದವಿಲ್ಲದಿರುವುದರಿಂದಲೂ ಸಮವಾಯವು ಸಿದ್ಧಿಸುವುದಿಲ್ಲ ಎಂದಭಿಪ್ರಾಯವುಳ್ಳವರಾಗಿ ಗುಣಾದಿಗಳಿಗೆ ದ್ರವ್ಯದ್ವೇಶಿಯಿಂದ ಅತ್ಯಂತಭೇದವಿದೆ ಎನ್ನುವಲ್ಲಿ ಪರರು ಹೇಳಿದ ಹೇತುಗಳನ್ನು ತಿರಸ್ಕರಿಸುವುದಕ್ಕಾಗಿ ಉಪೋದ್ಘಾತವನ್ನು ಹೇಳುತ್ತಾರೆ—

**ಮೂ ॥ ವಿಶೇಷಸ್ತದ್ಗತತತ್ವಾದಿರ್ಯದ್ಯಭಿನ್ನೇಽವಸೀಯತೇ ।**
**ಗುಣಕ್ರಿಯಾದಿರೂಪಸ್ಯ ನಿಷೇಧಃ ಕೇನ ಹೇತುನಾ ॥ ೯೬ ॥**

ಅ ॥ ಯದಿ = ಯಾವ ಪಕ್ಷದಲ್ಲಿ, ಅಭಿನ್ನೇ = ಅಭಿನ್ನವಾದ, ಸಮವಾಯೇ = ಸಮವಾಯದಲ್ಲಿ, ತದ್ಗತತತ್ವಾದಿಃ = ಅವಯವ ಅವಯವ್ಯಾದಿಗತತತ್ವಾದಿರೂಪವಾದ, ವಿಶೇಷಃ = ವಿಶೇಷವು, ಅವಸೀಯತೇ = ಅಂಗೀಕರಿಸಲ್ಪಡುತ್ತದೋ, (ತದಾ = ಆಗ) ಗುಣಕ್ರಿಯಾದಿರೂಪಸ್ಯ = ಗುಣಕ್ರಿಯಾ ಮೊದಲಾದ ಸ್ವರೂಪವುಳ್ಳ ವಿಶೇಷಕ್ಕೆ, ನಿಷೇಧಃ = ನಿಷೇಧವು, ಕೇನ ಹೇತುನಾ = ಯಾವ ಹೇತುವಿನಿಂದ, (ಯಾವುದರಿಂದಲೂ ಆಗಲಾರದು).

ಕಾ ॥ (1) ಸಮವಾಯವು ಅವಯವ ಅವಯವಿ ಮೊದಲಾದವುಗಳಲ್ಲಿ ಇರತಕ್ಕುದೆಂದು ಅಂಗೀಕರಿಸಿರುವರು. ಅನಿತ್ಯದ್ರವ್ಯ ಗುಣ, ಕರ್ಮ, ಸಾಮಾನ್ಯ, ವಿಶೇಷಗಳಂತೆಯೇ

ಸಮವಾಯಕ್ಕೆ ತದ್ಗತತ್ವವೆಂದರೆ ಸಮವಾಯುಸಂಬಂಧದಿಂದ ಇರುವಿಕೆ ಎನ್ನುವುದು ಕೂಡುವುದಿಲ್ಲ. ಸಮವಾಯುವು ಒಂದೇ ಆಗಿದೆ. ಆದುದರಿಂದ ಸಮವಾಯುಗತವಾದ ತದ್ಗತತ್ವವಾದರೂ ಸಮವಾಯುಸ್ವರೂಪವೇ ಎಂದಂಗೀಕರಿಸಬೇಕು. (2) ಹೀಗೆಯೇ ಸಮವಾಯುದಲ್ಲಿ ಅಂಗೀಕರಿಸಲ್ಪಟ್ಟ ಅಸ್ತಿತ್ವ-ಅಭಿಧೇಯುತ್ವ-ಜ್ಞೇಯುತ್ವ-ಸಂಬಂಧತ್ವಾದಿಗಳೂ ಸಮವಾಯುಸ್ವರೂಪವೆಂದೇ ಒಪ್ಪಬೇಕು. ಅಸ್ತಿತ್ವಾದಿಗಳಿಗೆ ಸಮವಾಯುದಿಂದ ಭೇದವಿದ್ದರೆ ಸಮವಾಯುದಿಂದ ಸಂಬಂಧವನ್ನು ಹೇಳಬೇಕು. ಸಂಬಂಧವಿಲ್ಲದಿದ್ದರೆ ಅಸ್ತಿತ್ವಾದಿಗಳೂ ಸಮವಾಯುದಲ್ಲಿ ಹೇಗೆ ಇರುವವು? ಸಂಯೋಗವು ಗುಣವಾಗಿರುವುದರಿಂದ ದ್ರವ್ಯದಲ್ಲಿ ಮಾತ್ರ ಇರುವುದು. ಸಮವಾಯುವು ಒಂದೇ ಆಗಿದೆ. ಆದಪ್ರಯುಕ್ತ ಸಂಯೋಗವಾಗಲೀ ಸಮವಾಯುವಾಗಲೀ ಸಂಬಂಧವಿದೆ ಎಂದು ಹೇಳಲಿಕ್ಕೆ ಬರುವುದಿಲ್ಲ, ಎಂದಾಶಂಕಿಸಿದರೆ — ತದ್ಗತತ್ವಾದಿಗಳು ಸಮವಾಯುಸ್ವರೂಪವೆಂದು ಹೇಳಿದರೆ ಹೀಗೆ ಕೇಳುವೆವು. ಸಮವಾಯುಕ್ಕೂ ತದ್ಗತತ್ವವೊದಲಾದ ಧರ್ಮಗಳಿಗೂ ಅಭೇದವಿದ್ದರೆ ಅಪರ್ಯಾಯ ಶಬ್ದವಾಚ್ಯತ್ವವೂ ಧರ್ಮಧರ್ಮಿಭಾವವೂ, ಷಷ್ಠೀಪ್ರಯೋಗವೂ, ಜ್ಞಾತತ್ವ-ಅಜ್ಞಾತತ್ವವೂ, ಏಕತ್ವ-ಅನೇಕತ್ವವೂ ಇತ್ಯಾದಿಗಳೆಲ್ಲವೂ ಹೇಗೆ ಕೂಡುತ್ತವೆ? ಪ್ರಯೋಗಗಳಿಗೆ ಔಪಚಾರಿಕತ್ವ-ಭ್ರಾಂತಿಮೂಲಕತ್ವ ಇತ್ಯಾದಿಗಳನ್ನು ಕಲ್ಪಿಸುವುದು ಯುಕ್ತವಲ್ಲ. ಏಕೆಂದರೆ—'ದೇವದತ್ತನು ಸಿಂಹವಲ್ಲ' ಎನ್ನುವುದರಂತೆ 'ಸಮವಾಯುವು ತದ್ಗತತ್ವಾದಿಧರ್ಮವುಳ್ಳದ್ದಲ್ಲ' ಇತ್ಯಾದಿರೂಪವಾದ ಮುಖ್ಯ ಪ್ರಯೋಗವಾಗಲೀ, ಬಾಧಕಜ್ಞಾನವಾಗಲೀ ಕಂಡಿದ್ದರೆ ಆಗ ಉಪಚಾರಾದಿ ಕಲ್ಪನೆಯು ಯುಕ್ತವಾಗುತ್ತಿತ್ತು. ಹೀಗೆ ಯಾವಾಗಲೂ ಕಂಡಿಲ್ಲ. ಹೀಗೆ ಆಕ್ಷೇಪಮಾಡಿದರೆ ನೈಯಾಯಿಕರು ಹೀಗೆ ಸಮಾಧಾನವನ್ನು ಹೇಳಬೇಕು. ತದ್ಗತತ್ವಾದಿಗಳೂ ಕೇವಲ ಸಮವಾಯುಸ್ವರೂಪವಲ್ಲ. ಮತ್ತೆ ಸಮವಾಯುವಿಂದ ಅಭಿನ್ನವಾದರೂ ಸಮವಾಯುದಿಂದ ವಿಶೇಷವುಳ್ಳದ್ದು. ಆದಕಾರಣ ವ್ಯಪದೇಶ ಭೇದಾದಿಗಳೂ ಕೂಡುತ್ತವೆ. ಅಭೇದವಿದ್ದರೂ ಭೇದಕಾರ್ಯನಿರ್ವಾಹಕವಾದ ಭೇದಪ್ರತಿನಿಧಿಯಾದದ್ದು ಇದೆ, ಎಂದೇ ಸಮಾಧಾನವನ್ನು ಹೇಳಬೇಕು. ತಥಾಚ ಅಭಿನ್ನವಾದ ಸಮವಾಯುದಲ್ಲಿ ತದ್ಗತತ್ವವೊದಲಾದ ವಿಶೇಷವನ್ನು ಅಂಗೀಕರಿಸಿದರೆ ಆಗ ಗುಣಕ್ರಿಯಾದಿಗಳೂ ದ್ರವ್ಯಸ್ವರೂಪವೇ ಆಗಿ ಸವಿಶೇಷಾಭಿನ್ನವಾಗಿ ಇರಲಿ, ದ್ರವ್ಯದಿಂದ ನಿರ್ವಿಶೇಷಾಭಿನ್ನವಲ್ಲ. ತದ್ಗತತ್ವಾದಿ ಧರ್ಮಗಳು ಸಮವಾಯುದಿಂದ ಸವಿಶೇಷಾಭಿನ್ನಗಳು. ಗುಣಾದಿಗಳು ದ್ರವ್ಯದಿಂದ ಸವಿಶೇಷಾಭಿನ್ನಗಳಲ್ಲ ಎನ್ನುವಲ್ಲಿ ವಿಶೇಷ ಹೇತುವಿಲ್ಲ ॥ ೯೬ ॥

ಹೀಗಾದರೆ ಪ್ರಕೃತವೇನಾಯಿತೆಂದರೆ—

**ಮೂ ॥ ದ್ರವ್ಯಮೇವ ತತೋಽನಂತವಿಶೇಷಾತ್ಮತಯಾ ಸದಾ ।**
**ನಾನಾವ್ಯವಹೃತೇರ್ಹೇತುರನಂತತ್ವಂ ವಿಶೇಷತಃ ॥ ೯೭ ॥**

ಅ ॥ ಸಮವಾಯುವತ್ = ಸಮವಾಯುಧರ್ಮದಂತೆ, ತತಃ = ಗುಣಾದಿಗಳಿಗೆ ದ್ರವ್ಯವಿಶೇಷತ್ವವಿದ್ದಪ್ರಯುಕ್ತ, ದ್ರವ್ಯಮೇವ = ದ್ರವ್ಯವೇ, ಸದಾ = ಯಾವಾಗಲೂ, ಅನಂತವಿಶೇಷಾತ್ಮತಯಾ = ವ್ಯವಹಾರಗಳು ಎಷ್ಟು ಇರುತ್ತಾವೋ ಅಷ್ಟು ವಿಶೇಷವುಳ್ಳವುಗಳಾಗಿರುವುದರಿಂದ, ನಾನಾವ್ಯವಹೃತೇಃ = ವ್ಯಪದೇಶಭೇದಾದಿಗಳಿಗೆ, ಹೇತುಃ = ಕಾರಣವಾಗುತ್ತದೆ. (ಅನ್ಯಥಾಸಿದ್ಧಿಯನ್ನೇ ಪ್ರಕಟಣೆಮಾಡುತ್ತಾ ಉಪಸಂಹಾರಮಾಡುತ್ತಾರೆ.) ಸಮವಾಯುವತ್ = ಸಮವಾಯುದಂತೆ, ಅಂದರೆ ಸಮವಾಯುವು ಹೇಗೆ, ಅನಂತವಿಶೇಷಾತ್ಮತಯಾ = ತದ್ಗತತ್ವ ಮೊದಲಾದ ವಿಶೇಷರೂಪದಿಂದ, ನಾನಾವ್ಯವಹೃತೇಃ = ವ್ಯಪದೇಶಭೇದ ಮೊದಲಾದ ವ್ಯವಹಾರಗಳಿಗೆ, ಹೇತುಃ = ಕಾರಣವಾಗುತ್ತದೋ, ತತಃ = ಆದುದರಿಂದ (ತಥಾ = ಹಾಗೆ) ದ್ರವ್ಯಮೇವ = ಘಟ

ಮೊದಲಾದ ದ್ರವ್ಯವೇ, ಅನಂತವಿಶೇಷಾತ್ಮತಯಾ = ಗುಣಕ್ರಿಯೆ ಮೊದಲಾದ ಅನಂತವಿಶೇಷ ರೂಪದಿಂದ, ಸದಾ=ಯಾವಾಗಲೂ, ನಾನಾವ್ಯವಹೃತೇಃ = ವ್ಯಪದೇಶಭೇದಮೊದಲಾದುದಕ್ಕೆ, ಹೇತುಃ=ಕಾರಣವಾಗುತ್ತದೆ. (ಹಾಗಾದರೆ ಅನಂತವಿಶೇಷರೂಪವಾದುದು, ಒಂದೇ ದ್ರವ್ಯವು ಎನ್ನುವುದು ವ್ಯಾಹತವೆಂದರೆ— ೧ 'ಮೇ ಮಾತಾ ವಂಧ್ಯಾ' ಎನ್ನುವುದರಂತೆ ಸಾಕ್ಷಾತ್ ವಿರೋಧವೋ, ೨ ಅಥವಾ ಕೃತಕವು ನಿತ್ಯವಾಗಿದೆ ಎನ್ನುವುದರಂತೆ ವ್ಯಾಪ್ತಿಯಿಂದಲೋ, ೧ನೇದ್ದು ಕೂಡಲಾರದು. ಏಕೆಂದರೆ— ಅನಂತತ್ವವೆಂದರೆ— ಸಂಖ್ಯಾವಿಶೇಷವು. ಏಕತ್ವವೆಂದರೆ— ಅಭೇದವು. ೨ನೇದ್ದೂ ಕೂಡಲಾರದು. ಎಲ್ಲಿ ಅನೇಕತ್ವವು ಇದೆಯೋ ಅಲ್ಲಿ ಅವಶ್ಯವಾಗಿ ಭೇದವು ಎನ್ನುವ ವ್ಯಾಪ್ತಿಯಿದ್ದರೆ ವಿರೋಧವು ಬರುತ್ತಿತ್ತು. ಹೀಗೆ ವ್ಯಾಪ್ತಿಯಿಲ್ಲ. ಭೇದಪ್ರತಿನಿಧಿಯಾದ ವಿಶೇಷದಿಂದಲೇ ಅನೇಕತ್ವಸಂಖ್ಯೆಯು ಕೂಡುತ್ತದೆನ್ನುತ್ತಾರೆ.) ವಿಶೇಷತಃ=ಈಶ್ವರಾಖ್ಯದ್ರವ್ಯ ವಿಶೇಷಗಳಿಗೆ, ಅನಂತತ್ವಂ=ಅನೇಕತ್ವವು, ಸಮವಾಯವತ್=ಒಂದೇ ಸಮವಾಯವು, ಅನೇಕ ಧರ್ಮಸ್ವರೂಪವೆಂದೂ ಹೇಗೆ ಅಂಗೀಕರಿಸಲ್ಪಡುತ್ತದೋ? ಹಾಗೆಯೇ. ಅಂದರೆ— ಈಶ್ವರ ರೂಪದ್ರವ್ಯದಲ್ಲಿರತಕ್ಕ ಈಶ್ವರನಿಂದ ಅಭಿನ್ನಗಳಾದ ಜ್ಞಾನಾದಿಧರ್ಮಗಳಿಗೆ ಅನಂತ್ಯವೇ. ಈಶ್ವರರೂಪ ದ್ರವ್ಯಕ್ಕಿಂತ ಭಿನ್ನಗಳಾದ ದ್ರವ್ಯಗಳಲ್ಲಿರತಕ್ಕ ಧರ್ಮಗಳಿಗೆ ಅನೇಕತ್ವವು.

ತಾ ॥ (1) ಗುಣಗುಣ್ಯಾದಿಗಳಿಗೆ ಅತ್ಯಂತಭೇದವು ಸಿದ್ಧವಾದರೆ ಅವುಗಳ ಸಂಬಂಧವು ಸಮವಾಯವೆಂದು ಸಿದ್ಧಿಸುತ್ತದೆ. ಗುಣಗುಣ್ಯಾದಿಗಳ ಅತ್ಯಂತಭೇದವಾದರೂ ಪ್ರಾಮಾಣಿಕ ವಲ್ಲ. ಹೇಗೆಂದರೆ— ಆ ವಿಷಯದಲ್ಲಿ ದನ ಕುದುರೆಗಳಿಗೆ ಭೇದಕಂಡಂತೆಯೇ ಪ್ರತ್ಯಕ್ಷವಾಗದಿರು ವುದರಿಂದ ಅಭೇದದಲ್ಲಿ ಪ್ರತ್ಯಕ್ಷಪ್ರಮಾಣವಿಲ್ಲ. ಆದಪ್ರಯುಕ್ತ 'ಗುಣಗುಣಿನೌ ಅತ್ಯಂತಭಿನ್ನೌ ಅಪರ್ಯಾಯಶಬ್ದವಾಚ್ಯತ್ವಾತ್ ಘಟಪಟವತ್' ಪರ್ಯಾಯಶಬ್ದವಾಚ್ಯವಾಗದಿರುವುದರಿಂದ ಗುಣಗುಣಿಗಳು ಅತ್ಯಂತಭಿನ್ನಗಳು, ಘಟಪಟಗಳಂತೆ, ಇದುಮೊದಲಾದ ಅನುಮಾನವನ್ನೇ ಹೇಳಬೇಕು. ಆ ಅನುಮಾನಕ್ಕೆ ಸಮವಾಯಕ್ಕೂ ತದ್ಗತತ್ವಮೊದಲಾದ ಧರ್ಮಗಳಿಗೂ ಭೇದ ವಿಲ್ಲವಾದರೂ ಅಪರ್ಯಾಯ ಶಬ್ದವಾಚ್ಯತ್ವವಿದ್ದಪ್ರಯುಕ್ತ ಸಮವಾಯದಲ್ಲಿ ವ್ಯಭಿಚಾರವು. ಭೇದವಿಲ್ಲದೆ ವಿಶೇಷದಿಂದಲೇ ಅಪರ್ಯಾಯಶಬ್ದವ್ಯವಹಾರವು ಅನ್ಯಥಾ ಸಿದ್ಧವೂ ಆಗಿದೆ. (2) ಹೇಗೆ ಸಮವಾಯದಲ್ಲಿ ತದ್ಗತತ್ವಾದಿಧರ್ಮಗಳಿಗೆ ಭೇದವಿಲ್ಲವಾದರೂ ವಿಶೇಷಾಪರಪರ್ಯಾಯ ವಾದ ಸ್ವಭಾವವಿಶೇಷದಿಂದಲೇ ಅಪರ್ಯಾಯಶಬ್ದವಾಚ್ಯತ್ವಾದಿಗಳನ್ನು ಗತ್ಯಂತರವಿಲ್ಲದಿರುವುದ ರಿಂದ ಉಪಪಾದಿಸಬೇಕೋ, ಹಾಗೆಯೇ ಗುಣಗುಣ್ಯಾದಿಗಳಿಗೆ ಅತ್ಯಂತಾಭೇದವಿದ್ದರೂ ಗುಣಾದಿ ಗಳು ದ್ರವ್ಯವಿಶೇಷವಾಗಿರುವುದರಿಂದ ದ್ರವ್ಯವೇ ವಿಶೇಷಶಕ್ತಿಯಿಂದಲೇ ಅಪರ್ಯಾಯಶಬ್ದವಾಚ್ಯ ತ್ವಮೊದಲಾದ ವ್ಯವಹಾರಗಳಿಗೆ ಕಾರಣವಾಗುವುದು. ತಥಾಚ ವಿಪಕ್ಷದಲ್ಲಿ ಬಾಧಕವಿಲ್ಲದಿರುವು ದರಿಂದ ಗುಣಗುಣ್ಯಾದಿಗಳಿಗೆ ಭೇದಸಾಧಕಗಳಾದ ಹಿಂದಿನ ಹೇತುಗಳು ಅಪ್ರಯೋಜಕಗಳು. (3) ಅಥವಾ 'ವಿಶೇಷಸ್ತದ್ಗತತ್ವಾದಿಃ' ಎನ್ನುವುದರಿಂದಲೇ ಗುಣಗುಣ್ಯಾದಿಗಳಿಗೆ ಅತ್ಯಂತಭೇದ ಸಾಧಕಗಳಾದ ಹೇತುಗಳಿಗೆ ಅನೈಕಾಂತ್ಯವನ್ನೂ ಅಪ್ರಯೋಜಕತ್ವವನ್ನೂ ಹೇಳಿರುವರು. ತದ್ಗ ತತ್ವಮೊದಲಾದ ಧರ್ಮಗಳಿಂದ ಅಭಿನ್ನವಾದ ಸಮವಾಯದಲ್ಲಿ ತದ್ಗತತ್ವಮೊದಲಾದ ವಿಶೇಷವು ಅಂಗೀಕರಿಸಲ್ಪಡುವುದೋ, ವಿಶೇಷದಿಂದಲೇ ವ್ಯವಹಾರಗಳು ನಿರ್ವಹಿಸಲ್ಪಡುವುದೋ, ಆಗ ವ್ಯಪದೇಶಭೇದ ಮೊದಲಾದ ಹೇತುಗಳು ವ್ಯಭಿಚಾರ ಅನ್ಯಥಾಸಿದ್ಧಿಗಳಿಂದ ಆಭಾಸಗಳಾಗಿರುವು ದರಿಂದ ಯಾವ ಹೇತುವಿನಿಂದ ದ್ರವ್ಯಕ್ಕೆ ಗುಣಕ್ರಿಯಾದಿರೂಪವಾದ ಗುಣಕ್ರಿಯಾದಿಸ್ವರೂಪ ತ್ವವು ನಿಷೇಧಿಸಲ್ಪಡುತ್ತದೆ, ಅಂದರೆ ಗುಣಗುಣ್ಯಾದ್ಯತ್ಯಂತ ಭೇದವು ಯಾವ ಹೇತುವಿನಿಂದ ಸಾಧಿಸಲ್ಪಡುವುದು? (4) ಇದೇ ಮೂಲದಿಂದ ಅನ್ಯಥಾಸಿದ್ಧಿಯನ್ನೇ ಪ್ರಕಟಿಸುತ್ತಾ ಉಪಸಂಹಾರ ಮಾಡಿದರು ॥ ೯೭ ॥

ಹಾಗಾದರೆ ಅನೇಕ ವ್ಯವಹಾರಗಳ ನಿರ್ವಾಹಕ್ಕೆ ಕಾರಣವಾದ ವಿಶೇಷವು ದ್ರವ್ಯರೂಪವೇ ಆಗಿದ್ದರೆ ಹೇಗೆ ದ್ರವ್ಯದ ವಿಶೇಷವು ಆಗುವುದು? ದ್ರವ್ಯಸಂಬಂಧಿತ್ವವು ಭೇದವ್ಯಾಪ್ತವಾಗಿದೆ. ಎಂದರೆ ಹೀಗೆ ಹೇಳಕೂಡದು. ಭೇದವಿಲ್ಲವಾದರೂ ಭೇದಪ್ರತಿನಿಧಿಯಾದ ವಿಶೇಷದಿಂದಲೇ ವಿಶೇಷವು ಭೇದಸಂಬಂಧಿಯು ಎಂದು ಉಪಪನ್ನವಾಗುವುದು. ಹೀಗಾದರೆ ವಿಶೇಷಕ್ಕೆ ವಿಶೇಷತ್ವವು ಸಿದ್ಧಿಯಾಗುವುದಕ್ಕಾಗಿ ವಿಶೇಷಾಂತರವನ್ನು ಅಂಗೀಕರಿಸತಕ್ಕದು. ಹೀಗೆ ಅನವಸ್ಥೆಯು ಎಂದರೆ—

**ಮೂ ॥ ವಿಶೇಷಶ್ಚ ವಿಶೇಷೀ ಸ ಸ್ವೇನೈವ ಸಮವಾಯವತ್ ।**
**ಕಲ್ಪನಾಗುರುತಾದೋಷಾತ್ಪದಾರ್ಥಾಂತರತಾ ನ ಹಿ ॥ ೯೮ ॥**

ಅ ॥ ಸಮವಾಯವತ್=ಸಮವಾಯದಂತೆ, (ಅಂದರೆ ಹೇಗೆ ಸಮವಾಯವು ತನ್ನಿಂದಲೇ ಸಮವಾಯವುಳ್ಳದ್ದು, ಸಂಬಂಧಾಂತರದಿಂದ ಅಲ್ಲ. ಹೀಗೆ ಅಂಗೀಕರಿಸಿಕೊಂಡು ಪರರು ಅನವಸ್ಥಾದೋಷವನ್ನು ತಿರಸ್ಕರಿಸುವರೋ ಹಾಗೆಯೇ) ಸಃ=ದ್ರವ್ಯದಲ್ಲಿ ಅನೇಕ ವ್ಯವಹಾರಗಳ ನಿರ್ವಾಹಕ್ಕೆ ಕಾರಣವಾದ, ವಿಶೇಷಶ್ಚ=ವಿಶೇಷವೂಕೂಡ, ಸ್ವೇನೈವ=ತನ್ನಿಂದಲೇ, ವಿಶೇಷೀ=ವಿಶೇಷವುಳ್ಳದ್ದು, ಪುನಃ ವಿಶೇಷಾಂತರದಿಂದ ಅಲ್ಲ. (ಆದುದರಿಂದ ಯಾವ ದೋಷವೂ ಇಲ್ಲ.) (ಸಮವಾಯವತ್ ಎಂದುಪಲಕ್ಷಣವು; ಸತ್ತಾದಂತೆ, ಅಂತ್ಯವಾದ ವಿಶೇಷದಂತೆ. ಅಂದರೆ, ಹೇಗೆ ದ್ರವ್ಯಗುಣಕರ್ಮಗಳಲ್ಲಿ ಸತ್ ಎನ್ನುವ ವ್ಯವಹಾರಕ್ಕೆ ಕಾರಣವಾದ ಸತ್ತಾ ಎನ್ನುವುದು ತನ್ನಿಂದಲೇ ಸತ್ ಎಂದು ಸ್ವೀಕರಿಸಲ್ಪಡುತ್ತದೋ, ಹೇಗೆ ನಿತ್ಯದ್ರವ್ಯಗಳಲ್ಲಿ ಅತ್ಯಂತವಾಗಿ ಭೇದಜ್ಞಾನಕ್ಕೆ ಕಾರಣವಾದ ಅಂತ್ಯವಾದ ವಿಶೇಷವು ತನ್ನಿಂದಲೇ ಅತ್ಯಂತ ವ್ಯಾವೃತ್ತವಾಗಿದೆಯೋ, ಹಾಗೆಯೇ ವಿಶೇಷವನ್ನೂ ಇಟ್ಟುಕೊಳ್ಳಬೇಕು. ಗುಣಗುಣ್ಯಾದಿಗಳಿಗೆ ಅಭೇದವನ್ನು ಅಂಗೀಕರಿಸಿ ವಿಶೇಷದಿಂದ ವ್ಯವಹಾರ ನಿರ್ವಾಹಮಾಡುವುದು ಏಕೆ? ಭೇದವನ್ನೇ ಅಂಗೀಕರಿಸಬಹುದು ಎಂದರೆ) ಕಲ್ಪನಾಗುರುತಾದೋಷಾತ್=(ಯದ್ಯಪಿ ಭೇದಾಭೇದಪಕ್ಷಗಳಲ್ಲಿ ಸ್ವನಿರ್ವಾಹಕವಾದ ಸಮವಾಯ ವಿಶೇಷಗಳನ್ನು ಅಂಗೀಕರಿಸಿರುವುದರಿಂದ ಸಾಮ್ಯವೇ. ಆದಾಗ್ಯೂ ಭೇದಪಕ್ಷದಲ್ಲಿ) ಕಲ್ಪನಾಗೌರವ ದೋಷವಿದ್ದಪ್ರಯುಕ್ತ, (ಗುಣಗುಣ್ಯಾದೀನಾಂ = ಗುಣಗುಣಿಮೊದಲಾದವುಗಳಿಗೆ,) ಪದಾರ್ಥಾಂತರತಾ=ಪದಾರ್ಥಾಂತರತ್ವವು, ನ ಹಿ=ಅಂಗೀಕರಿಸಲ್ಪಡುವುದಿಲ್ಲ. ಕಲ್ಪನಾಲಾಘವವಿದ್ದುದರಿಂದ ಅಭೇದವೇ ಅಂಗೀಕಾರಾರ್ಹವು ॥ ೯೮ ॥

ಭೇದವಾದದಲ್ಲಿ ಕಲ್ಪನಾಗೌರವವು ಹೇಗೆಂದರೆ—

**ಮೂ ॥ ಕಲ್ಪಯಿತ್ವಾ ಷಟ್ಪದಾರ್ಥಾನ್ ಸಾಭಾವಾನಪಿ ಕೇವಲಂ ।**
**ಏಕಸ್ಮಿನ್ ಸವಿಶೇಷಶ್ಚೇತ್ಕಿಂ ಪೂರ್ವಂ ತಸ್ಯ ವಿಸ್ಮೃತಿಃ ॥ ೯೯ ॥**

ಅ ॥ ಸಾಭಾವಾನಪಿ = ಅಭಾವದಿಂದ ಕೂಡಿದವುಗಳೂ ಆದ, ಕೇವಲಂ ಷಟ್ಪದಾರ್ಥಾನ್=ಕೇವಲವಾಗಿ ಆರೇ ಪದಾರ್ಥಗಳನ್ನು, ಕಲ್ಪಯಿತ್ವಾ = ಕಲ್ಪಿಸಿಕೊಂಡು, ಕೇವಲಂ ಏಕಸ್ಮಿನ್=ಒಂದು ಸಮವಾಯದಲ್ಲಿಯೇ, ಸವಿಶೇಷಃ ಚೇತ್=ವಿಚಿತ್ರವ್ಯವಹಾರಕ್ಕೆ ಕಾರಣವಾದ ವಿಶೇಷವು ಅಂಗೀಕರಿಸಲ್ಪಡುವುದಾದರೆ, ಕಿಂ=ಯಾವ ಕಾರಣದ್ವೇಷಯಿಂದ, ಪೂರ್ವಂ=ದ್ರವ್ಯದಲ್ಲಿ, ತಸ್ಯ=ಆ ವಿಶೇಷಕ್ಕೆ, ವಿಸ್ಮೃತಿಃ=ವಿಸ್ಮರಣವು.

ತಾ ॥ (1) ವ್ಯಪದೇಶಭೇದಮೊದಲಾದ ಪ್ರಮಾಣವನ್ನು ಆಶ್ರಯಿಸಿಕೊಂಡು ವೈಶೇಷಿಕಾದಿಗಳು ದ್ರವ್ಯಮೊದಲಾದವುಗಳು ಭಾವಪದಾರ್ಥಗಳು ಆರೇ. ಅಭಾವವು ಏಳನೇದ್ದು ಎಂದು

ಕಲ್ಪಿಸಿರುವರು. ಸಮವಾಯದಲ್ಲಿ ಪ್ರತೀತವಾದ ತದ್ಗತತ್ವಮೊದಲಾದುದಾದರೂ ಸಮವಾಯದಿಂದ ಅತಿರಿಕ್ತವಲ್ಲ. ಮತ್ತೆ ಸ್ವಭಾವವಿಶೇಷಾಪರನಾಮಕವಾದ ವಿಶೇಷದಿಂದಲೇ ಅಲ್ಲಿ ವ್ಯಪದೇಶಭೇದಾದಿಗಳು ಕೂಡುತ್ತವೆಂದೂ ಕಲ್ಪಿಸಿರುವರು. ಅಲ್ಲಿ ಕೊನೆಗಾದರೂ ಅಂಗೀಕಾರಾರ್ಹವಾದ ವ್ಯಪದೇಶಭೇದಾದಿಗಳನ್ನು ನಿರ್ವಾಹಮಾಡತಕ್ಕ ವಿಶೇಷದಿಂದಲೇ ದ್ರವ್ಯದಲ್ಲಿಯೂ ವ್ಯಪದೇಶಭೇದಾದಿಗಳನ್ನು ನಿರ್ವಾಹಮಾಡಬೇಕು. ಏಳು ಪದಾರ್ಥಗಳ ನಿರೂಪಣವನ್ನು ಮಾಡಬೇಕಾಗಿಲ್ಲ. (2) ಅಥವಾ ದ್ರವ್ಯದಂತೆಯೇ ಸಮವಾಯದಲ್ಲಿಯೂ ತದ್ಗತತ್ವಾದಿಗಳಿಗೆ ಭೇದವನ್ನೇ ಸ್ವೀಕರಿಸಬೇಕು. ಅವುಗಳಿಗಾದರೂ ದ್ರವ್ಯಾದಿಗಳಲ್ಲಿ ಅಂತರ್ಭಾವವು ಕೂಡದಿರಲು ಏಳೇ ಪದಾರ್ಥಗಳು ಎನ್ನುವ ನಿಯಮವನ್ನು ಬಿಡತಕ್ಕದು. ವಿಶೇಷಕಾರಣವಿಲ್ಲದೆ ಗುಣಗುಣ್ಯಾದಿಗಳಲ್ಲಿ ಭೇದವನ್ನು ಸಮವಾಯದಲ್ಲಿರತಕ್ಕ ತದ್ಗತತ್ವಾದಿಗಳಲ್ಲಿ ಏಶೇಷವನ್ನು ಅಂಗೀಕರಿಸಿದರೆ ಕಲ್ಪನಾಗೌರವವು ಹೇಗೆ ಬಾರದೆ ಹೋಗುವುದು? ಅಭೇದಪಕ್ಷದಲ್ಲಿ ಕಲ್ಪನಾಗೌರವವು ಇಲ್ಲದಿರುವಾಗ ಕಲ್ಪನಾಲಾಘವವೂ ಹೇಗೆ ಬರಲಾರದು? (3) ಮತ್ತು ಕುಂಡದಧಿಗಳಿಗೆ ಸಂಯೋಗವು ಎನ್ನುವುದರಂತೆ ತಂತುಪಟಗಳಿಗೆ ಸಮವಾಯವು ಎಂದು ಪ್ರತೀತಿಯು ಇಲ್ಲದಿರುವುದರಿಂದ ಸಮವಾಯವಿಷಯದಲ್ಲಿ ಪ್ರತ್ಯಕ್ಷ ಪ್ರಮಾಣವು ಕೂಡಲಾರದು. (4) ಮತ್ತು 'ಇಹ ತಂತುಷು ಪಟಃ ಇತಿ ಪ್ರತ್ಯಯಃ ಸಂಬಂಧಪೂರ್ವಕಃ ಅಬಾಧಿತೇಹ ಪ್ರತ್ಯಯತ್ವಾತ್'' ಎನ್ನುವ ಅನುಮಾನವು 'ಇಹ ತಂತುಪಟಯೋಃ ಸಮವಾಯಃ' ಎನ್ನುವ ಪ್ರತ್ಯಯದಲ್ಲಿ ವ್ಯಭಿಚಾರಾದಿಗಳು ಬರುವುದರಿಂದ ಅಯುಕ್ತವೆಂದು ಉಕ್ತವಾಗಿದೆ. ಇದುಮೊದಲಾದ ಪರರು ಉದಾಹರಿಸಿರುವ ಅನುಮಾನಗಳೆಲ್ಲವೂ ವ್ಯಭಿಚಾರಾದಿದೋಷಗಳಿಂದ ಯುಕ್ತಗಳಾಗಿರುವುದರಿಂದ ಅಯುಕ್ತಗಳು. ತಥಾಚ ಸಮವಾಯವಿಷಯದಲ್ಲಿ ಅನುಮಾನಪ್ರಮಾಣವು ನಿರಸ್ತವಾಯಿತು. ಆದಕಾರಣ ಹಿಂದೆ ಹೇಳಿದ ಪ್ರಕಾರ ಸಮವಾಯವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದ ಗುಣಗುಣ್ಯಾದಿ ಭೇದಪಕ್ಷವನ್ನು ಅಂಗೀಕರಿಸಕೂಡದು ॥ ೯೯ ॥

ಹಾಗಾದರೆ ವಿಶೇಷವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದ ಸಮವಾಯಸಂಬಂಧದಲ್ಲಿ ಅಭೇದಪಕ್ಷವನ್ನೂ ಅಂಗೀಕರಿಸಕೂಡದು ಎಂದರೆ ಆ ವಿಷಯದಲ್ಲಿ ಹೇಳುತ್ತಾರೆ—

**ಮೂ ॥ ಯೇನ ಪ್ರತ್ಯಕ್ಷಸಿದ್ಧೇನ ವ್ಯವಹಾರೋಽಖಿಲೋ ಭವೇತ್ ।**
**ಭಾವಾಭಾವವಿಭಾಗೇನ ಯಂ ವಿನಾ ನ ಕಥಂಚನ ॥ ೧೦೦ ॥**
**ಏತಾದೃಶೇ ವಿಶೇಷೇಽಸ್ಮಿನ್ ಕೋ ದ್ವೇಷೋ ವಾದಿನಾಂ ಭವೇತ್ ।**
**ಅಭೇದೇನ ಪ್ರತೀತಿಶ್ಚ ಕಾರ್ಯಕಾರಣಪೂರ್ವಕೇ ।**
**ಅಭಾವಾಂತೇ ಪದಾರ್ಥೇಽಸ್ಮಿನ್ ಸವಿಶೇಷಾವಸೀಯತೇ ॥ ೧೦೧ ॥**

ಅ ॥ ಪ್ರತ್ಯಕ್ಷಸಿದ್ಧೇನ=ಪ್ರತ್ಯಕ್ಷಸಿದ್ಧವಾದ, ಯೇನ = ಯಾವುದರಿಂದ, ಅಖಿಲಃ= ನಿಖಿಲವಾದ, ಅಂದರೆ ಭಾವಾಭಾವವಿಭಾಗೇನ = ವಿಧಿನಿಷೇಧ ಭೇದದಿಂದ, (ದ್ವಿವಿಧಃ=ಎರಡು ವಿಧವಾದ ಗುಣಕ್ರಿಯಾದಿ ವಿಶಿಷ್ಟವಿಷಯಕವಾದ ಅಭಿಜ್ಞಾಭಿವದನರೂಪವಾದ) ವ್ಯವಹಾರಃ= ವ್ಯವಹಾರವು, ಕಥಂಚನ = ಯಾವಪ್ರಕಾರದಿಂದಲಾದರೂ, ಭವೇತ್=ಕೂಡುವುದೋ, ಯಂ ವಿನಾ=ಯಾವುದು ಇಲ್ಲದೆ, ನ=ನಿಖಿಲವ್ಯವಹಾರವು ಆಗಲಾರದೋ, ಏತಾದೃಶೇ=ಇಂತಹ ಸರ್ವವ್ಯವಹಾರಗಳ ನಿರ್ವಾಹಕ್ಕೆ ಕಾರಣವಾದ, ಅಸ್ಮಿನ್=ಈದಾವ, ವಿಶೇಷೇ=ವಿಶೇಷದಲ್ಲಿ, ವಾದಿನಾಂ=ವಾದಿಗಳಿಗೆ, ಜ್ಞಾತೃಗಳಿಗೂ ಕೂಡ, ದ್ವೇಷಃ = ದ್ವೇಷವು, ಕಃ=ಯಾವುದು,

ಭವೇತ್=ಆಗುವುದು. (ಅಂದರೆ ಸ್ವೀಕರಿಸದೆ ಇರಲಿಕ್ಕೆ ಏನು ಕಾರಣವು? ಪ್ರಮಾಣವಿಲ್ಲದಿರುವುದಷ್ಟೆ ಸ್ವೀಕರಿಸದೆ ಇರಲಿಕ್ಕೆ ಕಾರಣವು. ಪ್ರಮಾಣವಿರುವಾಗ ಸ್ವೀಕರಿಸದೆ ಇರಲಿಕ್ಕೆ ಕಾರಣವಿಲ್ಲ.) (ಮತ್ತು ಅವಯವ ಅವಯವ್ಯಾದಿಗಳಿಗೆ ಭೇದವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದಲೂ ಅದನ್ನು ಬಿಟ್ಟು ಅಭೇದಪಕ್ಷವನ್ನು ಅಂಗೀಕರಿಸಬೇಕು.) (ಹಾಗಾದರೆ ಸಮವಾಯವಿಷಯದಲ್ಲಿ ಅಭೇದದಲ್ಲಿಯೂ ಪ್ರಮಾಣವಿಲ್ಲವೆಂದು ಹೇಳಿಯಾಗಿದೆ, ಎಂದರೆ) ಕಾರ್ಯಕಾರಣಪೂರ್ವಕೇ=ಅವಯವ ಅವಯವಿಗಳೇ ಮೊದಲಾದ ಗುಣಗುಣ್ಯಾದಿಗಳುಳ್ಳ, ಅಭಾವಾಂತೇ=ಅನ್ಯೋನ್ಯಾಭಾವವೇ ಅಂತ್ಯವಾಗಿವುಳ್ಳ, ಅಸ್ಮಿನ್ = ಈ ದಾವ, ಪದಾರ್ಥೇ = ಪದಾರ್ಥದಲ್ಲಿ, ಅಭೇದೇನ=ಅಭೇದದಿಂದ, ಪ್ರತೀತಿಶ್ಚ=ಪ್ರತೀತಿಯಾದರೂ, ಸವಿಶೇಷಾ=ವಿಶೇಷಾಖ್ಯವಿಷಯದಿಂದ ಕೂಡಿದ್ದೆಂದು, ಅವಸೀಯತೇ=ಸಾಕ್ಷಿಯಿಂದ ನಿಶ್ಚಯಿಸಲ್ಪಡುತ್ತದೆ.

**ತಾ ॥ ನ್ಯಾಯಸುಧಾ**— (1) 'ಪ್ರತ್ಯಕ್ಷಸಿದ್ಧೇನ' ಎನ್ನುವುದರಿಂದ ವಿಶೇಷವು ಪ್ರತ್ಯಕ್ಷಸಿದ್ಧವೆಂದು ಲಬ್ಧವಾಗುವುದು. (2) 'ಯೇನ ಅಖಿಲೋ ವ್ಯವಹಾರಃ ಭವೇತ್' 'ಯಂ ವಿನಾ ನ ಭವೇತ್' ಎನ್ನುವ ಅನ್ವಯವ್ಯತಿರೇಕಗಳಿಂದ ವ್ಯವಹಾರಕ್ಕೆ ವಿಶೇಷಕಾರ್ಯತ್ವವನ್ನು ತೋರಿಸುವಾಗ ವಿಶೇಷದಲ್ಲಿ ವ್ಯವಹಾರಾನ್ಯಥಾನುಪಪತ್ತಿಯು ಪ್ರಮಾಣವು, ಅಂಗೀಕರಿಸದಿದ್ದರೆ ವ್ಯವಹಾರೋಚ್ಛೇದವೇ ಬರಬೇಕಾಗುವುದು ಎಂದೂ ಉಕ್ತವಾಯಿತು. (3) ಅಭೇದಪ್ರತೀತಿಯು ವಿಶೇಷ (ಭೇದ) ಸಹಿತವಾಗಿಯೇ ಸಾಕ್ಷಿಯಿಂದ ನಿಶ್ಚಯಿಸಲ್ಪಡುತ್ತಗೆ. ಹೇಗೆಂದರೆ— ತಂತುಪಟಾದಿವಿಷಯಕವಾದ ಬುದ್ಧಿಯು ಅತ್ಯಂತ ಭಿನ್ನವಾದ ಘಟಪಟಾದಿವಿಷಯಕವಾದ ಬುದ್ಧಿಯಿಂದ ೧ ವಿಲಕ್ಷಣವಾಗಿ ತಿಳಿಯಲ್ಪಡುತ್ತದೋ, ೨ ಅಥವಾ ಅಭಿನ್ನವಾಗಿ ತಿಳಿಯಲ್ಪಡುತ್ತದೋ, ೨ನೇದ್ದು ಕೂಡಲಾರದು. ಪ್ರತೀತಿಯನ್ನು ಅಪಲಾಪಮಾಡುವುದು ಅನುಪಪನ್ನವು. ೧ನೇ ಕಲ್ಪದಲ್ಲಿ ಅಭೇದಪ್ರತೀತಿಯು ಇಲ್ಲವೆಂದು ಹೇಳಲಿಕ್ಕೆ ಹೇಗೆ ಶಕ್ಯವಾಗುವುದು? ಆದಕಾರಣ ತಂತುಪಟಗಳಿಗೂ, ಕುಂಡಬದರಗಳಿಗೂ ಭೇದವೂ ಸಂಬಂಧವೂ ಸಮಾನವಾಗಿದ್ದರೆ ಕಾಲಾಂತರದಲ್ಲಿ ಆಗತಕ್ಕ ಸಂಬಂಧವಿನಾಶಾದಿಗಳಿಗಾಗಲೀ, ಸಂಬಂಧಿವಿಭಾಗಾದಿಗಳಿಗಾಗಲೀ ಪ್ರತ್ಯಕ್ಷಪ್ರತೀತಿಯನ್ನು ಕುರಿತು ಉಪಯೋಗವಿಲ್ಲದಿರುವುದರಿಂದ ವೈಲಕ್ಷಣ್ಯವು ಅನುಭೂತವಾಗದೇನೇ ಇರುತ್ತಿತ್ತು. ತಂತುಪಟಾದಿ ಬುದ್ಧಿಯು ಕುಂಡಬದರಾದಿ ಬುದ್ಧಿಯಿಂದ ವಿಲಕ್ಷಣವೆಂದು ಅನುಭೂತವೇ ಆಗುತ್ತದೆ. ಆದಕಾರಣ ಅಭೇದವಿಷಯಕವೆಂದೇ ನಿಶ್ಚಿತವಾಗುತ್ತದೆ. (4) ಮತ್ತು ಪಟವು ಹುಟ್ಟುವುದಕ್ಕಿಂತ ಮೊದಲು ಎಷ್ಟು ದೇಶವನ್ನು ಆಶ್ರಯಿಸಿ ತಂತುಗಳು ಇರುತ್ತವೋ ಪಟವೂ ಕೂಡ ಅಷ್ಟೇ ದೇಶವನ್ನು ಆಶ್ರಯಿಸಿ ಇರುತ್ತದೆ. ಮೂರ್ತಗಳಿಗೆ ಸಮಾನದೇಶತ್ವವು ಕೂಡಲಾರದು. ಅದರಿಂದ ಪಟವು ತಂತುಗಳಿಂದ ಅಭಿನ್ನವೆಂದು ತಿಳಿಯಲ್ಪಡುತ್ತದೆ. ತಥಾಚ 'ಪಟಃ ತಂತ್ವಭಿನ್ನಃ ಮೂರ್ತತ್ವೇ ಸತಿ ತಂತುದೇಶತ್ವಾತ್ ತಂತುರೂಪಾದ್ಯಭಿನ್ನರೂಪಾದಿಮತ್ವಾತ್ ತಂತುವತ್' ಇತ್ಯಾದ್ಯನುಮಾನಗಳು ಕಾರ್ಯಕಾರಣಗಳಿಗೆ ಅಭೇದಸಾಧಕವಾದ ಪ್ರಮಾಣಗಳೆಂದು ತಿಳಿಯತಕ್ಕದು. (5) ಮತ್ತು ರೂಪರಸಾದಿಗಳಿಗೆ ಭೇದವು ಹೇಗೆ ಅನುಭೂತವಾಗುತ್ತದೋ ಹಾಗೆಯೇ ತಂತುಪಟಗಳಿಗೆ ಭೇದವು ಅನುಭೂತವಾಗುವುದಿಲ್ಲ. ಇದುಮೊದಲಾದ ಅಭೇದಪ್ರಮಾಣವನ್ನು ತಾವೇ ಊಹಿಸಿಕೊಳ್ಳತಕ್ಕದು. (6) ಹಾಗಾದರೆ ಗುಣಗುಣ್ಯಾದಿಗಳಿಗೆ ಅಭೇದವೇ ಆಗಿದ್ದರೆ 'ಶುಕ್ಲಃ ಪಟಃ' 'ಚಲತಿ ಪಟಃ' ಇತ್ಯಾದಿ ಸಾಮಾನಾಧಿಕರಣ್ಯಾದಿ ವ್ಯವಹಾರವು ಹೇಗೆ ಕೂಡುತ್ತದೆ? ಆ ವ್ಯವಹಾರವು 'ದಂಡೀ' 'ಕುಂಡಲೀ' ಇತ್ಯಾದಿಗಳಂತೆ ಭೇದವಿಷಯಕವಾಗಿದೆ. ವ್ಯವಹಾರವು ಪ್ರತೀತಿಗೆ ವಿರುದ್ಧವಾದುದು ಇರುವುದಿಲ್ಲವಷ್ಟೆ. ಎಂದರೆ— **ಸವಿಶೇಷವಾಗಿಯೇ ಸಾಕ್ಷ್ಯನುಭವವೂ ಅಂದರೆ ಎಲ್ಲಿ ಕೇವಲ ಅಭೇದವು ತೋರುತ್ತದೋ ಅಲ್ಲಿ**

ಸಾಮಾನಾಧಿಕರಣ್ಯವ್ಯವಹಾರವು ಇರುವುದಿಲ್ಲ. ಉದಾ— 'ಘಟಃ ಕಲಶಃ' ಎಂದು. ಇಲ್ಲಿಯೂ ಅಭೇದವು ತೋರುವಾಗ ವಿಶೇಷಾಖ್ಯವಿಷಯದಿಂದ ಸಹಿತವಾಗಿಯೇ ತೋರುತ್ತದೆ. ಭೇದಪ್ರತಿನಿಧಿಯಾದ ವಿಶೇಷವಾದರೂ ಸಾಮಾನಾಧಿಕರಣ್ಯವ್ಯವಹಾರವನ್ನು ಮಾಡುತ್ತದೆ ಇತ್ಯಾದಿಪ್ರಕಾರ ತಿಳಿಯತಕ್ಕದು.

(7) ಅಥವಾ ವಿಶೇಷವು ಪ್ರತ್ಯಕ್ಷ ಅರ್ಥಾಪತ್ತಿಗಳಿಂದ ಸಿದ್ಧವಾಗಿದೆ ಎಂದುಕ್ತವಾಗಿದೆ. ಅದು ಹೇಗೆಂದರೆ, ಪ್ರತ್ಯಕ್ಷಸಿದ್ಧತ್ವವನ್ನು 'ಅಭೇದೇನ' ಇತ್ಯಾದಿ ಮೂಲದಿಂದಲೇ ಉಪಪಾದಿಸಿದರು. (8) ಪದಾರ್ಥೇ ಎನ್ನುವ ಸಿಕವಚನವು ಜಾತಿವಿಷಯಕವು. ಆದಪ್ರಯುಕ್ತ ಆ ಪ್ರತೀತಿಯು ವಿಶೇಷಾಖ್ಯವಿಷಯದಿಂದ ಯುಕ್ತವಾದುದು. ಅಂದರೆ ಅವಯವ ಅವಯವಿಗಳಿಗೂ ಗುಣ ಗುಣಿಗಳಿಗೂ, ಕ್ರಿಯಾಕ್ರಿಯಾವುಳ್ಳವುಗಳಿಗೂ, ಜಾತಿವ್ಯಕ್ತಿಗಳಿಗೂ, ವಿಶೇಷ ನಿತ್ಯದ್ರವ್ಯಗಳಿಗೂ, ಸಮವಾಯ ತದ್ಧರ್ಮಗಳಿಗೂ ಅಭೇದದಿಂದ ಪ್ರತೀತಿಯು ಇದೆ. ಕುಂಡಬದರಾದಿ ಪ್ರತೀತಿಗಳಿಂದ ಈ ಪ್ರತೀತಿಯು ವಿಲಕ್ಷಣವೆಂದು ನಿಶ್ಚಿತವಾಗಿದೆ. ಅಭೇದ ಹೊರತು ವ್ಯಾವೃತ್ತಿಗೆ ಹೇತುವಿರುವುದಿಲ್ಲ. ಆದಕಾರಣ ನಿಮಿತ್ತಾಂತರವಿಲ್ಲದಿರುವಾಗ ಸಮ್ಮತವಾದ ಭೇದವುಳ್ಳ ವಸ್ತ್ವಂತರ ಪ್ರತೀತಿಯಿಂದ ವ್ಯಾವೃತ್ತವಾದ ಈ ಪ್ರತೀತಿಯು ಅಭೇದದಲ್ಲಿಯೇ ವಿಶ್ರಾಂತಿಯನ್ನು ಹೊಂದುತ್ತದೆ. (9) ಆದಾಗ್ಯೂ ಸಾಮಾನಾಧಿಕರಣ್ಯಾದಿ ವ್ಯವಹಾರವು ಇದೆ. ಈ ಪ್ರತೀತಿಯು ಅಭೇದಮಾತ್ರವಿಷಯಕವಾಗಿದ್ದರೆ ಆಗ ಸಾಮಾನಾಧಿಕರಣ್ಯಮೊದಲಾದ ವ್ಯವಹಾರವನ್ನುಮಾಡಲಾರದು. 'ಘಟಃ ಕಲಶಃ' ಎಂದು ವ್ಯವಹಾರವು ಕಾಣುವುದಿಲ್ಲ. ಆದಪ್ರಯುಕ್ತ ಈ ಪ್ರತೀತಿಗೆ ಹೆಚ್ಚು ವಿಷಯವಿದೆ ಎಂದು ತಿಳಿಯುತ್ತದೆ. ಇದು ಭೇದವೆಂದು ಹೇಳಕೂಡದು. ಭೇದಾಭೇದವಾದದಲ್ಲಿಯೂ ಕೊನೆಗೆ ವಿಶೇಷವನ್ನೇ ಅಂಗೀಕರಿಸಬೇಕು. ತಥಾಚ ಈ ಅಭೇದಪ್ರತೀತಿಯು ಇಂದ್ರಿಯಜನ್ಯವಾದುದು, ಸವಿಶೇಷವಾದುದು ಎಂದು ನಿಶ್ಚಿತವಾಗುತ್ತದೆ ॥ ೧೦೦ ॥ ೧೦೧ ॥

ಸಮವಾಯದಲ್ಲಿ ವಿಶೇಷವು ಅಂಗೀಕರಿಸಲ್ಪಡುತ್ತದೆಂದು ಮೊದಲು ಹೇಳಲ್ಪಟ್ಟಿದೆ. ಅದು ಅಷ್ಟುಮಾತ್ರವೇ ಅಲ್ಲ. ಮತ್ತೆ ಎಲ್ಲಾ ಪದಾರ್ಥಗಳಲ್ಲಿಯೂ ವಿಶೇಷವು ಇದೆ ಎಂದು ತೋರಿಸುತ್ತಾ ವಿಶೇಷವು ವ್ಯವಹಾರದಿಂದಲೂ ಅನ್ಯಥಾನುಪಪತ್ತಿಯಿಂದಲೂ ಸಿದ್ಧವಾಗಿದೆ ಎಂದುಪಪಾದಿಸುತ್ತಾರೆ.

**ಮೂ ॥ ಸಾಮಾನ್ಯಾದಿಪದಾರ್ಥೇಷು ತನ್ನಿಷ್ಠತ್ವಾದಯೋಽಖಿಲಾಃ ॥ ೧೦೨ ॥**
**ಕಥಂ ಧರ್ಮಾ ನಿವಾರ್ಯಂತೇ ವಸ್ತ್ವೈಕ್ಯೇಽಪಿ ಹಿ ವಾದಿಭಿಃ ।**
**ಕಾರ್ಯಸ್ಯ ತತ್ತನ್ನಿಷ್ಠತ್ವಂ ಗುಣಾದೇರ್ವ್ಯಾಪಿತಾದಿಕಃ ॥ ೧೦೩ ॥**
**ಕಥಂ ವಿಶೇಷೋ ನೈವಾಸ್ತಿ ಸ ಚ ಧರ್ಮೋಽಪರೋ ಯದಿ ।**
**ಷಟ್ಪದಾರ್ಥಾತಿರೇಕಃ ಸ್ಯಾತ್ಪದಾರ್ಥಾನಿಯಮೋಽಪಿ ಹಿ ।**
**ಧರ್ಮಸ್ಯ ಧರ್ಮಸಂತಾನಾದನವಸ್ಥಾ ಕರೋ ಭವೇತ್ ॥ ೧೦೪ ॥**

ಅ ॥ ಸಾಮಾನ್ಯಾದಿಪದಾರ್ಥೇಷು = ಸಾಮಾನ್ಯ ಮೊದಲಾದ ಪದಾರ್ಥಗಳಲ್ಲಿ, ತನ್ನಿಷ್ಠತ್ವಾದಯಃ = ವ್ಯಕ್ತಿನಿಷ್ಠತ್ವಮೊದಲಾದ, ಅಖಿಲಾಃ = ಎಲ್ಲಾ, ಧರ್ಮಾಃ = ಧರ್ಮಗಳು, ವಸ್ತ್ವೈಕ್ಯೇಽಪಿ = ಧರ್ಮಿಯಿಂದ ತನ್ನಿಷ್ಠತ್ವಮೊದಲಾದ ಧರ್ಮಗಳಿಗೆ ಐಕ್ಯವಿದ್ದರೂ, ವಾದಿಭಿಃ = ವಾದಿಗಳಿಂದ, (ಅವಿಸಂವಾದಿವ್ಯವಹಾರಸಿದ್ಧವಾಗಿರುವುದರಿಂದ) ಕಥಂ = ಹೇಗೆ, ನಿವಾರ್ಯಂತೇ ಹಿ = ನಿವಾರಿಸಲ್ಪಡುವುದು? (ಇದನ್ನೇ ವಿವರಿಸುತ್ತಾರೆ.) ಕಾರ್ಯಸ್ಯ = ಅವಯವಿಗೆ,

ತತ್ತನ್ನಿಷ್ಠತ್ವಂ=ಆಯಾವ ಅವಯವಾದಿಗಳಲ್ಲಿ ಇರುವಿಕೆ ಎನ್ನುವುದು ಧರ್ಮವು. ಗುಣಾದೇಃ=ಗುಣ ಮೊದಲಾದವುಗಳಿಗೆ, ವ್ಯಾಪಿತಾದಿಕಃ=ಆಶ್ರಯವ್ಯಾಪಿತ್ವ ಮೊದಲಾದ, ವಿಶೇಷಃ=ವಿಶೇಷವು, (ಎಲ್ಲಾ ಪದಾರ್ಥಗಳಲ್ಲಿ) ಕಥಂ = ಹೇಗೆ ನೈವಾಸ್ತಿ=ಇಲ್ಲದೆ ಹೋಗುತ್ತದೆ? (ಕೇವಲ ಗುಣಾದಿಗಳು ದ್ರವ್ಯಾದಿಗಳಿಂದ ಭಿನ್ನವೆಂದು ಇಷ್ಟುಮಾತ್ರವಲ್ಲ. ಮತ್ತೆ) ಸ ಚ ಧರ್ಮಃ ಅಪರಃ=ತತ್ತನ್ನಿಷ್ಠತ್ವಮೊದಲಾದ ಧರ್ಮವು ಸ್ವಾಶ್ರಯಕ್ಕಿಂತ ಭಿನ್ನವೆಂದು, ಯದಿ ಅಂಗೀ ಕ್ರಿಯತೇ=ಅಂಗೀಕರಿಸಲ್ಪಡುವುದಾದರೆ, (ನಿರಾಕರಿಸುತ್ತಾರೆ.) ಷಟ್ಪದಾರ್ಥಾತಿರೇಕಃ ಸ್ಯಾತ್=ಹಾಗಾದರೆ ಧರ್ಮಗಳಿಗೆ ಆರು ಪದಾರ್ಥಗಳದ್ದೆಶೆಯಿಂದ ಅತಿರೇಕವು (ಭೇದವು) ಬರಬೇಕಾಗುವುದು. ತಥಾ ಚ ಆರೇ ಪದಾರ್ಥಗಳು ಎನ್ನುವ ನಿಯಮವು ಭಗ್ನವಾಗಬೇಕಾಗುವುದು. ಹಿ=ಯಾವ ಕಾರಣದ್ದೆಶೆಯಿಂದ, ಪದಾರ್ಥಾನಿಯಮೋಽಪಿ=ಪದಾರ್ಥಗಳು ಆರೇ ಎನ್ನುವ ನಿಯಮವು ಇಲ್ಲ ಎನ್ನುವ ಪಕ್ಷದಲ್ಲಿಯೂ, ಧರ್ಮಸ್ಯ=ಧರ್ಮಗಳಿಗೆ, ಧರ್ಮಸಂತಾನಾತ್=ಧರ್ಮಗಳ ಸಮುದಾಯದ್ದೆಶೆಯಿಂದ, ಅನವಸ್ಥಾಕರಃ=ಈ ಪಕ್ಷವು ಅನವಸ್ಥೆಗೆ ಆಶ್ರಯವಾದುದು, ಭವೇತ್=ಆಗುವುದೋ, (ಆದ ಪ್ರಯುಕ್ತ ಧರ್ಮಧರ್ಮಿಗಳಿಗೆ) ಆಶ್ರಯಾಭೇದವನ್ನು ಅವಶ್ಯವಾಗಿ ಅಂಗೀಕರಿಸಬೇಕಾಗಿರುವುದರಿಂದ ಅಲ್ಲಿ ಧರ್ಮಧರ್ಮಿಮೊದಲಾದ ವ್ಯವಹಾರಾನಥ್ಯಾನುಪಪತ್ತಿಯಿಂದ ವಿಶೇಷವನ್ನು ಅಂಗೀಕರಿಸಬೇಕು.

**ತಾ ॥ ನ್ಯಾಯಸುಧಾ**— (1) ಅವಯವಿಗೆ ಅವಯವನಿಷ್ಠತ್ವವೆನ್ನುವ ಧರ್ಮವು ಇದೆ. ರೂಪವೊದಲಾದ ಕೆಲವು ಗುಣಗಳಿಗೆ ಆಶ್ರಯವ್ಯಾಪ್ತಿತ್ವವು, ಸಂಯೋಗ ಮೊದಲಾದ ಕೆಲವು ಗುಣಗಳಿಗೆ ಪ್ರದೇಶ ವೃತ್ತಿತ್ವವು, ರೂಪಾದಿಗಳಿಗೆ ಉದ್ಭೂತತ್ವವು, ಎಲ್ಲಾ ಗುಣಗಳಿಗೆ ಚತುರ್ವಿಂಶತಿತ್ವವು, ಕರ್ಮಕ್ಕೆ ಆಶ್ರಯವ್ಯಾಪಿತ್ವವು, ಅನಿತ್ಯತ್ವವು, ಪಂಚತ್ವವು, ಮೂರ್ತನಿಷ್ಠತ್ವವು, ಸಾಮಾನ್ಯಕ್ಕೂ ಕೂಡ ದ್ರವ್ಯಗುಣಕರ್ಮನಿಷ್ಠತ್ವವು, (ದ್ರವ್ಯಗುಣ ಕರ್ಮಗಳಲ್ಲಿರುವಿಕೆಯು) ನಿತ್ಯತ್ವವು, ಅನುಗತತ್ವವು, ದ್ವೈವಿಧ್ಯವು – ಹೀಗೆ ಪದಾರ್ಥಧರ್ಮಸಮೂಹವು ಅತಿಬಹುಲವಿದೆ. ಈ ಪದಾರ್ಥಧರ್ಮಸಮೂಹವು ಆಶ್ರಯದ್ದೆಶೆಯಿಂದ ಭಿನ್ನವೇ ಎನ್ನುವುದು ಯುಕ್ತವಲ್ಲ. ಧರ್ಮಧರ್ಮ್ಯಾದಿ ವ್ಯವಹಾರವು ಇದೆ. 'ತಂತುಷು ಪಟಃ' ಎನ್ನುವಾಗ ಪಟವಲ್ಲಿ ಅವಯವನಿಷ್ಠತ್ವವು ಧರ್ಮವಾಗಿ ಪ್ರತೀತವಾಗುತ್ತದೆ. ಪಟವು ಘಟವಾಗುವುದಿಲ್ಲ ಇತ್ಯಾದಿ ವ್ಯವಹಾರವು ಇದೆ. ಈ ವ್ಯವಹಾರವಾದರೂ ಅತ್ಯಂತಾಭೇದವಿದ್ದರೆ ಕೂಡದಿರುವುದು ತತ್ನನ್ನು ಉಪಪಾದಿಸತಕ್ಕ ವಿಶೇಷವನ್ನು ತಿಳಿಸಿಕೊಡುತ್ತದೆ. ಆದುದರಿಂದ ಎಲ್ಲಾ ಪದಾರ್ಥಗಳಲ್ಲಿಯೂ ವಿಶೇಷವಿಲ್ಲದಿರುವುದು ಹೇಗೆಂದರೆ— ಸತ್ಯವೇ. ದ್ರವ್ಯ ಮೊದಲಾದ ಆರು ಪದಾರ್ಥಗಳಲ್ಲಿಯೂ ಆಯಾವ ಧರ್ಮಗಳು ಇವೆ. ಆದರೆ ಆಶ್ರಯದ್ದೆಶೆಯಿಂದ ಭಿನ್ನಗಳೇ ಸರಿ. ತಥಾಚ ಆಯಾವ ವಸ್ತುಗಳ ಸಂಬಂಧಪ್ರಯುಕ್ತವೇ ಕೂಡತಕ್ಕ ವ್ಯವಹಾರವು ಸರ್ವಪದಾರ್ಥಗಳಲ್ಲಿ ವಿಶೇಷವನ್ನು ಆಕ್ಷೇಪಿಸಲಿಕ್ಕೆ ಸಮರ್ಥವಲ್ಲ ಎನ್ನುವ ಅಭಿಪ್ರಾಯದಿಂದ 'ಸ ಚ ಧರ್ಮೋಽಪರೋ ಯದಿ' ಎನ್ನುವುದರಿಂದ ಶಂಕಿಸಿದರು. (2) 'ಷಟ್ಪದಾರ್ಥಾತಿರೇಕಃ ಸ್ಯಾತ್' ಎನ್ನುವುದರಿಂದ ನಿರಾಕರಿಸಿದರು. ಹೇಗೆಂದರೆ— ಧರ್ಮಗಳು ಆರು ಪದಾರ್ಥಗಳಿಂದ ಬೇರೆಯಾದರೆ, ಆರೇ ಪದಾರ್ಥಗಳು ಎನ್ನುವ ನಿಯಮವು ಭಗ್ನವಾಗುವುದು. (3) ಹಾಗಾದರೆ ಸ್ವಾಶ್ರಯಕ್ಕಿಂತ ಧರ್ಮಗಳು ವಿಭಿನ್ನಗಳಾದಾಗ್ಯೂ ಆರು ಪದಾರ್ಥಗಳಿಂದ ಭಿನ್ನಗಳಲ್ಲ. ಮತ್ತೆ ತಂತ್ವಾದಿಗಳೇ ಪರಸ್ಪರ ವಿಶೇಷಣೀಭೂತಗಳಾದ ಧರ್ಮಗಳೆನ್ನಿಸುತ್ತವೆ. ತಥಾಚ ಅನ್ಯೋನ್ಯಾಪೇಕ್ಷೆಯಿಂದ ಧರ್ಮಗಳೂ ಧರ್ಮಿಗಳೂ ಆಗುತ್ತವೆ. ಆದ ಪ್ರಯುಕ್ತ ಆರೇ ಎನ್ನುವ ನಿಯಮಭಂಗವು ಹೇಗೆಂದರೆ—ಹೀಗೆ ಹೇಳಕೂಡದು. ತನ್ನಿಷ್ಠತ್ವ

ಮೊದಲಾದ ಧರ್ಮಗಳಿಗೆ ಆರು ಪದಾರ್ಥಗಳಲ್ಲಿ ಅಂತರ್ಭಾವ ಹೇಳಲಿಕ್ಕೆ ಅಶಕ್ಯವಾಗಿದೆ. ಹೇಗೆಂದರೆ— 'ಆಶ್ರಿತತ್ವಂಚಾನ್ಯತ್ರ ನಿತ್ಯದ್ರವ್ಯೇಭ್ಯಃ' ಎನ್ನುವುದರಿಂದ ಕಾರ್ಯದ್ರವ್ಯ-ಗುಣ-ಕರ್ಮ ಸಾಮಾನ್ಯ ವಿಶೇಷ ಸಮವಾಯಗಳಿಗೆ ಅವಯವಗುಣ್ಯಾದಿಗಳಲ್ಲಿರುವಿಕೆಯನ್ನು ಅಂಗೀಕರಿಸಿರುವರು. ಆ ಅವಯವ ಗುಣ್ಯಾದಿನಿಷ್ಠತ್ವವು ದ್ರವ್ಯ-ಗುಣ-ಕರ್ಮ-ಸಾಮಾನ್ಯ ವಿಶೇಷರೂಪವಲ್ಲ. ಗುಣಾದಿ ವಿಶೇಷಾಂತ ಪದಾರ್ಥಸಮೂಹದಲ್ಲಿಯೂ ಸ್ವಸ್ವಾಶ್ರಯನಿಷ್ಠತ್ವವು ಇದ್ದ ಪ್ರಯುಕ್ತ ಗುಣಾದಿಗಳಲ್ಲಿ ಇರುತ್ತದೆನ್ನುವುದು ಕೂಡಲಾರದು. ಸಮವಾಯರೂಪವೂಅಲ್ಲ. ಸಮವಾಯಕ್ಕೆ ಸಮವಾಯವೃತ್ತಿತ್ವವುಕೂಡಲಾರದು. ಅಭಾವದಲ್ಲಿ ಅಭಾವವಿದೆ ಎನ್ನುವುದನ್ನು ಮುಂದಕ್ಕೆ ನಿರಾಕರಿಸುವುದರಿಂದ ಅಲ್ಲಿ ಅತಂರ್ಭಾವವೂ ಯುಕ್ತವಲ್ಲ. ಹೀಗೆಯೇ ನಿತ್ಯತ್ವ ಅನುಗತತ್ವಮೊದಲಾದ ಧರ್ಮಾಂತರಗಳಿಗೂ ಗುಣಾದಿವೃತ್ತಿತ್ವವು ಕೂಡದಿರುವುದರಿಂದ ದ್ರವ್ಯಾದಿಗಳಲ್ಲಿ ಅಂತರ್ಭಾವವನ್ನು ನಿರಾಕರಿಸಬೇಕು. ಆದಕಾರಣ ಅವಯವ ನಿಷ್ಠತ್ವ, ಗುಣ್ಯಾದಿ ನಿಷ್ಠತ್ವ ಮೊದಲಾದವುಗಳು ದ್ರವ್ಯಾದಿಗಳ ಧರ್ಮಗಳು, ದ್ರವ್ಯಾದಿಗಳ ಸ್ವರೂಪಗಳೆಂದೇ ಅಂಗೀಕರಿಸಬೇಕು. ತಥಾಚ 'ಭಾವಸ್ಯ ಸ್ವರೂಪಮೇವಾವಸ್ಥಾ ಭೇದೇನಾಸ್ತಿತ್ವಂ ಜ್ಞೇಯತ್ವಮಭಿಧೇಯತ್ವಂ ಚೋಚ್ಯತೇ' ಎಂದು ಹೇಳಿರುವರು. ವಿಶೇಷವನ್ನು ಹೊರತು ಅವಸ್ಥಾಭೇದವನ್ನು ನಿರೂಪಿಸಲಿಕ್ಕೆ ಸಾಧ್ಯವಿಲ್ಲ. (4) ಹಾಗಾದರೆ ಧರ್ಮಗಳು ಧರ್ಮಿಗಳಿಂದ ಭಿನ್ನಗಳೇ. ಹಿಂದೆ ಹೇಳಿದ ದೋಷವು ಬರುವುದಿಲ್ಲ. ಪರಮಾಣುವಿನಿಂದಲೇ ಜಗದುತ್ಪತ್ತಿಯು ಎಂದು ಹೇಳುವ ನೈಯಾಯಿಕಾದಿಗಳು ಆರೇ ಪದಾರ್ಥಗಳು ಎನ್ನುವ ನಿಯಮವನ್ನು ಅಂಗೀಕರಿಸಲಿಲ್ಲ. ತದ್ಗತತ್ವಮೊದಲಾದ ಹಿಂದೆ ಹೇಳಿದ ಧರ್ಮಪದಾರ್ಥವನ್ನು ಪ್ರತ್ಯೇಕವೆಂದು ಅಂಗೀಕರಿಸಿರುವರು. ತಥಾಚ ಭಿನ್ನಧರ್ಮಗಳ ಸಂಸರ್ಗವಶದಿಂದ ಎಲ್ಲಾ ವ್ಯವಹಾರವು ಕೂಡುವುದರಿಂದ ಅನ್ಯಥಾನುಪಪತ್ತಿಯಿಲ್ಲ. ಆದುದರಿಂದ ವಿಶೇಷ ಸಿದ್ಧಿಯಾಗುವುದಿಲ್ಲ ಎಂದಾಶಂಕಿಸಿದರೆ ಧರ್ಮಪದಾರ್ಥವು ದ್ರವ್ಯಾದಿಗಳಿಂದ ಭಿನ್ನವೆಂದು ಅಂಗೀಕರಿಸುವವನನ್ನು ಕುರಿತು ಪ್ರಶ್ನಿಸಬೇಕು. ಅಸ್ತಿತ್ವಾದಿ ಧರ್ಮಗಳಲ್ಲಿಯೂ ಅಸ್ತಿತ್ವಾದಿಗಳು ೧ ಇವೆಯೋ, ೨ ಇಲ್ಲವೋ? ಇಲ್ಲವೆನ್ನುವ ೨ನೇ ಪಕ್ಷದಲ್ಲಿ ಅನುಭವ ವಿರೋಧವು, ಮತ್ತು ಅಸ್ತಿತ್ವವು ಜ್ಞೇಯವಲ್ಲ, ಅಭಿದೇಯವಲ್ಲ ಎಂದು ಸ್ವಕ್ರಿಯಾವಿರೋಧವು. ಇಲ್ಲವಾದರೆ ದ್ರವ್ಯಾದಿಗಳಲ್ಲಿಯೂ ಅಸ್ತಿತ್ವಾದಿಗಳು ಇಲ್ಲದೆ ಹೋಗಬೇಕಾಗುವವು. ಅಸ್ತಿತ್ವಾದಿಗಳು ಇವೆ ಎನ್ನುವ ೧ನೇ ಕಲ್ಪದಲ್ಲಿ ಆ ಅಸ್ತಿತ್ವಾದಿಗಳು ಆಶ್ರಯದಿಂದ ೧ ಭಿನ್ನವೋ, ೨ ಅಭಿನ್ನವೋ, ೧ನೇ ಕಲ್ಪದಲ್ಲಿ ಅಲ್ಲಿಯೂ ಮತ್ತೊಂದು ಅಸ್ತಿತ್ವಾದಿಗಳು. ಹೀಗೆ ಅನವಸ್ಥೆಯು ಬರುವುದು, ಅಭಿನ್ನವೆನ್ನುವ ೨ನೇ ಕಲ್ಪದಲ್ಲಿ ಅಸ್ತಿತ್ವದಂತೆ ಅಲ್ಲಿಯೂ ಧರ್ಮಧರ್ಮ್ಯಾದಿ ವ್ಯವಹಾರವು. ಆ ವ್ಯವಹಾರವು ಕೂಡದಿರುವುದಕ್ಕಾಗಿ ವಿಶೇಷವನ್ನು ಹೊಂದಿಸಿಕೊಡುತ್ತದೆ. (5) ಮತ್ತು ಧರ್ಮದಲ್ಲಿರತಕ್ಕ ಧರ್ಮಗಳೂ ಆಶ್ರಯದಿಂದ ಅಭಿನ್ನಗಳಾದರೆ ಆಗ ದ್ರವ್ಯಾದಿಗಳಲ್ಲಿರತಕ್ಕ ಅಸ್ತಿತ್ವಾದಿ ಧರ್ಮಗಳು ಏನು ಅಪರಾಧಮಾಡಿರುವವು? ಅವುಗಳು ದ್ರವ್ಯಾದಿಗಳಿಂದ ಹೇಗೆ ಭಿನ್ನಗಳಾಗುವವು? ಯೋಗಕ್ಷೇಮವು ಸಮವೇ ಆಗಿದೆ, ಆದಕಾರಣ ಆ ಧರ್ಮಗಳಿಗೇನೇ ದ್ರವ್ಯಾದಿಗಳಿಂದ ಅಭೇದವಿರಲು ಪುನಃ ವ್ಯವಹಾರವು ಬೇರೆಪ್ರಕಾರ ಕೂಡದಿರುತ್ತಿರಲು, ದ್ರವ್ಯಾದಿಗಳಲ್ಲಿಯೇ ವಿಶೇಷವು ಸಿದ್ಧಿಸುವುದು. ॥ ೧೦೨ ॥ ೧೦೩ ॥ ೧೦೪ ॥

ಹಾಗಾದರೆ ದ್ರವ್ಯಾದಿ ಧರ್ಮಗಳಾದ ಅಸ್ತಿತ್ವಾದಿಗಳಲ್ಲಿಯೂ ಕೂಡ ಅಸ್ತಿತ್ವಾದಿಗಳು ಇವೆ. ಅವುಗಳು ಆಶ್ರಯದಿಂದ ಭಿನ್ನಗಳೇ. ಹೀಗಾದರೆ ಧರ್ಮಕ್ಕೆ ನಿರವಧಿಕವಾದ ಧರ್ಮಗಳ ಸಂತಾನದಿಂದ ಅನವಸ್ಥಾದೋಷವಿಲ್ಲ. ಉತ್ಪತ್ತಿಪ್ರತಿಬಂಧಕತ್ವವಾಗಲೀ ಜ್ಞಪ್ತಿಪ್ರತಿಬಂಧಕತ್ವವಾಗಲೀ ಇಲ್ಲದಿರುವುದರಿಂದ ದೋಷತ್ವವೇ ಇಲ್ಲ. 'ಮೂಲಕ್ಷಯಕರೀಂ ಪ್ರಾಹುರನವಸ್ಥಾಂ ಹಿ ದೂಷಣಂ'

ಎಂದು ಹೇಳಿರುವರು. ಯಾವುದಕ್ಕಾಗಿ ಉತ್ತರೋತ್ತರವನ್ನು ಅನುಸರಿಸುವುದೋ ಅದು ಮೂಲವು. ಉತ್ಪತ್ತಿಯು, ಅಥವಾ ಜ್ಞಪ್ತಿಯು, ಅನವಸ್ಥಾದೋಷವು ಮೂಲಕ್ಷಯವನ್ನು ಮಾಡ ತಕ್ಕದ್ದಾಗದೆ ಇರುವುದರಿಂದ ಧರ್ಮಗಳಿಗೆ ಆಶ್ರಯುದ್ದೇಶಿಯಿಂದ ಭಿನ್ನತ್ವರೂಪಹೇತುವಿನಿಂದ ಕೂಡತಕ್ಕ ವ್ಯವಹಾರವು ವಿಶೇಷವನ್ನು ಆಕ್ಷೇಪಿಸಲಿಕ್ಕೆ ಸಮರ್ಥವಲ್ಲ ಎಂದರೆ—

**ಮ:ೂ || ಸಾಮಾನ್ಯಸ್ಯಾಪಿ ಸಾಮಾನ್ಯಂ ಗುಣಸ್ಯಾಪಿ ಗುಣೋ ಹ್ಯತಃ ।**
**ನಾಂಗೀಕೃತಃ ಸ ಚ ಯದಿ ನಾನವಸ್ಥಾ ಕ್ವಚಿದ್ಭವೇತ್ || ೧೦೫ ||**

ಅ || ಸಾಮಾನ್ಯಸ್ಯಾಪಿ = ಗೋತ್ವಮೊದಲಾದ ಸಾಮಾನ್ಯಕ್ಕೂ, ಸಾಮಾನ್ಯಂ = ಸತ್ತಾ ರೂಪವಾದುದು, ಗುಣಸ್ಯಾಪಿ = ರೂಪಾದಿಗಳಿಗೂ, ಗುಣಃ = ಸಂಖ್ಯಾಪೃಥಕ್ತ್ವಮೊದಲಾದ ಗುಣವು, ಅತೋ ಹಿ = ಅನವಸ್ಥಾಭಯದಿಂದಲೇ, ನಾಂಗೀಕೃತಃ = ಅಂಗೀಕರಿಸಲ್ಪಡಲಿಲ್ಲ. (ನಿರ್ಬಾಧಪ್ರತೀತಿಸಿದ್ಧವಾಗಿರುವುದರಿಂದ ಸಾಮಾನ್ಯಕ್ಕೂ ಸಾಮಾನ್ಯವೂ, ಗುಣಕ್ಕೂ ಗುಣವೂ ಇದ್ದೇ ಇದೆ. ಉತ್ಪತ್ತಿ ಜ್ಞಪ್ತಿಗಳ ಅಪ್ರತಿಬಂಧಕ್ಕೆ ಹೇತುವಾದ ಅನವಸ್ಥಾಕ್ಕೆ ದೋಷತ್ವವೇ ಕೂಡಲಾರದು. ಆದಕಾರಣ ಈ ನ್ಯಾಯದಿಂದ ಅನವಸ್ಥಾಭಯದಿಂದ ಧರ್ಮ ಪರಂಪರೆಯನ್ನು ನಿವಾರಿಸಕೂಡದು, ಎಂದರೆ) ಸ ಚ = ಗುಣಕ್ಕೂ ಗುಣವು, ಸಾಮಾನ್ಯಕ್ಕೂ ಸಾಮಾನ್ಯವು, ಯದಿ = ಅಂಗೀಕರಿಸಲ್ಪಡುವುದಾದರೆ, ಅನವಸ್ಥಾ = ಅನವಸ್ಥಾದೋಷವು, ಕ್ವಚಿತ್ = ಎಲ್ಲಿಯೂ, ನ ಭವೇತ್ = ಆಗಲಾರದು.

ತಾ || (1) ಪರರು ಸಾಮಾನ್ಯಕ್ಕೂ ಸಾಮಾನ್ಯವನ್ನೂ, ಗುಣಕ್ಕೂ ಗುಣವನ್ನೂ ಅಂಗೀಕರಿಸಲಿಲ್ಲ ಅವಕ್ಕೆ ಕಾರಣವೇನೆಂದು ಕೇಳಬೇಕು. ಪ್ರತೀತಿ ಇಲ್ಲವಿರುವುದರಿಂದ ಅಂಗೀಕರಿಸಲಿಲ್ಲ ಎಂದು ಹೇಳಕೂಡದು. 'ಗೋತ್ವಂ ಸತ್, ಚತುರ್ವಿಂಶತಿರ್ಗುಣಾಃ, ರೂಪಾತ್ ರಸಃ ಪೃಥಕ್' ಎನ್ನುವ ಪ್ರತೀತಿಯನ್ನು ಬಿಡಲು ಸಾಧ್ಯವೇ ಇಲ್ಲ. 'ಗೋತ್ವಂ ಸತ್ ನ' ಇತ್ಯಾದಿ ಬಾಧಕಗಳೂ ಇಲ್ಲ ಪ್ರತೀತವಾದುವನ್ನು ಬಿಡುವುದು ಹೇಗೆ? ೧ ಗೋತ್ವಂ ನ ಸತ್ತಾವತ್ ಅಪರ ಸಾಮಾನ್ಯಶೂನ್ಯತ್ವಾತ್ ವಿಶೇಷವತ್ = ಗೋತ್ವವು ಸತ್ತಾವುಳ್ಳದ್ದಲ್ಲ ಅಪರ ಸಾಮಾನ್ಯವಿಲ್ಲದಿರುವುದರಿಂದ ವಿಶೇಷದಂತೆ. ೨ ಗುಣಾಃ ನ ಗುಣವಂತಃ ಅದ್ರವ್ಯತ್ವಾತ್ ಕ್ರಿಯಾವತ್ = ಗುಣಗಳು ಗುಣಗಳುಳ್ಳವುಗಳಲ್ಲ. ದ್ರವ್ಯವಾಗದಿರುವುದರಿಂದ ಕ್ರಿಯೆಯಂತೆ, ಇದುಮೊದಲಾದ ಬಾಧಕಗಳು ಇವೆ ಎಂದು ಹೇಳಕೂಡದು. ವಿವಕ್ಷದಲ್ಲಿ ಬಾಧಕವಿಲ್ಲದಿರುವುದರಿಂದ ಅಪ್ರಯೋಜಕಗಳಾಗಿವೆ. ದೃಷ್ಟಾಂತಗಳಲ್ಲಿ ಸಾಧ್ಯವೈಕಲ್ಯವೂ ಇದೆ. ಆದಕಾರಣ ಸಾಮಾನ್ಯದಲ್ಲಿ ಸಾಮಾನ್ಯವನ್ನು, ಗುಣದಲ್ಲಿ ಗುಣವನ್ನು ಅನವಸ್ಥಾಭಯದಿಂದಲೇ ಅಂಗೀಕರಿಸುವುದಿಲ್ಲ ಎಂದೇ ಹೇಳಬೇಕು. (2) ಯಾರಾದರೊಬ್ಬನು ಧೈರ್ಯದಿಂದ ಸಾಮಾನ್ಯದಲ್ಲಿಯೂ ಸಾಮಾನ್ಯವೂ, ಗುಣದಲ್ಲಿಯೂ ಗುಣವು ನಿರ್ಬಾಧಪ್ರತೀತಿಸಿದ್ಧವಾಗಿರುವುದರಿಂದ ಅದೆ. ಉತ್ಪತ್ತಿ ಜ್ಞಪ್ತಿಗಳ ಅಪ್ರತಿಬಂಧಕ್ಕೆ ಕಾರಣವಾದ ಅನವಸ್ಥೆಯು ದೋಷವೇ ಆಗುವುದಿಲ್ಲ. ಆದಪ್ರಯುಕ್ತ ಈ ನ್ಯಾಯದಿಂದ ಧರ್ಮಪರಂಪರೆಯನ್ನು ಅನವಸ್ಥಾಭಯದಿಂದ ನಿವಾರಿಸಕೂಡದು ಎಂದರೆ— ಹೀಗೆ ಹೇಳುವವನು ಎಲ್ಲಿಯಾದರೂ ಅನವಸ್ಥಾದೋಷವನ್ನು ೧ ಅಂಗೀಕರಿಸುತ್ತಾನೋ, ೨ ಇಲ್ಲವೋ? ೨ ಅಂಗೀಕರಿಸದಿದ್ದರೆ ಬೇರೆ ದೋಷವನ್ನೂ ಅಂಗೀಕರಿಸಲಾರನು ವಿಶೇಷ ವಿಲ್ಲವಿರುವುದರಿಂದ ತಥಾಚ ಕಥೆಯಲ್ಲಿ ಅಧಿಕಾರಿಯು ಆಗಲಾರನು. ೧ನೇದ್ದು ಕೂಡ ಲಾರದು. ಧರ್ಮಾನವಸ್ಥಾ, ಸಾಮಾನ್ಯಾನವಸ್ಥಾ, ಗುಣಾನವಸ್ಥಾ ಇವುಗಳು ದೋಷಗಳಾಗಿದ್ದರೆ ವಿಶೇಷಹೇತುವಿಲ್ಲದಿರುವುದರಿಂದ ಈ ಅನವಸ್ಥೆಗೂ ದೋಷತ್ವವು ಕೂಡದೆ ಹೋಗುವುದು.

ಆದುದರಿಂದ ಪ್ರಾಮಾಣಿಕ ಪರಿತ್ಯಾಗರೂಪವೂ ಅಥವಾ ಅಪ್ರಾಮಾಣಿಕ ಪರಿಗ್ರಹರೂಪವೂ, ಅಥವಾ ಅದಕ್ಕೆ ಕಾರಣವಾದ ಅನವಚ್ಛಿನ್ನಪರಂಪರೆಯು ಅನವಸ್ಥೆಯು ಎಂದು ಹೇಳಬೇಕು. ಆದುದರಿಂದಲೇ ಅತಿಪ್ರಸಂಗವಿಲ್ಲ. ತಥಾ ಚ ಧರ್ಮಪರಂಪರೆಯೂ ಅನವಸ್ಥೆಯು ಆಗಿರುವುದರಿಂದ ಅಭೇದವನ್ನೇ ಅಂಗೀಕರಿಸಬೇಕು. ಏವಂ ಚ ಹಿಂದೆ ಹೇಳಿದ ನ್ಯಾಯದಿಂದ ವ್ಯವಹಾರಾನ್ಯಥಾನುಪಪತ್ತಿಯಿಂದ ವಿಶೇಷವು ಸಿದ್ಧಿಸುತ್ತದೆ ॥ ೧೦೫ ॥

## ವ್ಯವಹಾರಾನ್ಯಥಾನುಪಪತ್ತಿರೂಪವಾದ ಅರ್ಥಾಪತ್ತಿಯಿಂದ ವಿಶೇಷಸಮರ್ಥನವು.

ಯಾವನು ಧರ್ಮಧರ್ಮಿಗಳಿಗೆ ಭೇದವನ್ನೂ ಸಮವಾಯವನ್ನೂ ಅಂಗೀಕರಿಸಿ ಅಭೇದವನ್ನೂ ವಿಶೇಷವನ್ನೂ ತಿರಸ್ಕರಿಸುತ್ತಾನೋ ಅನವಸ್ಥೆಯಿಂದ ಹೆದರತಕ್ಕ ಆತನು ಗುಣಸಾಮಾನ್ಯಗಳಲ್ಲಿ ಗುಣಸಾಮಾನ್ಯ ಪ್ರತೀತಿಯನ್ನೇ ಅಪಲಾಪ ಮಾಡಬೇಕು. ಬಾಧಕವಿಲ್ಲದೇನೇ ಭ್ರಾಂತಿ ಎನ್ನಬೇಕು. ಪ್ರತೀತ್ಯಪಲಾಪಗಳಿಂದಲಾಗಲೀ ಹೆದರುವವನಿಗೆ ಅನವಸ್ಥೆಯು ಬರುವುದು. ಹೀಗೆ ಪ್ರತೀತಿ ತದಭ್ರಾಂತಿತ್ವಗಳನ್ನು ಕೂಡಿಸಲಿಕ್ಕೆ ಇಚ್ಛಿಸುವವನಿಗೆ ಅನವಸ್ಥಾರಾಹಿತ್ಯವು ತಪ್ಪುತ್ತದೆ. ಅಭೇದವನ್ನೂ ವಿಶೇಷವನ್ನೂ ಅಂಗೀಕರಿಸುವವರಿಗೆ ಈ ಎರಡುದೋಷಗಳೂ ಬರುವುದಿಲ್ಲ. ಆದುದರಿಂದಲೂ ಅದರಲ್ಲಿ ಪಕ್ಷಪಾತವು ಎಂದಭಿಪ್ರಾಯವುಳ್ಳವರಾಗಿ ಹೇಳುತ್ತಾರೆ.

**ಮೂ ॥ ಅಸ್ಮತ್ಪಕ್ಷೇ ಗುಣಾದ್ಯಾಶ್ಚ ತದ್ವಂತೋ ಹಿ ವಿಶೇಷತಃ ।**
**ಅನನ್ಯತ್ವಾನ್ನಾನವಸ್ಥಾ ಭೇದೇ ನಾಶೇ ಭವೇತ್ತಥಾ ॥ ೧೦೬ ॥**

ಅ ॥ ಅಸ್ಮತ್ಪಕ್ಷೇ=ಧರ್ಮಧರ್ಮಿಗಳಿಗೆ ಸವಿಶೇಷಾಭೇದವನ್ನು ಹೇಳುವ ನಮ್ಮ ಪಕ್ಷದಲ್ಲಿ, ಗುಣಾದ್ಯಾಶ್ಚ=ಗುಣಗಳೂ ಸಾಮಾನ್ಯಗಳೂ, ತದ್ವಂತಃ=ಗುಣವುಳ್ಳವುಗಳು, ಸಾಮಾನ್ಯವುಳ್ಳವುಗಳು. (ಅದರಿಂದ ಗುಣಾಃ ಚತುರ್ವಿಂಶತಿಃ, 'ಸತ್ ಗೋತ್ವಂ' ಇದು ಮೊದಲಾದ ಪ್ರತೀತಿವಿರೋಧವಿಲ್ಲ.) ಅನನ್ಯತ್ವಾತ್ = (ಧರ್ಮಧರ್ಮಿಗಳಿಗೆ,) ಅಭೇದವಿದ್ಧಪ್ರಯುಕ್ತ, ಅನವಸ್ಥಾ=ಅಪ್ರಾಮಾಣಿಕಾಪರ್ಯವಸಿತ ಪರಂಪರಾರೂಪವಾದ, ಧರ್ಮಪರಂಪರೆರೂಪವಾದ ಅನವಸ್ಥೆಯು, ನ=ಇಲ್ಲ (ಅಭೇದವಿದ್ದರೆ 'ತದ್ವಂತಃ' ಎನ್ನುವುದು ಹೇಗೆ ಕೂಡುತ್ತದೆ? ಹೀಗೆ ಪ್ರತೀತಿವಿರೋಧವು ಉಂಟೇ ಉಂಟು ಎಂದಾಶಂಕಿಸಿದರೆ) ವಿಶೇಷತೋ ಹಿ=ಭೇದಸಂಬಂಧಕಾರ್ಯಕಾರಿರೂಪವಾದ ವಿಶೇಷದಿಂದಲೇ, ತದ್ವಂತಃ=ಗುಣ ಮತ್ತು ಸಾಮಾನ್ಯವುಳ್ಳವುಗಳು. (ಹೀಗೆ ಅವಯವ ಅವಯವ್ಯಾದಿಗಳಿಗೆ ಅಭೇದವನ್ನು ನಿರೂಪಿಸಿದರು. ಈಗ ಕೆಲವುಕಡೆ ಭೇದಾಭೇದಗಳೂ ಇರುತ್ತವೆ ಎಂದು ಅದಕ್ಕೆ ಅಪವಾದವನ್ನು ಹೇಳುತ್ತಾರೆ. ಅಥವಾ ಅವಯವ್ಯಾದಿಗಳು ಅವಯವಾದಿಗಳಿಂದ ಅಭಿನ್ನಗಳಾದರೆ ಅವಯವಾದಿಗಳು ಇರುವಾಗಲೇ ಹೇಗೆ ನಷ್ಟಗಳಾಗುತ್ತವೆ ಎಂದರೆ) ನಾಶೇ=ಅವಯವಾದಿಗಳು ಇರುವಾಗಲೇ ಅವಯವ್ಯಾದಿಗಳಿಗೆ ನಾಶವಾಗುವಾಗ, ಭೇದಃ ತಥಾ=ಭೇದವೂ ಅಭೇದವೂ ಕೂಡ, ಭವೇತ್=ಆಗುವುದು. (ನಾಶ ಎನ್ನುವುದು ಉಪಲಕ್ಷಣವು ಮತ್ತು ಎಲ್ಲಿ ಅವಯವಗಳು ಇರುವಾಗಲೇ ಅವಯವಿಯು ಇಲ್ಲವೋ, ಗುಣಿಯು ಇರುವಾಗಲೇ ಅವಯವಿಯು ಇಲ್ಲವೋ, ಗುಣಿಯು ಇರುವಾಗ ಗುಣವು ಇಲ್ಲವೋ ಅಲ್ಲಿ ಭೇದಾಭೇದಗಳು ಮತ್ತು ಎಲ್ಲಿ ಆಶ್ರಯವಿದ್ದರೂ ಕ್ರಿಯೆಯು ಇಲ್ಲವೋ, ವ್ಯಕ್ತಿಯಿದ್ದರೂ ಜಾತಿಯಿಲ್ಲವೋ ಅಲ್ಲಿಯೂ ಭೇದಾಭೇದಗಳು.) ನಾಶ ಎನ್ನುವ ಪದವು ಅಭಾವಕ್ಕೆ ಉಪಲಕ್ಷಣವೆಂದಂಗೀಕರಿಸಿದ್ದರೆ ಎಲ್ಲಿ ಅವಯವ ಅವಯವ್ಯಾದಿಗಳಿಗೆ ಏಕಕಾಲದಲ್ಲಿ ವಿನಾಶವಿದೆಯೋ ಅಲ್ಲಿ ಭೇದಾಭೇದಗಳನ್ನು ಹೇಳಿದ್ದು ಕೂಡದೆಹೋಗುವುದು.) ॥ ೧೦೬ ॥

ಹಾಗಾದರೆ ಒಂದು ಕಡೆ ಭೇದಾಭೇದಗಳು ವಿರುದ್ಧಗಳು. ಆದುದರಿಂದ ಆಶ್ರಯವಿರುವ ತನಕ ಇಲ್ಲದಿರುವ ಗುಣಕರ್ಮಸಾಮಾನ್ಯಗಳಿಗೆ ಅವಯವಾದಿಗಳಿಂದ ಭೇದಾಭೇದಾಂಗೀಕಾರವು ಹೇಗೆ ಕೂಡುತ್ತದೆಂದರೆ—

**ಮೂ ॥ ವಿಶೇಷಮೇವ ಸಂಶ್ರಿತ್ಯ ವಿಶೇಷೋ ಬಲವಾನ್ಯತಃ ॥ ೧೧೭ ॥**
**ದೃಷ್ಟಿಪ್ರಮಾಣತಶ್ಚೈವ ವಿರೋಧೋ ದರ್ಶನೇ ಕಥಂ ।**
**ವಿರೋಧೋ ಹ್ಯವಿರೋಧಶ್ಚ ಯತೋ ದರ್ಶನಮಾನಕೌ ।**
**ತತೋ ದೃಷ್ಟೇ ವಿರೋಧಸ್ತು ಸದ್ಭಿರಾಪಾದ್ಯತೇ ಕಥಂ ॥ ೧೧೮ ॥**

ಅ ॥ ಯತಃ=ಯಾವಕಾರಣದ್ದೆಶೆಯಿಂದ, ವಿಶೇಷಃ=ವಿಶೇಷವು, ಬಲವಾನ್=ಭೇದ ಕಾರ್ಯವನ್ನು ಮಾಡುವುದರಲ್ಲಿ ಪ್ರಬಲವಾದುದೋ, (ಆದುದರಿಂದ)ವಿಶೇಷಮೇವ=ವಿಶೇಷವನ್ನೇ, ಸಂಶ್ರಿತ್ಯ=ಆಶ್ರಯಿಸಿಕೊಂಡು, (ಭೇದಾಭೇದಗಳು ಒಂದು ಕಡೆ ಕೂಡುತ್ತವೆ) (ಭೇದಪ್ರತಿನಿಧಿ ಯಾದುದು ವಿಶೇಷವು ಎಂದುಕ್ತವಾಗಿದೆ. ಆದುದರಿಂದ ಈ ವಿಶೇಷವು ಭೇದಾಭೇದಗಳನ್ನು ಏಕಕಾಲದಲ್ಲಿಯೇ ಒಂದೇ ಕಡೆ ಹೇಗೆ ಕೂಡಿಸಲಾರದು? ಹೀಗಾದರೆ ಅತಿಪ್ರಸಂಗವು. ಎಲ್ಲಾ ಕಡೆಗಳಲ್ಲಿಯೂ ವಿಶೇಷವನ್ನು ಆಶ್ರಯಿಸಿ ವಿರೋಧವನ್ನು ಪರಿಹರಿಸಲಿಕ್ಕೆ ಶಕ್ಯವಾಗುವುದು ಎಂದರೆ) ದೃಷ್ಟಿಪ್ರಮಾಣತಶ್ಚೈವ=ವಿಶೇಷಸಹಿತವಾದ ಪ್ರಮಾಣಭೂತವಾದ ಪ್ರತ್ಯಕ್ಷದಿಂದಲೇ, (ಭೇದಾಭೇದಗಳು ವಿರುದ್ಧಗಳಲ್ಲ.) (ಹಾಗಾದರೆ ಭೇದಾಭೇದಗಳು ಒಂದೇ ಕಡೆ ಏಕಕಾಲ ದಲ್ಲಿಯೇ ಪ್ರಮಿತಗಳಾಗಲಿ, ಆದಾಗ್ಯೂ ವಿರೋಧಶಾಂತಿಯು ಹೇಗೆ ಆಗುವುದು ಎಂದರೆ) ದರ್ಶನೇ=ಒಟ್ಟಿಗೆ ದರ್ಶನವಿರಲು, ವಿರೋಧಃ=ವಿರೋಧವು, ಕಥಂ=ಹೇಗೆ, (ಹೇಳಲಿಕ್ಕೆ ಶಕ್ಯ ವಾಗುತ್ತದೆ. ಒಟ್ಟಿಗೆ ಕಾಣುತ್ತವೆ, ವಿರುದ್ಧಗಳೂ ಆಗಿವೆ ಎನ್ನುವುದು ವಿಪ್ರತಿಷಿದ್ಧವು.) (ಇದನ್ನೇ ವಿವರಿಸುತ್ತಾರೆ.) ಯತಃ=ಯಾವಕಾರಣದ್ದೆಶೆಯಿಂದ, ವಿರೋಧಃ=ವಿರೋಧವು, ಅವಿರೋಧಶ್ಚ= ಅವಿರೋಧವೂ ಕೂಡ, ದರ್ಶನಮಾನಕೌ ಹಿ=ಪ್ರತ್ಯಕ್ಷವೇ ಪ್ರಮಾಣವಾಗಿ ಉಳ್ಳವುಗಳೋ, ತತಃ=ಆದಕಾರಣ, ದೃಷ್ಟೇ=ಒಟ್ಟಿಗೆ ಕಂಡ ಭೇದಾಭೇದರೂಪವಾದ ಎರಡು ವಸ್ತುಗಳಲ್ಲಿ, ವಿರೋಧಸ್ತು=ವಿರೋಧವಾದರೂ, ಸದ್ಭಿಃ=ವಿದ್ವಾಂಸರಿಂದ, ಕಥಂ=ಹೇಗೆ, ಆಪಾದ್ಯತೇ= ಆಪಾದಿಸಲ್ಪಡುತ್ತದೆ.

ತಾ ॥ (1) ಭೇದವು ವಿರೋಧಶಾಂತಿಗೆ ಕಾರಣವು. ಹೇಗೆಂದರೆ— ೧ ಕೆಲವುಕಡೆ ಆಶ್ರಯಭೇದವು. ಉದಾ— ಮಧುರಾ ಪಟ್ಟಣದಲ್ಲಿ ದೇವದತ್ತನವಿರುವಿಕೆಯು. ಸ್ರುಘ್ನಪಟ್ಟಣ ದಲ್ಲಿ ಇಲ್ಲದಿರುವಿಕೆಯು. ೨ ಕೆಲವು ಕಡೆ ಕಾಲಭೇದವು ಉದಾ—ಮಧುರಾ ಪಟ್ಟಣದಲ್ಲಿಯೇ ದೇವದತ್ತನ ಇರುವಿಕೆಯು ಇಲ್ಲದಿರುವಿಕೆಯು. ೩ ಕೆಲವು ಕಡೆ ಪ್ರತಿಯೋಗಿಭೇದವು. ಗವಯುವವು ಗೋವಿನಿಂದ ಸದೃಶವು, ಘಟದಿಂದ ವಿಸದೃಶವು. (2) ಅವಯವಿ ಅವಯವಾದಿಗಳಿಗೆ ಅಭೇದ ವನ್ನು ಗ್ರಹಿಸತಕ್ಕ ಪ್ರತ್ಯಕ್ಷವಿದೆ, ಸಂಬಂಧವಸ್ತು ಬುದ್ಧಿಯಿಂದ ವಿಲಕ್ಷಣವಾಗಿ ಅನುವ್ಯವಸಾಯ ವಿದ್ದಪ್ರಯುಕ್ತ, ಭೇದಗ್ರಾಹಿಯಾದ ಬುದ್ಧಿಯೂ ಇದೆ, ಧರ್ಮಿಯಿದ್ದರೂ ಧರ್ಮವಿರುವುದಿಲ್ಲ ಎನ್ನುವ ಹೇತುವಿನಿಂದುಂಟಾದದ್ದು. ಆದುದರಿಂದ ಭೇದಾಭೇದವಿಷಯಕಗಳಾದ ಎರಡು ಪ್ರತೀತಿ ಗಳಿಗೂ ಪ್ರಾಮಾಣ್ಯವನ್ನು ಇಟ್ಟುಕೊಳ್ಳಬೇಕು. ಪ್ರಮಾಣದಿಂದಲೇ ಭೇದವೂ ಅಭೇದವೂ ಎರಡೂ ಅವಗತಗಳಾಗಿರುವುವರಿಂದ ವಿರೋಧವಿಲ್ಲ. (3) ವೈಶೇಷಿಕಾದಿಗಳು ಸಂಯೋಗ ವಿಭಾಗ ಶಬ್ದ ಆತ್ಮವಿಶೇಷಗುಣಗಳಿಗೆ ಅಲ್ಲಿಯೇ ಆವಾಗಲೇ ಭಾವ-ಅಭಾವಗಳನ್ನು ಇಟ್ಟು ಕೊಂಡು ಒಟ್ಟಿಗೆ ಕಾಣುವುದರಿಂದ ವಿರೋಧವು ಇಲ್ಲವೆಂದು ಹೇಳುತ್ತಾ ಪುನಃ ಇಲ್ಲಿ ಒಟ್ಟಿಗೆ

ಕಂಡರೂ ವಿರೋಧವನ್ನು ಉದ್ಭಾವಿಸುತ್ತಾ ಸ್ವವ್ಯಾಹತಭಾಷಿಗಳಾಗಿ ತಾನು ಹೇಳಿದ ಅರ್ಥವನ್ನು ಮರೆತುಬಿಡತಕ್ಕ ಸ್ವಭಾವವುಳ್ಳವರೂ ತನ್ನ ದೃಷ್ಟಿಯಲ್ಲಿ ಪಕ್ಷಪಾತವುಳ್ಳವರೂ ಹೇಗೆ ಸಜ್ಜನರು ಆದಾರು? ಎಲ್ಲಾ ಕಡೆಗಳಲ್ಲಿ ಕಾಣಲ್ಪಡದೆ ಇದ್ದವುಗಳಿಗೆ ಯಾವನಾದರೊಬ್ಬನು ಆಗ್ರಹಮಾತ್ರ ದಿಂದ ಒಟ್ಟಿಗೆ ಇದೆ ಎಂದು ತಿಳಿದರೆ ಅವನನ್ನು ಕುರಿತೇ ವಿರೋಧವನ್ನು ಉದ್ಭಾವಿಸಬೇಕು. ಬೇರೆ ರೀತಿಯಾಗಿ ಅಲ್ಲ ॥ ೧೦೭ ॥ ೧೦೮ ॥

### ಅಯಾವದ್ದ್ರವ್ಯಭಾವಿಯಲ್ಲಿ ಭೇದಾಭೇದ ಸಮರ್ಥನವು.

ಧರ್ಮಧರ್ಮಿಗಳಿಗೆ ಕೆಲವು ಕಡೆ ಭೇದಾಭೇದಗಳು ಎಂದು ಸಂಕ್ಷೇಪವಾಗಿ ಹಿಂದೆ ಹೇಳಿಯದೆ. ಅದು ಎಲ್ಲಾ ದ್ರವ್ಯಗಳಲ್ಲಿಯೋ ಅಥವಾ ಕೆಲವು ದ್ರವ್ಯಗಳಲ್ಲಿಯೋ ಎಂದು ಆಕಾಂಕ್ಷಾ ಬಂದರೆ ಅದನ್ನು ನಿರೂಪಿಸುತ್ತಾರೆ—

**ಮೂ॥ಅಭಿನ್ನೋ ಭಗವಾನ್ ಸ್ವೇನ ತದನ್ಯೇನ ವಿಭೇದವಾನ್ ॥ ೧೦೯ ॥**
**ನಿತ್ಯಾ ಧರ್ಮಾಸ್ತದೀಯಾಸ್ತು ಸರ್ವೇಽಸ್ಮಾನ್ನೈವ ಭೇದಿನಃ ।**
**ಸಾಮಸ್ತ್ಯೋಚ್ಛೇದಿನೋಽನ್ಯತ್ರಧರ್ಮಾ ಉಭಯರೂಪಿಣಃ (ಪಕಾಃ) ॥**
**ಭಾವೇತ ಏವ ಚೋಚ್ಛೇದಾತ್ತದನ್ಯೇ ಚ ಸಮಸ್ತಶಃ ॥ ೧೧೦ ॥**

ಅ ॥ ಭಗವಾನ್=ಶ್ರೀ ಹರಿಯು, ಮತ್ತು ಚೇತನರೆಲ್ಲರೂ, ಸ್ವೇನ=ತನ್ನ ಅವಯವ ಗುಣಕ್ರಿಯಾದಿಗಳಿಂದ, ಅಭಿನ್ನಃ=ನಿರ್ಭಿನ್ನರು. ತದನ್ಯೇನ=ಪ್ರಕೃತಿ (ಲಕ್ಷ್ಮಿ) ಜೀವ, ಜಡಾತ್ಮಕ ಪ್ರಪಂಚದಿಂದ, ವಿಭೇದವಾನ್ = ಭೇದವುಳ್ಳವರು. (ಹೀಗೆ ಭೇದಾಭೇದಗಳು ವ್ಯವಸ್ಥಿತಗಳೇ ಆಗಿವೆ. ಹೀಗೆ ಒಂದರಿಂದಲೇ ಭೇದಾಭೇದಗಳಲ್ಲ.) (ಯಾವದ್ದ್ರವ್ಯಭಾವಿಗಳಾಗದೆ ಇರುವ ಧರ್ಮಗಳಿಂದ ಭೇದಾಭೇದಗಳು ಏಕೆ ಆಗಲಾರವು? ಎಂದರೆ—) ತದೀಯಾಃ=ಶ್ರೀ ಹರಿಯ ಸಂಬಂಧಿಗಳಾ ಸರ್ವೇ=ಎಲ್ಲಾ, ಧರ್ಮಾಃ=ದ್ವಿತ್ವಾದಿಸಂಖ್ಯೆಯಿಂದ ಬೇರೆಯಾವ, ಧರ್ಮಾಃ= ಧರ್ಮಗಳು, ನಿತ್ಯಾಸ್ತು=ನಿತ್ಯಗಳೇ. (ಯಾವದ್ದ್ರವ್ಯಭಾವಿಗಳೇ.) ಅಸ್ಮಾತ್=ಈ ಕಾರಣ ದ್ವೇಶಿಯಿಂದ, ಅಸ್ಮಾತ್=ಶ್ರೀ ಹರಿಯದ್ವೇಶಿಯಿಂದ, ಭೇದಿನಃ=ಭೇದವುಳ್ಳವುಗಳು, ನೈವ=ಅಲ್ಲವೇ ಅಲ್ಲ. (ಹಾಗಾದರೆ ಭೇದಾಭೇದಗಳು ಎಲ್ಲಿ ಎಂದರೆ) ಅನ್ಯತ್ರ=ಪರಮೇಶ್ವರನಿಂದ ಭಿನ್ನವಾದ ಜಡವಸ್ತುವಿನಲ್ಲಿ, ಸಾಮಸ್ತ್ಯೋಚ್ಛೇದಿನಃ=ಧರ್ಮಿಯು ಇರುವಾಗಲೇ ಸಂಪೂರ್ಣವಾಗಿ ನಾಶ ವುಳ್ಳವುಗಳು ಅಥವಾ ದ್ರವ್ಯಕ್ಕೆ ನಾಶವಿಲ್ಲವಾದರೂ ನಾಶವುಳ್ಳವುಗಳು, ಧರ್ಮಾಃ = ಯಾವ ಧರ್ಮಗಳೋ, ತೇ=ಅವುಗಳು, ಭಾವೇ=ತಾನು ಇರುವ ಕಾಲದಲ್ಲಿಯೇ, ಉಭಯರೂಪಿಣಃ- (ಪಕಾಃ)=ಭಿನ್ನಾಭಿನ್ನಗಳು, (ಏಕೆ ಭಿನ್ನಾಭಿನ್ನಗಳೆಂದರೆ) ತ ಏವ=ಪ್ರತ್ಯಕ್ಷಬಲದಿಂದ ಧರ್ಮಿ ಸ್ವರೂಪಭೂತಗಳಾದವುಗಳೇ, ಉಚ್ಛೇದಾತ್=ಧರ್ಮಿಯು ಇರುವಾಗಲೇ ಇಲ್ಲದಿರುತ್ತವೆನ್ನುವ ಹೇತುವಿನಿಂದ, ಸಮಸ್ತಶಃ=ಯಾವದ್ದ್ರವ್ಯಭಾವಿಗಳಾಗದೆ ಇದ್ದ ಎಲ್ಲಾ ಧರ್ಮಗಳೂ, ತದನ್ಯೇ ಚ=ಧರ್ಮಿಯಿಂದ ಭಿನ್ನಗಳಾದವುಗಳೂ ಕೂಡ, ಅಂದರೆ ಅಯಾವದ್ದ್ರವ್ಯಭಾವಿಗಳಾದವುಗಳು ಭಿನ್ನಾಭಿನ್ನಗಳೇ ॥ ೧೦೯ ॥ ೧೧೦ ॥

### ಅತ್ಯಂತಾಭೇದ ಭೇದಾಭೇದಸ್ಥಳಗಳ ಉಕ್ತಿಯು.

ಅವಯುವವಿರುವತನಕ ಇರುವ ಅವಯುವಿಗೆ ಅವಯುವಗಳಿಂದ ಅತ್ಯಂತಾಭೇದವು, ಅವ ಯುವವಿರುವ ತನಕ ಇಲ್ಲದಿರುವ ಆವಯುವಿಗಾದರೂ ಭೇದಾಭೇದಗಳು ಎಂದು ಯಾವುದು ಹೇಳಲ್ಪಟ್ಟದೋ, ಅದರಿಂದ ಇತರ ಚೋದ್ಯವೂ ಪರಿಹೃತವಾಯಿತೆನ್ನುತ್ತಾರೆ—

**ಮೂ ॥ ಅಂಶಾಂಶಿನೋರಭೇದೇನ ತ್ವಂಶಸಂಯೋಗ ಏವ ಹಿ ॥ ೧೧೧ ॥**
**ಅಂಶಿನೋ ನಾನವಸ್ಥಾತೋ ಯದ್ಯಪ್ಯಂಶೇಷ್ವವಿಶ್ರಮಃ ॥**
**ಏಕಸ್ಮಿನ್ ಜಾತ ಏವಾನ್ಯಃ ಸಂಯೋಗೋ ಜಾಯತೇ ಯದಿ ।**
**ಅನವಸ್ಥಾ ತದೈವ ಸ್ಯಾತ್ಸಂಯೋಗೈಕ್ಯೇ ಕ್ವ ಭವೇತ್ತು ಸಾ ॥ ೧೧೨ ॥**

**ಅ ॥** ('ಸರ್ವದಿಕ್ಷ್ವಪಿ ಸಂಬಂಧಾತ್' ಎನ್ನುವುದರಿಂದ ಅಂಶತಃ ಸಂಯೋಗವು ಎಂದು ಯಾವುದು ಹೇಳಲ್ಪಟ್ಟದೋ, ಅದಯುಕ್ತವು. ಅನವಸ್ಥಾದೋಷವು ಬರಬೇಕಾಗುವುದು. ಘಟಸಂಯೋಗವು ಘಟಾಂಶಸಂಯೋಗ ಪೂರ್ವಕವಾಗಿದೆ, ಘಟಾಂಶವೂ ಘಟಾಂಶಾಂಶ ಸಂಯೋಗಪೂರ್ವಕವಾಗಿದೆ, ಈ ಪರಂಪರೆಯು ನಿರಂಶದಲ್ಲಿ ವಿಶ್ರಾಂತವಾಗುತ್ತದೆ ಎಂದುಹೇಳ ಕೂಡದು. ಅಂಶಪರಂಪರೇಗೆ ವಿಶ್ರಾಂತ್ಯಭಾವವೂ ಅಂಗೀಕೃತವಾಗಿದೆ. ಆದುದರಿಂದ ಪೂರ್ವ ಪೂರ್ವಸಂಯೋಗವು ಕೂಡದಿರುತ್ತಿರಲು ಮೇಲೆ ಮೇಲಿನ ಉತ್ಪತ್ತಿಯು ಬಾರದೆ ಹೋಗಬೇಕಾ ಗುವುದರಿಂದ ಅಂಶತಃ ಸಂಯೋಗವೆಂದು ನಿಯಮವು ಕೂಡುವುದಿಲ್ಲವೆನ್ನುತ್ತಾರೆ. ಇದ ಅಸಂಗತವು.) ಯದ್ಯಪಿ = ಅಂಶದಿಂದಲೇ ಸಂಯೋಗವು. ಯದ್ಯಪಿ ಅಂಶೇಷು=ಅಂಶಗಳಲ್ಲಿ, ಅವಿಶ್ರಮಃ=ಅಂಶಪರಂಪರೆಗೆ ವಿಶ್ರಾಂತಿಯಿಲ್ಲ. ತಥಾಪಿ=ಆದಾಗ್ಯೂ, ಅಂಶಾಂಶಿನೋಃ=ಅಂಶ ಅಂಶಿಗಳಿಗೆ, ಅಭೇದೇನ ತು=ಅಭೇದದಿಂದಲಾದರೂ, ಅಂಶಸಂಯೋಗ ಏವ=ಅಂಶಸಂಯೋ ಗವೇ, ಹಿ=ಯಾವಕಾರಣದ್ದೆಶೆಯಿಂದ, ಅಂಶಿನಃ=ಅಂಶಿಯ, ಸಂಯೋಗಃ=ಸಂಯೋಗವೋ, ಅತಃ=ಆದಕಾರಣ, ಅನವಸ್ಥಾ=ಅನವಸ್ಥಾದೋಷವು, ನ=ಇಲ್ಲ. (ಅಂಶಸಂಯೋಗವೇ ಅಂಶಿಯ ಸಂಯೋಗವು, ಆದಕಾರಣ ಅನವಸ್ಥೆಯಿಲ್ಲ ಎಂದು ಹೇಳಲ್ಪಟ್ಟ ಅನವಸ್ಥಾ ಪರಿಹಾರವನ್ನು ವಿವರಿಸುತ್ತಾರೆ.) ಏಕಸ್ಮಿನ್= (ಅವಯವಪರಂಪರೇಗೆ ಅವಿಶ್ರಮವನ್ನು ಅಂಗೀಕರಿಸಿ) ಒಂದು ಅವಯವಸಂಯೋಗವು, ಜಾತೇ ಏವ=ಹುಟ್ಟಿದಮೇಲೆಯೋ,ಅನ್ಯಃ=ಇತರವಾದ,ಸಂಯೋಗಃ= ಅವಯವಸಂಯೋಗವು, ಜಾಯತೇ ಯದಿ=ಹುಟ್ಟುತ್ತದೆಂದು(ಅಂಗೀಕರಿಸುವೆವೋ) ತದೈವ= ಆವಾಗಲೇ, ಅನವಸ್ಥಾ=ಅನವಸ್ಥೆಯು, ಸ್ಯಾತ್ = ಬರುವುದು, ಸಂಯೋಗೈಕ್ಯೇ = ಅವಯವಿ ಸಂಯೋಗವು ಕ್ರಿಯೆಯಿಂದ ಹುಟ್ಟಿದಾಗಿ ಅದರ ಅವಯವದಲ್ಲಿದೆ, ಅವಯವವೃತ್ತಿಯ ಸಂಯೋಗ ದ್ದೆಶೆಯಿಂದ ಮತ್ತೊಂದು ಅವಯವಿಯ ಸಂಯೋಗವು ಇಲ್ಲ ಎನ್ನುವ ವಾದದಲ್ಲಿ ಆದರೂ, ಸಾ= ಆ ಅನವಸ್ಥೆಯು, ಕ್ವ ಭವೇತ್=ಎಲ್ಲಿಯಾಗುವುದು.

**ತಾ ॥** (1) ಎಲ್ಲಾ ಕಡೆಗಳಲ್ಲಿಯೂ ಅಂಶದಿಂದಲೇ ಸಂಯೋಗವು ಎಂದು ಹೇಳುವ ನಮಗೆ ಅಂಶಿಯ ಸಂಯೋಗವು ಅಂಶದ ಸಂಯೋಗದಿಂದಲೇ ಹುಟ್ಟುತ್ತದೆಂದು ಅಭಿಪ್ರಾಯ ವಾಗಿದ್ದರೆ ಈ ಅನವಸ್ಥೆಯು ಬರುತ್ತಿತ್ತು. ಹೀಗೆ ಅಭಿಪ್ರಾಯವಲ್ಲವೇ ಅಲ್ಲ. ಮತ್ತೆ ಯಾವುದು ಯಾವ ಅಂಶಿಯ ಸಂಯೋಗವೋ ಅದು ಅದರ ಅಂಶದಲ್ಲಿದೆ. ಅಂಶವೇ ಇಲ್ಲದಿದ್ದಕ್ಕೆ, ಸಂಯೋಗವು ಎಲ್ಲಿರಲಿ. ಆದುದರಿಂದ ಪರಮಾಣುವಿಗೆ ಸಂಯೋಗವಿರುವಾಗ ಅದರಲ್ಲಿ ಇರುವುದಕ್ಕಾಗಿ ಅಂಶವನ್ನು ಅಂಗೀಕರಿಸಬೇಕು. ಹೀಗಾದರೆ ಯಾವುದೊಂದು ಅನವಸ್ಥೆಯೂ ಇಲ್ಲ. ಹೇಗೆಂದರೆ—ಅನವಸ್ಥಿತವಾದ ಕಾರ್ಯಕಾರಣಭೂತವಾದ ಅಸಿದ್ಧವಾದ ಸಂಯೋಗ ಪರಂಪರಾಶ್ರಯಣವಿಲ್ಲ. ಆದರೆ ಇಷ್ಟು ದೋಷವು ಬರುವುದು. ಘಟನಿಷ್ಠವಾದ ಸಂಯೋಗವು ಘಟಾಂಶಸಂಯೋಗಜನ್ಯವು ಎನ್ನುವುದೂ ಅಯುಕ್ತವು. ಘಟದಿಂದ ಅತ್ಯಂತ ಭಿನ್ನವಾದ ಘಟಾಂಶದಲ್ಲಿರತಕ್ಕದು ಎನ್ನುವುದೂ ಅಯುಕ್ತವು, ಅತಿಪ್ರಸಂಗವು. ಹಾಗಿದ್ದರೆ ಘಟಸಂಯೋಗವು ಪಟದಲ್ಲಿಯೂ ಇರಬೇಕಾಗುವುದು. ೧ ಪ್ರಮಾಣವಿರೋಧವೂ ಇದೆ.

'ಘಟಸಂಯೋಗಃ ಘಟವೃತ್ತಿಃ ತದ್ಗುಣತ್ವಾತ್ ತದ್ರೂಪವತ್' ೨ 'ಘಟಾಂಶವೃತ್ತಿಃ ಸಂಯೋಗಃ ನ ಘಟಸಂಯೋಗಃ ತದನ ವೃತ್ತಿತ್ವಾತ್ ಪಟಸಂಯೋಗವತ್' ಅಂಗಾಂಗಿಗಳಿಗೆ ಅಭೇದವನ್ನು ಸಾಧಿಸಿರುವುದರಿಂದ ಇದೂ ಅಯುಕ್ತವು. ಪಟದಂತೆಯೇ ಘಟಾಂಶವೂ ಕೂಡ ಘಟದಿಂದ ಅತ್ಯಂತ ಭಿನ್ನವಾಗಿದ್ದರೆ ಆಗ ಅತಿಪ್ರಸಂಗವು ಬರುತ್ತಿತ್ತು. ಅಭೇದವಿದ್ದರೆ ಅತಿಪ್ರಸಂಗವೇ ಇಲ್ಲ. ೧ನೇ ಅನುಮಾನಕ್ಕೆ ಸಿದ್ಧಸಾಧನತ್ವವು. ಅಂಶದಲ್ಲಿರುವುದೇ ಘಟದಲ್ಲಿರುವುದು. ಅಂಶದಲ್ಲಿ ಇಲ್ಲದೆ ಇದ್ದು ಘಟವೃತ್ತಿತ್ವವನ್ನು ಸಾಧಿಸಿದರೆ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವು. ೨ನೇ ಹೇತುವಿಗೆ ಸ್ವರೂಪಾಸಿದ್ಧಿಯು. ಅಥವಾ ಅನ್ಯಥಾಸಿದ್ಧಿಯು. (3) ಘಟಸಂಯೋಗವು ಘಟಾಂಶದಲ್ಲಿ ಇರುವುದಾದರೆ ಘಟಾಂಶಸಂಯೋಗವು ಎಲ್ಲಿದೆ ಎಂದರೆ— ಇದೇ ನ್ಯಾಯದಿಂದ ಅದರ ಅಂಶದಲ್ಲಿದೆ. ಅದೂ ಅದರ ಅಂಶದಲ್ಲಿದೆ ಎನ್ನುತ್ತೇವೆ. ಹೀಗೆ ಹೇಳಿದರೆ ಅನವಸ್ಥೆಯು ಇಲ್ಲ. ಎಲ್ಲಾ ಅಂಶಿಸಂಯೋಗಗಳೂ ಆಯಾವ ಅಂಶಿಗಳಲ್ಲಿರುತ್ತವೆ ಎನ್ನುವಲ್ಲಿ ಪರಸ್ಪರಾಪೇಕ್ಷೆಯು ಇರುವುದಿಲ್ಲ. (4) ಹೀಗಾದರೆ ಪರಮಾಣುವಿನಲ್ಲಿರತಕ್ಕ ಸಂಯೋಗವೂ ಘಟಸಂಯೋಗವೂ ಆಗಬೇಕಾಗುವುದೆಂದರೆ ಯಾರು ಇಲ್ಲವೆಂದು ಹೇಳುತ್ತಾರೆ ( ) ಅಂಶಸಂಯೋಗವೇ ಅಂಶಿಯ ಸಂಯೋಗವು, ಆದಪ್ರಯುಕ್ತ ಅನವಸ್ಥೆಯಿಲ್ಲ ಎಂದು ಹೇಳಿದ ಅನವಸ್ಥಾಪರಿಹಾರವನ್ನು 'ಏಕಸ್ಮಿನ್ ಜಾತ ಏವ' ಎನ್ನುವುದರಿಂದ ವಿವರಿಸಿದರು ॥೧೧೧॥೧೧೨॥

## ಅಂಶಾಂಶಿ ಸಂಯೋಗಕ್ಕೆ ಐಕ್ಯವು

'ಸರ್ವದಿಕ್ಷ್ವಪಿ ಸಂಬಂಧಾತ್' ಎಂದುಕ್ತವಾದುದಕ್ಕೆ 'ಏಕಸ್ಮಿನ್ ಜಾತ ಏವ' ಇತ್ಯಾದಿಗಳಿಂದ ಅನೂದಿತವಾದ, ಗ್ರಂಥಕಾರರಿಗೆ ಅಭಿಮತವಾಗದೇನೇ ಇರುವ ಅಭಿಪ್ರಾಯಾಂತರವನ್ನು ಕಲ್ಪಿಸಿಕೊಂಡು ಹೇಳಲ್ಪಟ್ಟ ಅನವಸ್ಥಾ ಪ್ರಸಂಗವನ್ನು 'ಇದು ಛಲೋತ್ತರ'ವೆಂದು 'ಅಂಶಾಂಶಿನೋರಭೇದೇನ' ಇದು ಮೊದಲಾದ ಗ್ರಂಥಗಳಿಂದ ನಿರಾಕರಿಸಿ ರೀತ್ಯಂತರದಿಂದಲೂ ನಿರಾಕರಿಸುತ್ತಾರೆ.

## ಮೂ ॥ ಅಂಶೇ ಸಂಯೋಗದೃಷ್ಟೇಶ್ಚ ದೃಷ್ಟೇ ಕಾ ಸಾನವಸ್ಥಿತಿಃ ॥ ೧೧೩ ॥

ಅ ॥ ಅಂಶೇ ಸಂಯೋಗದೃಷ್ಟೇಶ್ಚ= ಅಂಶಿಸಂಯೋಗಕ್ಕೆ ಅಂಶವೃತ್ತಿತ್ವವು. ದೃಷ್ಟವಾಗಿರುವುದರಿಂದಲೂ (ಅನವಸ್ಥಾ ದೋಷವು ಇಲ್ಲ.) (ದೃಷ್ಟವಾದರೆ ಅದೋಷತ್ವವು ಹೇಗೆಂದರೆ) ದೃಷ್ಟೇ=ಆಪಾದಕವಾದ ಅರ್ಥವು ದೃಷ್ಟವಾದರೆ, ಸಾ ಅನವಸ್ಥಿತಿಃ=ಆ ಅನವಸ್ಥೆಯು, ಕಾ= ಯಾವುದು? (ದೂಷಣವಲ್ಲ).

ತಾ ॥ (1) ಅಂಶತಃ ಸಂಯೋಗವು ಎಂದಾಗಿದ್ದರೆ ಆಗ ಅನವಸ್ಥೆಯು ಬರುವುದು. ತತಶ್ಚ ಸಂಯೋಗಾಭಾವವೇ ಬರಬೇಕಾಗುವುದು. ಇದಾದರೂ ಯುಕ್ತವಲ್ಲ. ಆದುದರಿಂದ ಅಂಶತಃ ಸಂಯೋಗವಲ್ಲ ಎಂದು ವಿಪರ್ಯಯಪರ್ಯವಸಾನವನ್ನು ಮಾಡಬೇಕು. ಅನವಸ್ಥೆಯು ತರ್ಕರೂಪವಾದುದು. ವಿಪರ್ಯಯಪರ್ಯವಸಾಯಿಯಾಗದೆ ಇದ್ದುದು ತರ್ಕಾಭಾಸವು ಎಂದು ನಿಯಮವು ॥ ೧೧೩ ॥

## ಸಂಯೋಗಕ್ಕೆ ಪರಾಭಿಪ್ರೇತವಾದ ಅವ್ಯಾಪ್ಯವೃತ್ತಿತ್ವನಿರಾಸವು

ಪರೋಕ್ತವಾದ ಅನವಸ್ಥಾಪ್ರಸಂಗವು ತರ್ಕಾಪ್ರತಿರೂಪವಾದ ಅಂಗವಿಲ್ಲದಿರುವುದರಿಂದ ತರ್ಕಾಭಾಸವೆನ್ನುತ್ತಾರೆ.

**ಮೂ ॥ ಯದ್ಯಂಶಗೋ ನ ಸಂಯೋಗಃ ಕಾರ್ಯೇಷು ಪ್ರಥಿಮಾ ಕಥಂ ।**
**ಪರಮಾಣೋರಣೋರ್ನಾಸ್ತಿ ಮಹತ್ತ್ವೇತ್ಯದ್ಭುತಂ ವಚಃ ॥ ೧೧೪ ॥**
**ಅಣೂನಾಂ ಪ್ರಥಿಮಾಪೇಕ್ಷಾಂ ವಿನೈವ ತ್ರ್ಯಣುಕೇಽಪಿ ಸಃ ।**
**ಪರಮಾಣೋರ್ಮಹತ್ತ್ವಂ ಚ ವಿನೇತ್ಯೇತದ್ವಚಃ ಕಥಂ ॥ ೧೧೫ ॥**

ಅ ॥ ಯದಿ=ಯಾವ ಪಕ್ಷದಲ್ಲಿ, ಸಂಯೋಗಃ=ಕಾರಣಗಳ ಸಂಯೋಗವು, ಅಂಶಗಃ=ಆದರ ಅಂಶದಲ್ಲಿರುವುದು, ನ ಸ್ಯಾತ್=ಆಗದೆಹೋದರೆ ಆಗ, ಕಾರ್ಯೇಷು=ಅದರಿಂದ ಆರಬ್ಧಗಳಾದ ಕಾರ್ಯಗಳಲ್ಲಿ, ಪ್ರಥಿಮಾ=ಕಾರಣಕ್ಕಿಂತ ಪರಿಮಾಣಾಧಿಕ್ಯವು, ಕಥಂ=ಹೇಗೆ? ಅಂದರೆ ಬಾರದೆಹೋಗುವುದು. (ಹಾಗಾದರೆ ಪರಮಾಣುವಿನದ್ವೆಶೆಯಿಂದ ದ್ವ್ಯಣುಕದಲ್ಲಿ ಪರಿಮಾಣೋತ್ಕರ್ಷವು ಇಲ್ಲದಿರುವುದರಿಂದ ಇದು ಇಷ್ಟಾಪಾದನವು ಎಂದರೆ) ಪರಮಾಣೋಃ=ಪರಮಾಣುಪರಿಮಾಣದ್ವೆಶೆಯಿಂದ, ಅಣೋಃ=ದ್ವ್ಯಣುಕಕ್ಕೆ, ಮಹತ್ತ್ವಾ=ಪರಿಮಾಣೋತ್ಕರ್ಷವು, ನಾಸ್ತೀತಿ ವಚಃ=ಇಲ್ಲವೆನ್ನುವ ಮಾತು, ಅದ್ಭುತಂ=ಸ್ವವ್ಯಾಹತವೂ, ಪ್ರಮಾಣವಿರುದ್ಧವೂ ಆಗಿದೆ. (ಇವನು ಆಢ್ಯನು, ಇವನು ಪರಮಾಢ್ಯನು ಎನ್ನುವುದರಂತೆ ಅಣು, ಪರಮಾಣು ಎನ್ನುವ ಈ ಶಬ್ದಗಳಿಂದಲೇ ಪರಿಮಾಣ ತಾರತಮ್ಯವು ತಿಳಿದುಬರುವುದರಿಂದ ಅದು ಇಲ್ಲವೆಂದು ಹೇಳುವುದು ಸ್ವವ್ಯಾಹತವಾಗುತ್ತದೆ. ಎರಡು ತಂತುಗಳಿಂದ ಹುಟ್ಟಿದ ಕಾರ್ಯದ ಪರಿಮಾಣದಂತೆ ಅಸಮುದಿತವಾದ ಅವಯವಗಳಿಂದುಂಟಾದ ದ್ರವ್ಯದ ಪರಿಮಾಣತ್ವದಿಂದ ದ್ವ್ಯಣುಕ ಪರಿಮಾಣಕ್ಕೆ ಪರಮಾಣು, ಪರಿಮಾಣದ್ವೆಶೆಯಿಂದ ಉತ್ಕೃಷ್ಟತ್ವವು ಅನುಮಾನದಿಂದ ಅವಗತವಾಗುತ್ತದೆ.) (ಹಾಗಾದರೆ ಯಾವುದು ಕಾರಣಪರಿಮಾಣದಿಂದ ಉಂಟಾದ ಉತ್ಕೃಷ್ಟಪರಿಮಾಣವೋ ಅದೇವೇ ಪ್ರಚಯದಿಂದ ಹುಟ್ಟಿದ್ದು, ತ್ರ್ಯಣುಕಪರಿಮಾಣದಂತೆ ದ್ವ್ಯಣುಕ ಪರಿಮಾಣವೂ ಕೂಡ ಕಾರಣ ಪರಿಮಾಣದಿಂದ ಹುಟ್ಟಿದ್ದು ಅಲ್ಲ. ಮತ್ತೆ ಕಾರಣ ಸಂಖ್ಯೆಯಿಂದ ಹುಟ್ಟಿದ್ದೇ ಆದಕಾರಣ ಪರಮಾಣುವಿಗೆ ಪ್ರಚಯವಿಲ್ಲವಾದರೆ ದ್ವ್ಯಣುಕದಲ್ಲಿ ಪರಿಮಾಣೋತ್ಕರ್ಷವು ಹುಟ್ಟುವುದಿಲ್ಲವೆಂದು ಆಪಾದನವು ಹೇಗೆ ಎಂದರೆ—) ಅಣೂನಾಂ=ದ್ವ್ಯಣುಕಗಳಿಗೆ, ಪ್ರಥಿಮಾಪೇಕ್ಷಾಂ ವಿನೈವ = ಪರಿಮಾಣೋತ್ಕರ್ಷಾಪೇಕ್ಷೆಯಿಲ್ಲದೇನೇ (ಸಂಖ್ಯಾಮಾತ್ರದಿಂದ) ತ್ರ್ಯಣುಕೇಽಪಿ = ತ್ರ್ಯಣುಕದಲ್ಲಿಯೂ, ಸಃ=ಪರಿಮಾಣೋತ್ಕರ್ಷವು(ಹುಟ್ಟುತ್ತದೆ.)(ಹಾಗೆಯೇ) ಪರಮಾಣೋಃ=ಪರಮಾಣುವಿಗೆ, ಮಹತ್ತ್ವಂ ಚ ವಿನಾ = ಪರಿಮಾಣೋತ್ಕರ್ಷವನ್ನು ಹೊರತೇ, (ಕೇವಲ ಸಂಖ್ಯೆಯಿಂದ ದ್ವ್ಯಣುಕದಲ್ಲಿ ಪರಿಮಾಣೋತ್ಕರ್ಷವು ಹುಟ್ಟುತ್ತದೆ.) ಇತ್ಯೇತದ್ವಚಃ=ಈ ಮಾತು, ಕಥಂ=ಹೇಗೆ ಕೂಡುತ್ತದೆ ॥ ೧೧೪ ॥ ೧೧೫ ॥

**ಪರೋಕ್ತವಾದ ಅನವಸ್ಥೆಗೆ ತರ್ಕಪರಾಹತ್ಯುಕ್ತಿಯು.**

ಅಂಶಾಂಶಿಗಳಿಗೆ ಅತ್ಯಂತಾಭೇದವು, ಮತ್ತು ಭೇದಾಭೇದಗಳು ಎಂದು ಯಾವುದು ಹೇಳಲ್ಪಟ್ಟದೋ ಅದನ್ನು ವಿಶದೀಕರಿಸುತ್ತಾರೆ—

**ಮೂ ॥ ಅಂಶಿನೋಽಂಶೈರಭೇದೋಽಯಮಂಶೇನ ತು ಭಿದಾಭಿದಾ ।**
**ಸರ್ವ(ರ್ವಃ) ಪ್ರತ್ಯಕ್ಷವಿಷಯಃ ಕಥಮೇವ ಹ್ಯಪೋದ್ಯತೇ ॥ ೧೧೬ ॥**

ಅ ॥ (ಹೇಗೆ ಆಕಾಶ ಮೊದಲಾದ ಅಂಶವಿರುವ ತನಕ ಇರುವ ಅಂಶಿಗೆ ತನ್ನ ಅಂಶಗಳಿಂದ ಅತ್ಯಂತಾಭೇದವೋ ಹಾಗೆಯೇ) ಅಂಶಿನಃ=ಪಟಮೊದಲಾದ ಅಂಶಿಗಳಿಗೂ, ಅಂಶೈಃ=ಸರ್ವಾಂಶಗಳಿಂದ, ಅಭೇದಃ=ಅತ್ಯಂತಾಭೇದವು, ಅಂಶೇನ ತು=ಒಂದೊಂದು ಅಂಶದಿಂದಲಾದರೂ,

**ಭಿದಾಭಿದಾ**=ಭೇದಾಭೇದವು. (ಹಾಗಾದರೆ ಸಂಬದ್ಧಗಳಾದ ಸರ್ವತಂತುಗಳಿಂದಲೂ ಪಟಕ್ಕೆ ಭೇದವನ್ನು ಅಂಗೀಕರಿಸಬೇಕು. ತಂತುಗಳ ಸಂಯೋಗಾನಂತರದಲ್ಲಿ ಪಟವು ಹುಟ್ಟುವುದು. ಮತ್ತು ಒಂದೊಂದು ತಂತುವಿನಿಂದ ಅಭೇದವೂ ಹೇಗೆ? ಒಂದೊಂದು ತಂತುಗಳಲ್ಲಿ ಪಟವೆನ್ನುವ ಬುದ್ಧಿಯಿಲ್ಲ; ಎಂದರೆ) ಅಯಂ ಸರ್ವಃ=ಹೇಳಿದ ಈ ಎಲ್ಲಾ ಅರ್ಥವೂ, ಹಿ=ಯಾವಕಾರಣ ದಿಂದ, ಸರ್ವಪ್ರತ್ಯಕ್ಷವಿಷಯಃ=ಎಲ್ಲಾ ಜನರ ಪ್ರತ್ಯಕ್ಷಕ್ಕೆ ವಿಷಯವಾಗಿದೆಯೋ, (ಆದಕಾರಣ) ಕಥಮೇವ=ಹೇಗೆತಾನೆ, ಅಪೋದ್ಯತೇ=ಬಾಧಿಸಲ್ಪಡುತ್ತದೆ.

**ತಾ** ॥ (1) ಹಾಗಾದರೆ ಅಂಶಿಗೆ ಅಂಶಗಳಿಂದ ಅಭೇದವೆಂದು ಹೇಳಿದ್ದು ಅಯುಕ್ತವು. ಎಲ್ಲಾ ತಂತುಗಳಿದ್ದರೂ ಕೆಲವುವೇಳೆ ಪಟವು ಇರುವುದಿಲ್ಲ. ಖಂಡಿತದಲ್ಲಿ (ಅಯಾವದ್ದ್ರವ್ಯ ಭಾವಿಸ್ಥಳದಲ್ಲಿ) ಭೇದಾಭೇದವು. ಆದಕಾರಣ ಒಂದು ತಂತುವಿನಿಂದ ಹೇಗೋ ಹಾಗೆಯೇ ಎಲ್ಲಾತಂತುಗಳಿಂದಲೂ ಪಟಕ್ಕೆ ಭೇದಾಭೇದಗಳೇ ಯೋಗ್ಯಗಳು. ಹಾಗೆಯೇ **ತಂತುಭ್ಯೋಽನ್ಯಃ ಪಟಃ ಸಾಕ್ಷಾತ್ಕಸ್ಯ ದೃಷ್ಟಿಪಥಂ ಗತಃ । ಅನನ್ಯಶ್ಚೇತ್ತಂತುಭಾವೇ ಪಟಾಭಾವಃ ಕುತೋ ಭವೇತ್** ॥ ಎಂದು ಬೃಹತ್ತರ್ಕದಲ್ಲಿ ಹೇಳಿರುತ್ತದೆ, ಎಂದರೆ— ಸಂಬಂಧವಿಶೇಷ ದಿಂದ ಕೂಡಿದ ತಂತುಗಳು ಪ್ರತ್ಯಕ್ಷಸಿದ್ಧಗಳಾಗಿವೆ. ಅಂತಹ ಸಂಬಂಧವಿಶೇಷವಿರುವಾಗ ಯಾವಾಗಲಾದರೂ ಪಟವು ಇಲ್ಲವೆನ್ನುವುದು ಇಲ್ಲ. ಆದಕಾರಣ ಸಂಬಂಧವಿಶೇಷದಿಂದ ಕೂಡಿದ ಎಲ್ಲಾ ತಂತುಗಳಿಂದ ಪಟಕ್ಕೆ ಅತ್ಯಂತಾಭೇದವೇ. ಸಂಬಂಧವಿಶೇಷವಿಲ್ಲದಿರುವ ಎಲ್ಲಾ ತಂತುಗಳಿಂದಲಾದರೂ ಭೇದಾಭೇದಗಳೇ. ಆದುದರಿಂದ ಯಾವುದೊಂದು ವಿರೋಧವೂ ಇಲ್ಲ. (2) ಸಂಬಂಧವಿಶೇಷದಿಂದ ಕೂಡಿದ ಎಲ್ಲಾ ತಂತುಗಳಿಗೆ ಪಟದಿಂದ ಅಭೇದವು ಪ್ರತ್ಯಕ್ಷಪ್ರತೀತಿ ಸಿದ್ಧವಾಗಿದೆ. ಏಕೆಂದರೆ -- ಆ ಪ್ರತೀತಿಯು ಸಂಬದ್ಧಗಳಾದ ಎರಡು ವಸ್ತುಗಳ ಪ್ರತೀತಿಯಿಂದ ವಿಲಕ್ಷಣವಾಗಿದೆ ಎಂದು ಸಾಕ್ಷಿಸಿದ್ಧವಾಗಿದೆ. ಸಂಬದ್ಧಗಳಾದ ಎಲ್ಲಾ ತಂತುಗಳಿಗೂ ಪಟಕ್ಕೂ ಭೇದವಿದೆ ಎನ್ನುವಲ್ಲಿ ಪ್ರಮಾಣವಿಲ್ಲ. ಆದುದರಿಂದ ಸಂಬದ್ಧಗಳಾದ ಸರ್ವ ತಂತು ಗಳಿಗೂ ಪಟಕ್ಕೂ ಭೇದವನ್ನು ಹೇಳಲಿಕ್ಕೆ ಬರುವುದಿಲ್ಲ. ಒಂದೊಂದು ತಂತುವಿನಲ್ಲಿ ಪಟ ವೆನ್ನುವ ಬುದ್ಧಿಯಿಲ್ಲದಿರುವುದು ಆ ತಂತುಪಟಗಳಿಗೆ ಭೇದವನ್ನು ತಿಳಿಸಿಕೊಡುತ್ತದಲ್ಲದೆ ಪ್ರತ್ಯಕ್ಷ ಸಿದ್ಧವಾದ ಹಿಂದೆ ಹೇಳಿದ ಅಭೇದವನ್ನು ತಿರಸ್ಕರಿಸುವುದಿಲ್ಲ ॥ ೧೧೬ ॥

**ಅಭೇದ ಭೇದಾಭೇದ ಸ್ಥಲೋಕ್ತಿಯು.**

ಅವಯವ್ಯಾದಿಗಳಿಗೆ ಅವಯವಾದಿಗಳಿಂದ ಅಭೇದವು ಕೂಡುವುದಿಲ್ಲ. ಏಕೆಂದರೆ- ಅವಯ ವಿಯು ಒಂದು. ಅವಯವಗಳು ಅನೇಕಗಳು. ಅವುಗಳಿಗೆ ಅಭೇದವಿದ್ದರೆ ಅವಯವಗಳಿಗೂ ಅಭೇದವಾಗಲೀ, ಅವಯವಿಗೆ ಭೇದವಾಗಲೀ ಬರಬೇಕಾಗುವುದು. ಹಾಗೆಯೇ ಕೆಲವು ಗುಣಗಳೂ ಅನೇಕಾಶ್ರಿತಗಳೇ. ಒಂದೇ ಸಂಯೋಗವ್ಯಕ್ತಿಯು ಎರಡೆರಡರಲ್ಲಿದೆ. ಹಾಗೆಯೇ ವಿಭಾಗ ವ್ಯಕ್ತಿಯೂ ಎರಡರಲ್ಲಿ ಇದೆ. ಏಕತ್ವ-ಅನೇಕತ್ವಗಳೆಂದು ಸಂಖ್ಯೆಯೂ ಎರಡು ವಿಧವು. ಅದರಲ್ಲಿ ಏಕತ್ವವು ಒಂದು ದ್ರವ್ಯದಲ್ಲಿದ್ದರೂ ದ್ವಿತ್ವಾದಿಗಳು ಅನೇಕಾಶ್ರಿತಗಳು. ಹೀಗೆಯೇ ಏಕ ಪೃಥಕ್ತ್ವ, ಅನೇಕ ಪೃಥಕ್ತ್ವ ಎಂದು ಪೃಥಕ್ತ್ವವೂ ಎರಡು ವಿಧವು. ಅದರಲ್ಲಿ ಏಕಪೃಥಕ್ತ್ವವು ಒಂದು ದ್ರವ್ಯದಲ್ಲಿದ್ದರೂ ದ್ವಿಪೃಥಕ್ತ್ವಾದಿಗಳು ಅನೇಕಾಶ್ರಿತಗಳೇ. ಏವಂಚ ಗುಣಗಳಿಗೆ ಗುಣಿ ಯಿಂದ ಐಕ್ಯವಿದ್ದರೆ ಸಂಯೋಗಾದಿಗಳಿಗೆ ಆಶ್ರಯಭೂತವಾದ ಅನೇಕ ದ್ರವ್ಯಗಳಿಂದ ಅಭೇದ ವಾಗಲೀ, ಸಂಯೋಗಾದಿ ಭೇದವಾಗಲೀ ಪ್ರಾಪ್ತವಾಗುವುದು. ಸಾಮಾನ್ಯವು (ಜಾತಿಯು) ಒಂದೇ ಅನೇಕಾಶ್ರಿತವಾಗಿದೆ. ಸಾಮಾನ್ಯಕ್ಕೆ ವ್ಯಕ್ತಿಯಿಂದ ಅಭೇದವಿದ್ದರೆ ವ್ಯಕ್ತಿಗಳಿಗೂ

ಅಭೇದವು ಸಾಮಾನ್ಯಕ್ಕಾಗಲೀ ಭೇದವು ಪ್ರಾಪ್ತವಾಗಬೇಕಾಗುವುದು, ಎಂದರೆ ಸಂಯೋಗ ವಿಭಾಗ ಪೃಥಕ್ತ್ವಗಳಿಗೆ ಅನೇಕಾಶ್ರಿತತ್ವವು ಇಲ್ಲವೆನ್ನುತ್ತಾರೆ.

**ಮೂ ॥ ಸಂಯೋಗಶ್ಚ ವಿಭಾಗಶ್ಚ ಭೇದಶ್ಚೈವ ಪೃಥಕ್ ಪೃಥಕ್ ।**
**ಅನ್ಯೋನ್ಯಪ್ರತಿಯೋಗೇನ ಹ್ಯುಭಯೋರಪಿ ದೃಶ್ಯತೇ ॥ ೧೧೭ ॥**

**ಅ** ॥ ಸಂಯೋಗಶ್ಚ = ಸಂಯೋಗವೂ, ವಿಭಾಗಶ್ಚ = ವಿಭಾಗವೂ, ಭೇದಶ್ಚ = ಪೃಥಕ್ತ್ವವೂ, ಪೃಥಕ್ ಪೃಥಗೇವ = ಒಂದೊಂದು ದ್ರವ್ಯವನ್ನು ಆಶ್ರಯಿಸಿಯೇಇರುತ್ತಾವೆ. (ಅಂತೂ ಒಂದು ಗುಣದಿಂದ ಅಭೇದವಿದ್ದರೆ ದ್ರವ್ಯಗಳಿಗೂ ಅಭೇದವು ಬರಬೇಕಾಗುವುದು, ಎಂದು ಅತಿಪ್ರಸಂಗಕ್ಕೆ ಆಪಾದಕವು ಸಿದ್ಧವಾಗಲಿಲ್ಲ. ಅನೇಕ ದ್ರವ್ಯಗಳಿಂದ ಅಭೇದವಿದ್ದರೆ ಗುಣಕ್ಕೂ ಭೇದವು ಬರಬೇಕಾಗುವುದು ಎನ್ನುವುದಕ್ಕೆ ಇಷ್ಟಾಪತ್ತಿಯು ದೂಷಣವೆಂದುಕ್ತ ವಾಯಿತು ) (ಹಾಗಾದರೆ ಘಟಪಟಸಂಯೋಗವಿಭಾಗಭೇದಗಳು ಘಟಪಟಸಂಬಂಧಿಯಾಗಿ ಅನುಭವಿಸಲ್ಪಡುತ್ತವೆ. ಆದುದರಿಂದ ಒಂದೊಂದನ್ನು ಆಶ್ರಯಿಸಿರುತ್ತಾವೆನ್ನುವುದು ಹೇಗೆ ಕೂಡುತ್ತದೆ? ಹಾಗಿದ್ದರೆ ಒಂದೊಂದರಲ್ಲಿಯೇ ಸಂಯುಕ್ತಾದಿ ಪ್ರತ್ಯಯವು ಬರಬೇಕಾಗು ವುದು ಎಂದರೆ) (ಸಂಯೋಗಾದಿಃ = ಯಾವ ಸಂಯೋಗಾದಿಯು) ಉಭಯೋರಪಿ = ಎರಡಕ್ಕೂ, ದೃಶ್ಯತೇ = ಕಾಣಲ್ಪಡುತ್ತದೋ, (ಅದು) ಅನ್ಯೋನ್ಯಪ್ರತಿಯೋಗೇನ ಹಿ = ಅನ್ಯೋನ್ಯಕ್ಕೆ ಪ್ರತಿ ಯೋಗಿತ್ವನಿಮಿತ್ತದಿಂದ (ಭೇದವು ಬಹುಸಂಬಂಧಿಯಾಗಿಯೂ ತೋರುತ್ತದೆ.)

**ತಾ** ॥ (1) ಘಟಪ್ರತಿಯೋಗಿಕವಾದ ಸಂಯೋಗ ಮೊದಲಾದುದು ಪಟದಲ್ಲಿದೆ. ಹಾಗೆಯೇ ಪಟಪ್ರತಿಯೋಗಿಕವಾದುದು ಘಟದಲ್ಲಿದೆ. ಆದುದರಿಂದ ಎರಡರ ಸಂಬಂಧಿಯಾಗಿ ಪ್ರತೀತಿಯು ಅತಿಪ್ರಸಂಗಾಭಾವವೂ ಯುಕ್ತವಾಗುತ್ತದೆ. (2) ಸಂಯೋಗಾದಿಗಳು ಒಂದೊಂದ ರಲ್ಲಿರುತ್ತವೆನ್ನುವಲ್ಲಿ ಪ್ರಮಾಣವಿದ್ದರೆ ಹಿಂದೆ ಹೇಳಿದ್ದು ಆಗಬಹುದಿತ್ತು. ಅದೇನೇ ಇಲ್ಲ. ಎಂದರೆ— ಅನ್ಯೋನ್ಯಪ್ರತಿಯೋಗಿತ್ವರೂಪ ಹೇತುವಿನಿಂದ ಸಂಯೋಗಾದಿಗಳು ಎರಡಕ್ಕೂ ಪ್ರತ್ಯೇಕ ಪ್ರತ್ಯೇಕವಾಗಿಯೇ ಕಾಣುತ್ತವೆ. ಅಂದರೆ ಪಟವು ಘಟದಿಂದ ಸಂಯುಕ್ತವೆಂದೂ, ಘಟದಿಂದ ವಿಭಕ್ತವೆಂದೂ, ಘಟದಿಂದ ಭಿನ್ನವೆಂದೂ ಪಟಧರ್ಮವಾದ ಸಂಯೋಗಾದಿಯು ಘಟ ಪ್ರತಿಯೋಗಿಕವಾಗಿ ತೋರುತ್ತದೆ. ಯಾವುದು ಯಾವುದು ಪ್ರತೀತಿಯಾಗಿ ಉಳ್ಳದ್ದೋ ಅದು ಪ್ರತಿಯೋಗಿಯ ಧರ್ಮವಲ್ಲ. ಆದುದರಿಂದ ಈ ಘಟಪ್ರತಿಯೋಗಿಕವಾದ ಸಂಯೋಗಾದಿಯು ಘಟದ ಧರ್ಮವಲ್ಲ. ಹೀಗೆಯೇ ಘಟಧರ್ಮವಾದ ಸಂಯೋಗಾದಿಯು ಪಟಪ್ರತಿಯೋಗಿಕವಾಗಿ ತೋರಿದ್ದು ಪಟಧರ್ಮವು ಆಗಲಿಕ್ಕೆ ಯೋಗ್ಯವಾಗುವುದಿಲ್ಲ. ತಥಾ ಚ ಸಂಯೋಗಾದಿಗಳು ಒಂದೊಂದು ದ್ರವ್ಯಾಶ್ರಿತಗಳೇ ಆಗಿ ಅನೇಕ ಧರ್ಮಗಳೆಂದು ತಿಳಿಯುತ್ತವೆ ॥ ೧೧೭ ॥

ಹಾಗಾದರೆ ಸಂಯೋಗವಿಭಾಗಗಳಲ್ಲಿ ಈ ರೀತಿಯು ಇರಲಿ, ಪೃಥಕ್ತ್ವದಲ್ಲಿ ಹಾಗೆ ಅಲ್ಲ. ಯಾವುದು ಘಟದ್ವೆಶಿಯಿಂದ ಪಟವು ಪ್ರತ್ಯೇಕ, ಪಟದ್ವೆಶಿಯಿಂದ ಘಟವು ಪ್ರತ್ಯೇಕ, ಹೀಗೆ ಅನ್ಯೋನ್ಯಪ್ರತಿಯೋಗಿಕವಾಗಿ ತೋರುತ್ತದೋ, ಆ ಏಕ ಪೃಥಕ್ತ್ವವು ಪ್ರತ್ಯೇಕ ಪ್ರತ್ಯೇಕ ವಾಗಿಯೇ ಅಂಗೀಕೃತವಾಗುತ್ತದೆ. ಯಾವುದು ಇವುಗಳು ಎರಡು ಭಿನ್ನಗಳು, ಇವುಗಳು ಭಿನ್ನಗಳು ಎಂದು ತೋರುತ್ತದೋ, ಆ ಅನೇಕ ಪೃಥಕ್ತ್ವವು ಅನೇಕಾಶ್ರಿತವೇ ಆಗಿದೆ. ಪ್ರತಿ ಯೋಗ್ಯನಿರೂಪ್ಯವು ಏಕಾಶ್ರಯವಾಗಿದೆ ಎನ್ನುವಲ್ಲಿ ಪ್ರಮಾಣವಿಲ್ಲ. ಎಂದರೆ—

ಮೂ || ಭಿನ್ನಾ ಇತಿ ತು ಭೇದಾನಾಂ ಸಮುದಾಯೋ ಹಿ ದೃಶ್ಯತೇ |
ಯಥೈವ ಚ ಪದಾರ್ಥಾನಾಮನಯೋರ್ಭೇದ ಇತ್ಯಪಿ |
ಇತೋऽಮುಷ್ಯಾಮುತೋಽಮುಷ್ಯ ಭೇದೋ ದೃಷ್ಟೋ ದ್ವಿಧರ್ಮಿಕಃ ||
|| ೧೧೮ ||

ಅ || ಭಿನ್ನಾ ಇತಿ ತು = ಇವುಗಳು ಭಿನ್ನಗಳು ಇದು ಮೊದಲಾದ ಪ್ರತೀತಿಯಲ್ಲಿ ಆದರೂ, ಭೇದಾನಾಂ = ಭೇದಗಳ, ಸಮುದಾಯಃ = ಅನೇಕತ್ವವು, ದೃಶ್ಯತೇ ಹಿ = ಕಾಣಲ್ಪಡುತದಷ್ಟೆ. ಯಥೈವ ಚ = ಹೇಗೆ, ಪದಾರ್ಥಾನಾಂ = ಪದಾರ್ಥಗಳಿಗೋ, ಹಾಗೆಯೇ ಅನಯೋಃ = ಇವುಗಳಿಗೆ, ಭೇದಃ = ಭೇದವು, ಇತ್ಯಪಿ = ಈ ಪ್ರತೀತಿಯಲ್ಲಿಯೂ, ಇತಃ = ಈ ಘಟದ್ದೆಶೆಯಿಂದ, ಅಮುಷ್ಯ = ಈ ಪಟಕ್ಕೆ, ಅಮುತಃ = ಈ ಪಟದ್ದೆಶೆಯಿಂದ, ಅಮುಷ್ಯ = ಈ ಘಟಕ್ಕೆ, ಭೇದಃ = ಭೇದವು, ಇತಿ = ಹೀಗೆ, ದ್ವಿಧರ್ಮಿಕಃ = ಎರಡು ಧರ್ಮಿಯಾಗಿಉಳ್ಳ, ಭೇದಃ = ಭೇದವು, ದೃಷ್ಟಃ = ಕಾಣಲ್ಪಟ್ಟದೆ.

ತಾ || (1) ಇವುಗಳು ಬಿಳೀ ವಸ್ತ್ರಗಳು, ಇದು ಮೊದಲಾದ ಪ್ರತೀತಿಯಲ್ಲಿ ಅನೇಕ ವಸ್ತ್ರಗಳು ಅವಕ್ಕೆ ವಿಶೇಷಣಗಳಾದ ಅನೇಕ ಶೌಕ್ಲ್ಯಗಳೂ ತೋರುತ್ತವೆ. ಹಾಗೆಯೇ ಇವೆರಡು ಭೇದವುಳ್ಳವುಗಳು ಇದುಮೊದಲಾದ ಪ್ರತೀತಿಯಲ್ಲಿಯೂ ಅನೇಕ ಪದಾರ್ಥಗಳೂ ಅನೇಕ ಭೇದಗಳೂ ತೋರುತ್ತವೆಂದು ಅಂಗೀಕರಿಸಬೇಕು. ಎರಡರಲ್ಲಿ ಒಂದೇ ಭೇದವಿದೆ ಎನ್ನುವಲ್ಲಿ ವಿಶೇಷ ಪ್ರಮಾಣವು ಇಲ್ಲ. (2) ಹಾಗಾದರೆ 'ಅನಯೋರ್ಭೇದಃ' 'ಅಮೀಷಾಂ ಭೇದಃ' ಎನ್ನುವ ಪ್ರತೀತಿಯಲ್ಲಿ ಅನೇಕಾಶ್ರಿತವಾದ ಪೃಥಕ್ತ್ವವು ತೋರುತ್ತದೆ. ಆದಪ್ರಯುಕ್ತ ಇದು ಹೇಗೆ ಕೂಡುತ್ತದೆಂದರೆ— (೧) ಈ ವಿಷಯದಲ್ಲಿ ಅನೇಕವು ಧರ್ಮಿಯಾಗಿ ತೋರುತ್ತದೆ ಎನ್ನುವುದೇ ಪ್ರಮಾಣವೆಂದು ಹೇಳುತ್ತೀಯೋ, ೨ ಅಥವಾ ಧರ್ಮವು ಒಂದಾಗಿ ತೋರುತ್ತದೆ ಎನ್ನುವುದು ಪ್ರಮಾಣವೆಂದು ಹೇಳುತ್ತೀಯೋ, ೩ ಅಥವಾ ಎರಡು ಪ್ರತೀತಿಯೂ ಪ್ರಮಾಣವೆಂದು ಹೇಳುತ್ತೀಯೋ, ಮೂರು ಪಕ್ಷಗಳಲ್ಲಿಯೂ ಉತ್ತರವನ್ನು 'ಅನಯೋರ್ಭೇದಃ' ಇತ್ಯಾದಿಗಳಿಂದ ಹೇಳಿದರು. ಆದರೆ— ಅನೇಕಕ್ಕೆ ಧರ್ಮಿತ್ವವಿದ್ದರೂ ಧರ್ಮಕ್ಕೆ ಏಕತ್ವಪ್ರತೀತಿಯು ಸಮ್ಮತವಾಗದಿರುವುದರಿಂದ ಇದರಿಂದ ಇಷ್ಟಾರ್ಥಸಿದ್ಧಿಯು ಆಗುವುದಿಲ್ಲವೆಂದುಕ್ತವಾಯಿತು. || ೧೧೮ ||

ಹಾಗಾದರೆ ವಕ್ತೃವಿನ ಅಭಿಪ್ರಾಯಗಳನ್ನು ವಚನಲಿಂಗಗಳಿಂದ ತಿಳಿಯಬೇಕು. 'ಅನಯೋರ್ಭೇದಃ' ಎಂದು ಏಕವಚನವು ಪ್ರಯುಕ್ತವಾಗಿದೆ. ಅದರಿಂದ ಈ ಪ್ರತೀತಿಯಲ್ಲಿ ಒಂದೇ ಭೇದವು ಎರಡು ಧರ್ಮಿಗಳುಳ್ಳದ್ದಾಗಿ ದೃಷ್ಟವಾಗಿದೆ. ಆದಪ್ರಯುಕ್ತ 'ಅನಯೋರ್ಭೇದಃ' ಇತ್ಯಾದಿ ವಾಕ್ಯೇ ಪ್ರತೀತಂ ಪೃಥಕ್ತ್ವಾದಿಕಮುಪ್ಯೇಕೈಕಮೇವ ಭವಿತುಮರ್ಹತಿ' ಏಕವಚನಾಂತತಯಾ ಪ್ರೋಕ್ತತ್ವಾತ್ ಘಟೋऽಸ್ತೀತ್ಯಾದಿ ವಾಕ್ಯಪ್ರತೀತ ಘಟಾದಿವತ್ = ಇವುಗಳಿಗೆ ಭೇದವು ಇದು ಮೊದಲಾದ ವಾಕ್ಯಗಳಲ್ಲಿ ತೋರಿದ ಪೃಥಕ್ತ್ವಾದಿಗಳೂ ಕೂಡ ಒಂದೊಂದೇ ಆಗಲು ಯೋಗ್ಯವಾಗಿದೆ; ಏಕವಚನಾಂತವಾಗಿ ಆಪ್ತನಿಂದ ಹೇಳಲ್ಪಟ್ಟಿರುವುದರಿಂದ, ಘಟವು ಇದೆ ಇದು ಮೊದಲಾದ ವಾಕ್ಯಗಳಲ್ಲಿ ತೋರಿದ ಘಟಾದಿಗಳಂತೆ ಎಂದನುಮಿತವಾಗುತ್ತದೆ. ಆದಕಾರಣ ಅನ್ಯೋನ್ಯ ಪ್ರತಿಯೋಗಿಕಗಳಾದ ಅನೇಕ ಧರ್ಮಿಗಳುಳ್ಳ ಅನೇಕ ಭೇದವಿಷಯತ್ವವನ್ನು 'ಅನಯೋರ್ಭೇದಃ' ಎನ್ನುವ ಈ ಪ್ರತೀತಿಗೆ ಹೇಳಲಿಕ್ಕೆ ಶಕ್ಯವಾಗುವುದಿಲ್ಲ. ಎಂದರೆ—

**ಮೂ || ತತ್ರೈಕವಚನಂ ಯತ್ತದ್ವಿಪ್ರಾಣಾಂ ಭೋಜನಂ ಯಥಾ || ೧೧೯ ||**

**ಅ ||** ತತ್ರ=ಅನಯೋರ್ಭೇದಃ ಇದು ಮೊದಲಾದ ವಾಕ್ಯಗಳಲ್ಲಿ, ಅಥವಾ ಎರಡು ಭೇದಗಳಲ್ಲಿ, ಯತ್=ಯಾವುದು, ಏಕವಚನಂ=ಏಕವಚನವ್ರೋ, ತತ್=ಅದು, ಯಥಾ=ಹೇಗೆ, ವಿಪ್ರಾಣಾಂ=ಬ್ರಾಹ್ಮಣರ, ಭೋಜನಂ = ಭೋಜನವೆಂದು, ಏಕವಚನಂ = ಏಕವಚನವ್ರೋ, ಹಾಗೆಯೇ.

**ತಾ ||** ಅನೇಕ ಬ್ರಾಹ್ಮಣರ ಅನೇಕ ಭೋಜನ ಕ್ರಿಯೆಯು ಅನೇಕವಾಗಿದ್ದರೂ, ಭೋಜನ ಸಮುದಾಯಕ್ಕೆ ಏಕತ್ವ ವಿವಕ್ಷೆಯಿಂದ 'ವಿಪ್ರಾಣಾಂ ಭೋಜನಂ' ಎಂದು ಏಕ ವಚನಪ್ರಯೋಗವು ಹೇಗೋ, ಅದರಂತೆ ಭೇದಸಮುದಾಯದ ಏಕತ್ವವನ್ನು ವಿವಕ್ಷಿಸಿಕೊಂಡು ಭೇದವೆಂದು ಏಕವಚನ ಪ್ರಯೋಗವಲ್ಲದೆ ಒಂದೇ ಭೇದವು ದ್ವಿಧರ್ಮಿಕವಲ್ಲ. ಅಂತೂ ಹಿಂದೆ ಹೇಳಿದ ಅನುಮಾನಕ್ಕೆ ಈ ಸ್ಥಳದಲ್ಲಿ ವ್ಯಭಿಚಾರವನ್ನಾಗಲೀ ಸಮುದಾಯ ವಿಷಯವಾಗುತ್ತ ದೆಂದು ಅನ್ಯಥಾ ಸಿದ್ಧಿಯನ್ನಾಗಲೀ ಹೇಳಿದಂತೆ ಆಯಿತು. || ೧೧೯ ||

## ಸಂಯೋಗಾದಿಗಳಿಗೆ ಪೃಥಕ್ಪೃಥಕ್ ಧರ್ಮಿಕತ್ವನಿರೂಪಣವು

ಈಗ ಸಾಮಾನ್ಯವು (ಜಾತಿಯು ಒಂದೊಂದನ್ನೇ ಆಶ್ರಯಿಸಿಕೊಂಡಿದೆ.) ಅನುಗತವಲ್ಲ ವೆನ್ನುತ್ತಾರೆ—

**ಮೂ || ನರತ್ವಾದಿಕಮಪ್ಯೇವಂ ತತ್ತದ್ಧರ್ಮತಯೇಯತೇ ।**
**ನ ಸರ್ವಧರ್ಮ ಏಕೋಽಸ್ತಿ ಸಮುದಾಯಸ್ತು ಭಿನ್ನಗಃ || ೧೨೦ ||**

**ಅ ||** ನರತ್ವಾದಿಕಮಪಿ=ನರತ್ವ ಮೊದಲಾದ ಜಾತಿಯೂ ಕೂಡ, ಏವಂ= ಸಂಯೋ ಗಾದಿಗಳಂತೆಯೇ ಒಂದೊಂದರಲ್ಲಿಯೇ ಇರುವುದು. (ನರತ್ವಾದಿಗಳು ಏಕೆ ಒಂದೊಂದರಲ್ಲಿಯೇ ಇರತಕ್ಕವುಗಳೆಂದರೆ—) ತತ್ತದ್ಧರ್ಮತಯಾ= (ಹೇಗೆ ಮನುಷ್ಯರು ಕಾಣಲ್ಪಡುತ್ತಿರಲು ಅವರ ರೂಪಾದಿಗಳು ಪ್ರತ್ಯೇಕ ಪ್ರತ್ಯೇಕ ಕಾಣಲ್ಪಡುತ್ತವ್ರೋ, ಹಾಗೆಯೇ ನರತ್ವ ಮೊದಲಾದ ಸಾಮಾನ್ಯವೂ ಕೂಡ) ಒಂದೊಂದರಲ್ಲಿಯೇ ಇರುವ ಧರ್ಮವಾಗಿಯೇ, ಈಯತೇ= ಕಾಣಲ್ಪಡು ತ್ತದೆ. (ಎಂದು ಅನುಗತವಲ್ಲವೆನ್ನುವ ವಿಷಯದಲ್ಲಿ ಪ್ರತ್ಯಕ್ಷವು ಹೇಳಲ್ಪಟ್ಟಿತು.) (ಅಥವಾ ಯಾವುದು ಅನೇಕಾಶ್ರಿತವಾದ ಧರ್ಮವ್ರೋ, ಇದು ಒಂದೊಂದು ತೋರುವ ಕಾಲದಲ್ಲಿ ತೋರು ವುದಿಲ್ಲ. ದ್ವಿತ್ವಾದಿಗಳಂತೆ. ನರತ್ವಾದಿಗಳು ಒಂದೊಂದು ವ್ಯಕ್ತಿ ತೋರುವ ಕಾಲಕ್ಕೇನೇ ತೋರುತ್ತದೆ. ಆದುದರಿಂದ ಅನುಗತವಲ್ಲ ಎನ್ನುವ ಅನುಮಾನವು ಇದರಿಂದ ಸೂಚಿತವಾ ಯಿತು. ಮತ್ತು 'ನರತ್ವಾದಿಕಂ ನಾನೇಕಾನುವೃತ್ತಂ ಧರ್ಮತ್ವಾತ್ ರೂಪಾದಿವತ್' ನರತ್ವಾದಿಗಳು ಒಂದೊಂದೇ ಅನೇಕ ವ್ಯಕ್ತಿಗಳಲ್ಲಿ ಇರತಕ್ಕವುಗಳಲ್ಲ, ಧರ್ಮವಾಗಿರುವುದರಿಂದ ಅಲ್ಲಲ್ಲಿರುವ ರೂಪಾದಿಗಳಂತೆಯೇ. ಈ ಅನುಮಾನಕ್ಕೆ ವ್ಯಭಿಚಾರಶಂಕೆಯನ್ನು ಪರಿಹರಿಸುತ್ತಾರೆ) ಸರ್ವ ಧರ್ಮಃ=ಅನೇಕವೃತ್ತಿಯಾದ ಧರ್ಮವು, ಏಕಃ=ಒಂದು, ನ=ಇಲ್ಲ. ಅಂದರೆ ಒಂದೇ ಧರ್ಮವು ಅನೇಕ ವ್ಯಕ್ತಿಗಳಲ್ಲಿರತಕ್ಕದ್ದಾಗಿ ಎಲ್ಲಿಯೂ ತೋರದಿರುವುದರಿಂದ ಹಿಂದೆ ಹೇಳಿದ ಧರ್ಮತ್ವಾನು ಮಾನಕ್ಕೆ ವ್ಯಭಿಚಾರವು ಇಲ್ಲ. (ಹಾಗಾದರೆ ಅನೇಕತ್ವ ಸಂಖ್ಯೆಯು ಅನೇಕವನ್ನು ಆಶ್ರಯಿಸಿ ಕೊಂಡಿದೆ. ಒಂದೊಂದರಲ್ಲಿ ದ್ವಿತ್ವಾದಿಗಳನ್ನು ಶಂಕಿಸಲಿಕ್ಕೂ ಅಶಕ್ಯವಾಗಿದೆ. ದ್ವಿತ್ವಾದಿ ಗಳು ಒಂದೊಂದು ತೋರುವ ಕಾಲಕ್ಕೆ ತೋರುವುದಿಲ್ಲ. ಆದುದರಿಂದ ಧರ್ಮತ್ವ ಹೇತುವಿಗೆ

ಅಲ್ಲಿ ವ್ಯಭಿಚಾರವು ಎಂದರೆ) ಸಮುದಾಯುಸ್ತು=ಅನೇಕತ್ವವಾದರೂ, ಭಿನ್ನಗಃ=ಅನೇಕಾಶ್ರಿತವು. ಅಂದರೆ ಅನೇಕತ್ವ ಸಂಖ್ಯೆಯು ಅನೇಕಾಶ್ರಿತವಾಗಿದ್ದರೂ ನಾವು ಹಿಂದೆ ಹೇಳಿದ ಧರ್ಮತ್ವ ಹೇತುವಿನಲ್ಲಿ ಅನೇಕತ್ವ ಭಿನ್ನತ್ವೇಸತಿ ಎಂದು ವಿಶೇಷಣವನ್ನು ಕೊಡುವುದರಿಂದ ಆ ಹೇತುವಿಗೆ ವ್ಯಭಿಚಾರವಿಲ್ಲ. ॥ ೧೨೦ ॥

ಪ್ರಾಭಾಕರರಾದರೂ ಹೇಳುತ್ತಾರೆ.—(1) ಸಾದೃಶ್ಯವು ಒಂದೇ ಅನೇಕಾನುಗತವಾದುದು. ಆದುದರಿಂದ ಅಲ್ಲಿ ಅನೇಕಾನುಗತತ್ವಾಭಾವ ರೂಪವಾದ ಸಾಧ್ಯವಿಲ್ಲ. ಧರ್ಮತ್ವರೂಪವಾದ ಹೇತುವಿದೆ ಆದುದರಿಂದ ಧರ್ಮತ್ವರೂಪವಾದ ಹೇತುವಿಗೆ ವ್ಯಭಿಚಾರವು. (2) ಹಾಗಾದರೆ ಸಾಮಾನ್ಯವೇ ಸಾದೃಶ್ಯವು. ಆದುದರಿಂದ ಪಕ್ಷದಲ್ಲಿ ವ್ಯಭಿಚಾರ ಹೇಳಿದ್ದು ಅಯುಕ್ತವೆಂದು ಹೇಳಕೂಡದು. ಅಶ್ವತ್ವಾದಿ ಜಾತಿಯಿಂದ ಸಾಂಕರ್ಯವು ಬರುವುದು. ಹೇಗೆಂದರೆ— ಕೆಲವು ಅಶ್ವರಾಸಭ ವ್ಯಕ್ತಿಗಳಿಗೆ ಸಾದೃಶ್ಯವಿದೆ. ಅಲ್ಲಿ ಅಶ್ವದಲ್ಲಿರತಕ್ಕ ರಾಸಭವ್ಯಕ್ತಿ ಸಾದೃಶ್ಯವು ಅಶ್ವತ್ವಜಾತಿಯಿಂದ ವ್ಯಾಪಕಜಾತಿಯಾದರೆ ಆಗ ಎಲ್ಲಾ ಅಶ್ವಗಳಿಗೂ ರಾಸಭ ಸಾದೃಶ್ಯವು ಬರುವುದು. ಅಶ್ವತ್ವದಿಂದ ವ್ಯಾಪ್ಯವಾದರೆ ಆಗ ರಾಸಭವ್ಯಕ್ತಿಯಲ್ಲಿ ರಾಸಭಾಂತರ ಸಾದೃಶ್ಯವಿದ್ದ ಪ್ರಯುಕ್ತ ವ್ಯಾಪ್ಯವಿರುವಾಗ ವ್ಯಾಪಕವು ನಿಯಮದಿಂದ ಇರಲೇಬೇಕು. ಅಂತೂ ರಾಸಭಕ್ಕೂ ಅಶ್ವತ್ವವು ಬರಬೇಕಾಗುವುದು. ಹೀಗೆಯೇ ರಾಸಭವಿಶೇಷದಲ್ಲಿರತಕ್ಕ ಅಶ್ವಸಾಮ್ಯವಾದ ಸಾದೃಶ್ಯವು ಜಾತಿರೂಪವಾದರೆ ರಾಸಭತ್ವದಿಂದ ವ್ಯಾಪಕವಾದರೆ ಆಗ ಸರ್ವರಾಸಭಗಳಿಗೆ ಅಶ್ವಸಾದೃಶ್ಯವು ಬರಬೇಕಾಗುವುದು. ವ್ಯಾಪ್ಯವಾದರೆ ಆಗ ಅಶ್ವವ್ಯಕ್ತಿಯಲ್ಲಿಯೂ ಅಶ್ವ ಸಾದೃಶ್ಯವು ಇದ್ದ ಪ್ರಯುಕ್ತ ಅಶ್ವಕ್ಕೂ ರಾಸಭತ್ವವು ಬರಬೇಕಾಗುವುದು. ಹೀಗೆ ಹೇಳಬೇಕು. ತಥಾ ಚ ಪರಸ್ಪರವಾಗಿ ಬಿಟ್ಟುಕೊಂಡಿರುವ ಅಶ್ವತ್ವ ರಾಸಭಸಾದೃಶ್ಯಗಳಿಗೆ ಒಂದು ವ್ಯಕ್ತಿ ವಿಶೇಷವಾದ ಅಶ್ವಾದಿಗಳಲ್ಲಿ ಸಮಾವೇಶವಿದ್ದ ಪ್ರಯುಕ್ತ ಸಾಂಕರ್ಯವು. ಆದುದರಿಂದ ಜಾತಿಯು ಸಾದೃಶ್ಯವಲ್ಲ. ಮತ್ತು ಸಾಮಾನ್ಯವು ಪ್ರತಿಯೋಗಿ ನಿರೂಪ್ಯವಲ್ಲ. ಸಾದೃಶ್ಯವು ಪ್ರತಿಯೋಗಿ ನಿರೂಪ್ಯವು. ಹೀಗೆ ಸಾದೃಶ್ಯ ಸಾಮಾನ್ಯಗಳಿಗೆ ಭೇದವು ಸ್ಪಷ್ಟವಾಗಿದೆ ಅಂದರೆ—

**ಮೂ ॥ ಏತಾದೃಶಂ ಚ ಸಾದೃಶ್ಯಂ ಪದಾರ್ಥೇಷು ಪೃಥಕ್ಪೃಥಕ್।**
**ಏಕಸ್ಮಿನ್ ಸವಿನಷ್ಟೇಽಪಿ ಯತೋಽನ್ಯತ್ರೈವ ದೃಶ್ಯತೇ ॥ ೧೨೧ ॥**

**ಅ ॥** ಏತಾದೃಶಂ ಚ ಸಾದೃಶ್ಯಂ=ಇಂತಹ ಸಾದೃಶ್ಯವು, ಪದಾರ್ಥೇಷು=ಪದಾರ್ಥ ಗಳಲ್ಲಿ, ಪೃಥಕ್ ಪೃಥಕ್=ಪ್ರತ್ಯೇಕ ಪ್ರತ್ಯೇಕವಾಗಿಯೇ ಇರತಕ್ಕದು ಅನುಗತವಲ್ಲ. (ನರತ್ವಾದಿ ಸಾಮಾನ್ಯವು ಪ್ರತಿವ್ಯಕ್ತಿಗಳಲ್ಲಿ ಭಿನ್ನವಾಗಿದೆ ಎನ್ನುವಲ್ಲಿ ಅನುಮಾನಾಂತರವನ್ನು ಹೇಳುತ್ತಾರೆ.) ಏಕಸ್ಮಿನ್=ಒಬ್ಬ ಮನುಷ್ಯನು, ವಿನಷ್ಟೇಪಿ=ನಷ್ಟನಾದಾಗ್ಯೂ, ಸಃ=ಆ ನರತ್ವಾದಿ ರೂಪಧರ್ಮವು, ಯತಃ=ಯಾವ ಕಾರಣದ್ದೆಶೆಯಿಂದ, ಅನ್ಯತ್ರ=ಮತ್ತೊಬ್ಬ ಮನು ಷ್ಯನಲ್ಲಿ, ದೃಶ್ಯತೇ ಏವ=ಕಾಣಲ್ಪಡುತ್ತದೋ, (ಆದುದರಿಂದಲೂ ನರತ್ವಾದಿ ಸಾಮಾನ್ಯವು ಪ್ರತಿವ್ಯಕ್ತಿಭಿನ್ನವು.)

**ತಾ ॥** (1) ಸಾದೃಶ್ಯವು ಸಾಮಾನ್ಯದಿಂದ ಭಿನ್ನವಾಗಲಿ ಆದಾಗ್ಯೂ ಸಾದೃಶ್ಯವು ಪದಾರ್ಥಗಳಲ್ಲಿ ಪ್ರತ್ಯೇಕಪ್ರತ್ಯೇಕವಾಗಿಯೇ ಇದೆ. ಆದುದರಿಂದ ಧರ್ಮತ್ವ ಹೇತುವಿಗೆ ವ್ಯಭಿ ಚಾರವಿಲ್ಲ. ಸಾದೃಶ್ಯವು ಅನೇಕ ವೃತ್ತಿಯಾಗಿದೆ ಎನ್ನುವಲ್ಲಿ ಪ್ರಮಾಣವಿಲ್ಲ. ಸದೃಶೌ ಇಮೌ ಇತ್ಯಾದಿ ಪ್ರತೀತಿಯು, ಶುಕ್ಲೌ ಇಮೌ ಇತ್ಯಾದಿಗಳಂತೆ ಕೂಡುತ್ತದೆ. (2) ಅಂದರೆ

ಶುಕ್ಲೌ ಇಮೌ ಇತ್ಯಾದಿ ಪ್ರತೀತಿಗಳಲ್ಲಿ ಅನುಗತಗಳಾಗದೆ ಇರುವ ಭಿನ್ನ ಭಿನ್ನ ರೂಪಗಳೇ ಹೇಗೆ ತೋರುತ್ತವೋ ಅದರಂತೆ ಸದೃಶೌ ಇಮೌ ಇತ್ಯಾದಿ ಪ್ರತೀತಿಗಳಲ್ಲಿಯೂಕೂಡ ಅನನುಗತವಾದ ಅಲ್ಲಲ್ಲಿರುವ ಸಾದೃಶ್ಯವೇ ತೋರುತ್ತದೆ. 'ಅನಯೋಃ ಸಾದೃಶ್ಯಂ' ಇತ್ಯಾದಿ ಪ್ರತೀತಿಯೂ ಕೂಡ ಇವನಿಗೆ ಇವನಿಂದ ಸಾದೃಶ್ಯವು, ಇವನಿಗೆ ಇವನಿಂದ ಸಾದೃಶ್ಯವು ಎಂದು ಭಿನ್ನ ಭಿನ್ನ ಸಾದೃಶ್ಯವನ್ನು ವಿಷಯೀಕರಿಸಿಯೇ ಕೂಡುತ್ತದೆ. ಸಾದೃಶ್ಯಂ ಎಂದು ಏಕವಚನವು, ವಿಪ್ರಾಣಾಂ ಭೋಜನಂ ಇತ್ಯಾದಿಗಳಂತೆ ಕೂಡುತ್ತದೆ. ಪ್ರತಿಯೋಗಿಗೆ ಧರ್ಮಿತ್ವವೂ ಕೂಡು ವುದಿಲ್ಲ. ಸಾದೃಶ್ಯಕ್ಕೆ ಏಕಾಶ್ರಿತತ್ವವಿದ್ದರೂ, ಪ್ರತಿಯೋಗಿ ನಿರೂಪ್ಯತ್ವವಿದ್ದುದರಿಂದ ಒಂದೊಂದು ತೋರುವ ಕಾಲದಲ್ಲಿ ಅಪ್ರತೀತಿಯು ಕೂಡಬಹುದು. (3) ಒಬ್ಬ ಮನುಷ್ಯನು ನಷ್ಟನಾಗು ತ್ತಿರಲು ಅವನನ್ನು ಆಶ್ರಯಿಸಿ ಕೊಂಡಿರುವ ನರತ್ವವೂ ನಷ್ಟವಾಗುತ್ತದೆ. ಆದಾಗ್ಯೂ ನರತ್ವ ರೂಪಧರ್ಮವು ಮತ್ತೊಬ್ಬ ಮನುಷ್ಯನಲ್ಲಿ ಯಾವ ಕಾರಣದಿಂದ ಕಾಣಲ್ಪಡುತ್ತದೋ ಆದು ದರಿಂದಲೂ ನರತ್ವಾದಿಗಳು ಪ್ರತಿವ್ಯಕ್ತಿ ಭಿನ್ನಗಳು. (4) ನಷ್ಟಾನಷ್ಟವರ್ತಿನರತ್ವಂ ಭೇದವತ್ ವಿರುದ್ಧ ಧರ್ಮಾಶ್ರಯತ್ವಾತ್ ಛಾಯಾ ತಪವತ್=ನಾಶ ಹೊಂದಿದವನು, ನಾಶಹೊಂದದಿರು ವವನು ಇವರಲ್ಲಿರತಕ್ಕ ನರತ್ವವು ಭೇದವುಳ್ಳದ್ದು, ವಿರುದ್ಧಧರ್ಮಾಶ್ರಯತ್ವವಿದ್ದುದರಿಂದ ನೆರಳು ಬಿಸಿಲುಗಳಂತೆಯೇ, ಈ ಹೇತುವು ಅಸಿದ್ಧವಲ್ಲ. ನಾಶವನ್ನು ಹೊಂದಿದ ಮನುಷ್ಯನನ್ನು ಆಶ್ರ ಯಿಸಿರುವ ನರತ್ವವೂ ನಷ್ಟವಾಗಿದೆ. ಬದುಕಿರುವ ಮನುಷ್ಯನಲ್ಲಿರುವ ನರತ್ವವು ಕಾಣುವುದರಿಂದ ನರತ್ವವು ನಷ್ಟವಾಗಲಿಲ್ಲ. (5) ಅಥವಾ 'ಇದಂ ನರತ್ವಂ ವಿನಷ್ಟಾತ್ ನರತ್ವಾತ್ ಭಿದ್ಯತೇ ಅವಿನಷ್ಟತ್ವಾತ್ ಘಟವತ್' ಅಥವಾ 'ತನ್ನರತ್ವಂ ಅವಿನಷ್ಟಾತ್ ನರತ್ವಾತ್ ಭಿದ್ಯತೇ ವಿನಷ್ಟ ತ್ವಾತ್ ಘಟವತ್' ಇತ್ಯಾದಿ ಅನುಮಾನಗಳಿಂದಲೂ, ನರತ್ವಾದಿಗಳು ಅನುಗತಗಳಲ್ಲವೆಂದು ಸಿದ್ಧವಾಗುತ್ತದೆ. ॥ ೧೨೧ ॥

ವಿನಾಶವನ್ನು ಹೊಂದಿದ ಮನುಷ್ಯನನ್ನು ಆಶ್ರಯಿಸಿಕೊಂಡಿರುವ ನರತ್ವವು ನಷ್ಟವಾಗುವು ದಾದರೆ ಹಿಂದೆ ಹೇಳಿದ್ದು ಆಗುತ್ತಿತ್ತು. ಹಾಗೆ ಹೇಳಲಿಕ್ಕೆ ಬರುವುದಿಲ್ಲ. ಏಕೆಂದರೆ, ಮನು ಷ್ಯನು ನಷ್ಟನಾದರೂ ಅವನಲ್ಲಿರುವ ಜಾತಿಯು ನಿತ್ಯವಾಗಿರುವುದರಿಂದ ನಾಶವನ್ನು ಹೊಂದುವು ದಿಲ್ಲ ಎಂದು ಹೇಳುತ್ತೇವೆಂದರೆ—

**ಮೂ ॥ ಕುತೋಃ ಭಸ್ಮತ್ವಮಾಪ್ತಸ್ಯ ನರತ್ವಂ ಪುನರಿಷ್ಯತೇ ।**
**ಏಕತ್ವೇ ನಾಸ್ತಿ ಮಾನಂ ಚ ಶ್ರುತಿರಪ್ಯಾಹ ಸಾದರಂ ॥ ೧೨೨ ॥**
**ಭಿನ್ನಾಶ್ಚ ಭಿನ್ನ ಧರ್ಮಾಶ್ಚ ಪದಾರ್ಥಾ ನಿ(ಅ)ಖಿಲಾ ಅಪಿ ।**
**ಸ್ವೈಃ ಸ್ವೈರ್ಧರ್ಮೈರಭಿನ್ನಾಶ್ಚ ಸ್ವರೂಪೈರಪಿ ಸರ್ವಶಃ ॥ ೧೨೩ ॥**
**ಅನಿವೃತ್ತ ವಿನಾಶಾಸ್ತು ಧರ್ಮಾ ಉಭಯರೂಪಕಾಃ ।**
**ನ ಕೇನ ಚಿದಭಿನ್ನೋಽತೋ ಭಗವಾನ್ ಸ್ವಗುಣೈರ್ವಿನಾ ॥ ೧೨೪ ॥**

ಅ ॥ ಭಸ್ಮತ್ವಂ=ಭಸ್ಮತ್ವವನ್ನು, ಆಪ್ತಸ್ಯ=ಹೊಂದಿದ, (ನರಸ್ಯ = ಮನುಷ್ಯನಿಗೆ) ಕುತಃ=ಯಾವ ಕಾರಣದ್ದೆಸೆಯಿಂದ, ನರತ್ವಂ=ಮನುಷ್ಯತ್ವವು, ಪುನಃ=ಆಶ್ರಯ ನಾಶವಾದ ಮೇಲೆ, ಇಷ್ಯತೇ=ಉಂಟೆಂದು ಅಂಗೀಕರಿಸಲ್ಪಡುತ್ತದೆ. ಆಶ್ರಯನಾಶವಾದ ಮೇಲೆ ಅದರಲ್ಲಿದ್ದ ಸಾಮಾನ್ಯಕ್ಕೆ ಅಸ್ತಿತ್ವವು. 'ವಿಮತಂ ಸಾಮಾನ್ಯಂ ವಿನಾಶವತ್ ವಿನಾಶವದಾಶ್ರಯ ಸಮವೇತತ್ವಾತ್ ರೂಪಾದಿವತ್' ಇದು ಮೊದಲಾದ ಪ್ರಮಾಣಗಳಿಂದ ವಿರುದ್ಧವೂ, **ಅಪ್ರಾಮಾಣಿಕವೂ, ಆಗಿದೆ.)** (ನಾಶ ಹೊಂದಿದ ನರನನ್ನು ಆಶ್ರಯಿಸಿರುವ ನರತ್ವದ ಸತ್ವವು

ಅಪ್ರಾಮಾಣಿಕವೆಂದು ಹೇಳಿದ್ದು ಸರಿಯಲ್ಲ. ಏಕೆಂದರೆ— ಅದೇ ನರತ್ವವು ಬೇರೆ ಕಡೆ ಪ್ರತ್ಯಕ್ಷ ಸಿದ್ಧವಾಗಿದೆ. ನಷ್ಟ ಅನಷ್ಟ ನರಾಶ್ರಿತವಾದ ನರತ್ವವು ಒಂದೇ. ಆ ನರತ್ವವು ಅವಿನಷ್ಟನಾದ ನರನಲ್ಲಿ ತೋರುತ್ತದೆ. ಆದುದರಿಂದಲೇ ಹಿಂದೆ ಹೇಳಿದ ಅನುಮಾನವೂ ಬಾಧಿತವಿಷಯ ವಾಯಿತು ಎಂದರೆ) ಏಕತ್ವೇ=(ನಷ್ಟ ನರಾಶ್ರಿತವಾದ ನರತ್ವ, ಅವಿನಷ್ಟ ನರಾಶ್ರಿತವಾದ ನರತ್ವ, ಇವುಗಳಿಗೆ) ಏಕತ್ವವಿಷಯದಲ್ಲಿ, ಮಾನಂ ಚ=ಪ್ರಮಾಣವಾದರೂ, ನಾಸ್ತಿ=ಇಲ್ಲ. ಚ=ಮತ್ತೂ ಅವುಗಳಿಗೆ ಏಕತ್ವವಿದ್ದರೆ ಅದಕ್ಕೆ ಸತ್ವವು ಸಿದ್ಧಿಸುತ್ತದೆ. ಸತ್ವವು ಸಿದ್ಧವಾದರೆ ಏಕತ್ವವು ಸಿದ್ಧಿಸುತ್ತದೆ ಎಂದು ಅನ್ಯೋನ್ಯಾಶ್ರಯವೂ ಇದೆ. (ಅಂದರೆ ನಷ್ಟ ಅನಷ್ಟ ವೃತ್ತಿನರತ್ವಗಳಿಗೆ ಏಕತ್ವ ವಿಷಯದಲ್ಲಿ ಪ್ರಮಾಣವಿರುತ್ತಿದ್ದರೆ ಆಗುತ್ತಿತ್ತು. ಪ್ರಮಾಣವೇ ಇಲ್ಲ.) (ಹೀಗೆ ಸಾಮಾನ್ಯಾದಿಗಳು ಅನುಗತಗಳಲ್ಲ. ಬೇರೆ ಬೇರೆ ಎನ್ನುವವಿಷಯದಲ್ಲಿ ಪ್ರತ್ಯಕ್ಷ ಅನುಮಾನ ಗಳನ್ನು ಹೇಳಿ ಶ್ರುತಿಯನ್ನು ಹೇಳುತ್ತಾರೆ.) ಶ್ರುತಿರಪಿ=ಶ್ರುತಿಯೂ ಕೂಡ, ಸಾದರಂ=ಆದರ ಪೂರ್ವಕವಾಗಿ, ಆಹ= (ಸಾಮಾನ್ಯಾದಿಗಳು ಅನುಗತಗಳಲ್ಲ. ಆವಾವಧರ್ಮಿಯಲ್ಲಿರತಕ್ಕದು. ಬೇರೆ ಬೇರೆ ಎಂದು) ಹೇಳುತ್ತದೆ. ನಿ(ಅ)ಖಿಲಾ ಅಪಿ=ಎಲ್ಲಾ, ಪದಾರ್ಥಾಃ = ಪದಾರ್ಥಗಳು, ಭಿನ್ನಾಶ್ಚ=ಪರಸ್ಪರ ಭೇದವುಳ್ಳವುಗಳು, ಭಿನ್ನಧರ್ಮಾಶ್ಚ=ಪರಸ್ಪರ ಭಿನ್ನಗಳಾದ ಧರ್ಮಉಳ್ಳವು ಗಳು. (ಹೇಗೆ ಶ್ರೀಹರಿಯು ಮತ್ಸ್ಯಾದಿ ತನ್ನ ಸ್ವರೂಪಗಳಿಂದಲೂ, ತನ್ನ ಧರ್ಮಗಳಿಂದಲೂ ಅಭಿನ್ನನೋ) (ಹಾಗೆಯೇ ಪದಾರ್ಥಗಳು), ಸ್ವೈಃ ಸ್ವೈಃ ಧರ್ಮೈಃ=ತಂತಮ್ಮ ಧರ್ಮ ಗಳಿಂದಲೂ, ಸರ್ವಶಃ=ಎಲ್ಲಾ, ಸ್ವರೂಪೈರಪಿ=ಸ್ವರೂಪಗಳಿಂದಲೂ, ಅಭಿನ್ನಾಶ್ಚ=ಅಭಿನ್ನ ಗಳೂ ಆಗಿವೆ. ಅನಿವೃತ್ತವಿನಾಶಾಃ=ಆಶ್ರಯವು ನಿವೃತ್ತವಾಗದೆ ಇದ್ದಾಗ್ಯೂ ವಿನಾಶವುಳ್ಳ ಧರ್ಮಾಃ ತು=ಧರ್ಮಗಳಾದರೂ, ಉಭಯರೂಪಕಾಃ = ಭಿನ್ನಾಭಿನ್ನಗಳು, (ಉದಾ = ಅಪಕ್ವ ಘಟದಲ್ಲಿರುವ ಶ್ಯಾಮತ್ವಾದಿಗಳು) ಅತಃ=ಆದುದರಿಂದ, ಭಗವಾನ್=ಶ್ರೀಹರಿಯು, ಸ್ವಗುಣೈಃ=ತನ್ನ ಗುಣಗಳಿಂದ, ವಿನಾ=ಹೊರತು, ಕೇನಚಿತ್=ಯಾರಿಂದಲೂ, ಅಭಿನ್ನಃ= ಅಭಿನ್ನನು, ನ=ಅಲ್ಲ. ॥ ೧೨೨ ॥ ೧೨೩ ॥ ೧೨೪ ॥

## ಜಾತಿಗೆ ಪ್ರತಿವ್ಯಕ್ತಿಭಿನ್ನತ್ವದಲ್ಲಿ ಪ್ರತ್ಯಕ್ಷ ಅನುಮಾನ ಶ್ರುತಿಗಳ ಉಕ್ತಿಯು.

ಹಿಂದೆಹೇಳಿದಪ್ರಕಾರ ಸಾಮಾನ್ಯಕ್ಕೆ ಅನೇಕವೃತ್ತಿತ್ವವನ್ನು ಪ್ರಮಾಣಗಳಿಂದ ತಿರಸ್ಕರಿಸಿದರು. ಅದಯುಕ್ತವು, ಸಾಮಾನ್ಯಕ್ಕೆ ಅನೇಕವೃತ್ತಿತ್ವವಿಲ್ಲದಿದ್ದರೆ ಬಾಧಕವಿದೆ. ಹೇಗೆಂದರೆ— ಎಲ್ಲಾ ಗೋಪಿಂಡಗಳಲ್ಲಿ ಅನುಗತವಾದ ಒಂದು ಗೋತ್ವಸಾಮಾನ್ಯವು ಇಲ್ಲವೆಂದಾದರೆ ಆಗ ಅಲ್ಲಿ ಗೋಶಬ್ದಸಂಗತಿ ಗ್ರಹಣರೂಪವಾದ ವ್ಯುತ್ಪತ್ತಿಯು ಬಾರದೆಹೋಗುವುದು. ವೃದ್ಧವ್ಯವಹಾರ ಉಪದೇಶಾದಿಗಳಿಂದಲೇ ವ್ಯುತ್ಪತ್ತಿಯು ಆಗುವುದು. ಪ್ರತಿವ್ಯಕ್ತಿಗಳಲ್ಲಿ ವ್ಯವಹಾರಾದಿಗಳು ಇಲ್ಲ, ಅವುಗಳು ಅನಂತಗಳಾಗಿರುವುದರಿಂದ ವ್ಯುತ್ಪತ್ತಿಯಲ್ಲಿಯೇ ಪುರುಷರ ಆಯುಸ್ಸಿಕ್ಕೆ ಪರ್ಯ ವಸಾನವು ಬರಬೇಕಾಗುವುದು. ಆದುದರಿಂದ ಎಲ್ಲಿ ಉಪದೇಶಾದಿಗಳೋ ಅಲ್ಲಿಯೇ ವ್ಯುತ್ಪತ್ತಿಯು ವ್ಯವಹಾರವು ಎಂದಾಗಬೇಕಾಗುವುದು. ಮತ್ತು ಅನುಗತವಾದ ಒಂದು ಧರ್ಮವು ಇಲ್ಲದಿದ್ದರೆ ಸರ್ವತ್ರವ್ಯಾಪ್ತಿಗ್ರಹಣ ಕಾರ್ಯಕಾರಣಭಾವಾವಧಾರಣಾದಿಗಳು ಕೂಡಲಿಕ್ಕಿಲ್ಲ, ಇದು ಮೊದಲಾದ ಅನೇಕ ಬಾಧಗಳು ಅನುಗತಧರ್ಮವನ್ನು ಅಂಗೀಕರಿಸದೆ ಇದ್ದರೆ ಬರುತ್ತವೆ. ಮತ್ತೂ 'ಅಯಂ ಗೌಃ ಅಯಂ ಗೌಃ' ಎನ್ನುವ ಅನುಗತವಾದ ಆಕಾರಪ್ರತ್ಯಯ (ಪ್ರತ್ಯಕ್ಷ) ದಿಂದಲೂ ಅನುಗತಧರ್ಮವಿದೆಯೆಂದು ಸಿದ್ಧಿಸುತ್ತದೆ. ಅನುಗತಾಕಾರ ಪ್ರತ್ಯಯವು ಅನುಗತಧರ್ಮ ವಿಲ್ಲದಿದ್ದರೆ ಕೂಡಲಾರದು. ಏವಂಚ ಗೋತ್ವಾದಿಗಳು ಅನುಗತಗಳೆಂದೂ ನಿತ್ಯಗಳೆಂದೂ ಅಂಗೀಕರಿಸಬೇಕು, ಎಂದರೆ—

ಮೂ || ಇತಿ ವ್ಯುತ್ಪತ್ತಿರಪಿ ಹಿ ಸಾದೃಶ್ಯೇನೈವ ಗಮ್ಯತೇ |
ಸರ್ವೇಷು ಯುಗಪಚ್ಛಬ್ದಃ ಸದೃಶೇಷು ಪ್ರವರ್ತತೇ || ೧೨೫ ||
ತಥಾಽಪಿ ಪ್ರಾಪ್ತಿತಸ್ತ್ವೇಕವಚನಾಚ್ಚ ವಿಶೇಷತಃ |
ಅಭೀಷ್ಟಾವಗತಿಶ್ಚ ಸ್ಯಾಚ್ಛಕ್ತಿಃ ಸಾದೃಶ್ಯಗಾ ಯತಃ ||
ತಾದೃಶೋಽಯಂ ಚ ತಚ್ಛಬ್ದಃ ಇತಿ ಜ್ಞಾಪಯತಿ ಸ್ಫುಟಂ || ೧೨೬ ||

ಅ || ಇತಿ=ಹೀಗೆ, ಹಿ=ಯಾವಕಾರಣದ್ದೆಸೆಯಿಂದ, ವ್ಯುತ್ಪತ್ತಿರಪಿ=ವ್ಯುತ್ಪತ್ತಿಯೂ, (ಗವಾದಿ ಪದಗಳಿಗೆ ಶಕ್ತಿಗ್ರಹವೂ) ಕಾರ್ಯ ಕಾರಣ ಭಾವಾವಧಾರಣ ವ್ಯಾಪ್ತಿಗ್ರಹಣಾದಿಗಳೂ, ಸಾದೃಶ್ಯೇನೈವ=ಸಾದೃಶ್ಯದಿಂದಲೇ, ಗಮ್ಯತೇ=ತಿಳಿಯಲ್ಪಡುತ್ತದೆ. (ಅಂದರೆ ಸಾದೃಶ್ಯದಿಂದಲೇ ವ್ಯುತ್ಪತ್ತ್ಯಾದಿಗಳು ಕೂಡುತ್ತವೆ. ಆದಕಾರಣ ಅದಕ್ಕಾಗಿ ಗೋತ್ವಾದಿಗಳಿಗೆ ಅನುಗತತ್ವವನ್ನು ಕಲ್ಪಿಸಕೂಡದು.) (ಸಾದೃಶ್ಯದಿಂದ ಶಬ್ದವ್ಯುತ್ಪತ್ತಿ ಪ್ರಕಾರವನ್ನು ತೋರಿಸುವುದಕ್ಕಾಗಿ ಉಪಕ್ರಮಿಸುತ್ತಾರೆ.) ಸದೃಶೇಷು=ಸದೃಶಗಳಾದ, ಸರ್ವೇಷು=ಎಲ್ಲಾ ಗೋಪಿಂಡಗಳಲ್ಲಿ, ಯುಗಪತ್=ಏಕಕಾಲದಲ್ಲಿ, ಶಬ್ದಃ=ಅಯಂ ಗೌಃ ಇದುಮೊದಲಾದ ಶಬ್ದವು, ಪ್ರವರ್ತತೇ = ಪ್ರವರ್ತಿಸುತ್ತದೆ. ತಥಾಪಿ=ಆದಾಗ್ಯೂ,ಪ್ರಾಪ್ತಿತಃ=ಯೋಗ್ಯತ್ವವಿದ್ದುದರಿಂದ, ಏಕವಚನಾತ್= ಗಾಂ ಎನ್ನುವ ಏಕವಚನವಿದ್ದುದರಿಂದಲೂ, ವಿಶೇಷತಶ್ಚ= 'ಶಬಲಾಂ, ಬಹುಲಾಂ, ಕಾಲಾಕ್ಷೀಂ' ಇತ್ಯಾದಿ ವಿಶೇಷಣವಿದ್ದುದರಿಂದಲೂ, ಅಭೀಷ್ಟಾವಗತಿಶ್ಚ=ಗಾಮಾನಯ ಎಂದು ಹೇಳಿದಾಗ ಅಭೀಷ್ಟವಾದ ಗೋಪಿಂಡದ ಅವಗತಿಯೂ, ಸ್ಯಾತ್ = ಆಗುವುದು, ಯತಃ = ಯಾವಕಾರಣ ದ್ದೆಸೆಯಿಂದ, ಶಕ್ತಿಃ=ಶಬ್ದಕ್ಕೆವಾಚಕತ್ವಶಕ್ತಿಯು,ಸಾದೃಶ್ಯಗಾ=ಸಾದೃಶ್ಯಸಂಬಂಧಿಯಾದುದು, (ಸಾದೃಶ್ಯಕ್ಕೆ ವ್ಯಾಪಕವಾದುದು) ಈ ವಾಕ್ಯದ್ದೆಸೆಯಿಂದ ನಿಶ್ಚಿತವಾಗಿದೆ. ಚ=ಯಾವಕಾರಣ ದ್ದೆಸೆಯಿಂದ, ಅಯಂ=ಕಾಣಲ್ಪಡತಕ್ಕದು, ತಾದೃಶಃ = ಉಪದೇಶಕಾಲದಲ್ಲಿ ಸನ್ನಿಹಿತವಾದ ಪಿಂಡದಿಂದ ಸದೃಶವಾದುದು, ಆದುದರಿಂದ ತಚ್ಛಬ್ದಃ ಇತಿ=ಆಶಬ್ದವೇ ವಾಚಕವಾಗಿ ಉಳ್ಳ ದ್ದೆಂದು, (ತಾಂ = ಆ ಶಕ್ತಿಯನ್ನು ತತ್ತದ್ವಿಷಯಕವಾಗಿ ಸಾದೃಶ್ಯವು) ಸ್ಫುಟಂ = ಸ್ಪಷ್ಟವಾಗಿ, ಜ್ಞಾಪಯತಿ=ತಿಳಿಸುತ್ತದೆ.

ತಾ || ನ್ಯಾಯಸುಧಾ— (1) 'ಗೋಸದೃಶೋಗವಯಃ' ಇದುಮೊದಲಾದ ಪ್ರತ್ಯಕ್ಷ ಸಿದ್ಧವಾಗಿರುವುದರಿಂದ ಸಾದೃಶ್ಯವೆನ್ನುವುದು ಪದಾರ್ಥಾಂತರವು. ಅದರಿಂದಲೇ ವ್ಯುತ್ಪತ್ತ್ಯಾದಿಗಳು ಕೂಡುತ್ತವೆ, ಆದಕಾರಣ ಅವಕ್ಕಾಗಿ ಗೋತ್ವಾದಿಗಳಿಗೆ ಅನುಗತತ್ವವನ್ನು ಕಲ್ಪಿಸಬೇಕಾಗಿಲ್ಲ. (2) ಶಬ್ದಗಳಸಂಗತಿಯನ್ನು ತಿಳಿಯಲಿಕ್ಕೆ ಉಪಾಯಗಳು ಅನೇಕವಿರುತ್ತವೆ. ಅದರಲ್ಲಿ ಯಾವಾಗ ಉಪದೇಶದಿಂದ ವ್ಯುತ್ಪತ್ತಿಯನ್ನು ಹೊಂದುತ್ತಾನೋ, ಆಗ 'ಅಯಂ ಗೌಃ' ಎನ್ನುವ ಉಪದೇಶವಾಕ್ಯವು ವ್ಯಾಪ್ತಿಗ್ರಾಹಕವಾಗಿ ಉಪಯುಕ್ತವಾಗುತ್ತದೆ. ಹೇಗೆಂದರೆ—ಸಾದೃಶ್ಯದಿಂದ ಎಲ್ಲಾ ಗೋಪಿಂಡಗಳಲ್ಲಿ ಏಕಕಾಲದಲ್ಲಿ 'ಅಯಂ' ಇತ್ಯಾದಿಶಬ್ದವು ಪ್ರವೃತ್ತವಾಗುತ್ತದೆ. 'ಅಯಂ ಗೌಃ' ಎನ್ನುವುದಕ್ಕೆ, ಇದು ಇದಕ್ಕೆ ಸದೃಶಗಳಾದವುಗಳೆಲ್ಲವೂ ಗೋಶಬ್ದವಾಚ್ಯಗಳು ಎನ್ನುವಅರ್ಥವು ವಕ್ತೃವಿಗೆ ಅಭಿಪ್ರೇತವಾಗಿದೆ. ಕೇಳುವವನೂ ಹಾಗೆ ನಿಶ್ಚಯಿಸಿಕೊಳ್ಳುತ್ತಾನೆ. ಇಬ್ಬರೂ ಎಲ್ಲಾ ಕಡೆಗಳಲ್ಲಿಯೂ ವ್ಯುತ್ಪತ್ತಿಯನ್ನು ಇಚ್ಛಿಸುವವರಾದುದರಿಂದ ವಾಕ್ಯವು ಏಕಪಿಂಡ ವಿಷಯಕವು ಎನ್ನುವ ಕಲ್ಪನೆಯು ಅಯುಕ್ತವು. (3) 'ಅಯಂಗೌಃ' ಇತ್ಯಾದಿವಾಕ್ಯವು ಏಕಪಿಂಡ ಮಾತ್ರವಿಷಯಕವಲ್ಲ. ಮತ್ತೆ ಇದು ಇದಕ್ಕೆ ಸದೃಶಗಳಾದವುಗಳೆಲ್ಲವೂ ಗೋಶಬ್ದವಾಚ್ಯಗಳು ಎಂದು ವ್ಯಾಪ್ತಿಪರವಾದರೆ ಆಗ ಸಂಗತಿಗ್ರಹಣೋತ್ತರ ಕಾಲದಲ್ಲಿ 'ಗಾಮಾನಯ' ಎಂದು

ಹೇಳಿದಾಗ ಗೋಶಬ್ದದಿಂದ ಎಲ್ಲಾಗೋಗಳ ಜ್ಞಾನವೂ ಬರಬೇಕಾಗುವುದು. ಅಭೀಷ್ಟವಾದ ಗೋವಿನ ಜ್ಞಾನವಾದರೂ ಹುಟ್ಟುತ್ತದೆ. ಅದುಹೇಗೆಂದರೆ—ಯದ್ಯಪಿ ಉಪದೇಶವು ಏಕಪಿಂಡ ವಿಶೇಷವಿಷಯಕವಲ್ಲ. ಆದಾಗ್ಯೂ ಗಾಮಾನಯ ಎಂದು ಹೇಳಿದಾಗ ಅಭೀಷ್ಟವಾದ ಗೋಪಿಂಡದ ಜ್ಞಾನವು ಬಂದೇಬರುತ್ತದೆ. ಅದಕ್ಕೇನೇ ಆನಯನ ಯೋಗ್ಯತೆಯು ಕೂಡುವುದು. ಅತೀತ ಅನಾಗತಗಳಾದ ಅತ್ಯಂತ ವಿಪ್ರಕೃಷ್ಟದೇಶದಲ್ಲಿರತಕ್ಕ ಗೋವುಗಳಿಗೆ ಆನಯನಯೋಗ್ಯತೆಯಿಲ್ಲವೆಂದಾಲೋಚಿಸಿ ಅವುಗಳಿಗೆ ಪರಿತ್ಯಾಗವು ಕೂಡಬಹುದು. ಆನಯನಯೋಗ್ಯತೆಯು ಸನ್ನಿಹಿತ ಸರ್ವಗೋವುಗಳಿಗೂ ಕೂಡುವುದರಿಂದ ಸನ್ನಿಹಿತಗಳಾದ ಸರ್ವಗೋವುಗಳಜ್ಞಾನವು ಏಕೆ ಆಗುವುದಿಲ್ಲವೆಂದರೆ ಗಾಂ ಎಂದು ಏಕವಚನವಿರುವುದರಿಂದ ಸರ್ವಗೋವುಗಳ ಪ್ರತೀತಿಯು ಬರುವುದಿಲ್ಲ. ಆದಾಗ್ಯೂ ಯಾವುದಾದರೊಂದು ಗೋಪಿಂಡದ ಜ್ಞಾನವು ಬರಬೇಕಾಗುವುದು. ಅಭೀಷ್ಟವಾದ ಗೋವಿನದ್ದೇಜ್ಞಾನವು ಬಾರದೆಹೋಗುವುದು ಎಂದು ಹೇಳಕೂಡದು. ಏಕೆಂದರೆ— 'ಶಬಲಾಂ ಬಹುಲಾಂ ಕಾಲಾಕ್ಷೀಂ' ಇತ್ಯಾದಿ ವಿಶೇಷಣ ಬಲದಿಂದ ವಿಶೇಷವಾದ ಅಭೀಷ್ಟವಾದ ಗೋವಿನ ಜ್ಞಾನವು ಕೂಡಬಹುದು. ಗೋಶಬ್ದಕ್ಕೆ ಎಲ್ಲಾ ಗೋವುಗಳಲ್ಲಿಯೂ ಶಕ್ತಿಗ್ರಹವು ಇದ್ದುದರಿಂದ ಗೋಶಬ್ದದಿಂದ ಎಲ್ಲಾ ಗೋವುಗಳ ಜ್ಞಾನವು ಬಂದೇಬರುತ್ತದೆ. ಆದರೆ ಲಿಂಗಪ್ರಕರಣಾದಿಗಳ ಬಲದಿಂದ ಪಿಂಡವಿಶೇಷದಲ್ಲಿಯೇ ಆನಯನಾದಿರೂಪಕಾರ್ಯಜ್ಞಾನವು ಬರುತ್ತದೆ ॥ ೧೨೫ ॥ ೧೨೬ ॥

ಹೀಗೆ ಅನುಗತವಾದ ಸಾಮಾನ್ಯವನ್ನು ಅಂಗೀಕರಿಸದೇನೇ ಸಾದೃಶ್ಯದಿಂದ ವ್ಯುತ್ಪತ್ತ್ಯಾದಿಗಳನ್ನು ಸಮರ್ಥಿಸಿದರು. ಯಾರು ಅನುಗತ ಸಾಮಾನ್ಯದಿಂದಲೇ ವ್ಯುತ್ಪತ್ತ್ಯಾದಿಗಳು ಬೇರೆ ರೀತಿಯಿಂದ ಅಲ್ಲ ಎಂದು ತಿಳಿಯುತ್ತಾರೋ ಅವರಿಗೆ ಬಾಧಕವನ್ನು ಹೇಳುತ್ತಾರೆ.

**ಮೂ ॥ ಜಾತಿತಶ್ಚೇತ್ಕಥಂ ತಾಸು ತತ್ರ ಚೇದನವಸ್ಥಿತಿಃ ।**
**ತಥೈವ ವ್ಯಕ್ತಿವಿಜ್ಞಾನಂ ವ್ಯಕ್ತಿತ್ವಾಭಾವದೂಷಿತಂ ॥ ೧೨೭ ॥**

**ಅ ॥** ಜಾತಿತಶ್ಚೇತ್=ಅನುಗತಜಾತಿನಿಮಿತ್ತಕವೇ ಸರ್ವತ್ರ ವ್ಯುತ್ಪತ್ತಿಯು ಕಾರ್ಯಕಾರಣಭಾವಾವಧಾರಣಾದಿಗಳೂ ಆಗುವುದಾದರೆ, ಆಗ ತಾಸು=ಜಾತಿಗಳಲ್ಲಿ, ಕಥಂ=ಹೇಗೆ, (ಜಾತ್ಯಾದಿ ಶಬ್ದ ವ್ಯುತ್ಪತ್ತಿಯು, ಅನುಗತವಾದ ಬುದ್ಧಿಯನ್ನು ಕುರಿತು ಕಾರಣತ್ವನಿಶ್ಚಯವು,) ಗೋತ್ವವು ನಿತ್ಯವು ಜಾತಿಯಾಗಿರುವುದರಿಂದ, ಇದು ಮೊದಲಾದ ಅನುಮಾನದಲ್ಲಿ ವ್ಯಾಪ್ತಿಜ್ಞಾನವು ಇತ್ಯಾದಿಗಳೆಲ್ಲವೂ ಆಗುವವು. ಅಂದರೆ ಜಾತಿಗಳಲ್ಲಿ ಜಾತಿಯಿಲ್ಲದಿರುವುದರಿಂದ ಅಲ್ಲಿ ವ್ಯುತ್ಪತ್ತ್ಯಾದಿಗಳು ಆಗಲಾರವು. (ಜಾತಿಗಳಲ್ಲಿಯೂ ಜಾತಿತ್ವವೆನ್ನುವ ಜಾತಿಯಿದೆ, ಅದರಿಂದಲೇ ಎಲ್ಲವೂ ಉಪಪನ್ನವಾಗುತ್ತವೆ. ಎಂದು ಯಾವನಾದರೂ ಹೇಳಿದರೆ ಅವರನ್ನು ಕುರಿತು ಹೇಳುತ್ತಾರೆ.) ತತ್ರ ಚೇತ್=ಜಾತಿಗಳಲ್ಲಿಯೂ ಜಾತಿತ್ವವೆನ್ನುವ ಜಾತಿಯು ಅಂಗೀಕರಿಸಲ್ಪಡುವುದಾದರೆ, ಜಾತಿತ್ವದಲ್ಲಿ ಜಾತಿತ್ವತ್ವ, ಜಾತಿತ್ವತ್ವದಲ್ಲಿ ಜಾತಿತ್ವತ್ವತ್ವ ಹೀಗೆ, ಅನವಸ್ಥಿತಿಃ= ಅನವಸ್ಥೆಯು, (ಬರುವುದು.) (ಸ್ಥಾನಾಂತರದಲ್ಲಿಯೂ ಬಾಧಕವನ್ನು ಹೇಳುತ್ತಾರೆ.) ತಥೈವ= (ಹೇಗೆ ಜಾತಿಜ್ಞಾನವು ಜಾತಿತ್ವಾಭಾವದಿಂದ ದೂಷಿತವಾಗಿದೆಯೋ) ಹಾಗೆಯೇ, ವ್ಯಕ್ತಿವಿಜ್ಞಾನಂ=ವ್ಯಕ್ತಿಗಳಿಗೆ ವ್ಯಕ್ತಿಶಬ್ದವಾಚ್ಯತ್ವವಿಜ್ಞಾನವು, ವ್ಯಕ್ತಿತ್ವಾಭಾವದೂಷಿತಂ= ವಿಜ್ಞಾನಕ್ಕೆ ಕಾರಣವಾದ ವ್ಯಕ್ತಿತ್ವಜಾತ್ಯಭಾವದಿಂದ ದೂಷಿತವಾಗಿದೆ.

**ತಾ ॥** (1) ಗೋತ್ವಾದಿ ಜಾತಿಗಳಲ್ಲಿ ಜಾತಿಶಬ್ದಪ್ರವೃತ್ತಿನಿಮಿತ್ತವಾದ ಜಾತಿತ್ವವೆನ್ನುವುದು ಯಾವುದು ಜಾತಿಯೋ ಅದಾದರೂ ತನ್ನಲ್ಲಿ ಇರುವುದಿಲ್ಲ. ತನ್ನಲ್ಲಿ ತಾನು ಇರುತ್ತದೆ

ನ್ನುವುದು ಅಪ್ರಾಣಿಕವಾಗಿದೆ. ಆದುದರಿಂದ ತನ್ನಿಂದ ವ್ಯತಿರಿಕ್ತಗಳೇ ಆದ ಜಾತಿಗಳಲ್ಲಿರುತ್ತ ದೆಂಗು ಹೇಳಬೇಕು. ತಥಾ ಚ ತನ್ನಿಂದ ವ್ಯತಿರಿಕ್ತಗಳಾದ ಜಾತಿಗಳಲ್ಲಿ ಜಾತಿಶಬ್ದ ಪ್ರವೃತ್ತಿ ಯಲ್ಲಿ ಇದು ನಿಮಿತ್ತವಾಗಲಿ. ತನ್ನಲ್ಲಿ ನಿಮಿತ್ತವಾಗಲಾರದು. ಆದುದರಿಂದ ಆ ಜಾತಿತ್ವ ರೂಪ ಜಾತಿಯಲ್ಲಿ ಅದು ಹೊರತಾದ ಜಾತಿಗಳಲ್ಲಿ ಒಂದು ಜಾತಿಶಬ್ದವು ಪ್ರವೃತ್ತಿಯಾಗಲಿಕ್ಕೆ ಜಾತ್ಯಂತರವು ನಿಮಿತ್ತವೆಂದಂಗೀಕರಿಸಬೇಕು. ಅಲ್ಲಿಯೂ ಹೀಗೆ, ಅಲ್ಲಿಯೂ ಹೀಗೆ, ಹೀಗೆ ಅನವಸ್ಥೆಯು. (2) ಹಾಗಾದರೆ ಗೋತ್ವ ಮೊದಲಾದ ಜಾತಿಗಳಲ್ಲಿ, ಜಾತಿಶಬ್ದವ್ಯುತ್ಪತ್ತಿಯು ಜಾತಿತ್ವ ಪ್ರಯುಕ್ತವಾದುದು. ಜಾತಿಯಲ್ಲಿರತಕ್ಕ ಜಾತಿತ್ವರೂಪ ಜಾತಿಯು ಒಂದೇಯಾದುದ ರಿಂದ ಅಲ್ಲಿ ಅನುಗತವಾದ ಜಾತಿಯಿಲ್ಲವಿದ್ದರೂ ಉಪದೇಶಾಧೀನವಾಗಿಯೇ ಶಕ್ತಿಗ್ರಹವು ಆಗುವುದಾದರೆ ಸರ್ವತ್ರಾಪಿ ಅನುಗತ ಜಾತಿಯಿಲ್ಲದೇನೇ ಉಪದೇಶಾದಿಗಳಿಂದಲೇ ಶಕ್ತಿಗ್ರಹವು ಆಗಬಹುದು. ಆದುದರಿಂದ ಅನುಗತ ಜಾತ್ಯಂಗೀಕಾರವು ವ್ಯರ್ಥವು. ॥ ೧೨೭ ॥

ಹಾಗಾದರೆ ಎಲ್ಲಾ ಶಬ್ದಗಳಿಗೂ ಜಾತಿಯೇ ನಿಮಿತ್ತವಾಗಿರುವುದರಿಂದ ದ್ರವ್ಯ-ಗುಣ-ಕರ್ಮಗಳಲ್ಲಿ ವ್ಯಕ್ತಿತ್ವರೂಪಜಾತಿಯು ಇದ್ದೇ ಇದೆ. ಆದಕಾರಣ ವ್ಯಕ್ತಿತ್ವರೂಪಜಾತಿಯಿಲ್ಲ ದಿರುವುದರಿಂದ ವ್ಯಕ್ತಿಗಳಲ್ಲಿ ವ್ಯಕ್ತಿ ಶಬ್ದವಾಚ್ಯತ್ವ ಜ್ಞಾನವು ಬರಲಿಕ್ಕಿಲ್ಲ ಎಂದು ಹಿಂದೆ ಹೇಳಿದ ದೋಷವಿಲ್ಲ ಎಂದಾಶಂಕಿಸಿದರೆ—

**ಮೂ ॥ ಯದಿ ತಚ್ಚಾಸ್ತಿ ತಸ್ಯಾಪಿ ವಿಶೇಷೇಷ್ವನವಸ್ಥಿತಿಃ ।**
**ಕಥಂ ಸ್ವರೂಪತ್ವಮಪಿ ಜ್ಞಾಯತೇಽನುಗತಂ ಯದಿ ॥ ೧೨೮ ॥**

ಅ ॥ ಯದಿ = ಯಾವ ಪಕ್ಷದಲ್ಲಿ, ತಚ್ಚ=ವ್ಯಕ್ತಿತ್ವವಾದರೂ, ಅಸ್ತಿ = ಇದೆಯೋ, ತರ್ಹಿ=ಹಾಗಾದರೆ, ತಸ್ಯಾಪಿ=ವ್ಯಕ್ತಿತ್ವಕ್ಕೂಕೂಡ, ವಿಶೇಷೇಷು=ವ್ಯಕ್ತಿಗಳಲ್ಲಿ, (ಪ್ರವೇಶವು ಬರುವುದು.) ಅಂತೂ ಅನವಸ್ಥಿತಿಃ=ಅನವಸ್ಥೆಯು. (ಸ್ಥಲಾಂತರದಲ್ಲಿ ಬಾಧಕವನ್ನು ಹೇಳು ತ್ತಾರೆ.) ಯದಿ=ಯಾವಪಕ್ಷದಲ್ಲಿ, ಅನುಗತಂ=ಅನುಗತಸಾಮಾನ್ಯವೇ ನಿಬಂಧನವಾಗಿವುಳ್ಳದ್ದೇ ಸರ್ವತ್ರ ವ್ಯುತ್ಪತ್ತಿಯಾದರೆ ಆಗ, ಸ್ವರೂಪಂ=ಸರ್ವಪದಾರ್ಥಗಳ ಸ್ವರೂಪವು, ಸ್ವರೂಪತ್ವ ಮಪಿ=ಸ್ವರೂಪಶಬ್ದ ವಾಚ್ಯವೆಂದು, ಕಥಂ=ಹೇಗೆ, ಜ್ಞಾಯತೇ=ತಿಳಿಯಲ್ಪಡುತ್ತದೆ. (ಅನು ಗತವಾದ ಸ್ವರೂಪತ್ವ ರೂಪವಾದ ಸಾಮಾನ್ಯವು ಇಲ್ಲ. ಸ್ವರೂಪಗಳಲ್ಲಿ ಸ್ವರೂಪಶಬ್ದವ್ಯುತ್ಪ ತ್ತಿಯು ಬಾರದೆಹೋಗುವುದು.

ತಾ ॥ (1) ಯಾವ ಶಬ್ದವು ಅನೇಕವಾಚಕವಾಗಿದೆಯೋ ಅವೆಲ್ಲವೂ ಜಾತಿನಿಮಿತ್ತಕವೆಂದು ಸ್ವೀಕರಿಸಿ ದ್ರವ್ಯಗುಣಕರ್ಮಗಳಲ್ಲಿ ವ್ಯಕ್ತಿತ್ವವೆನ್ನುವ ಜಾತಿಯನ್ನು ಅಂಗೀಕರಿಸುವುದಾದರೆ ವ್ಯಕ್ತಿತ್ವರೂಪ ಜಾತಿಯಲ್ಲಿಯೂ ದ್ರವ್ಯತ್ವ-ಗುಣತ್ವ ಕರ್ಮತ್ವಾದಿ ರೂಪಗಳಾದ ಜಾತಿಗಳಲ್ಲಿಯೂ ಜಾತಿಶಬ್ದಪ್ರವೃತ್ತಿಗಾಗಿ, ಜಾತಿತ್ವವೆನ್ನುವ ಜಾತಿಯನ್ನು ಅಂಗೀಕರಿಸಬೇಕಾಗುವುದು. ಅಂಗೀ ಕರಿಸುತ್ತೇವೆಂದರೆ— ಆ ವ್ಯಕ್ತಿತ್ವಜಾತಿಯೂ ಕೂಡ ಜಾತಿತ್ವವೆನ್ನುವ ಜಾತಿಯನ್ನು ಕುರಿತು ವ್ಯಕ್ತಿಯಾಗುವುದು. ತನ್ನಲ್ಲಿ ತಾನು ಇರುವುದು ಅಪ್ರಾಮಾಣಿಕವಾಗಿರುವುದರಿಂದ ಆ ಜಾತಿತ್ವ ಜಾತಿಯು ತನ್ನಲ್ಲಿ ಇರುವುದಿಲ್ಲ. ಆದುದರಿಂದ ದ್ರವ್ಯಗುಣ ಕರ್ಮಗಳಲ್ಲಿಯೂ, ವ್ಯಕ್ತಿತ್ವ ಜಾತಿಯ ಲ್ಲಿಯೂ ಕೂಡ ವ್ಯಕ್ತಿಶಬ್ದಪ್ರವೃತ್ತ್ಯರ್ಥವಾಗಿ ಮತ್ತೊಂದು ವ್ಯಕ್ತಿತ್ವವನ್ನು ಅಂಗೀಕರಿಸಬೇಕು. ಅಲ್ಲಿ ಪುನಃ ಜಾತಿಶಬ್ದವು ಪ್ರವೃತ್ತಿಯಾಗುವುದಕ್ಕಾಗಿ ಜಾತಿತ್ವವನ್ನು ಅಂಗೀಕರಿಸಬೇಕು. ಆದಕಾರಣ ಜಾತಿಯೂ ಕೂಡ ಜಾತ್ಯಾಶ್ರಯವಾಗಿ ವ್ಯಕ್ತಿಯಾಗುವುದು. ಆದರಲ್ಲಿ ಪುನಃ ವ್ಯಕ್ತಿತ್ವಾಂತರವು, ಹೀಗೆ ಅನವಸ್ಥೆಯು ॥ ೧೨೮ ॥

ಅನವಸ್ಥೆ ಮೊದಲಾದ ಅನಿಷ್ಟ ಪ್ರಸಂಗಕ್ಕೆ ವಿಪರ್ಯಯ ಪರ್ಯವಸಾನವನ್ನು ಸೂಚಿಸುತ್ತಾರೆ.

**ಮೂ ॥ ಏಕವ್ಯುತ್ಪತ್ತಿಪರ್ಯಂತಮನವಸ್ಥಾದಿ ದೂಷಿತಂ ।**
**ಕಲ್ಪನಾ ಗೌರವಾತ್ತೇನ ಯುಕ್ತಾ ನಾನುಗ ಕಲ್ಪನಾ ॥ ೧೨೯ ॥**

**ಅ ॥** ಏಕವ್ಯುತ್ಪತ್ತಿಪರ್ಯಂತಂ = ಕೇವಲವಾಗಿ ಅನುಗತವಾದ ಸಾಮಾನ್ಯಹೀನದಲ್ಲಿ ವ್ಯುತ್ಪತ್ತಿಯಾಗುವ ತನಕ, ಅನವಸ್ಥಾದಿದೂಷಿತಂ=ಅನವಸ್ಥೆ ಮೊದಲಾದ ದೋಷವು (ಬಂದೇ ಬರುತ್ತದೆ.) ಅಂದರೆ, ಅನುಗತಸಾಮಾನ್ಯರಹಿತವಾದುದರಲ್ಲಿ ವ್ಯುತ್ಪತ್ತಿಯಾಗುವತನಕ, ಈ ದೋಷವು ಬಂದೇಬರುತ್ತದೆ. ಅಂತೂ ಅನವಸ್ಥಾದೋಷವನ್ನು ಪರಿಹರಿಸುವುದಕ್ಕಾಗಿ ಅನುಗತವಾದ ಸಾಮಾನ್ಯವನ್ನು ಹೊರತೂ ವ್ಯುತ್ಪತ್ತಿಯನ್ನು ಅಂಗೀಕರಿಸಬೇಕು.) (ಅನುಗತವಾದ ಜಾತಿ ದೂಷಣವನ್ನು ಉಪಸಂಹಾರ ಮಾಡುತ್ತಾರೆ.) ತೇನ=ಬಾಧಕವಿದ್ದಪ್ರಯುಕ್ತವೂ, ಸಾಧಕವು ಇಲ್ಲದಿರುವುದರಿಂದಲೂ, ಕಲ್ಪನಾಗೌರವಾತ್ =(ಎಲ್ಲಾ ಕಡೆಗಳಲ್ಲಿ ವ್ಯಾವೃತ್ತವಾದುದೇ ಶಬ್ದ ಪ್ರವೃತ್ತಿಯಲ್ಲಿ ನಿಮಿತ್ತವೆಂದು ಹೇಳಬೇಕು. ವ್ಯುತ್ಪತ್ತಿಯಾದರೂ ಸಾದೃಶ್ಯವೇ ಕಾರಣವಾಗಿ ವುಳ್ಳದ್ದು. ಹೀಗೆ ಒಂದು ರೂಪವನ್ನು ಕಲ್ಪಿಸಿದುದರಿಂದಲೇ ಸರ್ವವೂ ಉಪಪನ್ನವಾಗುವಾಗ ಕೆಲವುಕಡೆ ಅನುಗತವಾದ ಸಾಮಾನ್ಯವು ನಿಮಿತ್ತವು, ಕೆಲವುಕಡೆ ಉಪಾಧಿಯು, ಕೆಲವು ಕಡೆ ಸ್ವರೂಪವೇ. ಹೀಗೆ ಅನೇಕವಾದುದನ್ನು ಕಲ್ಪಿಸಿದರೆ) ಕಲ್ಪನಾಗೌರವವು ಬರುವುದರಿಂದ, ಅನುಗಕಲ್ಪನಾ=ಅನುಗತವಾದ ಜಾತಿಕಲ್ಪನೆಯು, ಯುಕ್ತಾ=ಯುಕ್ತವಾದುದು, ನ=ಅಲ್ಲ ॥ ೧೨೯ ॥

ಹೀಗೆ ಸಮವಾಯಸ್ವರೂಪವನ್ನು ನಿರಾಕರಿಸಿ ಈಗ 'ತತ್ವಂ ಭಾವೇನ' ಎನ್ನುವಸೂತ್ರದಿಂದ ಸತ್ತಾದಂತೆ ಸಮವಾಯಕ್ಕೆ ಎಲ್ಲಾ ಕಡೆಗಳಲ್ಲಿಯೂ ಏಕತ್ವವು ನಿತ್ಯತ್ವವೂ ಎಂದು ಯಾವುದು ಹೇಳಲ್ಪಟ್ಟದೋ ಅದನ್ನೂ ನಿರಾಕರಿಸುತ್ತಾ ಈಗ ಏಕತ್ವವನ್ನು ನಿರಾಕರಿಸುವುದಕ್ಕೆ ಪೀಠಿಕೆಯನ್ನು ಹೇಳುತ್ತಾರೆ—

**ಮೂ ॥ ಔಪಾಧಿಕವಿಶಿಷ್ಟಾದ್ಯಮಪಿ ತದ್ವಸ್ತು ಕಿಂ ತತಃ ।**
**ಅನ್ಯತ್ತದೇವ ಚೇದಗ್ನಿಮತ್ವಂ ಕಿಂ ತತ್ರ ಭಣ್ಯತೇ ॥ ೧೩೦ ॥**

**ಅ ॥** ಔಪಾಧಿಕವಿಶಿಷ್ಟಾದ್ಯಮಪಿ, ಔಪಾಧಿಕ = ಉಪಾಧಿನಿಮಿತ್ತಕವಾದ ಪಾಚಕ ಯಾಜಕ ಮೊದಲಾದುದು, ವಿಶಿಷ್ಟವಿಶೇಷಣದಿಂದ ಕೂಡಿಕೊಂಡು ಇದ್ದುದು ನೀಲ, ಅಗ್ನಿಮತ್ ಮೊದಲಾದುದು, ಆದ್ಯಮಪಿ=ಉಪಲಕ್ಷಿತವಾದುದು, ವಸ್ತು=ವಸ್ತುವು, ತದ್ವಸ್ತು ಕಿಂ= ಉಪಾಧಿ ವಿಶೇಷಣ ಉಪಲಕ್ಷಣ ಈ ಮೂರರ ಸ್ವರೂಪವೋ, ತತಃ=ಉಪಾಧಿ ಮೊದಲಾದ ಮೂರರದ್ದೆಶೆಯಿಂದ, ಅನ್ಯತ್ ಕಿಂ=ಬೇರೆಯಾದುದೋ ಏನು? (ಹಾಗಾದರೆ ಔಪಾಧಿಕ ವಿಶಿಷ್ಟಾದಿಗಳು ಮೂರರಿಂದ ಅಭಿನ್ನವು ಎಂದರೆ) ತದೇವ ಚೇತ್=ಔಪಾಧಿಕಾದಿಗಳು ಉಪಾಧ್ಯಾದಿಗಳ ಸ್ವರೂಪವೆಂತೆಂದರೆ) ಅಗ್ನಿಮತ್ವಂ=ಧೂಮಾದ್ಯನುಮಾನಸಾಧ್ಯವಾದ ಅಗ್ನಿಮತ್ವರೂಪವಾದ ವಿಶಿಷ್ಟವು, (ಔಪಾಧಿಕವೂ ಉಪಲಕ್ಷಿತವೂ) ತತ್ರ=ವಿಶೇಷಣ ವಿಶೇಷ್ಯ ಸಂಬಂಧ ಇತ್ಯಾದಿಗಳಲ್ಲಿ, ಕಿಂ=ಯಾವುದು, ಭಣ್ಯತೇ=ಹೇಳಲ್ಪಡುತ್ತದೆ.

**ತಾ ॥** ಅಗ್ನಿಮದಾದಿ ವಿಶಿಷ್ಟವು ವಿಶೇಷಣ ವಿಶೇಷ್ಯ ಅವುಗಳ ಸಂಬಂಧಗಳಿಂದ ಅಭಿನ್ನವೆಂದಂಗೀಕರಿಸುವುದಾದರೆ, ಆವಾಗ ೧ ವಿಶೇಷಣ ವಿಶೇಷ್ಯ ತತ್ಸಂಬಂಧ ಇವು ಮೂರು ಪ್ರತ್ಯೇಕ

ವಾಗಿಯೂ ವಿಶಿಷ್ಟ ಸ್ವರೂಪವ್ರೋ, ಅಥವಾ ವಿಶೇಷಣಾದಿಗಳ ಮಧ್ಯದಲ್ಲಿ ಯಾವುದಾದರೊಂದರ ಸ್ವರೂಪವ್ರೋ ಯಾವುದಾದರೊಂದರ ಸ್ವರೂಪವೆನ್ನುವ ಪಕ್ಷದಲ್ಲಿಯೂ ವಿಶೇಷಣಭೂತವಾದ ಅಗ್ನಿಯೇ ಅಗ್ನಿಮತ್ ಎನ್ನುವ ವಿಶಿಷ್ಟಪದಾರ್ಥವ್ರೋ, ಅಥವಾ ವಿಶೇಷ್ಯರೂಪವಾದ ಪರ್ವತವು ಅಗ್ನಿಮತ್ ಎನ್ನುವ ವಿಶಿಷ್ಟವ್ರೊ, ಅಥವಾ ಅವುಗಳ ಸಂಯೋಗರೂಪವಾದ ಸಂಬಂಧವು, ಅಗ್ನಿಮತ್ ಎನ್ನುವ ವಿಶಿಷ್ಟವ್ರೋ? ಸಂಯೋಗವೇ ವಿಶಿಷ್ಟಎನ್ನುವ ಪಕ್ಷದಲ್ಲಿಯೂ ಕೇವಲ ಪರ್ವತ ಸಂಯೋಗವ್ರೋ, ಅಗ್ನಿಸಂಯೋಗವ್ರೋ, ಅಗ್ನಿಸಂಯೋಗವೆನ್ನುವ ಪಕ್ಷದಲ್ಲಿಯೂ, ಅಗ್ನಿ ಸಂಯೋಗಮಾತ್ರವ್ರೋ, ಪರ್ವತಕ್ಕೆ ಅಗ್ನಿಸಂಯೋಗವ್ರೋ, ಹೀಗೆಯೇ ಪಾಚಕಮೊದಲಾದ ಔಪಾಧಿಕ, ಉಪಲಕ್ಷಿತಗಳಲ್ಲಿಯೂ ಉಪಾಧ್ಯಾದಿತ್ರಯಾಸನ್ಯತ್ವ ವಿಷಯದಲ್ಲಿ ವಿಕಲ್ಪವನ್ನು ಇಟ್ಟುಕೊಳ್ಳಬೇಕು. ॥ ೧೩೦ ॥

ಪರ್ವತಕ್ಕೆ ಅಗ್ನಿಸಂಯೋಗವು ವಿಶಿಷ್ಟವು ಎನ್ನುವ ಅಂತ್ಯಪಕ್ಷವನ್ನು ಬಿಟ್ಟು ಬೇರೆ ಎಲ್ಲಾ ಪಕ್ಷಗಳನ್ನು ತಿರಸ್ಕರಿಸುತ್ತಾರೆ.

**ಮೂ ॥ ಅಗ್ನಿ ಸಂಯೋಗಮಾತ್ರಂ ಚೇತ್ ಭವೇತ್ತತ್ಸಿದ್ಧಸಾಧನಂ ॥**
**ಭೂಧರಸ್ಯಾಗ್ನಿಸಂಯೋಗೋ ಯದಿ ಷಷ್ಠ್ಯರ್ಥ ಏವ ಕಃ ॥ ೧೩೧ ॥**

ಅ ॥ ಅಗ್ನಿಸಂಯೋಗಮಾತ್ರಂ ಚೇತ್=ಅಗ್ನಿಸಂಯೋಗಮಾತ್ರವು (ಹಿಂದೆ ಹೇಳಿದ ಅಂತ್ಯಪಕ್ಷದಿಂದ ಇತರಗಳಾದ ಎಲ್ಲಾ ಪಕ್ಷಗಳೂ) (ಅಗ್ನಿಮಚ್ಛಬ್ದಾರ್ಥಃ=ಅಗ್ನಿಮತ್ ಎನ್ನುವ ಶಬ್ದಕ್ಕೆ ಅರ್ಥಭೂತವಾದ ವಿಶಿಷ್ಟವಾದರೆ,) ತತ್=ಧೂಮವತ್ವ ಮೊದಲಾದ ಅನುಮಾನವು, ಸಿದ್ಧಸಾಧನಂ=ಸಿದ್ಧಸಾಧನವು, ಭವೇತ್=ಆಗುವುದು. (ಅಂದರೆ ಅಗ್ನಿ ಪರ್ವತ ಸಂಯೋಗ ಗಳು ಸಮಸ್ತಗಳು) (ವಿಶೇಷಣ ವಿಶೇಷ್ಯ ಸಂಬಂಧಗಳು, ಎಲ್ಲವೂ) ವ್ಯಸ್ತಗಳು (ಅವಾಂತರ ಭೇದ ದಿಂದ ಭಿನ್ನಗಳು ಒಂದೊಂದು) ಅಗ್ನಿಯಿಂದ ಸಂಯೋಗವೂ, ಅಗ್ನಿಮತ ಎನ್ನುವ ಶಬ್ದದಿಂದ ವಾಚ್ಯವಾದ ವಿಶಿಷ್ಟವಾದರೆ ಧೂಮಾನುಮಾನವು ಸಿದ್ಧಸಾಧನವು ಆಗುವುದು. ವಿಶಿಷ್ಟವು ಅನುಮಾನಸಾಧ್ಯವಾಗಿದೆ. ಅಗ್ನಿ ಮೊದಲಾದ ವಿಶಿಷ್ಟವು ಪ್ರಮಾಣಾಂತರದಿಂದಲೇ ಸಿದ್ಧವಾಗಿದೆ.) (ಹಾಗಾದರೆ ಪರ್ವತಕ್ಕೆ ಅಗ್ನಿಯಿಂದ ಸಂಯೋಗವು ವಿಶಿಷ್ಟರೂಪವಾದುದು ಅಗ್ನಿಮತ್ ಶಬ್ದಾ ರ್ಥವು ಅನುಮಾನ ಸಾಧ್ಯವು ಎನ್ನುವ ಅಂತ್ಯಪಕ್ಷವಾಗಲಿ, ಆ ಪಕ್ಷದಲ್ಲಿ ಹಿಂದೆ ಹೇಳಿದ ದೋಷವಿಲ್ಲ. ಪರ್ವತ, ಅಗ್ನಿ ಸಂಯೋಗಗಳು ಸಮಸ್ತಗಳು, ವ್ಯಸ್ತಗಳೂ ಅಗ್ನಿಸಂಯೋ ಗವೂ ಸಿದ್ಧವಾಗಿದ್ದಾಗ್ಯೂ, ಪರ್ವತಕ್ಕೆ ಅಗ್ನಿಯಿಂದ ಯಾವುದು ಸಂಯೋಗವ್ರೋ ಅದು ಅನು ಮಾನದಿಂದ ಮೊದಲು ಸಿದ್ಧವಾಗಲಿಲ್ಲ ಎಂದು ಶಂಕಿಸುತ್ತಾರೆ.) ಭೂಧರಸ್ಯ=ಪರ್ವತಕ್ಕೆ, ಅಗ್ನಿಸಂಯೋಗಃ ಯದಿ=ಅಗ್ನಿಸಂಯೋಗವು, (ಅಗ್ನಿಮತ್ ಶಬ್ದಾರ್ಥವಾದ ವಿಶಿಷ್ಟವು ಅನು ಮಾನಸಾಧ್ಯವು ಎಂದು ಹೇಳಿದರೆ) (ದೂಷಣಮಾಡಲಿಕ್ಕೆ ಪ್ರಶ್ನಿಸುತ್ತಾರೆ) ಷಷ್ಠ್ಯರ್ಥ ಏವಕಃ= ಪರ್ವತಸ್ಯ ಎನ್ನುವ ಷಷ್ಠ್ಯರ್ಥವು ಯಾವುದು?

ತಾ ॥ (1) ಪರ್ವತವೂ, ಅಗ್ನಿಸಂಯೋಗವೂ ಸಿದ್ಧವಾಗಿದ್ದಾಗ್ಯೂ, ಪರ್ವತಕ್ಕೆ ಯಾವುದು ಅಗ್ನಿ ಸಂಯೋಗವ್ರೋ ಅದು ನಮಗೆ ಸಿದ್ಧವಾಗಲಿಲ್ಲ, ಆದುದರಿಂದ ಅದೇ ವಿಶಿಷ್ಟವು ಅಗ್ನಿಮತ್ ಶಬ್ದಾರ್ಥವು ಅನುಮಾನ ವೇದ್ಯವು ಎಂದು ಹೇಳುವವನು ಪರ್ವತಸ್ಯ ಎನ್ನುವ ಷಷ್ಠೀ ವಿಭಕ್ತಿಯಿಂದ ನಿರ್ದಿಷ್ಟವಾದ ಸಂಬಂಧವೇ ವಿಶಿಷ್ಟವು ಅಗ್ನಿಮತಶಬ್ದಾರ್ಥವು ಅನುಮಾನವೇದ್ಯವು ಎಂದು ಹೇಳಿದ ಹಾಗೆ ಆಯಿತು. ಬೇರೆ ಎಲ್ಲವೂ ಸಿದ್ಧವಾಗಿದೆ. ವೈಯಾ

ಕರಣರು ಷಷ್ಠ್ಯರ್ಥಗಳಾದ ಸಂಬಂಧಗಳನ್ನು ಅನೇಕ ಗಣನ ಮಾಡಿರುತ್ತಾರೆ. ಆದುದರಿಂದ ಆ ಸಂಬಂಧಗಳ ಮಧ್ಯದಲ್ಲಿ ಯಾವ ಸಂಬಂಧವು ಹೇಳಲಿಷ್ಟವಾಗಿದೆಂದು ಪ್ರಶ್ನೆಯು ಅಭಿಪ್ರಾಯವು, ॥ ೧೩೧ ॥

ಉತ್ತರವನ್ನು ಶಂಕಿಸುತ್ತಾರೆ—

**ಮೂ ॥ ಸಮವಾಯೋ ಯದಿ ಹ್ಯಸ್ಯ ಚೈಕತ್ವಾತ್ಸಿದ್ಧಸಾಧನಂ ।**
**ಯದ್ಯಸ್ಯೌಪಾಧಿಕೋ ಭೇದಃ ಕುತ ಏಕತ್ವಮಿಷ್ಯತೇ ॥ ೧೩೨ ॥**

ಅ ॥ ಹಿ=ಸಂಯೋಗವು ಗುಣವು, ಪರ್ವತವು ಗುಣಿಯು, ಗುಣಗುಣಿಗಳಿಗೆ ಸಮವಾಯ ಸಂಬಂಧವೆಂದು ಪ್ರಸಿದ್ಧವು, ಯದಿ ಸಮವಾಯಃ=ಸಮವಾಯ ಸಂಬಂಧವು ಷಷ್ಠ್ಯರ್ಥವೆಂದು ಹೇಳುವುದಾದರೆ, ಅಸ್ಯ ಚ = ಈ ಸಮವಾಯಕ್ಕಾದರೂ, ಏಕತ್ವಾತ್=ಏಕತ್ವವಿದ್ದುದರಿಂದ, ಸಿದ್ಧತ್ವಾತ್=ಸಿದ್ಧತ್ವವಿರೋಣದರಿಂದ, ಸಿದ್ಧಸಾಧನಂ=ಸಿದ್ಧಸಾಧನವು (ಅಂದರೆ ತಂತುಪಟಗಳಿಗೆ ಯಾವುದು ಸಮವಾಯವೋ ಅದೇವೇ ಪರ್ವತ, ಅಗ್ನಿ ಸಂಯೋಗಗಳ ಸಮವಾಯವೆಂದು ಸಮವಾಯಕ್ಕೆ ಏಕತ್ವವನ್ನು ಪರರು ಅಂಗೀಕರಿಸಿರುವರು. ತಂತುಪಟಗಳ ಸಮವಾಯವಾದರೂ ಪ್ರತ್ಯಕ್ಷದಿಂದಲಾಗಲೀ, ಅನುಮಾನದಿಂದಲಾಗಲೀ ಸಿದ್ಧನೇ ಆಗಿದೆ. ಸಮವಾಯವು ಎಲ್ಲಾ ಕಡೆಗಳಲ್ಲಿಯೂ ಒಂದೇ ಎಂದು ನೀವು ಹೇಳಿರುವುದರಿಂದ ಸಿದ್ಧಸಾಧನತ್ವವೇ ಬರುವುದು.) (ಹಾಗಾದರೆ ತಂತುಪಟಾದಿ ಸಮವಾಯವೂ ಪರ್ವತಾಗ್ನಿಸಂಯೋಗಾದಿ ಸಮವಾಯವೂ ಯದ್ಯಪಿ ಸ್ವರೂಪದಿಂದೊಂದೇ. ಆದಾಗ್ಯೂ ತಂತುಪಟ ಮೊದಲಾದ ಉಪಾಧಿ, ಪರ್ವತ, ಅಗ್ನಿಸಂಯೋಗ ಮೊದಲಾದ ಉಪಾಧಿ ಇವುಗಳಿಗೆ ಭೇದವಿದ್ದುದರಿಂದ ಇಂತಹ ಉಪಾಧಿಭೇದವೇ ನಿಮಿತ್ತವಾಗಿವುಳ್ಳ ಭೇದವೂ ಕೂಡ ಇದೆ. ಆದುದರಿಂದ ಔಪಾಧಿಕ ಭೇದವಿರೋಣದರಿಂದ ತಂತುಪಟಾದಿ ಸಮವಾಯಕ್ಕೆ ಸಿದ್ಧತ್ವವಿದ್ದರೂ ಪರ್ವತಾಗ್ನಿ ಸಂಯೋಗಕ್ಕೆ ಸಾಧ್ಯತ್ವವು ಉಪಪನ್ನವೇ ಆಗುತ್ತದೆ;ಎಂದರೆ) ಯದಿ=ಯಾವ ಪಕ್ಷದಲ್ಲಿ, ಅಸ್ಯ=ಸಮವಾಯಕ್ಕೆ, (ಸಾಧ್ಯತ್ವವು ಸಿದ್ಧಿಯಾಗುವುದಕ್ಕಾಗಿ) ಔಪಾಧಿಕಃ ಭೇದಃ = ಉಪಾಧಿನಿಮಿತ್ತಕವಾದ ಭೇದವು, ಇಷ್ಯತೇ=ಅಂಗೀಕರಿಸಲ್ಪಡುತ್ತದೋ, ತದಾ=ಆಗ, ಏಕತ್ವಂ=ಏಕತ್ವವು, ಕುತಃ = ಯಾವ ಕಾರಣದ್ದೆಸೆಯಿಂದ, ಇಷ್ಯತೇ=ಅಂಗೀಕರಿಸಲ್ಪಡುತ್ತದೆ. (ಅಂದರೆ ಸಮವಾಯಕ್ಕೆ ಏಕತ್ವವು ಸಂಖ್ಯಾವಿಶೇಷವಲ್ಲ. ಏಕೆಂದರೆ ನಿರ್ಗುಣವಾಗಿದೆ. ಮತ್ತೆ ಅಭೇದವು. ಪರರು ಭೇದಾಭೇದಗಳನ್ನು ಎಲ್ಲಿಯೂ ಅಂಗೀಕರಿಸಲಿಲ್ಲ. ಆದುದರಿಂದೆ ಸಮವಾಯದಲ್ಲಿ ಭೇದವನ್ನು ಅಂಗೀಕರಿಸುವಾಗ ಅದಕ್ಕೆ ವಿರುದ್ಧವಾದ ಅಭೇದವನ್ನು ಅಂಗೀಕರಿಸಲಿಕ್ಕೆ ಯೋಗ್ಯವಲ್ಲ) ॥ ೧೩೨ ॥

ಹಾಗಾದರೆ ಸ್ವಾಭಾವಿಕವಾದ ಏಕತ್ವವು ಸ್ವಾಭಾವಿಕವೇ ಆದ ಭೇದದಿಂದ ವಿರುದ್ಧವಾಗುವುದು. ಔಪಾಧಿಕವಾದ ಭೇದದಿಂದ ವಿರುದ್ಧವಾಗಲಾರದು. ಗಗನಾದಿಗಳಿಗೆ ಸ್ವಭಾವತಃ ಭೇದವಿಲ್ಲವಾದರೂ ಔಪಾಧಿಕವಾದ ಭೇದವು ದೃಷ್ಟವಾಗಿದೆ. ಸಮವಾಯದಲ್ಲಿ ಔಪಾಧಿಕವಾದ ಭೇದವನ್ನೇ ಅಂಗೀಕರಿಸಿದ್ದು. ಆದುದರಿಂದ ಸ್ವಾಭಾವಿಕವಾದ ಏಕತ್ವವನ್ನು ಅಂಗೀಕರಿಸುವುದು ಅಯೋಗ್ಯವು ಹೇಗೆ ಎಂದರೆ—.

**ಮೂ ॥ ನಾನಿರ್ವಾಚ್ಯಂ ಹಿ ತೇನೇಷ್ಟಮುತ ಔಪಾಧಿಕಾನ್ಯಯೋಃ ।**
**ಸತ್ಯತ್ವಾತ್ತೇನ್ಯೋ ವಿಶೇಷಃ ಸ್ಯಾನ್ಮಾಯಾವಾದ್ಯನ್ಯಥಾ ವದೇತ್ ॥೧೩೩॥**

ಅ || (ವಿರುದ್ಧಗಳೆಂದು ಅಭಿಮತಗಳಾದವುಗಳಿಗೆ ವಿರೋಧವಿಲ್ಲವೆನ್ನುವುದು ೧ ಕಾಲ ಭೇದದಿಂದಾಗುವುದು. ಉದಾ=ಅದೇ ಭೂತಲದಲ್ಲಿ ಅದೇ ಘಟವು ಒಂದು ಕಾಲದಲ್ಲಿರುತ್ತದೆ. ಇನ್ನೊಂದು ಕಾಲದಲ್ಲಿರುವುದಿಲ್ಲ. ೨ ಕೆಲವುಕಡೆ ದೇಶಭೇದದಿಂದ. ಉದಾ=ಆಗಲಿ ಅದೇ ಘಟವು ಒಂದು ದೇಶದಲ್ಲಿರುತ್ತದೆ. ಇನ್ನೊಂದು ದೇಶದಲ್ಲಿರುವುದಿಲ್ಲ. ೩ ಕೆಲವುಕಡೆ ವ್ಯಕ್ತಿ ಭೇದದಿಂದ, ಉದಾ=ಅದೇ ಭೂತಲದಲ್ಲಿ ಯಾವಾಗ ಒಂದು ಘಟವಿದೆಯೋ ಆಗಲೇ ಮತ್ತೊಂದು ಘಟವು ಇರುವುದಿಲ್ಲ. ೪ ಪಾರಮಾರ್ಥಿಕತ್ವ— ಅಪಾರಮಾರ್ಥಿಕತ್ವಗಳಿಂದ, ಉದಾ=ಭೂತಾ ಕಾಶದಲ್ಲಿ ರೂಪವು ಪಾರಮಾರ್ಥಿಕವು. ರೂಪಾಭಾವವು ಅಪಾರಮಾರ್ಥಿಕವು. ಅದರಲ್ಲಿ ಸಮವಾಯದ ಭೇದಾಭೇದವಿಷಯದಲ್ಲಿ ಮೊದಲು ಇಲ್ಲಿ ಹೇಳಿದ (ಕಾಲಭೇದ, ದೇಶಭೇದ, ವ್ಯಕಿ ಭೇದ ಎನ್ನುವ) ಮೂರು ವಿಧಗಳು ಕೂಡುವುದಿಲ್ಲವೆಂದು ಪರರಿಗೂ ಸಮ್ಮತವು. ಪಾರ ಮಾರ್ಥಿಕತ್ವ- ಅಪಾರಮಾರ್ಥಿಕತ್ವವೆನ್ನುವ ನಾಲ್ಕನೇ ಪ್ರಕಾರವೂ ಕೂಡುವುದಿಲ್ಲ. ಸಮವಾಯ ಭೇದಕ್ಕೆ ಅಪಾರಮಾರ್ಥಿಕತ್ವವೆಂದರೆ ಅಸತ್ವವ್ರೋ ಅನಿರ್ವಾಚ್ಯತ್ವವ್ರೋ? ಅಸತ್ವವೆಂದರೆ ಸಿದ್ಧ ಸಾಧನತ್ವವು. ಅನಿರ್ವಾಚ್ಯತ್ವವೆಂದು ಹೇಳಿದರೆ) ಹಿ=ಯಾವಕಾರಣದ್ದೆಶೆಯಿಂದ, ತೇನ= ವೈಶೇಷಿಕಾದಿಗಳಿಂದ, ಅನಿರ್ವಾಚ್ಯಂ=ಅನಿರ್ವಾಚ್ಯವಾದ ವಸ್ತುವು, ನೇಷ್ಟಂ=ಇಷ್ಟವಲ್ಲವೋ, ಅತಃ=ಆದುದರಿಂದ, ಅಸತ್ವವೂ ಅನಿರ್ವಾಚ್ಯತ್ವವೂ ಇಲ್ಲದಿರುವುದರಿಂದ, ಔಪಾಧಿಕಾ ಸ್ವಯೋಃ=ಔಪಾಧಿಕಕ್ಕೂ ಸ್ವಾಭಾವಿಕಕ್ಕೂ, ಸತ್ಯತ್ವಾತ್ = ಸತ್ಯತ್ವವಿದ್ದುದರಿಂದ, ಕೋ ವಿಶೇಷಃ ಸ್ಯಾತ್=ಏನು ವಿಶೇಷವು ಇರುವುದು. (ಅಂದರೆ ಸ್ವಾಭಾವಿಕದಂತೆ ಔಪಾಧಿಕವೂ ಸತ್ಯ ವಾಗಿರುವುದರಿಂದ ಪಾರಮಾರ್ಥಿಕತ್ವ,ಅಪಾರಮಾರ್ಥಿಕತ್ವ ರೂಪವಾದವಿರೋಧಶಾಂತಿಕಾರಣವು ಇಲ್ಲದಿರುವುದರಿಂದ ಔಪಾಧಿಕತ್ವಾದಿಗಳನ್ನು ಹೇಳಿದುದರಿಂದ ವಿರೋಧಪರಿಹಾರ ಮಾಡಿದಂತೆ ಆಗಲಿಲ್ಲ. ಸಮವಾಯ ಭೇದಕ್ಕೆ ಅನಿರ್ವಾಚ್ಯತ್ವವನ್ನು ನಾನು ಅಂಗೀಕರಿಸಿದರೆ ಆಗ ಯಾವ ದೋಷವು ಬರುವುದೆಂದರೆ, ಅಪಸಿದ್ಧಾಂತವೆನ್ನುತ್ತಾರೆ.) ಅನ್ಯಥಾ=ಅನಿರ್ವಾಚ್ಯವಾದ ವಸ್ತು ವನ್ನು ಅಂಗೀಕರಿಸಿದರೆ, (ವೈಶೇಷಿಕಾದಿಗಳೂ ಕೂಡ) ಮಾಯಾವಾದೀ=ಮಾಯಾವಾದಿಗಳು, ಭವೇತ್=ಆಗುವರು || ೧೩೩ ||

ಹಾಗಾದರೆ ಪ್ರಕಾರಭೇದದಿಂದಲೂ ವಿರೋಧಶಾಂತಿಯಾಗುವುದು. ಹೇಗೆಂದರೆ, ಅದೇ ಭೂತಲದಲ್ಲಿಯೇ ಆವಾಗಲೇ ನೀಲಪಟವು ಇದ್ದರೂ ಪೀತಪಟವು ಇರುವುದಿಲ್ಲವ್ರೋ, ಹಾಗೆಯೇ ಸಮವಾಯದಲ್ಲಿಯೂ ಔಪಾಧಿಕವಾದ ಭೇದವು ಸ್ವಾಭಾವಿಕವಾದ ಅಭೇದವನ್ನು ತಡಿಯುವುದಿಲ್ಲ ವೆಂದರೆ—

**ಮೂ || ಉಪಾಧಿಜನ್ಯಂ ತದ್ಗಮ್ಯಮಿತಿ ಚೌ(ವೌ)ಪಾಧಿಕಂ ಭವೇತ್ ||೧೩೪||**
**ಉಭಯತ್ರಾಪ್ಯನಂತಾಃ ಸ್ಯುಃ ಸಮವಾಯಾ ಇತಸ್ತತಃ ।**
**ಭಿನ್ನತ್ವಂ ಚೈವ ತೇಷ್ವಸ್ತಿ ಕೋ ವಿಶೇಷ ಉಪಾಧಿಗೇ || ೧೩೫ ||**

ಅ || ಉಪಾಧಿಜನ್ಯಂ=ಉಪಾಧಿಯಿಂದ ಹುಟ್ಟಿದ್ದೂ, ಎನ್ನುವುದಾಗಲೀ, ತದ್ಗಮ್ಯಂ ಇತಿ ವಾ=ಉಪಾಧಿಯಿಂದ ತಿಳಿಯಲ್ಪಡತಕ್ಕದ್ದು ಎನ್ನುವುದಾಗಲೀ, ಔಪಾಧಿಕಂ ಭವೇತ್= ಔಪಾಧಿಕವಾದುದು ಆಗುವುದು. ಉಭಯತ್ರಾಪಿ=(ಹೀಗಾದರೆ ಸಮವಾಯಭೇದಕ್ಕೆ ಔಪಾಧಿಕ ತ್ವವೆಂದರೆ ಉಪಾಧಿಜನ್ಯತ್ವವು ಉಪಾಧಿಗಮ್ಯತ್ವವು ಎಂದಾಗಲೀ ಹೇಳಬೇಕು. ತಥಾಚ) ಎರಡು ಪಕ್ಷಗಳಲ್ಲಿಯೂ, ಇತಸ್ತತಃ=ಸರ್ವದೇಶಕಾಲಗಳಲ್ಲಿರತಕ್ಕ ಅವಯವ ಅವಯವ್ಯಾದಿ ಉಪಾಧಿ ಗಳಿಗೆ (ಅನಂತ್ಯವಿದ್ದುದರಿಂದ) ಅನಂತಾಃ ಸಮವಾಯಾಃ = ಅನಂತಸಮವಾಯಗಳು, ಸ್ಯುಃ=

ಆಗುವವು. (ಉಪಾಧಿಗಳಿಗೆ ಆನಂತ್ಯವಿದ್ದರೂ ಸಮವಾಯಕ್ಕೆ ಆನಂತ್ಯವು ಹೇಗೆಂದರೆ) ಚ= ಯಾವಕಾರಣದ್ದೆಶೆಯಿಂದ, (ಔಪಾಧಿಕಭೇದವೆಂದರೆ ಉಪಾಧಿಗಳಿಗೇನೇ ಭೇದವೆನ್ನುವುದು ಅಲ್ಲವಷ್ಟೆ. ಹಾಗಿದ್ದರೆ 'ಸಮವಾಯಸ್ಯ ಭೇದಃ' ಎಂದು ಷಷ್ಠೀಪ್ರಯೋಗವು ಬಾರದೆ ಹೋಗುವುದು. ಏಕತ್ವವಿದ್ದುದರಿಂದ ಸಿದ್ಧಸಾಧನವು ಎಂದು ಹಿಂದೆ ಹೇಳಿದ ದೋಷಪರಿಹಾರವೂ ಆಗದೆ ಹೋಗುವುದು. ಮತ್ತೆ) ತೇಷು ಏವ = ಸಮವಾಯಗಳಲ್ಲಿಯೇ, ಭಿನ್ನತ್ವಂ ಚ ಅಸ್ತಿ=ಉಪಾಧಿ ಜನ್ಯವಾದುದಾಗಲೀ, ಉಪಾಧಿಗಮ್ಯವಾದುದಾಗಲೀ ಭಿನ್ನತ್ವವು ಇದೆ (ಭೇದಹೇತುಗಳಾದ ಉಪಾಧಿಗಳು ಅನಂತಗಳಾಗಿವೆ. ಆದುದರಿಂದ ಸಮವಾಯಾನಂತ್ಯವು ಹೇಗೆ ಇಲ್ಲ? ಆದಾಗ್ಯೂ ಔಪಾಧಿಕವೇ ಉಪಾಧಿಗಳ ಆನಂತ್ಯವು ಎಂದು ಹೇಳಿದ್ದಕ್ಕೆ ಏನು ಪ್ರಾಪ್ತವಾಯಿತೆಂದರೆ) ಉಪಾಧಿಗೇ=ಉಪಾಧಿಸಂಬಂಧಿಯಾದ (ಔಪಾಧಿಕವಾದ) ಭೇದದಲ್ಲಿ, ಕೋ ವಿಶೇಷಃ=ಯಾವ ವಿಶೇಷವು? (ಏಕೆ ಇದು ಅಭೇದವನ್ನು ತಡಿಯುವುದಿಲ್ಲ).

**ತಾ** ॥ (1) ಕಪ್ಪು ಬಟ್ಟೆ ಇದ್ದರೂ ಹಳದಿಬಟ್ಟೆಯಿಲ್ಲ ಎನ್ನುವಲ್ಲಿ ವಿಧಿನಿಷೇಧಗಳು ವಿಶಿಷ್ಟವಿಷಯಕಗಳಾದರೆ ಆಗ ವಿಷಯಗಳೇ ಬೇರೆ ಬೇರೆಯಾಗಿರುವುದರಿಂದ ವಿರೋಧವಿಲ್ಲ. ಏಕೆಂದರೆ— ಕಪ್ಪುಬಟ್ಟೆ ಹಳದಿಬಟ್ಟೆಗಳು ಬೇರೆ ಬೇರೆಯಾಗಿವೆ. ಪ್ರಕೃತದಲ್ಲಿ ಹೀಗೆ ಅಲ್ಲ. ಭೇದ ವಿಶೇಷವಿಲ್ಲದಿದ್ದರೂ ಭೇದಾಂತರವನ್ನು ಅಂಗೀಕರಿಸಬೇಕಾಗುವುದು. ತಥಾಚ ಏಕತ್ವವನ್ನು ಹೇಳಿದ್ದು ಅಯುಕ್ತವೇ. ವಿಶೇಷಣವಿಷಯಕಗಳಾದರೆ ಆಗ ಸಮವಾಯದಲ್ಲಿ ಭೇದವು ಇದ್ದೇ ಇದೆ. ಆ ಭೇದವಾದರೂ ಸಂಬಂಧಿಗಳಾದ ಉಪಾಧಿಗಳಿಂದ ಮಾಡಲ್ಪಟ್ಟದ್ದು, ಅಕೃತ್ರಿಮವಲ್ಲ ಎಂದು ಹೇಳಿದಂತೆ ಆಯಿತು. ತಥಾಚ ಘಟಾದಿಗಳ ಭೇದದಿಂದ ಸಮಾನವಾಯಿತು. ಆದುದರಿಂದ ಅಭೇದೋಕ್ತಿಯು ಅನುಪಪನ್ನವೇ. ಉಪಾಧಿಗಳಿಗೆ ಯಾವಾಗಲೂ ನಾಶವಿಲ್ಲದಿರುವುದರಿಂದ ಭೇದವು ಆಗಂತುಕವೆನ್ನುವುದು ಯುಕ್ತವಲ್ಲ ॥ ೧೩೪ ॥ ೧೩೫ ॥

ಔಪಾಧಿಕವೆಂದರೆ ಉಪಾಧಿಗಮ್ಯವು ಎನ್ನುವ ಪಕ್ಷವನ್ನು ಅಂಗೀಕರಿಸಿಕೊಂಡು ಹಿಂದೆ ಹೇಳಿದ ದೋಷವಿಲ್ಲವೆಂದು ಶಂಕಿಸುತ್ತಾರೆ—

**ಮೂ ॥ ಅವಿದ್ಯಮಾನ ಏವಾನ್ಯಃ ಸಮವಾಯೋಽಧಿಗಮ್ಯತೇ ।**
**ಉಪಾಧಿನಾ ತದ್ಗಮಕಮನುಮಾನಂ ನ ಮಾ ಭವೇತ್ ॥ ೧೩೬ ॥**

**ಅ** ॥ (ಉಪಾಧಿಗಮ್ಯವಾಗಿರುವುದರಿಂದ ಸಮವಾಯಭೇದವು ಔಪಾಧಿಕವು. ಜ್ಞಾನವು ಪ್ರಮೆಯಲ್ಲ. ಹೇಗೆ ಈ ಭೇದವು ಪಾರಮಾರ್ಥಿಕವಾಗುವುದು? ಮತ್ತೆ ಭ್ರಾಂತಿಯೇ. ಹೀಗೆ ಭೇದವು ಅಸತ್ತೆಂದು ಪ್ರಾಪ್ತವಾಗುವುದರಿಂದ ಸಿದ್ಧಸಾಧನತ್ವವು ಬಂದೇ ಬರುತ್ತದೆಂದು ಹೇಳಕೂಡದು. ಏಕೆಂದರೆ) ಅವಿದ್ಯಮಾನ ಏವ = ಇಲ್ಲದೇನೇ ಇರುವ, ಅನ್ಯಃ = ಇತರವಾದ, ಸಮವಾಯಃ= ಸಮವಾಯವು, ಉಪಾಧಿನಾ=ಆಯಾಯ ಉಪಾಧಿಯಿಂದ, ಅಧಿಗಮ್ಯತೇ= ತಿಳಿಯಲ್ಪಡುತ್ತದೆ. (ಈ ಪಕ್ಷವನ್ನು ದೂಷಿಸುತ್ತಾರೆ) ತದ್ಗಮಕಂ=ಅವಿದ್ಯಮಾನವಾದ ಸಮವಾಯಸತ್ವವನ್ನು ಪ್ರತಿಪಾದಿಸತಕ್ಕ, ಅನುಮಾನಂ = ಅನುಮಾನ ಸಮುದಾಯವು, ಮಾ ನ ಭವೇತ್=ಪ್ರಮಾಣವು ಆಗಲಾರದು.

**ತಾ** ॥ (1) ಹೇಗೆ ಅಂಗುಲಿಯಿಂದ ಚುಚ್ಚಲ್ಪಟ್ಟ ನಯನ ಮೊದಲಾದ ಉಪಾಧಿಗಳ ವಶದಿಂದ ಅವಿದ್ಯಮಾನವೇ ಆದ ಎರಡನೇ ಚಂದ್ರನು ತಿಳಿಯಲ್ಪಡುತ್ತಾನೋ, ಹಾಗೆಯೇ ಆಯಾಯ, ಸಂಬಂಧರೂಪಗಳಾದ ಉಪಾಧಿಗಳಿಂದ ಅವಿದ್ಯಮಾನಗಳೇ ಆದ ಅನೇಕ ಸಮವಾಯಗಳು

ತೋರುತ್ತವೆ. ಆ ಈ ಸಮವಾಯುಗಳು ಔಪಾಧಿಕ ಭೇದಗಳಿಂದ ಭಿನ್ನಗಳೆಂದು ಹೇಳಲ್ಪಡುತ್ತವೆ. ಅವುಗಳೇ ಅಗ್ನಿಮತ್ ಮೊದಲಾದ ಶಬ್ದಗಳಿಂದ ವಾಚ್ಯಗಳಾದ ಅನುಮಾನ ಸಾಧ್ಯಗಳಾದ ವಿಶಿಷ್ಟಾಕಾರಗಳು. ಅಂತೂ ಸಮವಾಯೈಕತ್ವಕ್ಕೆ ಹಾನಿಯಿಲ್ಲ. ಆರೋಪಿತ ಚಂದ್ರರು ಹೆಚ್ಚು ಇದ್ದಾಗ್ಯೂ ಅನಾರೋಪಿತ ಚಂದ್ರನು ಒಬ್ಬನೇ ಹೇಗೋ ಹಾಗೆಯೇ ಆರೋಪಿತಗಳಾದ ಸಮವಾಯುಗಳು ಹೆಚ್ಚು ಇದ್ದಾಗ್ಯೂ ಅನಾರೋಪಿತವಾದ ಸಮವಾಯುವು ಒಂದೇ. ಅನುಮಾನಗಳಿಗೆ ಸಿದ್ಧಸಾಧನತ್ವವೂ ಇಲ್ಲ. ಏಕೆಂದರೆ— ಅಂತಹ ಸಮವಾಯುಗಳು ಮೊದಲು ಅಸಿದ್ಧಗಳೇ ಆಗಿವೆ. (2) ಯದ್ಯಪಿ ಈ ಪಕ್ಷದಲ್ಲಿ ಧೂಮಾದ್ಯನುಮಾನಕ್ಕೆ ಸಿದ್ಧ ಸಾಧನತ್ವವಿಲ್ಲ. ಆದಾಗ್ಯೂ ಅವಿದ್ಯಮಾನವೇ ಆದ, ಸಮವಾಯುಸತ್ವವನ್ನು ಪ್ರತಿಪಾದಿಸತಕ್ಕ ಅನುಮಾನಗಳ ಸಮೂಹವು ಅಗ್ನಿಶೈತ್ಯವನ್ನು ಅನುಮೇಯಿಸಿಕೊಡತಕ್ಕ ಅನುಮಾನದಂತೆ ಬಾಧಿತವಿಷಯಕವಾದುದರಿಂದ ಪ್ರಮಾಣವು ಆಗಲಾರದು. ಮತ್ತು ಉಪಾಧಿಗಳು ಹೊರತು ಸಮವಾಯುಪ್ರತೀತಿಯು ಎಲ್ಲಿಯೂ ಇಲ್ಲದಿರುವುದರಿಂದ ಎಲ್ಲಾ ಕಡೆಗಳಲ್ಲಿಯೂ ಸಮವಾಯುವು ಇಲ್ಲವೆಂದೇ ಆಗಬೇಕಾಗುವುದು. ಆದುದರಿಂದ ಹಿಂದೆ ಹೇಳಿದಪ್ರಕಾರ ಎಲ್ಲಾ ಧೂಮಾದ್ಯನು ಮಾನಗಳಿಗೆ ಸಿದ್ಧಸಾಧನತ್ವಾದಿದೋಷಗಳು ಬರುವುದರಿಂದ ಸಮವಾಯುವು ಒಂದೇ ಎನ್ನುವುದು ಯುಕ್ತವಲ್ಲ. ಮತ್ತು ಸಮವಾಯಕ್ಕೆ ಏಕತ್ವವೇ ವಿವಕ್ಷಿತವಾದರೆ ಸರ್ವ ಆಗಮುಗಳನ್ನು ತಿರಸ್ಕರಿಸಿದಂತೆಯೇ ಆಗುವುದು. ಹೇಗೆಂದರೆ, ವಾಕ್ಯಬೋಧ್ಯಗಳಾದ, ಸಂಸರ್ಗಪ್ರತಿಯೋಗಿಕ ಗಳಾದ, ವಾಕ್ಯನಿರೂಪಿತಗಳಾದ ಸಂಸರ್ಗಗಳು ಬೇರೆ ಬೇರೆಯಾಗಿಯೇ ಸಿದ್ಧಗಳಾಗಿರುವುದ ರಿಂದ ಜ್ಞಾತಜ್ಞಾಪಕತ್ವವು ಬರಬೇಕಾಗುವುದರಿಂದ ವಾಕ್ಯಗಳೆಲ್ಲಾದಕ್ಕೂ ಅಪ್ರಾಮಾಣ್ಯವು ಬರಬೇಕಾಗುವುದು ॥ ೧೩೬ ॥

## ಸಮವಾಯುಕ್ಕೆ ಏಕತ್ವನಿರಾಸವು.

ಈಗ ಸಮವಾಯಕ್ಕೆ ನಿತ್ಯತ್ವವನ್ನು ನಿರಾಕರಿಸುತ್ತಾರೆ—

**ಮೂ ॥ ಏವಮೇವಾಸತಃ ಸತ್ತಾ ಸಮವಾಯೋಜನಿರ್ಮತಾ ।**
**ತತ್ರಾಪಿ ಹ್ಯುಕ್ತದೋಷಾಣಾಂ ನೈವ ಕಿಂಚಿನ್ನಿವಾರಕಂ ॥ ೧೩೭ ॥**

ಅ ॥ ಏವಂ=ಹೀಗೆಯೇ, ಅಂದರೆ ಹೇಗೆ ಸಮವಾಯುವು ಸರ್ವತ್ರ ಒಂದೇ ಎಂದಂಗೀ ಕರಿಸಿದರೆ ಸರ್ವಾನುಮಾನಗಳು ದುಷ್ಟಗಳೆಂದು ಹೇಳಲ್ಪಟ್ಟದ್ದೋ, ಹೀಗೆಯೇ ಸಮವಾಯಕ್ಕೆ ನಿತ್ಯತ್ವವನ್ನು ಅಂಗೀಕರಿಸಿದರೂ, ಅಸತಃ=ಮೊದಲು ಇಲ್ಲದಿದ್ದಕ್ಕೆ, ಸತ್ತಾಸಮವಾಯಃ= ಸತ್ತಾಸಂಬಂಧವು, ಜನಿಃ=ಉತ್ಪತ್ತಿಯು, ಮತಾ = ದುಷ್ಟವಾಗಬೇಕಾಗುವುದು. (ಅಂದರೆ ಸಮವಾಯಕ್ಕೆ ನಿತ್ಯತ್ವವಿದ್ದರೆ ಯಾವುದಕ್ಕೂ ಉತ್ಪತ್ತಿಯು ಬಾರದೆ ಹೋಗುವುದು.) (ಅದು ಹೇಗೆಂದರೆ) ತತ್ರಾಪಿ=ಅವರಲ್ಲಿಯೂ, ಉಕ್ತದೋಷಾಣಾಂ=ಸಿದ್ಧಸಾಧನತ್ವ ಮೊದಲಾದ ದೋಷಗಳಿಗೆ, ನಿವಾರಕಂ=ತಡಿಯುತಕ್ಕುದು, ಕಿಂಚಿತ್=ಯಾವುದೊಂದೂ, ನ=ಇಲ್ಲ.

ತಾ ॥ ಮೊದಲು ಇಲ್ಲದ್ದಕ್ಕೆ ಸತ್ತಾಸಮವಾಯುವು ಜನಿಯು (ಉತ್ಪತ್ತಿಯು) ಎಂದು ಪರರು ಜನಿಲಕ್ಷಣವನ್ನು ಹೇಳಿರುವರು. ಅದರಲ್ಲಿ ಸಮವಾಯುವು ನಿತ್ಯವೆಂದಾದರೆ ಆಗ ಸತ್ತಾ ಸಮವಾಯುರೂಪವಾದ ಘಟೋತ್ಪತ್ತಿಯು ಕುಲಾಲಾದಿ ವ್ಯಾಪಾರದ್ದೆಶೆಯಿಂದ ಮೊದಲು ಇದೆ. ಆದುದರಿಂದ ಅದೇ ಪ್ರಯೋಜನವಾಗಿವುಳ್ಳ ಕುಲಾಲವ್ಯಾಪಾರಕ್ಕೆ ಸಿದ್ಧಸಾಧನತ್ವವು ಬರುವುದು. ಆದಕಾರಣ ನಿತ್ಯತ್ವವು ಕೂಡುವುದಿಲ್ಲ. ತಥಾ ಚ ಸಮವಾಯಕ್ಕೆ ಏಕತ್ವನಿತ್ಯತ್ವಗಳು ಸರ್ವಥಾ ಕೂಡಲಾರವು ॥ ೧೩೭ ॥

ಹಾಗಾದರೆ ಇದೆಲ್ಲವೂ ಸ್ವವ್ಯಾಹತವು. ಲೌಕಿಕ, ವೈದಿಕ ವ್ಯವಹಾರವನ್ನು ಪರಿಪಾಲಿಸ ತಕ್ಕ ನೀವೂಕೂಡ ವಿಶಿಷ್ಟಾದಿಗಳನ್ನು ಅಂಗೀಕರಿಸಬೇಕು. ಅವರಲ್ಲಿಯೂ ಹಿಂದೆಹೇಳಿದ ದೋಷಗಳು ಬರುತ್ತವೆ, ಎಂದರೆ ವಿಶಿಷ್ಟಾದಿಗಳನ್ನು ಒಪ್ಪಿದರೆ ತಮ್ಮ ಮತದಲ್ಲಿ ದೋಷವಿಲ್ಲ ವೆಂದುತೋರಿಸುತ್ತಾರೆ --

**ಮೂ ॥ ಅಸ್ಮತ್ಪಕ್ಷೇ ವಿಶೇಷಸ್ಯ ಸರ್ವತ್ರಾಂಗೀಕೃತತ್ವತಃ !**
**ನಾಸ್ತಿ ದೋಷಃ ಕ್ವಚಿದ್ಭಾವೋ ಹ್ಯಭಾವಶ್ಚ ಸ ಏವ ಹಿ ॥ ೧೩೮ ॥**
**ಅಭಾವಸ್ಯ ಚ ಧರ್ಮಾಃ ಸ್ಯುರ್ಭಾವಾಸ್ತೇಷಾಂ ಚ ತೇಽಖಿಲಾಃ ॥**
**ಪ್ರತ್ಯಕ್ಷಮಾನತಃ ಸರ್ವಮೇತನ್ನೋ ವಾರಣಕ್ಷಮಂ ॥ ೧೩೯ ॥**

**ಅ ॥** ಅಸ್ಮತ್ಪಕ್ಷೇ = ನಮ್ಮ ಪಕ್ಷದಲ್ಲಿ, ವಿಶೇಷಸ್ಯ = ವಿಶೇಷಕ್ಕೆ, ಪರಿಣಾಮುಕ್ಕೂ, ಸರ್ವತ್ರ = ಎಲ್ಲಾ ಕಡೆಗಳಲ್ಲಿಯೂ, ಅಂಗೀಕೃತತ್ವತಃ = (ಜನಿತ್ವವು) ಅಂಗೀಕರಿಸಲ್ಪಟ್ಟ ರುವುದರಿಂದ, ಕ್ವಚಿತ್ = ಎಲ್ಲಿಯೂ. ಅಂದರೆ ಅತ್ಯಂತಾಭೇದಸ್ಥಳದಲ್ಲಿಯೂ ಭೇದಾಭೇದ ಸ್ಥಳದಲ್ಲಿಯೂ, ಅಥವಾ ಔಪಾಧಿಕ ಮೊದಲಾದ ಮೂರರಲ್ಲಿಯೂ, ದೋಷಃ = ದೋಷವು, ನಾಸ್ತಿ = ಇಲ್ಲ. (ಕೆಲವುಕಡೆ ಭಾವವು ವಿಶೇಷ್ಯವು, ವಿಶಿಷ್ಟಾಕಾರವು ಅಭಾವವಾಗಿ ತೋರುತ್ತದೆ. ಉದಾ = ಘಟವು ತಿಳಿಯುವುದಿಲ್ಲ, ಪ್ರಕೃತಿಯು ಕರ್ತೃ ಅಲ್ಲ. ಕೆಲವುಕಡೆ ಅಭಾವವು ವಿಶೇಷ್ಯವು. ವಿಶಿಷ್ಟಾಕಾರವು ಭಾವವೆಂದು ತೋರುತ್ತದೆ. ಉದಾ = ಅಭಾವವು ಇದೆ, ಅಭಾವವು ಪ್ರಮೇಯುವು ಎಂದು, ವಿಧಿ ನಿಷೇಧರೂಪಗಳಾದ ಭಾವ ಅಭಾವಗಳಿಗೆ ಅಭೇದವು ಕೂಡಲಾರದು. ಆದುದರಿಂದ ವಿಶೇಷ್ಯಾಭಿನ್ನವು ವಿಶಿಷ್ಟವೆಂದು ಹೇಗೆ ಹೇಳುವುದು ಎಂದರೆ) ಕ್ವಚಿತ್ = ಕೆಲವುಕಡೆ, ಭಾವಃ = ಯಾವುದು ಭಾವವೋ, ಸ ಏವ = ಅದೇ, ಕ್ವಚಿತ್ = ಕೆಲವುಕಡೆ, **ಅಭಾವಃ** = ಅಭಾವವು, (ಆಗುತ್ತದೆ.) ಅಭಾವಃ = ಯಾವುದು ಅಭಾವವೋ, ಸ ಏವ = ಅದೇವೇ, ಕ್ವಚಿತ್ = ಕೆಲವುಕಡೆ, ಭಾವಃ = ಭಾವವು. (ಆಗುತ್ತದೆ.) ಹಿ = ಇವೆರಡೂ ಪ್ರಸಿದ್ಧವೇ ಆಗಿದೆ. ಹಿ = ಪ್ರಸಿದವು, (ಅದು ಹೇಗೆಂದರೆ) ಅಭಾವಸ್ಯ ಚ = ಅಭಾವಕ್ಕೂ ಕೂಡ, ಭಾವಾಃ ಧರ್ಮಾಃ ಸ್ಯುಃ = ಭಾವಗಳು ಧರ್ಮಗಳು ಆಗುವವು. ತೇಷಾಂಚ = ಭಾವಗಳಿಗೂ ಕೂಡ, ತೇ ಅಖಿಲಾಃ = ಅನೇಕ ಅಭಾವಗಳು ಧರ್ಮಗಳು, ಸ್ಯುಃ = ಆಗುವವು. (ಇದನ್ನೂ ನಾವು ಅಂಗೀಕರಿಸುವು ದಿಲ್ಲವೆಂದರೆ) ಏತತ್ಸರ್ವಂ = ಯಾವಕಾರಣದ್ದೆಶೆಯಿಂದ ಅಭಾವಕ್ಕೂ ಭಾವಧರ್ಮಗಳು ಇವೆಯೋ ಭಾವಕ್ಕೂ ಅಭಾವಧರ್ಮಗಳು ಇವೆಯೋ ಆದುದರಿಂದ ಇವೆಲ್ಲವೂ, ಪ್ರತ್ಯಕ್ಷ ಮಾನತಃ = ಪ್ರತ್ಯಕ್ಷಮೊದಲಾದ ಪ್ರಮಾಣಗಳದ್ದೆಶೆಯಿಂದ (ಸಿದ್ಧವೇಆಯಿತು. ಆದುದರಿಂದ) ನೋ ವಾರಣಕ್ಷಮಂ = ತಡಿಯುಲಿಕ್ಕೆ ಶಕ್ಯವಲ್ಲ.

**ತಾ ॥** (1) ವಿಶಿಷ್ಟಾಕಾರವು ವಿಶೇಷಣವಲ್ಲ, ಸಂಬಂಧವಲ್ಲ, ಮತ್ತೆ ವಿಶೇಷ್ಯವು, ವಿಶೇಷ್ಯಮಾತ್ರವೂ ಅಲ್ಲ, ಆ ವಿಶಿಷ್ಟಾಕಾರವು ಎರಡುವಿಧವಿದೆ. ೧ ವಿಶೇಷ್ಯವು ಇರುವತನಕ ಇರ ತಕ್ಕುದು ಒಂದು. ೨ ವಿಶೇಷ್ಯವು ಇರುವ ತನಕ ಇಲ್ಲದಿರುವುದು ಇನ್ನೊಂದು ಅವುಗಳಲ್ಲಿ ಒಂದನೇದ್ದು ವಿಶೇಷ್ಯದಿಂದ ಅತ್ಯಂತಾಭಿನ್ನವು. ಹೇಗೆಂದರೆ— ಈಶ್ವರನು ಸ್ವರೂಪದಿಂದ ಸರ್ವಜ್ಞನು. ಹೀಗೆಯೇ ಎಲ್ಲಿ ಎಲ್ಲಿ ವಿಶೇಷಣ ಸಂಬಂಧವು ವಿಶೇಷ್ಯವಿರುವ ತನಕ ಇರತಕ್ಕುದೋ, ಅಲ್ಲಿ ಅಲ್ಲಿ ವಿಶಿಷ್ಟಾಕಾರವೂ ಕೂಡ ವಿಶೇಷ್ಯದಿಂದ ಅತ್ಯಂತಾಭಿನ್ನವು. ಆದಾಗ್ಯೂ ಭೇದಪ್ರತಿನಿಧಿ ಯಾದ ವಿಶೇಷವನ್ನು ಎಲ್ಲಾ ಪದಾರ್ಥಗಳಲ್ಲಿಯೂ ಅಂಗೀಕರಿಸಿದುದರಿಂದ ' ಈಶ್ವರಃ ಸರ್ವಜ್ಞಃ '

ಎಂದು ಅಪರ್ಯಾಯಶಬ್ದಪ್ರವೃತ್ತಿ ಮೊದಲಾದ ಅನುಪಪತ್ತಿದೋಷವು ಇರುವುದಿಲ್ಲ. ಈಶ್ವರನೇ ಸರ್ವಜ್ಞನು ಎಂದು ಅಭೇದವು ಪ್ರಮಿತವಾಗಿದೆ. ಭೇದವಿದೆ ಎನ್ನುವಲ್ಲಿ ಆದರೂ ನಿರವಕಾಶವಾದ ಪ್ರಮಾಣವಿಲ್ಲ. (2) ಎರಡನೇದ್ದು (ಯಾವದ್ವಿಶೇಷ್ಯಭಾವಿಯಾಗದೆ ಇದ್ದದ್ದು) ವಿಶೇಷ್ಯದಿಂದ ಭಿನ್ನಾಭಿನ್ನವು. ಹೇಗೆಂದರೆ — ಪರ್ವತದಿಂದ ಅಗ್ನಿವಿಶಿಷ್ಟವು. ಹೇಗೆ ಸಂಯೋಗವಿಶೇಷವುಳ್ಳ ತಂತುಗಳು ಪಟಾಕಾರವಾಗಿ ಪರಿಣತಗಳಾಗುತ್ತವೋ, ಹಾಗೆಯೇ ಆಗಂತುಕವಾದ ವಿಶೇಷಣಸಂಬಂಧದಿಂದ ವಿಶೇಷ್ಯಸ್ವರೂಪವು ವಿಶಿಷ್ಟಾಕಾರವಾಗಿ ಪರಿಣತವಾಗುತ್ತದೆ. ಅದರಲ್ಲಿ ಯದ್ಯಪಿ ಭೇದಾಭೇದಗಳು ವಸ್ತುವಿನ ಸ್ವರೂಪಭೂತಗಳು. ಆದಾಗ್ಯೂ ನಮ್ಮ ಪಕ್ಷದಲ್ಲಿ ವಿಶೇಷ್ಯವನ್ನು ಎಲ್ಲಾ ಕಡೆಗಳಲ್ಲಿಯೂ ಅಂಗೀಕರಿಸಿರುವುದರಿಂದ ಸಾಂಕರ್ಯದೋಷವಿಲ್ಲ. (3) ನಮ್ಮ ಮತದಲ್ಲಿ ಪರಿಣಾಮವೇ ಜನಿಯೆಂದಂಗೀಕರಿಸಿರುವುದರಿಂದ ಯಾವ ದೋಷವೂ ಇಲ್ಲ. ಅಂದರೆ — ಮೃದಾದಿಗಳಿಗೆ ಘಟಾದ್ಯಾಕಾರಾಪತ್ತಿಯೇ ಘಟಾದಿಗಳ ಉತ್ಪತ್ತಿಯು. ಸಮವಾಯವಲ್ಲ. ॥ ॥ ೧೩೮ ॥ ೧೩೯ ॥

ಅಭಾವ-ಭಾವಗಳಿಗೆ ಭಾವಾಭಾವ ಧರ್ಮತ್ವವು ಇರಲಿ. ಆದಾಗ್ಯೂ ಭಾವಕ್ಕೆ ಅಭಾವತ್ವವು, ಅಭಾವಕ್ಕೆ ಭಾವತ್ವವು ಕೆಲವು ಕಡೆ ಇದೆ ಎನ್ನುವಲ್ಲಿ ಏನು ಹೇಳಿದಂತೆ ಆಯಿತು ಎಂದರೆ —

**ಮೂ ॥ ಸರ್ವೇ ಭಾವಾ ಅಭಾವಾಶ್ಚ ಪದಾರ್ಥಾಸ್ತೇನ ಸರ್ವದಾ ।**
**ತಥಾಽಪಿ ಪ್ರಥಮಂ ಬುದ್ಧೇರ್ಯೋ ನಿಷೇಧಸ್ಯ ಗೋಚರ ॥**
**ಸೋಽಭಾವೋ ವಿಧಿಬುದ್ಧೇಸ್ತು ಗೋಚರಃ ಪ್ರಥಮಂ ಪರಃ ॥೧೪೦॥**

ಅ ॥ ತೇನ=(ಯಾವ ಕಾರಣದಿಂದ ಅಭಾವಭಾವಗಳಿಗೆ ಭಾವಾಭಾವಧರ್ಮವತ್ವವು ಸಿದ್ಧವಾಗಿದೆಯೋ, ಧರ್ಮಧರ್ಮಿಗಳಿಗೆ ಅಭೇದವೂ ಸಿದ್ಧವಾಗಿದೆಯೋ) ಆ ಕಾರಣದಿಂದ, ಸರ್ವೇ ಭಾವಾಃ ಪದಾರ್ಥಾಃ=ಎಲ್ಲಾ ಭಾವಪದಾರ್ಥಗಳೂ, ಅಭಾವಾಶ್ಚ=ಅಭಾವಗಳೂ ಕೂಡ, ಭವಂತಿ=ಆಗುತ್ತವೆ. ಅಭಾವಾಶ್ಚ ಸರ್ವೇ ಪದಾರ್ಥಾಃ=ಅಭಾವರೂಪಗಳಾದ ಎಲ್ಲಾ ಪದಾರ್ಥಗಳೂ, ಸರ್ವದಾ=ಯಾವಾಗಲೂ, ಭಾವಾಃ=ಭಾವಗಳು, ಭವಂತಿ=ಆಗುತ್ತವೆ. (ಹೀಗೆ ಭಾವಕ್ಕೂ ಅಭಾವತ್ವವು, ಅಭಾವಕ್ಕೂ ಭಾವತ್ವವು ಎಂದಾದರೆ ದ್ರವ್ಯಾದಿಗಳು ಭಾವಗಳೇ, ಪ್ರಾಗಭಾವಾದಿಗಳಾದರೂ ಅಭಾವಗಳೇ ಎಂದು ಸರ್ವತ್ರ ಪ್ರಸಿದ್ಧವಾದ ಭಾವ ಅಭಾವವೆನ್ನುವ ವಿಭಾಗವು ಹೇಗೆ ಕೂಡುತ್ತದೆಂದರೆ) ತಥಾಽಪಿ=ಆದಾಗ್ಯೂ, ಯಃ=ಯಾವುದು, ಪ್ರಥಮಂ=ಪ್ರಥಮದಲ್ಲಿ. ನಿಷೇಧಸ್ಯ ಬುದ್ಧೇಃ=ನಿಷೇಧಬುದ್ಧಿಗೆ, (ನಾಸ್ತಿ ಎನ್ನುವ ಬುದ್ಧಿಗೆ) ಗೋಚರಃ=ವಿಷಯವಾಗುತ್ತದೋ, ಸಃ=ಅದು, ಅಭಾವಃ=ಅಭಾವವು, ವಿಧಿಬುದ್ಧೇಸ್ತು=ವಿಧಿಬುದ್ಧಿಗಾದರೂ, (ಅಸ್ತಿ ಎನ್ನುವ ಬುದ್ಧಿಗೆ) ಪ್ರಥಮಂ=ಪ್ರಥಮದಲ್ಲಿ, ಗೋಚರಃ=ವಿಷಯವಾಗುತ್ತದೋ, ಸ=ಅದು, ಪರಃ=ಭಾವವು ॥ ೧೪೦ ॥

ಅಭಾವ ಭಾವಗಳಿಗೆ ಭಾವಾಭಾವ ಧರ್ಮವತ್ವವು ಪ್ರತ್ಯಕ್ಷ ಮೊದಲಾದ ಪ್ರಮಾಣಗಳಿಂದ ಸಿದ್ಧವಾಗಿದೆ ಎಂದುಕ್ತವಾಗಿದೆ. ಅದು ಹೇಗೆಂದರೆ —

**ಮೂ ॥ ತಸ್ಮಾತ್ಪ್ರಧ್ವಸ್ತಭೇದಾದಿ ಸದಿತ್ಯೇವಾವಗಮ್ಯತೇ ॥ ೧೪೧ ॥**
**ಅಸ್ತ್ಯಭಾವೋಽಸ್ತಿ ಚ ಧ್ವಂಸೋ ದೇಹಾಭಾವಶ್ಚ ಭಸ್ಮತಾ ।**
**ಇತ್ಯಾದಿ ಯುಜ್ಯತೇ ಸರ್ವಂ ಪ್ರತ್ಯಕ್ಷಾದಿ ಪ್ರಮಾಣತಃ ॥ ೧೪೨ ॥**

ಅ || ತಸ್ಮಾತ್=(ಯಾವ ಕಾರಣದಿಂದ ಅಭಾವಕ್ಕೆ ಭಾವಧರ್ಮತ್ವವು ಇದೆಯೋ) ಆದುದರಿಂದಲೇ, ಪ್ರಧ್ವಸ್ತ ಭೇದಾದಿ=ಪ್ರಧ್ವಂಸ, ಪ್ರಥಕ್ತ್ವ, ಪ್ರಮೇಯತ್ವ ಮೊದಲಾದುದು, ಅಂದರೆ ಪ್ರಧ್ವಂಸಾಭಾವಾದಿಗಳಿಗೆ ಪೃಥಕ್ತ್ವ ಪ್ರಮೇಯತ್ವ ಮೊದಲಾದ ಭಾವಧರ್ಮಗಳ ಸಮುದಾಯವು, ಸದಿತ್ಯೇವ=ಉಂಟೇ ಉಂಟೆಂದು, ಅವಗಮ್ಯತೇ=ಪ್ರತ್ಯಕ್ಷಾದಿಗಳಿಂದ ತಿಳಿಯಲ್ಪಡುತ್ತದೆ. (ಪ್ರಧ್ವಂಸವೂ ಪ್ರಾಗಭಾವದಿಂದಲಾಗಲೀ ಘಟದಿಂದಲಾಗಲೀ ಪ್ರತ್ಯೇಕವೂ, ಪ್ರಮೇಯವೂ, ಅಭಿಧೇಯವೂ ಎಂದೂ ತಿಳಿಯಲ್ಪಡುತ್ತದೆ. ಅಭಾವಕ್ಕೆ ಭಾವಧರ್ಮವನ್ನು ಅಂಗೀಕರಿಸದೆ ಇದ್ದರೆ ಈ ಪ್ರತ್ಯಕ್ಷ ವಿರೋಧವು ಬರುವುದು. 'ಘಟಃ ಘಟೋ ನ ಭವತಿ' ಎಂದು ಭಾವಕ್ಕೆ ಅನ್ಯೋನ್ಯಾಭಾವಧರ್ಮವತ್ವವು ಸ್ಪಷ್ಟವಾದುದರಿಂದ ತೋರಿಸಲಿಲ್ಲ.) (ಹೀಗೆ ಅಭಾವ ಭಾವಗಳಿಗೆ ಭಾವಾಭಾವಸ್ವರೂಪಕತ್ವವನ್ನು ಸಾಮಾನ್ಯವಾಗಿ ಸಾಧಿಸಿ ಪ್ರಕೃತ ದಲ್ಲಿ ಉದಾಹರಣೆ ಕೊಟ್ಟು ತೋರಿಸುತ್ತಾರೆ.) ತಸ್ಮಾತ್=(ಯಾವ ಕಾರಣದಿಂದ ಹೀಗೆ ಅಭಾವಕ್ಕೆ ಭಾವತ್ವವೂ ಭಾವಕ್ಕೆ ಅಭಾವತ್ವವೂ, ಉಪಪಾದಿಸಲ್ಪಟ್ಟಿತೋ,) ಆ ಕಾರಣದಿಂದ, ಅಭಾವಃ ಅಸ್ತಿ=ಅಭಾವವು ಇದೆ. ಅಸ್ತಿ ಚ ಧ್ವಂಸಃ=ಪ್ರಧ್ವಂಸಾಭಾವವೂ ಇದೆ. ದೇಹಾಭಾವಶ್ಚ=ದೇಹವಿಲ್ಲದಿರುವುದು, ಭಸ್ಮತಾ=ಭಸ್ಮತನವು. ಇತ್ಯಾದಿ=ಇದು ಮೊದಲಾದುದು, (ಅಂದರೆ ಹೀಗೆ ಅಭಾವಕ್ಕೆ ವಿಶೇಷ್ಯತ್ವವೂ, ಭಾವಕ್ಕೆ ವಿಶಿಷ್ಟತ್ವವೂ, ವಿಶೇಷಣ ವಿಶೇಷ್ಯಗಳಿಗೆ ಅಭೇದವೂ ಹಾಗೆಯೇ 'ಘಟೋ ನ ಜಾನಾತಿ' ಎಂದು ಭಾವವು ವಿಶೇಷ್ಯವು. ಅಭಾವವು ವಿಶಿಷ್ಟಾಕಾರವು. ಅವುಗಳಿಗೆ ಅಭೇದವು ಎಂದು ಹೇಳಿದ್ದು) ಯುಜ್ಯತೇ=ಕೂಡುತ್ತದೆ. (ಭಾವಾಭಾವಗಳಿಗೆ ಏಕತ್ವವು ವಿರುದ್ಧವಾಗದೆ ಇದ್ದರೆ ಆಗ ಘಟವೂ ಕೂಡ ಘಟಾಭಾವರೂಪವು ಏಕೆ ಆಗಲಾರದು ಎಂದರೆ) ಸರ್ವಂ=ಇವೆಲ್ಲವೂ ಅಂದರೆ ಭಾವಾಭಾವಗಳಾದ ವಿಶೇಷ್ಯ ವಿಶಿಷ್ಟಗಳಿಗೆ ಐಕ್ಯವು ಪ್ರತ್ಯಕ್ಷಾದಿ ಪ್ರಮಾಣತಃ=ಪ್ರತ್ಯಕ್ಷ ಮೊದಲಾದ ಪ್ರಮಾಣಗಳಿಂದ (ಸಿದ್ಧವಾಗಿದೆ.) (ಘಟಘಟಾಭಾವಗಳಿಗೆ ಐಕ್ಯವು ಸಿದ್ಧವಾಗಲಿಲ್ಲ. ಆದುದರಿಂದ ಅತಿಪ್ರಸಂಗವಿಲ್ಲ.) || ೧೪೧ || ೧೪೨ ||

ಅಥವಾ 'ಭಾವೋ ಹ್ಯಭಾವಶ್ಚ' ಇತ್ಯಾದಿಗಳಿಂದ ಪರಿಣಾಮವಾದವು ಹೇಳಲ್ಪಡುವುದು.

(1) ಕೆಲವರು ಪರಿಣಾಮವಾದಿಗಳು ಸತ್ತೇ ಆದ ವಸ್ತುವಿಗೆ ಅಭಿವ್ಯಕ್ತಿಯೇ ಜನಿಯೆನುತ್ತಾರೆ. ಆ ಮತವನ್ನು ತಿರಸ್ಕರಿಸುವುದಕ್ಕಾಗಿ 'ಭಾವೋ ಹಿ' ಇತ್ಯಾದಿ ಮೂಲವು. ಇಲ್ಲಿ ಭಾವ ಅಭಾವ ಶಬ್ದಗಳು ಸದಸತ್ಪರಗಳು. ತಥಾಚ ಯಾವುದು ಕಾರಣವೆಂದಭಿಮತವಾದ ಮೃತ್ಪಿಂಡವೋ ಅದು ಕಾರ್ಯವಾದ ಘಟರೂಪದಿಂದ ಅಸತ್ತಾಗಿದೆ. ಅದೇ ಮೃತ್ಪಿಂಡರೂಪದಿಂದ ಸತ್ತಾಗಿದೆ. ಅಥವಾ ಆ ಘಟವು ಹುಟ್ಟುವುದಕ್ಕಿಂತ ಮೊದಲು ಸತ್ತಾಗಿದೆ. ಅದೇ ಆಗ ಅಸತ್ತೂ ಆಗಿದೆ. ಅಥವಾ ಯಾವುದು ಕುಲಾಲಾದಿಗಳ ವ್ಯಾಪಾರದಿಂದ ಮೊದಲು ಘಟರೂಪದಿಂದ ಅಸತ್ತಾದ ಮೃತ್ಪಿಂಡವೋ ಅದೇನೇ ಆ ಮೇಲೆ ಘಟರೂಪದಿಂದ ಸತ್ತಾಗಿದೆ. ಅಂದರೆ ಕಾರ್ಯವು ಕಾರಣದಿಂದ ಭಿನ್ನಾಭಿನ್ನವು. ಆದುದರಿಂದಲೇ ಹುಟ್ಟುವುದಕ್ಕಿಂತ ಮೊದಲು ಸದಸತ್ತಾದುದು. ಆದ ಕಾರಣ ಕಾರಣವು ಕಾರಕವ್ಯಾಪಾರದ್ದೆಶೆಯಿಂದ ಮೊದಲು ಅಕಾರ್ಯರೂಪವಾಗಿ ಕಾರ್ಯರೂಪತ್ವವನ್ನು ಹೊಂದುವುದೇ ಜನಿಯು (2) ಹಾಗಾದರೆ ಒಂದಕ್ಕೇನೇ ಭಿನ್ನತ್ವವೂ, ಅಭಿನ್ನತ್ವವೂ, ಸತ್ವವೂ, ಅಸತ್ವವೂ ವಿರುದ್ಧವೆಂದರೆ 'ಅಭಾವಸ್ಯ ಚ ಧರ್ಮಾಃ ಸ್ಯುಃ' । ಎನ್ನುವ ೨ನೆ ಶ್ಲೋಕದಿಂದ ವಿರುದ್ಧತ್ವವಿಲ್ಲವೆಂದು ಹೇಳುತ್ತಾ ಒಂದಕ್ಕೇನೇ ಭಾವತ್ವವನ್ನೂ ಅಭಾವತ್ವವನ್ನೂ ಉಪಪಾದಿಸಿದರು. ಮೊದಲಿನಂತೆಯೇ ವ್ಯಾಖ್ಯಾನವು. (3) ಹೀಗೆ ಸಂಭಾವನೆಯಿರಲಿ, ನಿಶ್ಚಾಯಕವು ಯಾವುದು ಎಂದರೆ ಭೇದ ಅಸತ್ವಗಳನ್ನು

ಪರರೂ ಅಂಗೀಕರಿಸಿರುವುದರಿಂದ ಅಭೇದ ಸತ್ವಗಳನ್ನು ಪ್ರಮಾಣದಿಂದ 'ತಸ್ಮಾತ್ಪ್ರಧ್ವಸ್ತ' ಇತ್ಯಾದಿಗಳಿಂದ ಸಾಧಿಸಿದರು. ಹೇಗೆಂದರೆ '**ನಷ್ಟಾನಾಮಪಿ ವಸ್ತೂನಾಂ ಭೇದೋ ನೈವ ವಿನಶ್ಯತಿ**' ಎಂದು ಪ್ರಧ್ವಸ್ತವಾದ ಘಟಾದಿಗಳ ಭೇದಕ್ಕೆ ಸತ್ವವು ತಿಳಿಯಲ್ಪಡುತ್ತದೋ, '**ಘಟೋ** ಜಾಯತೇ ಘಟಂ ಜನಯತಿ' ಎಂದು ಹುಟ್ಟದೆ ಇದ್ದುದಕ್ಕೂ ಕರ್ತೃತ್ವವಾಗಲೀ ಕರ್ಮತ್ವವಾಗಲೀ ಅವಗತವಾಗುತ್ತದೋ ಆದಕಾರಣ ಕಾರ್ಯಕ್ಕೆ ಕಾರಣದಿಂದ ಅಭೇದವಿದ್ದುದರಿಂದ ಹುಟ್ಟುವುದಕ್ಕಿಂತ ಮೊದಲೂ ನಷ್ಟವಾದ ಮೇಲೆಯೂ ಸತ್ವವಿದ್ದುದರಿಂದಲೇ ಯುಕ್ತವಾಗುತ್ತದೆ. ಅತ್ಯಂತಾಸತ್ವವನ್ನು ಹೊಂದಿದ್ದಕ್ಕೆ ಸ್ವರೂಪಭೇದವು ಸತ್ತಾಗಿದೆ ಎನ್ನುವುದು ಕೂಡಲಾರದು. ಅತ್ಯಂತಾಸತ್ತಿಗೆ ಕಾರಕತ್ವವೂ ಕೂಡಲಾರದು. ಬೇರೆ ತೋರದಿರುವುದರಿಂದ ಕಾರ್ಯಕ್ಕೆ ಪ್ರತ್ಯೇಕ ಸತ್ವವಿಲ್ಲ. ಆದುದರಿಂದ ಸತ್ವವನ್ನೂ ಕಾರಣಾಭೇದವನ್ನೂ ಅಂಗೀಕರಿಸಬೇಕು. ಬಾಧಕವಿಲ್ಲದೆ ಔಪಚಾರಿಕತ್ವಕಲ್ಪನೆಯು ಯುಕ್ತವಲ್ಲ. (4) ಅಭಾವಕ್ಕೆ ಭಾವಗಳೂ ಧರ್ಮಗಳು ಆಗುತ್ತವೆ. ಅವುಗಳು ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧಗಳಾಗಿರುವುದರಿಂದ ಯುಕ್ತಗಳೇ ಆಗಿವೆ. ನಿರಾಕರಣಾರ್ಹಗಳಲ್ಲ. ಇದನ್ನು 'ಅಸ್ತ್ಯಭಾವಃ' ಎನ್ನುವುದರಿಂದ ವಿಶದೀಕರಿಸಿದರು. ಘಟ ಮೊದಲಾದ ಭಾವಪದಾರ್ಥಗಳಿಗೆ ಪಟಾನ್ಯೋನ್ಯಾಭಾವಧರ್ಮಕತ್ವವೂ ಪ್ರತ್ಯಕ್ಷಾದಿ ಪ್ರಮಾಣಸಿದ್ಧವು ॥ ೧೩೮ ॥ ೧೩೯ ॥ ೧೪೦ ॥ ೧೪೧ ॥ ೧೪೨ ॥

ಅಭಾವದಲ್ಲಿಯೂ ಪೃಥಕ್ತ್ವವದೆ ಎಂದು ಯಾವುದು ಹೇಳಲ್ಪಟ್ಟದೋ, ಅದಯುಕ್ತವು. ಪ್ರಮಾಣವಿಲ್ಲ. ಅಭಾವದಲ್ಲಿ ಭೇದವ್ಯವಹಾರವು ಸ್ವರೂಪಭೇದದಿಂದಲೇ ಕೂಡುತ್ತದೆ. ಪೃಥಕ್ತ್ವವು ಸ್ವರೂಪಭೇದದಿಂದ ಬೇರೆಯಾಗಿದೆ ಎಂದಾಶಂಕಿಸಿದರೆ—

**ಮೂ ॥ ಅನ್ಯೋನ್ಯಾಭಾವಭೇದೌ ಚ ಪೃಥಕ್ತ್ವಂ ಚ ಪೃಥಕ್ಪೃಥಕ್ ।**
**ಯತ್ಕಲ್ಪಯಂತಿ ತಚ್ಚೈವ ಕಲ್ಪನಾಗೌರವಾದ್ಗತಂ ॥**
**ಪರ್ಯಾಯತ್ವೇನ ತೇ ಶಬ್ದಾಃ ಜ್ಞಾಯಂತೇ ಸರ್ವ ಏವ ಹಿ ॥೧೪೩॥**

ಅ ॥ ಅನ್ಯೋನ್ಯಾಭಾವಭೇದೌ ಚ=ಅನ್ಯೋನ್ಯಾಭಾವ ಭೇದಗಳೂ, ಪೃಥಕ್ತ್ವಂ ಚ= ಪೃಥಕ್ತ್ವವೂ ಕೂಡ, ಪೃಥಕ್ಪೃಥಕ್=ವಿಭಿನ್ನಗಳೇ ಎಂದು, ಯತ್=ಯಾವುದನ್ನು, ಕಲ್ಪಯಂತಿ=ವೈಶೇಷಿಕಾದಿಗಳು ಕಲ್ಪಿಸುತ್ತಾರೋ, ತಚ್ಚ=ಅದಾದರೂ, ಕಲ್ಪನಾಗೌರವಾತ್=ಕಲ್ಪನಾಗೌರವವು ಇದ್ದುದರಿಂದ ಗತಮೇವ=ಮೊದಲೇ ನಿರಾಕೃತವಾಗಿದೆ. (ಹೇಗೆ ಕಲ್ಪನಾಗೌರವಾದಿಗಳೆಂದರೆ) ಸರ್ವ ಏವ ತೇ ಶಬ್ದಾಃ=ಲೌಕಿಕಗಳೂ ವೈದಿಕಗಳೂ ಆದ, ಆ ಎಲ್ಲಾ ಅನ್ಯೋನ್ಯಾಭಾವ, ಪೃಥಕ್ತ್ವ, ಭೇದ ಎನ್ನುವ ಶಬ್ದಗಳೂ, ಪರ್ಯಾಯತ್ವೇನ=ಕ್ರಮಪ್ರಯೋಜ್ಯಗಳಾಗಿ (ಸಹ ಪ್ರಯೋಗಾನರ್ಹಗಳಾಗಿಯೇ)ಜ್ಞಾಯಂತೇ=ತಿಳಿಯಲ್ಪಡುತ್ತದೆ. ಹಿ=ಪ್ರಸಿದ್ಧವು ॥ ೧೪೩ ॥

## ಅನ್ಯೋನ್ಯಾಭಾವ ಭೇದಪೃಥಕ್ತ್ವಗಳಿಗೆ ಭೇದ ಹೇಳಿದರೆ ದೋಷನಿರೂಪಣವು.

**ಸ. ರ. ವಿ.** ಭೇದಕ್ಕೆ ವಸ್ತುಸ್ವರೂಪತ್ವ ವಿಷಯದಲ್ಲಿ ಮಾಯಿಗಳು ಏನು ದೂಷಣ ಹೇಳಿರುವರೋ ಅದನ್ನು ಅನುವಾದಮಾಡಿ ದೂಷಿಸುತ್ತಾರೆ.

**ತಾ ॥ ನ್ಯಾಯಸುಧಾ**— (1) ಮಾಯಾವಾದಿಗಳು ಹೇಳುವರು:— ಸ್ವರೂಪಭೇದದಿಂದ ಅತಿರಿಕ್ತಗಳಾಗದೆ ಇರುವ ಅನ್ಯೋನ್ಯಾಭಾವ ಪೃಥಕ್ತ್ವಗಳಿಗೆ ಭಾವಧರ್ಮತ್ವವೂ ಅಭಾವಧರ್ಮತ್ವವೂ ತೋರುವುದರಿಂದ ಎಲ್ಲಾ ಪದಾರ್ಥಗಳಿಗೂ ಭಾವಾಭಾವರೂಪತ್ವವು

ಸಿದ್ಧಿಸುವುದೆಂದು ಯಾವುದು ಹೇಳಲ್ಪಟ್ಟದೋ, ಅದಯುಕ್ತವು. ಭೇದಕ್ಕೆ ವಸ್ತುಸ್ವರೂಪತ್ವವೇ ಕೂಡಲಾರದು. ಹೇಗೆಂದರೆ, ಭಿದಿರ್ ವಿದಾರಣೇ ಎನ್ನುವ ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ ಭೇದಶಬ್ದವು ವಿದಾರಣಾರ್ಥಕವು. ವಿದಾರಣರೂಪವಾದ ಭೇದವು ಭಾವಸ್ವರೂಪವಾದರೆ ಭಾವಕ್ಕೂ ವಿದಾರಣವು ಆಗುವುದು. ಹಾಗೆಯೇ ಭಿನ್ನ ಘಟಭಾಗಗಳಿಗೂ ಭೇದಸ್ವರೂಪವತ್ವವು ಇದ್ದುದರಿಂದ ಅಲ್ಲಿಯೂ ವಿದಾರಣವು ಆಗಬೇಕಾಗುವುದು. ಹೀಗೆಯೇ ಅದರ ಅವಯವಾವಯವಗಳಲ್ಲಿ ಎಂದು ಹೀಗೆ ಈ ಕ್ರಮದಿಂದ ಕೊನೆಗೆ ಎಲ್ಲಾ ಅವಯವಗಳಿಗೆ ವಿದಾರಣದಿಂದ ಶೂನ್ಯತ್ವವು ಬರಬೇಕಾಗುವುದು. (2) ಮತ್ತು ಭೇದವು ವಸ್ತುಸ್ವರೂಪವಾದರೆ ಅದರಲ್ಲಿ ಏಕತ್ವವು ಇರಲಾರದು. ಏಕತ್ವವಿಲ್ಲವಾದರೆ ಅನೇಕತ್ವವೂ ಇರಲಾರದು. ಏಕತ್ವ, ಅನೇಕತ್ವವಿಲ್ಲದಿರುವುದು ಶೂನ್ಯವೇ ಆಗಬೇಕಾಗುವುದು. (3) ಮತ್ತು ಭೇದವು ವಸು ಸ್ವರೂಪವಾದರೆ ಆಗ ಪ್ರತಿಯೋಗ್ಯಪೇಕ್ಷೆಯು ಇಲ್ಲದೆ ಹೋಗಬೇಕಾಗುವುದು. ಸ್ವರೂಪಕ್ಕೆ ಯಾವುದರ ಅಪೇಕ್ಷೆಯೂ ಇಲ್ಲವಷ್ಟೆ! ಘಟದ್ದೆಸೆಯಿಂದ ಪಟಕ್ಕೆ ಭೇದವು ಎಂದು ಭೇದವು ಸಪ್ರತಿಯೋಗಿಕವಾಗಿ ತೋರಿದಂತೆ ಘಟದ್ದೆಸೆಯಿಂದ ಪಟವು ಎಂದು ಪಟಾದಿಸ್ವರೂಪಕ್ಕೆ ಸಪ್ರಯೋಗಿಕತ್ವಪ್ರತೀತಿಯೂ ಇಲ್ಲವಷ್ಟೆ! 'ಘಟೋ ಭಿನ್ನಃ' 'ಘಟಸ್ಯ ಭೇದಃ' ಎಂದು ವಿಶೇಷಣ ವಿಶೇಷ್ಯಭಾವ ಸಂಬಂಧಪ್ರತೀತಿಯೂ ಕೂಡ ಭೇದವು ವಸ್ತುಸ್ವರೂಪವಾದರೆ ಕೂಡದೆ ಹೋಗಬೇಕಾಗುವುದು. ತಾನೇ ತನಗೆ ವಿಶೇಷಣವಾಗಲೀ ಸಂಬಂಧಿಯಾಗಲೀ ಆಗುವುದಿಲ್ಲವಷ್ಟೆ. (4) ಸಂಶಯ ವಿಪರ್ಯಯಗಳೂ ಕೂಡ ಇಲ್ಲವೆಂದಾಗಬೇಕಾಗುವುವು. ಧರ್ಮಿಭೇದಾಗ್ರಹ ನಿಮಿತ್ತವಾಗಿ ಅವುಗಳು ಹುಟ್ಟುವುವು. ಧರ್ಮಿಯನ್ನು ವಿಷಯೀಕರಿಸಿಕೊಂಡು ಸಂಶಯವಿಪರ್ಯಯಗಳು ಬರುವುದಾದರೆ ಆಗ ಧರ್ಮಿಸ್ವರೂಪ ಭೂತವಾದ ಭೇದವೂ ಕೂಡ ಗೃಹೀತವಾಗುವುದರಿಂದ ಭೇದಾಗ್ರಹ ರೂಪ ಕಾರಣನೇ ಇಲ್ಲದಿರುವುದರಿಂದ ಸಂಶಯ ವಿಪರ್ಯಯಗಳಿಗೆ ಅವಕಾಶವಿಲ್ಲ. ಧರ್ಮಿಯನ್ನು ವಿಷಯೀಕರಿಸಿಕೊಂಡು ಬಾರದೆ ಇರುವುದಾದರೆ ಧರ್ಮಿಜ್ಞಾನ ರೂಪಕಾರಣವಿಲ್ಲದಿರುವುದರಿಂದ ಸಂಶಯವಿಪರ್ಯಯಗಳು ಕೂಡುವುದಿಲ್ಲ. (5) 'ಅಸ್ಮಾತ್ ಅಯಂ ಭಿನ್ನಃ' ಎಂದು ಪ್ರತಿಯೋಗಿ ವಿಶಿಷ್ಟವಾಗಿ ತೋರುವ ಭೇದವು ವಸ್ತುವಿನ ಸ್ವರೂಪವಾದರೆ ಆಗ ಸಂಬಂಧಿಯಿಂದ ಕೂಡಿದ ಭೇದವೂ ಸ್ವರೂಪದಲ್ಲಿಯೇ ಅಂತರ್ಭೂತವಾಗುವುದರಿಂದ ಪ್ರತಿಯೋಗಿಯು ಸ್ವರೂಪದಲ್ಲಿಯೇ ಸೇರಿಹೋಗುವುದರಿಂದ ಸರ್ವಾದ್ವೈತವೇ ಬರಬೇಕಾಗುವುದು ಎಂದು ಭೇದಕ್ಕೆ ಧರ್ಮಿಸ್ವರೂಪವತ್ವವನ್ನು ಹೇಳಿದರೆ ಮಾಯಾವಾದಿಗಳು ದೂಷಣವನ್ನು ಹೇಳುತ್ತಾರೆ. ಹೀಗೆ ಹೇಳಿದ ದೂಷಣವನ್ನು ತಿರಸ್ಕರಿಸುತ್ತಾರೆ.

**ಮೂ ॥ ಭೇದಸ್ಯ ತು ಸ್ವರೂಪತ್ವೇ ಯೇ ವದಂತಿ ಚ ಶೂನ್ಯತಾಂ ॥ ೧೪೪ ॥**
**ಅದ್ಭುತಾಸ್ತೇ ಯತೋಽನ್ಯಸ್ಯ ಪ್ರತಿಯೋಗಿತ್ವಮಿಷ್ಯತೇ ।**
**ಪ್ರತಿಯೋಗಿನೋ ಹಿ ಭೇದೋಽಯಂ ನ ತು ಸ್ವಸ್ಯಾತ್ಮಕಥಂಚನ ।**
**ವಿಭಾಗೇನಾಲ್ಪತೈವ ಸ್ಯಾತ್ಕ್ವಚಿತ ಏವ ತು ಶೂನ್ಯತಾ ॥ ೧೪೫ ॥**

ಅ ॥ ಭೇದಸ್ಯ ತು=ಭೇದಕ್ಕಾದರೂ, ಸ್ವರೂಪತ್ವೇ=ಭೇದ್ಯವಸ್ತುಸ್ವರೂಪವತ್ವವಿದ್ದರೆ, ಯೇ=ಯಾರು, ಶೂನ್ಯತಾಂ=ಸರ್ವ ವಸ್ತುಗಳಿಗೂ ಶೂನ್ಯತ್ವವನ್ನು, ವದಂತಿ ಚ=ಹೇಳುತ್ತಾರೋ, ಯತಃ=ಯಾವ ಕಾರಣದ್ದೆಸೆಯಿಂದ, (ಯಾವ ಭೇದವು ಯಾವುದರ ಸ್ವರೂಪವೆಂದು ಅಂಗೀಕರಿಸಲ್ಪಡುತ್ತದೊ, ಅಂತಹ ಭೇದವನ್ನು ಕುರಿತು ಅದರಿಂದ) ಅನ್ಯಸ್ಯ=ಇತರ ವಸುಗಳಿಗೇನೇ, ಪ್ರತಿಯೋಗಿತ್ವಂ=ಪ್ರತಿಯೋಗಿತ್ವವು, ಇಷ್ಯತೇ=ಅಂಗೀಕರಿಸಲ್ಪಡುತ್ತದೋ,

(ಆದುದರಿಂದ) ತೇ=ಅವರು, ಅದ್ಭುತಾಃ=ಆಶ್ಚರ್ಯರು. (ಅಂದರೆ ಲೌಕಿಕರಲ್ಲಾಗಲೀ, ಪರೀಕ್ಷಕರಲ್ಲಾಗಲೀ ಇಂತಹ ಜನರು ಕಾಣಲ್ಪಡುವುದಿಲ್ಲ.) (ಇತರ ವಸ್ತುಗಳಿಗೆ ಪ್ರತಿಯೋಗಿತ ವಿದ್ದರೂ ಕೂಡ ಹೇಗೆ ಹಿಂದೆ ಹೇಳಿದ ದೋಷಪರಿಹಾರವೆಂದರೆ) ಹಿ=ಯಾವ ಕಾರಣದ್ದೆಶೆ ಯಿಂದ, ಅಯಂ=ಪ್ರತ್ಯಕ್ಷಸಿದ್ಧವಾದ, ಭೇದಃ=ಭೇದವು, ಪ್ರತಿಯೋಗಿನಃ=ಪ್ರತಿಯೋಗಿಯ ದ್ದೆಶೆಯಿಂದಲೋ, ಕಥಂಚನ=ಯಾವಪ್ರಕಾರದಿಂದಲೂ, ಸ್ವಸ್ಮಾತ್=ಧರ್ಮಿಸ್ವರೂಪದ್ದೆಶೆ ಯಿಂದ, ನ ತು=ಅಲ್ಲವೇ ಅಲ್ಲ. (ಸ್ವರೂಪವಿದಾರಣವಾಗಲಿ, ಆದಾಗ್ಯೂ ಶೂನ್ಯತ್ವವನ್ನು ಆಪಾದಿಸುವುದು ಅಯುಕ್ತವೇ ಎನ್ನುತ್ತಾರ.) ವಿಭಾಗೇನ=ವಿಭಾಗದಿಂದ (ಅಂದರೆ ಲೋಷ್ಟಾದಿಗಳ ಅವಯವವಿಭಾಗದಿಂದ ಲೋಷ್ಟಾದಿಗಳ ವಿನಾಶವಾಗುವಾಗ ಅಲ್ಪವಾದ ಪರಿಣಾಮವುಳ್ಳ ಅವಯ ವವು ಅವಶಿಷ್ಟವಾಗುವುದು. ಸರ್ವಶೂನ್ಯತ್ವವು ಬರುವುದಿಲ್ಲ. ಹಾಗೆಯೇ ಎಲ್ಲಾ ಕಡೆ ಗಳಲ್ಲಿಯೂ ವಿಭಾಗದಿಂದ) ಅಲ್ಪತ್ವೈವ=ಅಲ್ಪಾವಯವಾವಶೇಷತ್ವವೇ, ಸ್ಯಾತ್=ಆಗುವುದು. ಶೂನ್ಯತಾತು=ಶೂನ್ಯತ್ವವಾದರೂ, ಕುತ ಏವ=ಯಾವಕಾರಣದಿಂದ ಆಗುವುದು?

ತಾ || (1) ಭೇದವು ವಸ್ತುವಿನ ಸ್ವರೂಪವಾದರೆ ಘಟಕ್ಕೆ ವಿದಾರಣವಾಗುವುದು. ಹಾಗೆಯೇ ಭಿನ್ನ ಘಟಭಾಗಗಳಿಗೂ ಭೇದಸ್ವರೂಪತ್ವವಿದ್ದುದರಿಂದ ವಿದಾರಣವು ಆಗುವುದು. ಹೀಗೆಯೇ ಅದರ ಅವಯವದಲ್ಲಿಯೂ. ಕೊನೆಗೆ ಎಲ್ಲಾ ಅವಯವಗಳಿಗೆ ವಿದಾರಣದಿಂದ ಶೂನ್ಯ ತ್ವವು ಬರಬೇಕಾಗುವುದು ಎನ್ನುವರು. ಈ ದೋಷವಾದರೂ ಬರುವುದಿಲ್ಲ. ಅನ್ಯಪ್ರತಿಯೋಗಿಕ ವಾದ ಭೇದವು ಸ್ವರೂಪವಾಗಿದೆ. ಘಟಕ್ಕೆ ಮತ್ತೊಂದರಿಂದಲೇ ವಿಭಾಗವು ಬರುವುದು. ತನ್ನಿಂದ ಅಲ್ಲ. ವಿದಾರಣವಾದಾಗ್ಯೂ ಘಟ ಘಟಾವಯವಗಳಿಗೂ ಅದಕ್ಕಿಂತಲೂ ಅಲ್ಪ, ಅಲ್ಪಾವಯವಗಳಿಗೂ ವಿದಾರಣವೇ ಆಗುವುದು. ಶೂನ್ಯತ್ವವು ಬರುವುದಿಲ್ಲ. (2) ಮತ್ತು ಏಕತ್ವ ಅನೇಕತ್ವಗಳು ಸ್ವರೂಪದಿಂದ ವಿರುದ್ಧಗಳಲ್ಲ. ಒಂದೇ ಘಟಕ್ಕೆ ಮತ್ತೊಂದನ್ನಪೇಕ್ಷಿಸಿ ಅನೇಕತ್ವವು ಕಾಣುವುದು. ಆದರೆ ಯಾವುದನ್ನು ಅಪೇಕ್ಷಿಸಿ ಅನೇಕವಾಗುವುದೋ ಅದನ್ನಪೇ ಕ್ಷಿಸಿಯೇ 'ಏಕಃ' ಎನ್ನುವುದು ವಿರುದ್ಧವು. ಆದರಲ್ಲಿ ಘಟಕ್ಕೆ ಪ್ರತಿಯೋಗಿಯಿಂದಲೇ ಭೇದವು. ಅದನ್ನು ಅಪೇಕ್ಷಿಸಿಯೇ ಅನೇಕತ್ವವು. ತನ್ನ ಅಪೇಕ್ಷೆಯಿಂದಲಾದರೂ ಏಕತ್ವವು ವಿರುದ್ಧವಲ್ಲ. (3) ಹೇಗೆ ಪರನಿರೂಪ್ಯವಾದಾಗ್ಯೂ ಜೀವಬ್ರಹ್ಮೈಕ್ಯವು ಬ್ರಹ್ಮಸ್ವರೂಪವೆಂದು ಮಾಯಾವಾದಿ ಯಿಂದ ಅಂಗೀಕೃತವಾಗಿದೆಯೋ, ಹಾಗೆಯೇ ಪ್ರತಿಯೋಗಿನಿರೂಪ್ಯವಾದಾಗ್ಯೂ ಭೇದವು ವಸ್ತು ಸ್ವರೂಪವೆಂದಂಗೀಕರಿಸಿದರೆ ವಿರೋಧವಿಲ್ಲ || ೧೪೪ || ೧೪೫ ||

ಹಾಗಾದರೆ ಐದಾರು ಸ್ಥಳಗಳಲ್ಲಿ ವಿದಾರಣದಿಂದ ಅಲ್ಪ-ಅಲ್ಪತರ-ಅಲ್ಪತಮ ವಸ್ತುಗಳು ಅವಶಿಷ್ಟಗಳಾದಾಗ್ಯೂ ಕೊನೆಗೆ ಕೆಲವು ಅವಯವಗಳ ಸಮೂಹವು ಶೂನ್ಯವಾಗುವಾಗ ಸರ್ವಕ್ಕೂ ಶೂನ್ಯತ್ವವು ಬರಬೇಕಾಗುವುದು ಎಂದರೆ—

**ಮೂ || ನ ಶೂನ್ಯಾನಾಂ ಹಿ ಸಂಯೋಗಾದ್ಭಾವೋ ವಸ್ತುನ ಇಷ್ಯತೇ ||೧೪೬||**
**ವಿದಾರಣಾರ್ಥೋ ಧಾತುಶ್ಚ ವಿಭಾಗ ಗುಣವಾಚಕಃ |**
**ಅವಿದಾರಣೇऽಪಿ ಹ್ಯಾಸ್ಯಸ್ಯ ಭಿನ್ನಾವೋಷ್ಠೌ ಚ ತಸ್ಯ ಚ |**
**ಅತಃ ಉನ್ಮತ್ತವಾಕ್ಯತ್ವಾನ್ಮಾಯಾವಾದೋ ಹ್ಯುಪೇಕ್ಷಿತಃ || ೧೪೭ ||**

ಅ || ಶೂನ್ಯಾನಾಂ ಸಂಯೋಗಾತ್=ಶೂನ್ಯಗಳ ಸಂಯೋಗದ್ದೆಶೆಯಿಂದ, ವಸ್ತುನಃ= ಅತ್ಯಲ್ಪಗಳಾದ ವಸ್ತುಗಳಿಗೆ, ಭಾವಃ=ಉತ್ಪತ್ತಿಯು, ನ ಇಷ್ಯತೇ= ಅಂಗೀಕರಿಸಲ್ಪಡುವುದಿಲ್ಲ. ಹಿ=ಪ್ರಸಿದ್ಧವು. (ಹಾಗಾದರೆ ಶೂನ್ಯತ್ವವೆಂದರೆ ಅತ್ಯಂತಾಸತ್ವವೆಂದಾಪಾದಿಸುವುದಿಲ್ಲ. ಮತ್ತೆ

ಸೂಕ್ಷ್ಮತಮತ್ವವೇ. ಅದಾದರೂ ಅನಿಷ್ಟವೇ ಎಂದರೆ) ಧಾತುಶ್ಚ=ಭಿದಿಧಾತುವಾದರೂ, ವಿದಾರಣಾರ್ಥಃ=ವಿದಾರಣಾರ್ಥಕವೆಂದು ವಿವಕ್ಷಿತವಾದರೆ, (ಆಗ ಭೇದಶಬ್ದವು) ವಿಭಾಗಗುಣವಾಚಕಃ=ವಿಭಾಗಾಖ್ಯವಾದ ಗುಣವನ್ನು ಹೇಳುವುದು. ಅನ್ಯೋನ್ಯಾಭಾವರೂಪವಾದ ಭೇದವನ್ನು ಹೇಳತಕ್ಕುದು ಅಲ್ಲ. (ಹಾಗಾದರೆ ವಿಭಾಗಕ್ಕೂ ಅನ್ಯತ್ವಕ್ಕೂ ಏನುವಿಶೇಷವೆಂದರೆ— ವಿಭಾಗವು ಗುಣವೆಂದು ವೈಶೇಷಿಕಾದಿಗಳು ಹೇಳಿರುವರು. ಅನ್ಯತ್ವವೆಂದರೆ ಅನ್ಯೋನ್ಯಾಭಾವವು. ಹೀಗೆ ಇವುಗಳಿಗೆ ಸ್ಪಷ್ಟವಾಗಿ ಭೇದವು. ಯಾವನು ಮಾಯಾವಾದಿಯು ಗುಣಾದಿಪ್ರಕ್ರಿಯೆಯನ್ನು ತಿಳಿಯುವುದಿಲ್ಲವೋ, ಅವನನ್ನು ಕುರಿತು ಹೇಳುತ್ತಾರೆ. (ಯಾವಾಗ ಮಾಯಾವಾದಿಯು ನಿರುತ್ತರನಾಗಿ ಸುಮ್ಮನೆ ಇರುತ್ತಾನೋ ಆಗ,) ತಸ್ಯ ಚ=ಮಾಯಾವಾದಿಯ ಸಂಬಂಧಿಗಳೇ ಆದ, ಆಸ್ಯಸ್ಯ=ಆಸ್ಯಸಂಬಂಧಿಗಳಾದ, ಓಷ್ಠಗಳಿಗೆ, ಅವಿದಾರಣೇಽಪಿ= ವಿದಾರಣರೂಪವಾದ ವಿಭಾಗವಿಲ್ಲದಿದ್ದರೂ, ಓಷ್ಠೌ=ತುಟಿಗಳು, ಭಿನ್ನೌ=ಅನ್ಯೋನ್ಯಾಭಾವರೂಪಗಳಾದ ಭೇದವುಳ್ಳವುಗಳು ಆಗಿಯೇ ಆಗುತ್ತವೆ. ಹಿ=ಪ್ರಸಿದ್ಧವು. ಅತಃ=ಆದುದರಿಂದ, ಉನ್ಮತ್ತ ವಾಕ್ಯತ್ವಾತ್ = ಉನ್ಮತ್ತವಾಕ್ಯವಾಗಿರುವುದರಿಂದ, ಮಾಯಾವಾದಃ = ಮಾಯಾವಾದವು, ಉಪೇಕ್ಷಿತಃ ಹಿ=ಸೂತ್ರಕಾರರಿಂದ ಉಪೇಕ್ಷಿಸಲ್ಪಟ್ಟದೆ.

**ತಾ** ॥ (1) ಯಾವ ಸಂಯೋಗದಿಂದ ಯಾವುದು ವಸ್ತುವು ಹುಟ್ಟುತ್ತದೋ, ಆ ವಸ್ತುವು ವಿದಾರಣವಾಗುವಾಗ ಸಂಯೋಗನಾಶದ್ವಾರೆಯಿಂದ ವಸ್ತುನಾಶವಾದ ಮೇಲೆ ಅದು ಉಳಿಯುತ್ತದೆ. ಉದಾ:— ತಂತುಸಂಯೋಗದಿಂದ ಹುಟ್ಟದ ಪಟವು ತಂತುವಿದಾರಣಸಂಯೋಗನಾಶಕ್ರಮದಿಂದ ವಿನಷ್ಟವಾಗುತ್ತಿರಲು ತಂತುಗಳು ಉಳಿಯುತ್ತವೆ ಏವಂಚ ಕೆಲವು ಪರಮಾಣ್ವಗಳಾದ ವಸ್ತುಗಳಿಗೆ ಶೂನ್ಯಸಂಯೋಗದ್ವಾರೆಯಿಂದ ಉತ್ಪತ್ತಿಯಾಗುವುದಾದರೆ ಆಗ ವಿದಾರಣವಾಗುವಾಗ, ಸಂಯೋಗನಾಶವಿಂದ ಕಾರ್ಯವು ನಾಶವಾಗುವಾಗ ಶೂನ್ಯವೇ ಉಳಿಯಬೇಕಾಗುವುದು. ಹೀಗೆ ಪ್ರಾಮಾಣಿಕರು ಅಂಗೀಕರಿಸುವುದಿಲ್ಲ. ಆದುದರಿಂದ ಸರ್ವಶೂನ್ಯತಾಪಾದನವು ಅಯುಕ್ತವು. (2) ಹಾಗಾದರೆ ಭೇದಶಬ್ದದಿಂದಲೇ ಭೇದವು ವಿದಾರಣರೂಪವೆಂದು ಅವಗತವಾಗುತ್ತವೆ. ಬೇದಶಬ್ದವು ಭಿದಿ ಧಾತುವಿನ ರೂಪವು. ಅದು ವಿದಾರಣಾರ್ಥಕವೆಂದು ವ್ಯಾಖ್ಯಾತವಾಗಿದೆ. ಎಂದರೆ— ಯಾವಾಗ ಭಿದಿ ಧಾತುವು ವಿದಾರಣಾರ್ಥಕವೆಂದು ವಿವಕ್ಷಿತವಾಗುತ್ತದೋ, ಆಗ ಭೇದಶಬ್ದವು ವಿಭಾಗಾಖ್ಯಗುಣವನ್ನು ಹೇಳುತ್ತದೆ. ಅನ್ಯೋನ್ಯಾಭಾವರೂಪವಾದ ಭೇದವನ್ನು ಹೇಳುವುದಿಲ್ಲ. ಅಂದರೆ— **‘ಕ್ರಿಯಾವಾಚಿತ್ವಮಾಖ್ಯಾತುಮೇಕೈಕೋಽರ್ಥಃ ಪ್ರದರ್ಶಿತಃ । ಪ್ರಯೋಗತೋಽನುಗಂತವ್ಯಾ ಅನೇಕಾರ್ಥಾಃ ಹಿ ಧಾತವಃ’** ॥ ಎನ್ನುವ ವಚನದ್ವಾರೆಯಿಂದ ಭಿದಿ ಧಾತುವಿಗೆ ವಿಭಾಗವೆಂದೂ, ಅನ್ಯವೆಂದೂ ಅರ್ಥವು. ‘ಭಿನ್ನೋ ಘಟಃ’ ಎಂದು ಹೇಳಿದಾಗ ‘ಸ್ಫುಟತಃ’ ಒಡದು ಹೋಯಿತು ಎಂದು ತಿಳಿಯುತ್ತದೆ. ‘ಭಿನ್ನಂ ಗಗನಂ ಘಟಾತ್’ ಎನ್ನುವಲ್ಲಿ ಅನ್ಯತ್ ಎಂದು ತಿಳಿಯುತ್ತದೆ. ಅಲ್ಲಿ ವಿಭಾಗವು ವಿದಾರಣರೂಪವಾದುದು, ಅನ್ಯತ್ವವಲ್ಲ. ಅದೇವೇ ಇಲ್ಲಿ ಪ್ರಕೃತವು. ‘ನ ವಿಭಾಗಃ’ ಎಂದು ಅನ್ಯತ್ವರೂಪವಾದ ಭೇದವು ವಸ್ತುಸ್ವರೂಪವಾದರೆ ವಿದಾರಣವು ಬರಬೇಕಾಗುವುದರಿಂದ ಅತ್ಯಲ್ಪತ್ವವನ್ನು ಆಪಾದಿಸುವುದು ಅಸಂಗತವೇ. (3) ವಿಭಾಗದ್ವಾರೆಯಿಂದ ಭೇದಶಬ್ದವು ಅರ್ಥಾಂತರವುಳ್ಳದ್ದು. ಆದುದರಿಂದ ಅನೇಕ ದೋಷಗಳು ಬರುವುದರಿಂದ ಮಾಯಿಮತವು ಉನ್ಮತ್ತವಾಕ್ಯದಂತೆ ಉಪೇಕ್ಷಣೀಯವೇ ಆಗಿದೆ. ಅನುವಾದಾರ್ಹವೇ ಆಗುವುದಿಲ್ಲ. ಸೂತ್ರಕಾರರು ಪ್ರತ್ಯೇಕ ಅನುವಾದಮಾಡಿ ಈ ಪಾದದಲ್ಲಿ ದೂಷಿಸಲಿಲ್ಲ. ॥ ೧೪೬ ॥ ೧೪೭ ॥

**ಸಮವಾಯ ನಿರಾಸವು.**

ಹೀಗೆ ಸಮವಾಯವನ್ನು ನಿರಾಕರಿಸಿ ಈಗ ಸಂಬಂಧಪ್ರಸಂಗದಿಂದ ಸಂಬಂಧಿಗಳಾದ ಗುಣಾದಿಗಳೂ ಪ್ರಸಕ್ತಗಳಾಗಿರುವುದರಿಂದ ಈಶ್ವರನ ಗುಣಗಳಲ್ಲಿ ಸಂಖ್ಯಾವಿಪ್ರತಿಪತ್ತಿಯನ್ನು ನಿರಾಕರಿಸುತ್ತಾರೆ.

**ಮೂ ॥ ನ ಚಾಮಂದಸದಾನಂದಸ್ಯಂದ್ಯನಂತಗುಣಾರ್ಣವಃ ॥ ೧೪೮ ॥**
**ಈಶ್ವರೋಽಷ್ಟಗುಣತ್ವೇನ ಪ್ರಮೇಯೋಽಪ್ರಮಿತತ್ವತಃ ।**
**ಮಯ್ಯನಂತಗುಣೇಽನಂತೇ ಗುಣತೋಽನಂತವಿಗ್ರಹೇ ॥ ೧೪೯ ॥**
**ಅನಂತಗುಣಮಾಹಾತ್ಮ್ಯಶಕ್ತಿಜ್ಞಾನಮಹಾರ್ಣವಃ ।**
**ನಾರಾಯಣಃ ಪರೋಽಶೇಷಚೇತನೇಭ್ಯಃ ಪರಂ ಪದಂ ॥ ೧೫೦ ॥**
**ಇತ್ಯಾದಿವೇದತದ್ವಾಕ್ಯೈರನಂತೈಶ್ಚಾವಸೀಯತೇ ।**
**ಅನಂತಗುಣತಾ ವಿಷ್ಣೋಃ ಕಥಮೇವ ಹ್ಯಪೋದ್ಯತೇ ॥ ೧೫೧ ॥**

ಅ ॥ ಈಶ್ವರಃ=ಶ್ರೀಹರಿಯು, ಅಷ್ಟಗುಣತ್ವೇನ=ಜ್ಞಾನ-ಇಚ್ಛಾ-ಪ್ರಯತ್ನ-ಸಂಖ್ಯಾ-ಪರಿಮಾಣ-ಪೃಥಕ್ತ್ವ-ಸಂಯೋಗ ವಿಭಾಗ ಎನ್ನುವ ಎಂಟೇ ಗುಣಗಳು ಇವನಿಗೆ ಇರುತ್ತವೆ ಎಂದು, ಅಪ್ರಮಿತತ್ವತಃ=ಎಂಟೇ ಗುಣಗಳು ಎನ್ನುವಲ್ಲಿ ಪ್ರಮಾಣವೇ ಇಲ್ಲದಿರುವುದರಿಂದ, ನ ಚ ಪ್ರಮೇಯಃ=ತಿಳಿಯಲರ್ಹನಲ್ಲ (ಮತ್ತೆ) ಅಮಂದಸದಾನಂದಸ್ಯಂದ್ಯನಂತಗುಣಾರ್ಣವಃ=ಅಪರಿಮಿತಗಳೂ, ನಿರ್ದುಷ್ಟಗಳೂ ಆದ ಆನಂದರಿಂದ ಪೂರ್ಣನು, ಚಿಂತಾಮಣಿ ಮೊದಲಾದ ಅನಂತಾನಂತಶುಭಪದಾರ್ಥಗಳುಳ್ಳವನು. ಕ್ಷೀರಸಮುದ್ರದಂತೆ ಭಕ್ತರಿಗೆ ಅಮೃತವನ್ನು ಕೊಡುವವನು ಎಂದು, ಪ್ರಮೇಯಃ=ತಿಳಿಯಲರ್ಹನು (ಶ್ರೀಹರಿಗೆ ಎಂಟು ಗುಣಗಳು ಇವೆ ಎನ್ನುವಲ್ಲಿ ಹೇಗೆ ಪ್ರಮಾಣವಿಲ್ಲವೋ ಹಾಗೆಯೇ ಅನಂತಗುಣಗಳು ಇವೆ ಎನ್ನುವಲ್ಲಿಯೂ ಪ್ರಮಾಣವಿಲ್ಲ ಎಂದರೆ-) ಅನಂತಗುಣೇ=ಅಸಂಖ್ಯಾತಗಳಾದ ಗುಣಗಳುಳ್ಳವನು, ಗುಣತಃ ಅನಂತೇ=ಪ್ರತ್ಯೇಕವಾಗಿಯೂ ನಿರವಧಿಕಗಳಾದ ಗುಣಗಳುಳ್ಳವನು. ಮತ್ತು ಅಪರಿಮಿತಗಳಾದ ಅವಾಂತರ ವಿಶೇಷಗಳುಳ್ಳವನು, ಅನಂತವಿಗ್ರಹೇ=ಅಪರಿಮಿತ ಶರೀರಗಳುಳ್ಳವನು, ಮಯಿ=ಇಂತಹ ನನ್ನಲ್ಲಿ, (**'ಯದಾಸೀತ್ತತ ಏವಾದ್ಯಃ ಸ್ವಯಂಭೂಃ ಸಮಭೂದಜಃ ।'** ಯತ್=ಯಾವ ಕಮಲವು, ಆಸೀತ್=ಆಯಿತೋ, ತತ ಏವ = ಆ ಕಮಲದಿಂದಲೇ, ಆದ್ಯಃ = ಪ್ರಾಥಮಿಕನಾದ, ಸ್ವಯಂಭೂಃ ಅಜಃ=ಚತುರ್ಮುಖಬ್ರಹ್ಮನು, ಆಸೀತ್=ಆದನು. ಎಂದು ಭಾಗವತವಾಕ್ಯವು.) ಅನಂತಗುಣಮಾಹಾತ್ಮ್ಯಶಕ್ತಿಜ್ಞಾನಮಹಾರ್ಣವಃ=ಅಪರಿಮಿತಗಳಾದ ಗುಣಗಳು, (ಮಹಿಮೆಗಳು) ಉಳ್ಳವನು, ಶಕ್ತಿಜ್ಞಾನಗಳಿಂದ ಮಹತ್ತಾದ ಸಮುದ್ರದಂತಿರುವವನು, ಪರಂ ಪದಂ=ಮುಖ್ಯಪ್ರಾಪ್ಯನಾದ, ನಾರಾಯಣಃ=ಶ್ರೀಹರಿಯು, ಅಶೇಷಚೇತನೇಭ್ಯಃ=ಎಲ್ಲಾ ಚೇತನರದ್ದೆಶೆಯಿಂದ, ಪರಃ=ಉತ್ತಮನು. ಇತ್ಯಾದಿವೇದತದ್ವಾಕ್ಯೈಃ ಅನಂತೈಶ್ಚ=ಇದು ಮೊದಲಾದ, **'ಅನಂತಬಾಹುರನಂತಗುಣೋಽನಂತರೂಪಃ'** ಅಪರಿಮಿತಗಳಾದ ವೇದ, ಭಗವತ್‌ವಾಕ್ಯ (ಭಾಗವತವಾಕ್ಯ) ಗಳಿಂದ, ಅವಸೀಯತೇ=(ಶ್ರೀಹರಿಯು ಅನಂತಗುಣಗಳುಳ್ಳವನು ಇತ್ಯಾದ್ಯರ್ಥವು) ನಿಶ್ಚಿತವಾಗುತ್ತದೆ. (ಹಾಗಾದರೆ ಈ ವಚನಗಳು ಅಮುಖ್ಯಾರ್ಥಗಳೆಂದು ಏಕೆ ಆಗಲಾರವೆಂದರೆ—) (ಬಾಧಕವಶದಿಂದಲೇ ಮುಖ್ಯಾರ್ಥವನ್ನು ಬಿಡಬೇಕು. ಇಲ್ಲಿ ಬಾಧಕವಿಲ್ಲ. ಆದುದರಿಂದ) ಅನಂತಗುಣತಾ = ಅಪರಿಮಿತಗಳಾದ ಗುಣಗಳಿರುವಿಕೆಯು, ವಿಷ್ಣೋಃ=ಶ್ರೀ

ಹರಿಗೆ, ಕಥಮೇವ ಹಿ=ಹೇಗೆ ತಾನೆ, ಅಪೋದ್ಯತೇ=ಬಿಡಲ್ಪಡುತ್ತದೆ? ॥ ೧೪೮ ॥ ೧೪೯ ॥ ॥ ೧೫೦ ॥ ೧೫೧ ॥

ವೈಶೇಷಿಕಾದಿಗಳು ಈಶ್ವರನ ಜ್ಞಾನ, ಇಚ್ಛಾಪ್ರಯತ್ನಗಳಿಗೆ ಅಖಂಡತ್ವವನ್ನು ಹೇಳಿರುವರು. ಅದೂ ಅಯುಕ್ತವು. 'ಅನಂತೇ ಗುಣತಃ' ಎಂದು ಪ್ರತ್ಯೇಕವಾಗಿ ಗುಣಗಳಿಗೆ ಅನಂತ ವಿಶೇಷವತ್ವವು ಆಗಮಸಿದ್ಧವಾಗಿದೆ. ಅದನ್ನು ಅಂಗೀಕರಿಸದಿದ್ದರೆ ಬಾಧಕವನ್ನು ಹೇಳುತ್ತಾರೆ.

**ಮೂ ॥ ಯದ್ಯನಂತವಿಶೇಷಾಶ್ಚ ತಜ್ಜ್ಞಾನಾದೇರ್ನಿವಾರಿತಾಃ।**
**ಕಥಂ ತತ್ತದ್ವಿಷಯತಾ ಸಾರ್ವಜ್ಞಾರ್ಥಂ ವಿಧೀಯತೇ।**
**ಔಪಾಧಿಕವಿಶೇಷಸ್ತು ಪೂರ್ವಮೇವ ನಿರಾಕೃತಃ ॥ ೧೫೨ ॥**

ಅ ॥ ಯದಿ=ಯಾವಪಕ್ಷದಲ್ಲಿ, ಅನಂತವಿಶೇಷಾಶ್ಚ=ಅಪರಿಮಿತಗಳಾದ ವಿಶೇಷಗಳು, ತಜ್ಜ್ಞಾನಾದೇಃ=ಈಶ್ವರಜ್ಞಾನಾದಿಗಳಿಗೆ, ನಿವಾರಿತಾಃ=ನಿವಾರಿಸಲ್ಪಡುತ್ತವೋ, (ಹಾಗಾದರೆ) ತತ್ತದ್ವಿಷಯತಾ=ಘಟಪಟಾದಿ ಸರ್ವವಿಷಯಕತ್ವವು, ಸಾರ್ವಜ್ಞಾರ್ಥಂ = ಸರ್ವಜ್ಞತ್ವಕ್ಕಾಗಿ, ಸರ್ವಕರ್ತೃತ್ವಾದಿಗಳಿಗಾಗಿ, ಕಥಂ=ಹೇಗೆ, ವಿಧೀಯತೇ=ಉಂಟೆಂದು ಅಂಗೀಕರಿಸಲ್ಪಡುತ್ತದೆ. (ಜ್ಞಪ್ತಿರೂಪವಾದ ಈಶ್ವರಜ್ಞಾನವು ನಿರ್ವಿಶೇಷವೇ. ಆದಾದರೂ ಆಯಾಯ ಘಟಾದ್ಯುಪಾಧಿಗಳಿಂದ ಘಟಪಟಾದಿ ವಿಷಯಗಳುಳ್ಳದ್ದೆಂದು ಹೇಳಲ್ಪಡುತ್ತದೆ. ಹೀಗೆ ಶ್ರೀಹರಿಯ ಇಚ್ಛೆಯು ಅಖಂಡವೇ ಆಗಲಿ, ಆದಾಗ್ಯೂ ಆಯಾಯ ಸೃಷ್ಟ್ಯಾದ್ಯುಪಾಧಿಗಳಿಂದ ಸೃಷ್ಟಿಮಾಡಲಿಚ್ಛೆಯೂ, ಸಂಹಾರೇಚ್ಛೆಯೂ ಕೂಡುತ್ತದೆ. ಇತ್ಯಾದಿಗಳು ಹೇಳಲ್ಪಡುತ್ತವೆ. ಹಾಗೆಯೇ ಪ್ರಯತ್ನವೂ ಕೂಡ. ಆದುದರಿಂದ ಸ್ವತಃ ವಿಶೇಷವಿಲ್ಲವಾದರೂ ಔಪಾಧಿಕವಿಶೇಷವಿದ್ದುದರಿಂದ ಘಟಪಟಾದಿ ಸರ್ವವಿಷಯಕತ್ವವೂ ಸಾರ್ವಜ್ಞಾದಿಗಳೂ ಕೂಡುತ್ತವೆ ಎಂದು ಶಂಕಿಸಿದರೆ) ಔಪಾಧಿಕವಿಶೇಷಸ್ತು=ಔಪಾಧಿಕವಾದ ವಿಶೇಷವಾದರೂ, ಪೂರ್ವಮೇವ=ಮೊದಲೇ, ನಿರಾಕೃತಃ=ನಿರಾಕರಿಸಲ್ಪಟ್ಟದೆ. ಅಂದರೆ ಔಪಾಧಿಕವಾದ ವಿಶೇಷವು ಉಂಟೋ, ಇಲ್ಲವೋ, ಇದ್ದರೆ ನಿರ್ವಿಶೇಷತ್ವವು ಹೇಗೆ? ಇಲ್ಲವಿದ್ದರೆ ಸರ್ವಜ್ಞಾದಿಗಳು ಕೂಡಲಾರವು, ಇದು ಮೊದಲಾದ ಹಿಂದೆ ಹೇಳಿದ ನ್ಯಾಯದಿಂದಲೇ ನಿರಸ್ತವಾಯಿತು.

ತಾ ॥ ಸರ್ವವಿಷಯಕ ಜ್ಞಾನವುಳ್ಳವನು **ಸರ್ವಜ್ಞನು.** ಹಾಗೆಯೇ ಸರ್ವಕಾರ್ಯೋತ್ಪತ್ತಿ ವಿಷಯಕಗಳಾದ ಇಚ್ಛಾಪ್ರಯತ್ನಗಳುಳ್ಳವನು **ಸರ್ವಕರ್ತನು.** ಸರ್ವ ಕಾರ್ಯಗಳ ವಿನಾಶ ವಿಷಯಕಗಳಾದ ಇಚ್ಛಾದಿಗಳುಳ್ಳವನು **ಸರ್ವಸಂಹರ್ತನು.** ಈಶ್ವರಜ್ಞಾನಾದಿಗಳು ನಿರ್ವಿಶೇಷಗಳಾದರೆ ಆಗ ಜ್ಞಾನಕ್ಕೆ ಘಟಪಟಾದಿವಿಷಯಕತ್ವವು ಬಾರದೆಹೋಗುವವು. ಆಗ ಈಶ್ವರನಿಗೆ ಸಾರ್ವಜ್ಞಾದಿಗಳೂ ಇಲ್ಲದೆ ಹೋಗುವವು. ಪರರೂ ಕೂಡ ಶ್ರೀಹರಿಗೆ ಸಾರ್ವಜ್ಞಾದಿಗಳನ್ನು ಅಂಗೀಕರಿಸಿರುವರು. ಆದುದರಿಂದ ಅದಕ್ಕಾಗಿ ಜ್ಞಾನಿಗಳಿಗೆ ಘಟಾದಿವಿಷಯಕತ್ವವು ಅವಶ್ಯಕವು. ಅಂತೂ ನಿರ್ವಿಶೇಷತ್ವವು ಕೂಡಲಾರದು. (2) ಮತ್ತು ಜ್ಞಾನೇಚ್ಛಾದಿಗಳಿಗೆ ಸೃಷ್ಟಿವಿಷಯತ್ವ— ಸ್ಥಿತಿವಿಷಯತ್ವ ಮೊದಲಾದ ವಿಶೇಷವು ಸ್ವತಃ ಅಲ್ಲ, ಮತ್ತೆ ವಿಷಯೋಪಾಧಿಕವಾದುದು ಎಂದು ಹೇಳಕೂಡದು. ಏಕೆಂದರೆ ಔಪಾಧಿಕವಿಶೇಷವೂ ಕೂಡ ಇದ್ದರೆ ಈಶ್ವರಜ್ಞಾನಕ್ಕೆ ಅನಂತವಿಶೇಷವತ್ವವು ನಿವಾರಿಸಕೂಡದು. ಇಲ್ಲವಾದರೆ ಘಟಾದಿವಿಷಯಕತ್ವವು ಬಾರದೆಹೋಗಬೇಕಾಗುವುದು ॥ ೧೫೨ ॥

**ಸ. ರ. ವಿ**— ಜ್ಞಾನಕ್ಕೆ ಸ್ವಪ್ರಕಾಶರೂಪವಾದ ವಿಶೇಷವನ್ನು ಅವಶ್ಯವಾಗಿ ಅಂಗೀಕರಿಸಬೇಕು. ಇಲ್ಲದಿದ್ದರೆ ಈಶ್ವರನಿಗೆ ಸರ್ವಜ್ಞತ್ವವು ಬಾರದೆಹೋಗುವುದು ಎನ್ನುತ್ತಾರೆ.

ನ್ಯಾಯಸುಧಾ—ವೈಶೇಷಿಕಾದಿಗಳು ಕೆಲವರು ಈಶ್ವರಜ್ಞಾನವು ಸ್ವಪ್ರಕಾಶವಾಗುವುದಿಲ್ಲ ವೆನ್ನುತ್ತಾರೆ. ಅವರನ್ನು ತಿರಸ್ಕರಿಸುತ್ತಾರೆ—

ಮೂ ॥ ಸ್ವಪ್ರಕಾಶತ್ವಮಪಿ ತು ಯೈರ್ಜ್ಞಾನಸ್ಯ ನಿವಾರಿತಂ ॥ ೧೫೩ ॥
ಕಥಂ ಸರ್ವಜ್ಞತಾ ತಸ್ಯ ಸ್ವಜ್ಞಾನಾಧಿಗಮಂ ವಿನಾ ।
ಜ್ಞಾನಂ ವಿಶ್ವಾಧಿಕಂ ತ್ವೇಕಂ ತಜ್ಜ್ಞಾನವಿಷಯಂ ಪರಂ ॥ ೧೫೪ ॥
ಇತಿ ಜ್ಞಾನದ್ವಯೇನೈವ ಸರ್ವವಿತ್ಪರಮೇಶ್ವರಃ ।
ಇತಿ ಚೇದೇಷ ಏವಾರ್ಥಸ್ತಜ್ಜ್ಞಾನಾವಸಿತೋ ಯದಿ ॥ ೧೫೫ ॥
ಸ್ವಪ್ರಕಾಶತ್ವಮೇವ ಸ್ಯಾಜ್ಜ್ಞಾನಂ ಹ್ಯೇತದ್ವಿಶೇಷಣಂ ।
ಜ್ಞಾನಾಂತರೇಣ ಚೇದತ್ರ ಭವೇದೇವಾನವಸ್ಥಿತಿಃ ॥
ಸ್ವಪ್ರಕಾಶತ್ವಮೇತಸ್ಮಾದ್ದುರ್ನಿವಾರಂ (ರ್ಯಂ) ಸಮಾಪತೇತ್ ॥
॥ ೧೫೬ ॥

ಅ ॥ ಯೈಸ್ತು = ಯಾರಿಂದ, ಜ್ಞಾನಸ್ಯ = ಈಶ್ವರಜ್ಞಾನಕ್ಕೆ, ಸ್ವಪ್ರಕಾಶತ್ವಮಪಿ = ಸ್ವಪ್ರಕಾಶತ್ವವಾದರೂ, ನಿವಾರಿತಂ = ನಿರಾಕರಿಸಲ್ಪಟ್ಟದೋ, (ತೇಷಾಂ ಪಕ್ಷೇ = ಅವರ ಪಕ್ಷದಲ್ಲಿ,) ತಸ್ಯ=ಈಶ್ವರನಿಗೆ, ಸ್ವಜ್ಞಾನಾಧಿಗಮಂ ವಿನಾ=ತನ್ನ ಜ್ಞಾನದ ಜ್ಞಾನವಿಲ್ಲದೆ ಇರುವುದರಿಂದ, ಸರ್ವಜ್ಞತಾ=ಸಾರ್ವಜ್ಞ್ಯವು, ಕಥಂ = ಹೇಗೆ, (ಅಂದರೆ ಈಶ್ವರಜ್ಞಾನವು ಒಂದೇ. ಅದು ಸ್ವವ್ಯತಿರಿಕ್ತವಾದುದನ್ನೇ ವಿಷಯೀಕರಿಸುತ್ತದೆ. ತನ್ನನ್ನು ವಿಷಯೀಕರಿಸುವು ದಿಲ್ಲ. ಆದುದರಿಂದ ಈಶ್ವರನು ಸರ್ವಜ್ಞನು ಹೇಗೆ ಆದಾನು?) (ಹಾಗಾದರೆ ಸ್ವಪ್ರಕಾಶ ಜ್ಞಾನ ವಿಲ್ಲದಿದ್ದರೂ ಈಶ್ವರನಿಗೆ ಸಾರ್ವಜ್ಞವು ಕೂಡಬಹುದೆಂದು ಶಂಕಿಸುತ್ತಾರೆ.) ಏಕಂ ತು ಜ್ಞಾನಂ= ಒಂದು ಜ್ಞಾನವಾದರೂ, ವಿಶ್ವಾಧಿಕಂ=ಸ್ವವ್ಯತಿರಿಕ್ತಗಳಾದ ಸಮಸ್ತ ವಸ್ತುಗಳನ್ನೂ ವಿಷಯೀಕರಿಸತಕ್ಕದ್ದು. ಪರಂ=ಮತ್ತೊಂದು, ತಜ್ಜ್ಞಾನವಿಷಯಂ=ಆ ಜ್ಞಾನವೇ ವಿಷಯ ವಾಗಿಉಳ್ಳದ್ದು. ಇತಿ=ಈ ಪ್ರಕಾರವಾದ, ಜ್ಞಾನದ್ವಯೇನೈವ ಎರಡು ಜ್ಞಾನಗಳಿಂದಲೇ, ಪರಮೇಶ್ವರಃ=ಶ್ರೀ ಹರಿಯು, ಸರ್ವವಿತ್=ಸರ್ವಜ್ಞನು, (ಈಶ್ವರನಿಗೆ ಒಂದೇ ಜ್ಞಾನವಾಗಿದ್ದರೆ ಈ ದೋಷವು ಬರುತ್ತಿತ್ತು. ಹೀಗೆ ಇಲ್ಲ. ಈಶ್ವರಜ್ಞಾನಗಳು ಎರಡು. ಅವುಗಳಲ್ಲಿ (೧) ಒಂದು ಜ್ಞಾನವು ತಾನು ಹೊರತಾದ ಎರಡನೇ ಜ್ಞಾನದಿಂದೊಡಗೂಡಿದ ಸರ್ವವಸ್ತುಗಳನ್ನು ವಿಷಯೀಕರಿಸತಕ್ಕದ್ದು. (೨) ಎರಡನೇದ್ದು ಆ ಜ್ಞಾನವನ್ನು ವಿಷಯೀಕರಿಸತಕ್ಕದ್ದು. ಏವಂ ಚ ಜ್ಞಾನಕ್ಕೆ ಸ್ವವಿಷಯತ್ವವಿಲ್ಲವಾದರೂ ಈಶ್ವರನಿಗೆ ಇಂತಹ ಎರಡು ಜ್ಞಾನಗಳಿಂದಲೇ ಸರ್ವಜ್ಞ ತ್ವವು ಕೂಡುತ್ತದೆ. ಆದಾಗ್ಯೂ ಈಶ್ವರನಿಗೆ ಸರ್ವಜ್ಞತ್ವಾಭಾವವನ್ನಾಗಲೀ ಈಶ್ವರ ಜ್ಞಾನಕ್ಕೆ ಸ್ವಪ್ರಕಾಶತ್ವವನ್ನಾಗಲೀ ಬಿಡಲು ಸಾಧ್ಯವಿಲ್ಲ. ಎನ್ನುತ್ತಾರೆ.) ಇತಿ ಚೇತ್=ಹೀಗೆ ಹೇಳುವು ದಾದರೆ, ಏಷ ಏವಾರ್ಥಃ=ಇದು ಮೊದಲಾದ ಇದೇ ಅರ್ಥವು, (ಅಂದರೆ ಸಜಾತೀಯಗಳಾದ ಆತ್ಮ ವಿಶೇಷಗುಣಗಳಿಗೆ ಯೌಗ ಪದ್ಯವು ಕೂಡುವುದಿಲ್ಲವೆನ್ನುವುದು ಇರಲಿ. (೧) 'ಜ್ಞಾನದ್ವಯ ವಾನಹಂ ಜ್ಞಾನದ್ವಯೇನ ಸರ್ವಜ್ಞೋಽಸ್ಮಿ' 'ಇದಂ ಮೇ ಜ್ಞಾನಂ ಏತಜ್ಜ್ಞಾನವಿಷಯಂ 'ಏತಚ್ಚ ಏತದ್ವಿಷಯಂ' ೧ ನಾನು ಎರಡು ಜ್ಞಾನಗಳುಳ್ಳವನು, ಎರಡು ಜ್ಞಾನಗಳಿಂದ ಸರ್ವ ಜ್ಞನು ಆಗಿರುತ್ತೇನೆ. ೨ ಈ ನನ್ನ ಜ್ಞಾನವು ಜ್ಞಾನವೇ ವಿಷಯವಾಗಿಉಳ್ಳದ್ದು, ಇದು ಇದೇ ವಿಷಯವಾಗಿ ಉಳ್ಳದು, ಇದು ಮೊದಲಾದ ಈ ಅರ್ಥವೇ ಈಶ್ವರನಿಂದ ತಿಳಿಯಲಟ್ಟದೋ,

ಇಲ್ಲವೋ, ೩ ಇಲ್ಲದಿದ್ದರೆ ಈಶ್ವರನಿಗೆ ಸಾರ್ವಜ್ಞ್ಯವು ಬಾರದೆಹೋಗಬೇಕಾಗುವುದು. ೧ ತಿಳಿಯ್ಪಲ್ಪಡುವುದಾದರೆ ಈ ಎರಡು ಜ್ಞಾನಗಳಲ್ಲಿ ಒಂದರಿಂದಲೋ ಅಥವಾ ಮತ್ತೊಂದು ಜ್ಞಾನದಿಂದಲೋ ೧ನೇದ್ದಕ್ಕೆ ಇದು ಉದಾಹರಣವು. ಈ ಅರ್ಥವೇ) ತಜ್ಞಾನಾನಸಿತೋ ಯುಃ=ಆ ಎರಡು ಜ್ಞಾನಗಳ ಮಧ್ಯದಲ್ಲಿ ಒಂದು ಜ್ಞಾನದಿಂದ ವಿಷಯೀಕರಿಸಲ್ಪಡುವುದಾದರೆ (ಆಗ, ಆ ಜ್ಞಾನಕ್ಕೆ,) ಸ್ವಪ್ರಕಾಶತ್ವಂ=ಸ್ವಪ್ರಕಾಶತ್ವವು, ಸ್ಯಾದೇವ=ಬಂದೇ ಬರುತ್ತದೆ. (ಅದು ಹೇಗೆಂದರೆ)ಏತತ್ ಜ್ಞಾನಂ ವಿಶೇಷಣಂ ಹಿ=ಈ ಜ್ಞಾನವು ವಿಶೇಷಣವಷ್ಟೆ. (ಯದ್ಯಪಿ ಈ ಜ್ಞಾನವು ನಿಷ್ಕೃಷ್ಟವಾಗಿ ತಾನು ವಿಷಯುವು ಆಗುವುದಿಲ್ಲ. ಆದಾಗ್ಯೂ ಜ್ಞಾನವಿಷಯನಾದ 'ಜ್ಞಾನದ್ವಯವಾನಹಂ' ಇದು ಮೊದಲಾದ ಈ ಅರ್ಥಕ್ಕೆ ವಿಶೇಷಣವು ಆಗಿಯೇ ಆಗುತ್ತದೆ. ತಥಾ ಚ ವಿಶಿಷ್ಟಾರ್ಥ ವಿಷಯಕತ್ವವಿದ್ದರೆ ವಿಶೇಷಣಭೂತವಾದ ಸ್ವವಿಷಯಕತ್ವವು ತಪ್ಪಿದ್ದಲ್ಲ.)(ಮತ್ತೊಂದು ಜ್ಞಾನದಿಂದ ಎನ್ನುವ ೨ನೇ ಕಲ್ಪದಲ್ಲಿ ದೋಷವನ್ನು ಹೇಳುತ್ತಾರೆ.) ಜ್ಞಾನಾಂತರೇಣ ಚೇತ್= ಹಿಂದೆ ಹೇಳಿದ ಎರಡು ಜ್ಞಾನಗಳಿಂದ ವ್ಯತಿರಿಕ್ತವಾದ ಮೂರನೇ ಜ್ಞಾನದಿಂದ, (ಈ ಅರ್ಥವು ವಿಷಯೀಕರಿಸಲ್ಪಡುವುದಾದರೆ) ಅತ್ರ=ಈ ಪಕ್ಷದಲ್ಲಿ ಅನವಸ್ಥಿತಿಃ ಭವೇದೇವ='ಜ್ಞಾನದ್ವಯವಾನೀಶ್ವರಃ ಎನ್ನುವ ನಿಯಮಾಭಾವವು ಆಗಿಯೇ ಆಗುವುದು (ಯಾವನು 'ಜ್ಞಾನತ್ರಯವಾನ' ಎನ್ನುವ ನಿಯಮವನ್ನು ತಿಳಿಯುತ್ತಾನೋ ಆತನ ಹತ್ತಿರ ಪ್ರಶ್ನಿಸಬೇಕು. 'ಜ್ಞಾನತ್ರಯವಾನಹಮಸ್ಮಿ' ಇದು ಮೊದಲಾದ ಅರ್ಥವನ್ನು ಈಶ್ವರನು ತಿಳಿಯುತ್ತಾನೋ ಇಲ್ಲವೋ, ತಿಳಿಯದಿದ್ದರೆ ಸಾರ್ವಜ್ಞ್ಯಾಭಾವವು. ತಿಳಿಯುವುದಾದರೆ ಈ ಮೂರರ ಪೈಕಿ ಒಂದರಿಂದಲೋ ಅಥವಾ ನಾಲ್ಕನೇ ಜ್ಞಾನದಿಂದಲೋ, ೧ನೇದ್ದು ಕೂಡಲಾರದು. ಸ್ವಪ್ರಕಾಶತ್ವವು ಬರಬೇಕಾಗುವುದು. ಎರಡನೇ ಕಲ್ಪದಲ್ಲಿ ಪುನಃ ಅನವಸ್ಥೆಯೇ. ಏವಂ ಚ ಜ್ಞಾನಾಂತರ ಪರಂಪರೆಗಳನ್ನು ಅಂಗೀಕರಿಸಲೇ ಬೇಕಾಗುವುದು.) (ಹಾಗಾದರೆ ಅನಂತಾನಂತ ಈಶ್ವರಜ್ಞಾನಗಳನ್ನು ಅಂಗೀಕರಿಸುತ್ತೇನೆ ಯಾವ ದೋಷವೆಂದರೆ— ಹಾಗೆ ಹೇಳಕೂಡದು. ಕಲ್ಪನಾಗೌರವವು ಬರುವುದು. ಅದಕ್ಕಿಂತ ಒಂದೇ ಜ್ಞಾನಕ್ಕೆ ಸ್ವಪ್ರಕಾಶತ್ವವನ್ನು ಅಂಗೀಕರಿಸುವುದು ಶ್ರೇಷ್ಠವು ಎನ್ನುವ ಅಭಿಪ್ರಾಯದಿಂದ ಉಪಸಂಹಾರಮಾಡುತ್ತಾರೆ.) ಏತಸ್ಮಾತ್=ಈ ಕಾರಣದ್ದೆಶೆಯಿಂದ, ಸ್ವಪ್ರಕಾಶಂ=ಸ್ವಪ್ರಕಾಶತ್ವವು, ದುರ್ನಿವಾರಂ=ತಡೆಯಲು ಅಸಾಧ್ಯವಾಗಿ, ಸಮಾಪತೇತ್=ಪ್ರಾಪ್ತವಾಗುವುದ .

**ತಾ ||** (1) ಜ್ಞಾನಕ್ಕೆ ಸ್ವಪ್ರಕಾಶತ್ವರೂಪವಾದ ವಿಶೇಷವನ್ನು ಅವಶ್ಯವಾಗಿ ಅಂಗೀಕರಿಸಲೇ ಬೇಕು. ಇಲ್ಲದಿದ್ದರೆ ಈಶ್ವರನಿಗೆ ಸರ್ವಜ್ಞತ್ವವು ಬಾರದೆಹೋಗುವುದು. (2) ತನ್ನ ಜ್ಞಾನವನ್ನೇ ತಿಳಿಯದಿದ್ದವನಿಗೆ ಸರ್ವಜ್ಞತ್ವವು ಕೂಡಲಾರದು. ಜ್ಞಾನವೂ ಸರ್ವ ವಸ್ತುಗಳ ಮಧ್ಯದಲ್ಲಿಯೇ ಸೇರಿದ್ದಾಗಿದೆ. ಜ್ಞಾನವಿಷಯದಲ್ಲಿ ಜ್ಞಾನಾಂತರವಿದೆ ಎಂದು ಹೇಳಕೂಡದು. 'ಜ್ಞಾನದ್ವಯೇನ ಸರ್ವಂ ಜಾನಾಮಿ' ಎಂದು ಜ್ಞಾನವೂ ಎರಡು ಜ್ಞಾನಗಳ ಮಧ್ಯದಲ್ಲಿಯೇ ಬಿದ್ದಿರುವುದರಿಂದ ಸ್ವಪ್ರಕಾಶತ್ವವು ಇದ್ದೇ ಇದೆ. ವಿಷಯವಾಗಿ ತನ್ನಿಂದ ವಿಶೇಷ್ಯತ್ವವೇ ಜ್ಞಾನಕ್ಕೆ ಸ್ವಪ್ರಕಾಶತ್ವವು. ಸ್ವೇತರ ಸರ್ವವಿಷಯಕಜ್ಞಾನದಿಂದಲೂ ಸ್ವವಿಷಯಕ ಜ್ಞಾನದಿಂದಲೂ ಆ ಉಭಯ ವಿಷಯಕ ಜ್ಞಾನವು ಈಶ್ವರನಿಗೆ ಅಂಗೀಕರಿಸಲ್ಪಡುವುದಾದರೆ ಆ ಮೂರನ್ನು ವಿಷಯೀಕರಿಸತಕ್ಕ ಜ್ಞಾನವು ಬೇರೆ, ಹೀಗೆ ಅನವಸ್ಥೆಯು ಬರುವುದು. ಸರ್ವರಿಗೆ 'ಇದಂ ಸರ್ವಂ' ಎಂದು ಯಾವುದು ಜ್ಞಾನವೋ, ಅದಕ್ಕೆ ಸ್ವವಿಷಯತ್ವವು ಇಲ್ಲವಾದರೆ ಸರ್ವ ವಿಷಯತ್ವವೂ ಬಾರದೆ ಹೋಗುವುದು, ತಾನೂ ಕೂಡ ಸರ್ವ ವಸ್ತುಗಳ ಮಧ್ಯದಲ್ಲಿಯೇ ಸೇರಿಯದೆ. ಆದುದರಿಂದ ಜ್ಞಾನಕ್ಕೆ ಸ್ವಪ್ರಕಾಶತ್ವವನ್ನು ಅವಶ್ಯವಾಗಿ ಅಂಗೀಕರಿಸಬೇಕು || ೧೫೩ || ೧೫೪ || ೧೫೫ || ೧೫೬ ||

**ಸ. ರ. ವಿ.**— ಈಶ್ವರನಿಗೆ ಜ್ಞಾನಾದಿಗಳನ್ನು ಅಂಗೀಕರಿಸಿ ಆನಂದವನ್ನು ಅಂಗೀಕರಿಸದೆ ಇರಲಿಕ್ಕೆ ಪರರು ಅಂಗೀಕರಿಸಿದ ಹೇತುವನ್ನು ಅನುವಾದಮಾಡಿ ದೂಷಿಸುತ್ತಾರೆ.

**ನ್ಯಾಯಸುಧಾ**— ಈಶ್ವರನು ಅನಂತಾನಂತಗುಣಗಳುಳ್ಳವನು ಎಂದು ಯಾವುದು ಹೇಳಲ್ಪಟ್ಟದೋ ಅದಯುಕ್ತವು. ಇಪ್ಪತ್ತನಾಲ್ಕರಿಂದ ಹೆಚ್ಚು ಗುಣಗಳೇ ಇಲ್ಲ. ಅವರಲ್ಲಿಯೂ ಕೆಲವು ಈಶ್ವರನಲ್ಲಿ ಕೂಡಲಾರವು. ಆದಕಾರಣ ಹಿಂದೆ ಹೇಳಿದ ಎಂಟೇ ಗುಣಗಳಿಂದ ಶ್ರೀಹರಿಯು ಕೂಡಿದವನು ಎಂದರೆ ಹೀಗೆ ಹೇಳಕೂಡದು. ಶೌರ್ಯ ಔದಾರ್ಯ ಪ್ರಾಗಲ್ಭ್ಯಮೊದಲಾದ ಗುಣಗಳೂ ಪ್ರಸಿದ್ಧಗಳಾಗಿವೆ. ಪರರು ಹೇಳಿರುವ ಗುಣಗಳಲ್ಲಿಯೂ ಕೆಲವು ಕೂಡುತ್ತವೆ. ಹೇಗೆಂದರೆ—ಸುಖವನ್ನು ಈಶ್ವರನಿಗೆ ಏಕೆ ಅಂಗೀಕರಿಸಕೂಡದು. 'ಈಶ್ವರಃ ಸುಖರಹಿತಃ ದುಃಖರಹಿತತ್ವಾತ್ ಘಟವತ್'' = ಈಶ್ವರನು ಸುಖವಿಲ್ಲದವನು, ದುಃಖವಿಲ್ಲದಿರುವುದರಿಂದ ಘಟದಂತೆ. ಸುಖವುಳ್ಳವನೆಂದಾದರೆ ದುಃಖವುಳ್ಳವನಾಗಬೇಕಾಗುವುದು ದೇವದತ್ತನಂತೆ, ಎಂದು ವಿಪಕ್ಷದಲ್ಲಿ ಬಾಧಕವಿರುವ ಅನುಮಾನದಿಂದ ಸುಖವನ್ನು ಅಂಗೀಕರಿಸಲಿಕ್ಕೆ ಬರುವುದಿಲ್ಲ ಎಂದರೆ ಅಲ್ಲಿ ಅನುಗ್ರಾಹಕವಾದ ತರ್ಕಕ್ಕೆ ದೂಷಣವನ್ನು ಹೇಳುತ್ತಾರೆ.

**ಮೂ ॥ ಸುಖವಾನ್ ದುಃಖವಾಂಶ್ಚ ಸ್ಯಾದಿತಿ ವ್ಯಾಪ್ತಿಶ್ಚ ನೋ ಭವೇತ್ ॥೧೫೭॥**
**ನಿರ್ದುಃಖತ್ವಂ ಮಹಾನಂದಃ ಶ್ರುತ್ಯೈವೇಶಸ್ಯ ಭಣ್ಯತೇ ।**
**ಯೋಽಶನಾಯಾಪಿಪಾಸೇ ಚ ಶೋಕಾದೀಂಶ್ಚಾತಿವರ್ತತೇ ।**
**ಆನಂದಂ ಬ್ರಹ್ಮಣೋ ವಿದ್ವಾನ್ ವಿಪಾಪ್ಮೇತ್ಯಾದಿಕಾ ಚ ಸಾ ॥ ೧೫೮ ॥**

ಅ । (ಈಶ್ವರನು ಸುಖಿಯಾದರೆ ಆಗ ದುಃಖವುಳ್ಳವನಾಗಬೇಕಾಗುವನು ಎಂದು ಈ ತರ್ಕಕ್ಕೆ ಮೂಲಭೂತವಾದ) ಸುಖವಾನ್ ದುಃಖವಾಂಶ್ಚ ಸ್ಯಾತ್=ಯಾರು ಸುಖವುಳ್ಳವನೋ ಅವನು ದುಃಖವುಳ್ಳವನೂ ಆಗುವನು. ಇತಿ=ಹೀಗೆ, ವ್ಯಾಪ್ತಿಶ್ಚ=ವ್ಯಾಪ್ತಿಯೂಕೂಡ, ನೋ ಭವೇತ್=ಆಗಲಾರದು. (ವ್ಯಾಪ್ತ್ಯಭಾವವು ಹೇಗೆ ಎಂದರೆ) ನಿರ್ದುಃಖತ್ವಂ=ದುಃಖಲೇಶಾತ್ಯಂತಾಭಾವವೂ, ಮಹಾನಂದಃ=ಪೂರ್ಣಾನಂದವೂ ಕೂಡ, ಶ್ರುತ್ಯೈವ=ಶ್ರುತಿಯಿಂದಲೇ, ಈಶಸ್ಯ=ಶ್ರೀಹರಿಗೆ, ಭಣ್ಯತೇ=ಹೇಳಲ್ಪಡುತ್ತದೆ. (ಅಂದರೆ ಯದ್ಯಪಿ ಲೋಕದಲ್ಲಿ ದೇವದತ್ತಾದಿಗಳಲ್ಲಿ ಸುಖವು ದುಃಖದಿಂದ ಸಹಚರಿತವಾಗಿ ಕಂಡದೆ. ಆದಾಗ್ಯೂ ಶ್ರೀಹರಿಯಲ್ಲಿ ದುಃಖಲೇಶಾತ್ಯಂತಾಭಾವವೂ ಪೂರ್ಣಾನಂದವೂ ಶ್ರುತಿಬಲದಿಂದಲೇ ಸಿದ್ಧವಾಗಿರುವುದರಿಂದ ಹಿಂದೆ ಹೇಳಿದ ವ್ಯಾಪ್ತಿಗೆ ವ್ಯಭಿಚಾರವು ಬಂದುದರಿಂದ ಹಿಂದೆ ಹೇಳಿದ ತರ್ಕಕ್ಕೆ ವ್ಯಾಪ್ತಿಯಿರುವುದಿಲ್ಲ. ಈಶ್ವರನಿಗೆ ದುಃಖವಿಲ್ಲವೆಂದು ಪ್ರತಿಪಾದಿಸುವ ಶ್ರುತಿಯನ್ನು ಅರ್ಥತಃ ಉದಾಹರಿಸುತ್ತಾರೆ.) ಯಃ=ಯಾರು, ಅಶನಾಯಾಪಿಪಾಸೇ ಚ=ಅಶನೇಚ್ಛಾ ಪಾನೇಚ್ಛೆಗಳನ್ನು, ಶೋಕಾದೀಂಶ್ಚ=ಶೋಕ ಮೊದಲಾದುವುಗಳನ್ನೂ ಕೂಡ, ಅತಿವರ್ತತೇ=ಅತಿಕ್ರಮಿಸಿರುತ್ತಾನೋ, (ಇದರಿಂದ 'ಯೋಽಶನಾಯಾಪಿಪಾಸೇ ಶೋಕಂ ಮೋಹಂ ಜರಾಂ ಮೃತ್ಯುಮತ್ಯೇತಿ' ಎನ್ನುವ ಶ್ರುತಿಯು ಗೃಹೀತವಾಯಿತು.) ಬ್ರಹ್ಮಣಃ=ಪರಬ್ರಹ್ಮನಿಗೆ, ಆನಂದಂ=ಆನಂದವನ್ನು, ವಿದ್ವಾನ್=ತಿಳಿದವನು. ವಿಪಾಪ್ಮಾ=ಪಾಪಲೇಶವಿಲ್ಲದವನು, ಇತ್ಯಾದಿಕಾ ಚ=ಇದು ಮೊದಲಾದುದು, ಸಾ=ನಿರ್ದುಃಖತ್ವಾದಿಗಳನ್ನು ಹೇಳತಕ್ಕದು. 'ವಿಪಾಪ್ಮಾ' ಎನ್ನುವುದರಿಂದ 'ಯ ಆತ್ಮಾಪಹತ ಪಾಪ್ಮಾ' ಎನ್ನುವ ಶ್ರುತಿಯನ್ನು ಇಟ್ಟುಕೊಳ್ಳತಕ್ಕದು. ಇತ್ಯಾದಿ ಶ್ರುತಿಗಳಿಂದ ಈಶ್ವರನಿಗೆ ದುಃಖಾಭಾವವೂ ಪರಾನಂದವೂ ಪ್ರತಿಪಾದಿತವಾಗಿದೆ. ॥ ೧೫೭ ॥ ೧೫೮ ॥

**ಸ. ರ. ವಿ.**— ದೇವದತ್ತಾದಿಗಳಿಗೆ ದುಃಖಿತ್ವದಲ್ಲಿ ಸುಖಿತ್ವವು ಪ್ರಯೋಜಕವಲ್ಲ. ಮತ್ತೆ ದುಃಖಿತ್ವಾಪಾದಕವಾದ ಈಶ್ವರೇಚ್ಛಾವಿಷಯತ್ವವೇ ಅಲ್ಲಿ ಪ್ರಯೋಜಕವು. ಈಶ್ವರನು ತನಗೆ ದುಃಖಿತ್ವವನ್ನು ಇಚ್ಛಿಸುವುದಿಲ್ಲ. ಆದುದರಿಂದ ಈಶ್ವರನಿಗೆ ದುಃಖಿತ್ವವಿಲ್ಲವೆನ್ನುತ್ತಾರೆ.

**ಸ. ಚ. ವಿ.** ಪರಹೇತುವಿಗೆ ಬಾಧವನ್ನುದ್ಭಾವಿಸಿ, ಅಪ್ರಯೋಜಕತ್ವ ದೂಷಣವನ್ನು ಹೇಳುತ್ತಾರೆ.

**ನ್ಯಾಯಸುಧಃ**— ಹಾಗಾದರೆ 'ಆನಂದಂ ಬ್ರಹ್ಮಣೋ ವಿದ್ವಾನ್'' ಎನ್ನುವ ಶ್ರುತಿಗೆ ದುಃಖಾಭಾವವಿಷಯತ್ವವು ಕೂಡುವುದರಿಂದ, ಶ್ರುತಿಯನ್ನು ಆಶ್ರಯಿಸಿ ಪ್ರಸಂಗಕ್ಕೆ ಮೂಲ ಭೂತವಾದ ವ್ಯಾಪ್ತಿಭಂಗವನ್ನು ಹೇಳಲಿಕ್ಕೆ ಬರುವುದಿಲ್ಲ. ಎಂದರೆ— ಅಂಗೀಕರಿಸಿ ಸೋಪಾಧಿಕತ್ವವನ್ನು ಹೇಳುತ್ತಾರೆ.

**ಮೂ ॥ ಈಶ್ವರಸ್ಯ ತಥೇಷ್ಟತ್ವಂ ದುಃಖಿತ್ವೋಪಾಧಿರಿತ್ಯಪಿ ॥ ೧೫೯ ॥**
**ಉಕ್ತೇ ಕಿಮುತ್ತರಂ ಬ್ರೂಯಾಚ್ಛ್ರುತ್ಯನಾದರತತ್ಪರಃ ।**
**ನ ಚಾತ್ಮದುಃಖಿತೇಚ್ಛಾ ಸ್ಯಾದತ ಏತನ್ನಿವಾರ್ಯತೇ ॥ ೧೬೦ ॥**

**ಅ ॥** ಈಶ್ವರಸ್ಯ=ಶ್ರೀಹರಿಯು, ತಥೇಷ್ಟತ್ವಂ=ದುಃಖವುಳ್ಳವನಾಗಲಿ ಎನ್ನುವ ಇಚ್ಛಾವಿಷಯತ್ವವು, ದುಃಖಿತ್ವೋಪಾಧಿಃ=ದುಃಖಿತ್ವಪ್ರಯೋಜಕವು, ಅಪಿ=ಅಧರ್ಮಾದಿಮತ್ವವೂ ಕೂಡ, ಇತಿ = ಹೀಗೆ, ಉಕ್ತೇ = ಹೇಳುತ್ತಿರಲು, ಶ್ರುತ್ಯನಾದರತತ್ಪರಃ = ಶ್ರುತಿಗಳ ಅನಾದರದಲ್ಲಿ (ಬಾಧಕವಿಲ್ಲದೆ ಪ್ರತೀತಾರ್ಥವನ್ನು ಪರಿತ್ಯಾಗಮಾಡುವುದರಲ್ಲಿ) ಆಸಕ್ತನಾದವನು, ಕಿಮುತ್ತರಂ=ಯಾವ ಉತ್ತರವನ್ನು, ಬ್ರೂಯಾತ್=ಹೇಳಿಯಾನು? (ಶ್ರುತಿಯನ್ನು ಆಶ್ರಯಿಸಿ ವ್ಯಾಪ್ತಿಭಂಗವು ಆಗುವುದು ಬೇಡ. ಸೋಪಾಧಿಕತ್ವವಾದರೂ ಬರುವುದು. ಸೋಪಾಧಿಕ ಸಂಬಂಧಕ್ಕೆ ವ್ಯಭಿಚಾರವು ನಿಯತವಾಗಿದೆ.) (ಯಾರು ಸುಖವುಳ್ಳವನೋ ಅವನು ದುಃಖವುಳ್ಳವನು ಆಗಲಿ. ಎಂದು ಈಶ್ವರೇಚ್ಛಾವಿಷಯನು ಆಗಿಯೇ ಆಗುತ್ತಾನೆಂದು ನಿಯಮವಿದ್ದುದರಿಂದ ಇದು ಉಪಾಧಿಯಲ್ಲ. ಎಂದರೆ—) ಆತ್ಮದುಃಖಿತೇಚ್ಛಾ ನ ಚ ಸ್ಯಾತ್=(ಈಶ್ವರನಿಗೆ 'ಆನಂದಂ ಬ್ರಹ್ಮಣೋ ವಿದ್ವಾನ್'' ಇತ್ಯಾದಿ ಶ್ರುತಿಗಳಿಂದ ಸುಖವಿದ್ದರೂ ಈ ಉಪಾಧಿಯು ಇಲ್ಲ. ಯಾರಿಗೂ) ಆತ್ಮದುಃಖಿತೇಚ್ಛಾ=ತನಗೆ ದುಃಖವಿರಲಿ ಎನ್ನುವ ಇಚ್ಛೆಯು, ನ ಚ ಸ್ಯಾತ್= ಇರಲಾರದು. ಅತಃ = ಆದುದರಿಂದ, ಏತತ್ = ಉಪಾಧಿಗೆ ವ್ಯಾಪ್ಯಾಭಿಮತವ್ಯಾಪಕತ್ವವು, ನಿವಾರ್ಯತೇ=ತಡೆಯಲ್ಪಡುತ್ತದೆ.

**ತಾ ॥ ಸ. ರ. ವಿ.** (1) ಈಶ್ವರನು ಪೂರ್ಣಾನಂದವುಳ್ಳವನಾದರೆ ದುಃಖವುಳ್ಳವನು ಆಗುವನು, ಹೀಗೆ ಆಪಾದಿಸಲಿಕ್ಕೆ ಶಕ್ಯವಾಗುವುದಿಲ್ಲ. ನಿತ್ಯಾನಂದನಿಗೆ ದುಃಖದಿಂದ ವ್ಯಾಪ್ತಿಯಿಲ್ಲ. ಈ ಆಪಾದನವು ವ್ಯಾಹತವೂ ಆಗಿದೆ. ನಿತ್ಯಪೂರ್ಣಾನಂದನಿಗೆ ದುಃಖಿತ್ವವು ವಿರುದ್ಧವು ಈಶ್ವರನಿಗೆ ಆನಂದವಿದ್ದರೆ ಚೈತ್ರನಂತೆ ಅನಿತ್ಯಾನಂದವತ್ವವನ್ನು ಆಪಾದಿಸುತ್ತೇವೆಂದು ಹೇಳಕೂಡದು. ಮೈತ್ರಾದಿಗಳಲ್ಲಿ ಅನಿತ್ಯ ಸುಖಿತ್ವವು ದುಃಖಿತ್ವಪ್ರಯುಕ್ತವಾಗಿದೆ. ದುಃಖಿತ್ವವಾದರೂ ಈಶ್ವರನಿಗೆ ಶ್ರುತಿವಿರುದ್ಧವಾಗಿದೆ. ॥ ೧೫೯ ॥ ೧೬೦ ॥

**ಸ. ರ. ವಿ.** ಸುಖಿತ್ವದುಃಖಿತ್ವಗಳಿಗೆ ಸಹದರ್ಶನಮಾತ್ರದಿಂದ ಶ್ರುತಿಸಿದ್ಧವಾದ ಈಶ್ವರಾನಂದವನ್ನು ಅಪಲಾಪಮಾಡಿದರೆ ಅಗ್ನೀಷೋಮೀಯಪಶುಹಿಂಸಾದಿಗಳಿಗೂ ಬ್ರಾಹ್ಮಣಾದಿಗಳ ಹಿಂಸೆಯಂತೆ ಪಾಪಹೇತುತ್ವವನ್ನು ಏಕೆ ಅನುಮೇಯಿಸುವುದಿಲ್ಲಯೆನ್ನುತ್ತಾರೆ.

**ನ್ಯಾಯಸುಧಾ**— (1) ಹಾಗಾದರೆ ಶ್ರುತಿಗೆ ಸ್ವಾರ್ಥಪರತ್ವವಿದ್ದರೆ ತರ್ಕಾನುಮಾನಗಳಿಗೆ ವ್ಯಾಪ್ತಿಭಂಗವು. ವ್ಯಾಪ್ತಿಭಂಗವಾದರೆ ಶ್ರುತಿಗೆ ಸ್ವಾರ್ಥಪರತ್ವವು. ಹೀಗೆ ಹೇಳಕೂಡದು. ಏಕೆಂದರೆ— ಪ್ರತೀತಾರ್ಥಪರಿತ್ಯಾಗವೇ ಬಾಧಕವನ್ನು ಅಪೇಕ್ಷಿಸುತ್ತದೆ. ಸ್ವಾರ್ಥಪರತ್ವವು ಬಾಧಕಾಭಾವವನ್ನು ಅಪೇಕ್ಷಿಸುವುದಿಲ್ಲ. ಸ್ವಾರ್ಥಪರತ್ವವು ಪ್ರತೀತಿಯಿಂದಲೇ ಸಿದ್ಧವಾಗಿದೆ. ಈ ಶ್ರುತಿಬಲದಿಂದ ಹಿಂದೆ ಹೇಳಿದ ತರ್ಕಕ್ಕೆ ವ್ಯಾಪ್ತಿಭಂಗಬಂದರೂ ಸಹದರ್ಶನಮಾತ್ರದಿಂದ ತರ್ಕ ಏಕೆ ಕೂಡಲಾರದೆಂದರೆ— ಈ ಪಕ್ಷದಲ್ಲಿ ಅತಿಪ್ರಸಂಗವೆನ್ನುತ್ತಾರೆ—

**ಮೂ ॥ ಸಹದರ್ಶನಮಾತ್ರೇಣ ಶ್ರುತೀನಾಮಪಲಾಪಕಃ ।**
**ಯಜ್ಞಾದೇರಪಿ ಪಾಪಸ್ಯ ಹೇತುತ್ವಂ ಹಿಂಸಯಾ ಯುತೇಃ ॥ ೧೬೧ ॥**
**ನಾನುಮಾತಿ ಕಥಂ ತತ್ರ ಯದ್ಯುಪಾಧಿರ್ನಿಷಿದ್ಧತಾ ।**
**ಅದುಃಖಿತ್ವೇನ ಚಾನುಕ್ತಿಃ ಕಥಂ ನೋಪಾಧಿತಾಂ ವ್ರಜೇತ್ ॥ ೧೬೨ ॥**
**ಅದುಃಖಮಿತರತ್ಸರ್ವಂ ಜೀವಾ ಏವ ತು ದುಃಖಿನಃ ।**
**ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ ॥ ೧೬೩ ॥**
**ಇತಿ ಶ್ರುತಿರ್ಹಿ ಪರಮಾ ಶ್ರುತ್ಯುಕ್ತಿರ್ಯದಿ ಕಾರಣಂ ।**
**ಕಿಂ ಕಾರ್ಯಮನುಮಾನೇನ ಗಲಸ್ತನಸಮೇನ ಹಿ ॥ ೧೬೪ ॥**

**ಅ**.) ಸಹದರ್ಶನಮಾತ್ರೇಣ = ಆಪಾದಕಕ್ಕಾಗಲೀ, ಸಾಧನಕ್ಕಾಗಲೀ, ಆಪಾದ್ಯದಿಂದಲಾಗಲೀ, ಸಾಧ್ಯದಿಂದಾಗಲೀ ಏಕತ್ರ ದರ್ಶನವಿದೆಯೋ ಅಷ್ಟುಮಾತ್ರದಿಂದ, ಶ್ರುತೀನಾಂ= ಈಶ್ವರನಿಗೆ ಆನಂದವನ್ನು ಪ್ರತಿಪಾದಿಸುವ ಶ್ರುತಿಗಳಿಗೆ, ಅಪಲಾಪಕಃ=ಸ್ವಾರ್ಥವನ್ನು ಬಿಡುವವನು, ಯಜ್ಞಾದೇರಪಿ = ಅಗ್ನೀ ಷೋಮೀಯ ಮೊದಲಾದುದಕ್ಕೂ, ಹಿಂಸಯಾ = ಹಿಂಸೆಯಿಂದ, ಯುತೇಃ= ಸಂಬಂಧವಿದ್ದುದರಿಂದ, ಪಾಪಸ್ಯ=ಪಾಪಗಳಿಗೆ, ಹೇತುತ್ವಂ=ಕಾರಣತ್ವವನ್ನು, ಕಥಂ=ಹೇಗೆ, ನಾನುಮಾತಿ=ಅನುಮೇಯಿಸುವುದಿಲ್ಲ. (ಅಂದರೆ ಸಹದರ್ಶನಮಾತ್ರದಿಂದ ಆನಂದ ಶ್ರುತ್ಯರ್ಥವನ್ನು ಅಪಲಾಪಮಾಡುವುದಾದರೆ ಆಗ ಯಾವುದು ಹಿಂಸೆಯೋ ಅದು ಪಾಪಕ್ಕೆ ಕಾರಣವು ಎಂದು ಸಹದರ್ಶನದಿಂದ ಜ್ಯೋತಿಷ್ಟೋಮಾದಿ ಶ್ರುತ್ಯರ್ಥಗಳನ್ನು ವಿಶೇಷವಿಲ್ಲವಿರುವುದರಿಂದ ಅಪಲಾಪಮಾಡಬೇಕಾದೀತು.) (ಹಾಗಾದರೆ ವಿಶೇಷವಿಲ್ಲವೆನ್ನುವುದು ಅಸಿದ್ಧವಾಗಿದೆ. ಹಿಂಸಾತ್ವಪಾಪಸಾಧನತ್ವಗಳಿಗೆ ವ್ಯಾಪ್ತಿಹೇಳಿದರೆ ನಿಷಿದ್ಧತ್ವರೂಪವಾದ ಉಪಾಧಿಯು ಇದೆ. ಸುಖಿತ್ವದುಃಖಿತ್ವಗಳಿಗೆ ಸಂಬಂಧ ಹೇಳಿದರೆ ಯಾವುದೊಂದು ಉಪಾಧಿಯೂ ಇಲ್ಲ. 'ಈಶ್ವರನಿಗೆ ತಥೇಷ್ಟತ್ವವು ಉಪಾಧಿಯು ಎನ್ನುವುದಾದರೂ ಈಗಲೂ ಸಿದ್ಧವಾಗಲಿಲ್ಲ. ಎಂದಾಶಂಕಿಸುತ್ತಾರೆ.) ತತ್ರ=ಹಿಂಸಾತ್ವ ಪಾಪಸಾಧನತ್ವಗಳಲ್ಲಿ, ನಿಷಿದ್ಧತಾ ಉಪಾಧಿಃ=ನಿಷಿದ್ಧತ್ವರೂಪವಾದ ಉಪಾಧಿಯು, ಯದಿ ಅಸ್ತೀತ್ಯುಚ್ಯತೇ=ಉಂಟೆಂದು ಹೇಳಲ್ಪಡುವುದಾದರೆ, ಅದುಃಖಿತ್ವೇನ ಚಾನುಕ್ತಿಃ=ಇಲ್ಲಿಯೂ ಕೂಡ ದುಃಖವಿಲ್ಲವೆಂದು ಹೇಳದಿರುವಿಕೆಯು (ಅಂದರೆ ದುಃಖಿಯಾಗಿದ್ದಾನೆನ್ನುವ ಉಕ್ತಿಯು, ಕಥಂ=ಹೇಗೆ, ಉಪಾಧಿತಾಂ=ಉಪಾಧಿತ್ವವನ್ನು, ನ ವ್ರಜೇತ್= ಹೊಂದಲಾರದು. (ದೇವದತ್ತಾದಿಗಳಿಗೆ ಶ್ರುತಿಯಲ್ಲಿ ಹೇಳಿದ ದುಃಖಿತ್ವೋಕ್ತಿಯು ಯಾವುದೆಂದಾಶಂಕಿಸಿದರೆ) ಇತರತ್ಸರ್ವಂ=ಜೀವರಿಂದ ವ್ಯತಿರಿಕ್ತವಾದುದೆಲ್ಲವೂ, ಅದುಃಖಂ=ದುಃಖವಿಲ್ಲದಿರುವುದು. ಜೀವಾ ಏವ ತು=ಜೀವರೇ, ದುಃಖಿನಃ=ದುಃಖವುಳ್ಳವರು. ತೇಷಾಂ=ಆ ಜೀವರ, ದುಃಖಪ್ರಹಾಣಾಯ = ದುಃಖವನ್ನು ಪರಿಹರಿಸುವುದಕ್ಕಾಗಿ, ಏಷಾ ಶ್ರುತಿಃ = ಈ ಶ್ರುತಿಯು, ಪ್ರವರ್ತತೇ=ದುಃಖವನ್ನು ಪರಿಹರಿಸಲಿಕ್ಕೆ ಸಾಧನನಾದ ಪರಮಾತ್ಮನನ್ನು ಪ್ರತಿಪಾದಿಸುತ್ತದೆ.

ಇತಿ=ಹೀಗೆ, ಪರಮಾಶ್ರುತಿರ್ಹಿ=ಪರಮುಶ್ರುತಿಯುಷ್ಟೆ. (ಹೀಗೆ ಅನುಮಾನಕ್ಕೆ ಅನುಗ್ರಾಹಕ ವಾದ ತರ್ಕವನ್ನು ನಿರಾಕರಿಸಿ ಈಗ 'ಈಶ್ವರೋ ನ ಸುಖೀ ನಿರ್ದುಃಖತ್ವಾತ್ ಘಟವತ್= ಈಶ್ವರನು ಸುಖವುಳ್ಳವನಲ್ಲ, ದುಃಖಲೇಶರಹಿತನಾಗಿರುವುದರಿಂದ ಘಟದಂತೆ ಎನ್ನುವ ಅನು ಮಾನವನ್ನೂ ದೂಷಿಸುತ್ತಾರೆ.) ಶ್ರುತ್ಯುಕ್ತಿಃ=ಶ್ರುತಿವಚನವು, ಯದಿ ಕಾರಣಂ=ಪ್ರಮಾಣಕ್ಕೆ ಕಾರಣವೆಂದಾದರೆ, ಗಲಸ್ತನ ಸಮೇನ=ಅಜಾಗಲಸ್ತನಕ್ಕೆ ಸದೃಶವಾದ, ಅನುಮಾನೇನ= ಅನುಮಾನದಿಂದ, ಕಾರ್ಯಂ=ಮಾಡತಕ್ಕದ್ದು, ಕಿಂ ಹಿ=ಏನು ಇದೆ?

**ತಾ ||** **ಸ. ರ. ವಿ.** ಬ್ರಹ್ಮಹತ್ಯಾದಿಗಳಿಗೆ ಪಾಪಹೇತುತ್ವದಲ್ಲಿ ಹಿಂಸಾತ್ವವು ಪ್ರಯೋ ಜಕವಲ್ಲ. ಮತ್ತೆ ಶ್ರುತಿಯಿಂದ ನಿಷಿದ್ಧತ್ವವು. ಆದುದರಿಂದ ಶ್ರುತಿವಿಹಿತವಾದ ಹಿಂಸೆಯಿಂದೊ ಡಗೂಡಿರುವುದರಿಂದ ಯಜ್ಞಾದಿಗಳಿಗೆ ಅಧರ್ಮತ್ವವಿಲ್ಲವೆಂದು ಹೇಳುವುದಾದರೆ ಜೀವನಿಗೆ ದುಃಖಿತ್ವದಲ್ಲಿಯೂ ಸುಖಿತ್ವವು ಪ್ರಯೋಜಕವಲ್ಲ, ಮತ್ತೆ ಶ್ರುತಿಯಿಂದ ದುಃಖಿಯೆಂದು ಹೇಳದಿ ರುವಿಕೆಯು. ಆದುದರಿಂದ ಈಶ್ವರನಿಗೆ ದುಃಖಿತ್ವವಿಲ್ಲ. ಹೀಗೆ ಸಮಾಧಾನವು ಸಮವೇ. ಆದು ದರಿಂದ ಶ್ರುತಿಯನ್ನೇ ಇಟ್ಟುಕೊಳ್ಳತಕ್ಕದ್ದು. ಅಜಾಗಲಸ್ತನದಂತಿರುವ ಅನುಮಾನವನ್ನು ಇಟ್ಟುಕೊಳ್ಳಕೂಡದು. || ೧೬೧ || ೧೬೨ || ೧೬೩ || ೧೬೪ ||

ಅವಶ್ಯವಾಗಿ ಈಶ್ವರನಿಗೆ ದುಃಖವಿಲ್ಲದಿರುವುದರಿಂದ ಸುಖಾಭಾವವು ಘಟಾದಿಗಳಲ್ಲಿ ಹೇಗೋ ಹಾಗೆಯೇ ಅನುಮೇಯಿಸುವುದಾದರೆ 'ವಿಮತಃ ಜಗತ್ಕರ್ತಾ ನ' ಇತ್ಯಾದ್ಯನುಮಾನ ಗಳಿಂದ ಈಶ್ವರಾದ್ಯಭಾವವು ಬರಬೇಕಾಗುವುದು. ಆದುದರಿಂದ ಅನುಮಾನವನ್ನು ಆದರಿಸದೆ ಶ್ರುತಿಯಲ್ಲಿ ಹೇಳಿದಪ್ರಕಾರ ಈಶ್ವರಾದಿ ವಸ್ತುಗಳನ್ನು ಇಟ್ಟುಕೊಳ್ಳಬೇಕೆನ್ನುತ್ತಾರೆ.

**ನ್ಯಾಯಸುಧಾ**— ಹಾಗಾದರೆ ಶ್ರುತಿಯು ಪ್ರಮಾಣವೇ ಆದರೆ ಅನುಮಾನ ವಿರುದ್ಧ ವಾಗಿರುವುದರಿಂದ ಪ್ರತೀತಾರ್ಥವನ್ನು ಬಿಟ್ಟು ದುಃಖಾಭಾವಪರವಾಗಿ ವ್ಯಾಖ್ಯಾನಮಾಡತಕ್ಕದು ಎಂದಾಶಂಕಿಸಿದರೆ ಅನುಮಾನಕ್ಕೆ ಶ್ರುತಿಬಾಧಕತ್ವವು ಎಲ್ಲಿಯೂ ತೋರದಿರುವುದರಿಂದ ಹೀಗೆ ಹೇಳಕೂಡದು. ಕೆಲವುಕಡೆ ಉಪಜೀವ್ಯತ್ವಾದಿಗಳಿಂದಲೇ ಬಾಧಕತ್ವವು ಉಪಜೀವ್ಯತ್ವಾದಿ ಬಾಧಕಪ್ರಯೋಜಕಗಳು ಇಲ್ಲದಿದ್ದರೂ ಬಾಧಕತ್ವವನ್ನು ಅಂಗೀಕರಿಸಿದರೆ ಅತಿ ಪ್ರಸಂಗವು ಎನ್ನುತ್ತಾರೆ.

**ಮೂ ||** **ಅನುಮಾನೇನ ಯದ್ಯರ್ಥಃ ಶ್ರುತಿದೃಷ್ಟೋऽಪ್ಯಪೋದ್ಯತೇ ।**
**ಪೂರ್ವೋಕ್ತೇನ ಪ್ರಕಾರೇಣ ನೇಶ್ವರೋ ಧರ್ಮಏವ ಚ ॥ ೧೬೫ ॥**
**ಸ್ಯಾತ್ತತ್ಫಲಂ ಚ ತೇನಾತ್ರ ಶ್ರುತಿರೇವ ಪ್ರಮಾ ಭವೇತ್ ।**
**ಈಶಸ್ಯಾನುಮಯಾ ಸಿದ್ಧೇಃ ಶ್ರುತಿರ್ಧರ್ಮಿಪ್ರಮಾ ಭವೇತ್ ॥೧೬೬॥**
**ತಯಾ ಸರ್ವಗುಣೈಃ ಪೂರ್ಣಃ ಈಶ ಉಕ್ತೋ (ಉಕ್ತ ಈಶೋ) ಯತಸ್ತತಃ ।**
**ಅನಾನಂದಾನುಮಾನಸ್ಯ ಧರ್ಮಿಗ್ರಾಹಿ ವಿರೋಧತಃ ।**
**ನ ಪ್ರಮಾಣಂ ಭವೇತ್ತಸ್ಮಾನ್ನಾನುಮಾತ್ರೋಪಯೋಗಿನೀ ॥ ೧೬೭ ॥**

**ಅ ||** ಅನುಮಾನೇನ = ಅನುಮಾನದಿಂದ, ಯದಿ=ಯಾವ ಪಕ್ಷದಲ್ಲಿ, ಶ್ರುತಿ ದೃಷ್ಟೋऽಪಿ=ಶ್ರುತಿಸಿದ್ಧವಾದಾಗ್ಯೂ, ಅರ್ಥಃ = ಈಶ್ವರಾದಿರೂಪ ಅರ್ಥವು, ಅಪೋದ್ಯತೇ= ಬಾಧಿಸಲ್ಪಡುತ್ತದೋ, (ಹಾಗಾದರೆ) ಪೂರ್ವೋಕ್ತೇನ ಪ್ರಕಾರೇಣ=ಶಾಸ್ತ್ರಯೋನಿ ಸೂತ್ರದಲ್ಲಿ

ಹೇಳಲ್ಪಟ್ಟ ಪ್ರಕಾರದಿಂದ, ಈಶ್ವರಃ = ಈಶ್ವರನು, ಧರ್ಮಶ್ಚ = ಧರ್ಮವೂ, ತತ್ಫಲಂ ಚ= ಯಜ್ಞಾದಿಗಳ ಫಲವೂ ಕೂಡ, ನೈವಸ್ಯಾತ್=ಆಗದೇನೇ ಹೋಗಬೇಕಾಗುವುದು. (ಶ್ರುತಿಸಿದ್ಧ ನಾದ ಈಶ್ವರನನ್ನು ಅನುಮಾನ ವಿರೋಧದಿಂದ ಬಿಡಬೇಕಾಗುವುದು.) (ಯಜ್ಞಕ್ರಿಯಾ ನಾದೃಷ್ಟ ಫಲಹೇತುಃ ಕ್ರಿಯಾತ್ವಾತ್ ನಿಷ್ಠೀವನಾದಿಕ್ರಿಯಾವತ್=ಯಜ್ಞಕ್ರಿಯೆಯು ಅದೃಷ್ಟಫಲಕ್ಕೆ ಕಾರಣ ವಲ್ಲ. ಕ್ರಿಯೆಯಾಗಿರುವುದರಿಂದ ನಿಷ್ಠೀವನ (ಉಗುಳುವುದು) ಮೊದಲಾದ ಕ್ರಿಯೆಯಂತೆ. ಧರ್ಮೋ ವಾ ನ ಸುಖಸಾಧನಂ ಅದೃಷ್ಟತ್ವಾತ್ ಅಧರ್ಮವತ್=ಧರ್ಮವು ಸುಖಸಾಧನವಲ್ಲ, ಅದೃಷ್ಟವಾಗಿರುವುದರಿಂದ ಅಧರ್ಮದಂತೆ ಇದು ಮೊದಲಾದ ಅನುಮಾನವು ಕೂಡಬಹುದು) (ಅತಿಪ್ರಸಂಗಕ್ಕೆ ವಿಪರ್ಯಯಪರ್ಯವಸಾನವನ್ನು ಹೇಳುತ್ತಾರೆ) ತೇನ=(ಯಾವ ಕಾರಣ ದಿಂದ ಉಪಜೀವ್ಯತ್ವಾದಿ ರಹಿತವಾದ ಅನುಮಾನದಿಂದ ಆನಂದಶ್ರುತಿಗೆ ಬಾಧವನ್ನು ಅಂಗೀಕರಿಸಿ ದರೆ ಅನಿಷ್ಟವು ಬರುವುದೋ) ಆ ಕಾರಣದಿಂದ, ಶ್ರುತಿಃ= ಈ ಶ್ರುತಿಯು, ಅತ್ರೈವ=ಈಶ್ವರ ನಿಗೆ ಆನಂದವತ್ವವಿಷಯದಲ್ಲಿಯೇ, ಪ್ರಮಾ=ಪ್ರಮಾಣವು ಭವೇತ್=ಆಗುವುದು. (ಬೇರೆ ಪ್ರಕಾರ ಯೋಜಿಸಕೂಡದು.) ಈಶಸ್ಯ=ಶ್ರೀ ಹರಿಗೆ, ಅನುಮಯಾ=ಶ್ರುತಿವ್ಯತಿರಿಕ್ತಪ್ರಮಾಣ ದಿಂದ, ಸಿದ್ಧೇಃ=ಸಿದ್ಧಿಯಿರೋಣದರಿಂದ, ಶ್ರುತಿಃ=ಶ್ರುತಿಯು, ಧರ್ಮಿಪ್ರಮಾ=ಧರ್ಮಿಗ್ರಾಹಕ ಪ್ರಮಾಣವು, ಭವೇತ್=ಆಗುವುದು. ತಯಾ=ಶ್ರುತಿಯಿಂದ, ಯತಃ=ಯಾವಕಾರಣದ್ದೆಶೆ ಯಿಂದ, ಈಶಃ=ಶ್ರೀ ಹರಿಯು, ಸರ್ವಗುಣೈಃ=ಎಲ್ಲಾ ಗುಣಗಳಿಂದ, ಪೂರ್ಣಃ=ಪರಿಪೂರ್ಣನೇ ಎಂದು, ಉಕ್ತಃ=ಹೇಳಲ್ಪಟ್ಟದ್ದಾನೋ, ತತಃ=ಆದಕಾರಣ, ಅನಾನಂದಾನುಮಾನಸ್ಯ=ದುಃಖ ವನ್ನು ಸಾಧಿಸುವ ಅನುಮಾನಕ್ಕೆ, ಧರ್ಮಿಗ್ರಾಹಿವಿರೋಧತಃ=ಧರ್ಮಿಯಾದ ಪರಮೇಶ್ವರನನ್ನು ತಿಳಿಸಿಕೊಡತಕ್ಕ ಶ್ರುತಿ ವಿರೋಧವಿದ್ದುದರಿಂದ, ಪ್ರಮಾಣಂ ನ ಭವೇತ್=ಅನುಮಾನವು ಪ್ರಮಾಣವಾಗಲಾರದು ತಸ್ಮಾತ್=ಆದುದರಿಂದ, ಅನುಮಾ=ಅನುಮಾನವು, ಅತ್ರ= ಈಶ್ವರವಿಷಯದಲ್ಲಿ, ಉಪಯೋಗಿನೀ=ಉಪಯುಕ್ತವಾದುದು, ನ=ಆಗಲಾರದು.

**ತಾ** ॥ (1) ಪ್ರಮಾಣಾಂತರದಿಂದ ಸಿದ್ಧವಾದ ಧರ್ಮಿಯಲ್ಲಿ ಅನುಮಾನವು ಪ್ರವೃತ್ತ ವಾಗುತ್ತದೆ. ಬೇರೆ ಪ್ರಕಾರವಲ್ಲ. ಈಶ್ವರನು ಧರ್ಮಿಯು, ಇವನು ಅನುಮಾನದಿಂದ ಸಿದ್ಧಿಸು ವುದಿಲ್ಲ. ಪ್ರತ್ಯಕ್ಷಾದಿಗಳಿಗೆ ಅವಿಷಯನೆಂದು ಪರರಿಗೂ ಸಮ್ಮತವೇ. ಆದ ಕಾರಣ ಪರಿಶೇಷತಃ ಶ್ರುತಿಯೇ ಧರ್ಮಿಯಾದ ಪರಮೇಶ್ವರನನ್ನು ತಿಳಿಸಿಕೊಡುವುದು ಎಂದು ಒಪ್ಪಲೇ ಬೇಕು. ತಥಾ ಚ ಈ ಅನುಮಾನದಿಂದ ಶ್ರುತಿಪ್ರಾಮಾಣ್ಯವು ಅನುಮತವಾಗಿದೆ. ಉಪಜೀವ್ಯವಾದ ಶ್ರುತಿಯು ಈಶ್ವರನು ಆನಂದವುಳ್ಳವನೆಂದು ಪ್ರತಿಪಾದಿಸುತ್ತದೆ. ಆದ ಕಾರಣ ಶ್ರುತಿವಿರೋಧ ವಿದ್ದುದರಿಂದ ಅನುಮಾನವು ಅಪ್ರಮಾಣವೇ. ಪ್ರತ್ಯಕ್ಷವಿರುದ್ಧವಾದ ಅಗ್ನಿಶೈತ್ಯಾನುಮಾನದಂತೆ. ಇದೇ ನ್ಯಾಯದಿಂದ ಈಶ್ವರನಿಗೆ ವಿಗ್ರಹರಾಹಿತ್ಯ ಮೊದಲಾದುದನ್ನು ಸಾಧಿಸಿಕೊಡುವ ಅನು ಮಾನವೂ ಕೂಡ ಶ್ರುತಿವಿರುದ್ಧವಾಗಿರುವುದರಿಂದ ಅಪ್ರಮಾಣವೇ. ॥ ೧೬೫ ॥ ೧೬೬ ॥ ೧೬೭ ॥

**ಸ. ರ. ವಿ.** ವೈಶೇಷಿಕಾದಿಗಳ ಮತದಲ್ಲಿ ಕಾಲಭೇದದಿಂದ ಕಾಲವು ಸರ್ವದಾ ಇದ್ದ ಪ್ರಯುಕ್ತವೂ ಈಶನಿಗೆ ನಿತ್ಯೇಚ್ಛೆಯು ಇದ್ದುದರಿಂದಲೂ ಜಗತ್ಸೃಷ್ಟಿ ಪ್ರಲಯಗಳ ವ್ಯವಸ್ಥೆಯೂ ಕೂಡಲಾರದು.

**ನ್ಯಾಯಸುಧಾ—** ವೈಶೇಷಿಕಾದಿಗಳ ಮತದಲ್ಲಿ ಬೇರೆ ಅನುಪಪತ್ತಿಗಳನ್ನು ತೋರಿಸುತ್ತಾ 'ನಿತ್ಯಮೇವ ಚ ಭಾವಾತ್' ಎನ್ನುವ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ.

ಮೂ ॥ ನಿತ್ಯೇಚ್ಛತ್ವಾತ್ಪರೇಶಸ್ಯ ಪರಮಾಣುಸದಾತ್ವತಃ ।
ಅದೃಷ್ಟಕಾಲಯೋಶ್ಚೈವ ಭಾವಾತ್ಕಾರ್ಯಂ ಸದಾ ಭವೇತ್ ॥೧೬೮॥

ಅ॥ ಪರೇಶಸ್ಯ=ಶ್ರೀ ಹರಿಗೆ, ನಿತ್ಯೇಚ್ಛತ್ವಾತ್=ಸದಾತನವಾದ ಇಚ್ಛೆಯಿದ್ದುದರಿಂದ, ಪರಮಾಣು ಸದಾತ್ವತಃ=ಪರಮಾಣುಗಳಿಗೆ ಸದಾತನತ್ವವಿದ್ದುದರಿಂದ, ಅದೃಷ್ಟಕಾಲಯೋಃ= ಅದೃಷ್ಟ ಕಾಲಗಳಿಗೆ, ಭಾವಾತ್=ಪ್ರಲಯಕಾಲದಲ್ಲಿಯೂ ಇರೋಣ ಇದ್ದುದರಿಂದ, ಕಾರ್ಯಂ=ಕಾರ್ಯವು, ಸದೈವ=ಯಾವಾಗಲೂ, ಭವೇತ್=ಆಗುವುದು.

ಟೀ ॥ ನ್ಯಾಯಸುಧಾ— (1) ವೈಶೇಷಿಕಾದಿಗಳು ಕಾಲವಿಶೇಷದಲ್ಲಿ ದ್ವ್ಯಣುಕಾದಿ ಪ್ರಕ್ರಮದಿಂದ ಮಹಾಭೂತಸೃಷ್ಟಿಯನ್ನು ಅಂಗೀಕರಿಸುತ್ತಾರೆ. ಅದು ವೈಶೇಷಿಕಾದಿಗಳ ಪ್ರಕ್ರಿಯೆಯನ್ನು ಆಲೋಚಿಸುವಾಗ ಕೂಡಲಾರದು. ಆದರೆ ಅವರ ಪಕ್ಷದಲ್ಲಿ ಕಾರ್ಯವು ಯಾವಾಗಲೂ ಆಗಬೇಕಾಗುವುದು. ಯಾವಾಗ ಇಚ್ಛಿಸಲ್ಪಡುವುದೋ ಅದಕ್ಕಿಂತ ಮೊದಲೂ ಆಗುವುದು. ಕಾರ್ಯೋತ್ಪತ್ತಿಯು ಕಾಲನಿಯಮವು ಕಾರಣಸಾಮಗ್ರೀನಿಮಿತ್ತಕವಾದುದು. ಆದಿಸೃಷ್ಟಿಯಲ್ಲಿ ಸಮವಾಯಿಕಾರಣಭೂತಗಳಾದ ಪರಮಾಣುಗಳು ಯಾವಾಗಲೂ ಇರುತ್ತವೆ ನಿಮಿತ್ತಕಾರಣವಾದ ಈಶ್ವರೇಚ್ಛೆಯೂ ನಿತ್ಯವೇ ಕಾಲವೂ ದಿಕ್ಕೂ ನಿತ್ಯವೇ. ಯದ್ಯಪಿ ಅದೃಷ್ಟವು (ಧರ್ಮ ಅಧರ್ಮಗಳು) ನಿತ್ಯವಲ್ಲ. ಆದಾಗ್ಯೂ ಪ್ರಲಯಕಾಲದಲ್ಲಿ ಉಂಟೆಂದು ಅಂಗೀಕರಿಸಲ್ಪಡುತ್ತದೆ. ಅಂತೂ ಇವುಗಳು ಯಾವಾಗಲೂ ಪ್ರಲಯಕಾಲದಲ್ಲಿಯೂ ಇದ್ದುದರಿಂದ ಯಾವಾಗಲೂ ಕಾರ್ಯವು ಆಗಬೇಕಾಗುವುದು ವಸ್ತುತಸ್ತು ವೈಶೇಶಿಕಾದಿಗಳ ಮತದಲ್ಲಿ ಯಾವಾಗಲೂ ದ್ವ್ಯಣುಕಾದ್ಯುತ್ಪತ್ತಿಯು ಕೂಡುವುದಿಲ್ಲ ವಿನಾಶಕಾರಣವಾದ ಈಶ್ವರೇಚ್ಛಾದಿಗಳು ಯಾವಾಗಲೂ ಇದ್ದ ಪ್ರಯುಕ್ತ ನತ್ತ ವಿಪಕ್ಷಿತಗಳಾಗಿವೆ. ॥ ೧೬೮ ॥

ಕಾಲಮಾತ್ರವು ಸೃಷ್ಟಿಗಳಿಗಲೀ, ಸಂಹಾರಕ್ಕಾಗಲೀ ಕಾರಣವೆಂದಾಗಿದ್ದರೆ ಹೀಗೆ ಆಗುತ್ತಿತ್ತು. ಹೀಗೆ ಅಲ್ಲ. ಮತ್ತೆ ಕಾಲವಿಶೇಷವೇ. ಆದುದರಿಂದ ಕಾಲವಿಶೇಷಭಾವಾಭಾವಗಳಿಂದ ಸೃಷ್ಟಿ ಸಂಹಾರನಿಯಮವು ಕೂಡುತ್ತದೆ. ತಥಾ ಚ ಇಚ್ಛಾಮಾತ್ರವು ಸೃಷ್ಟ್ಯಾದಿಗಳಿಗೆ ಕಾರಣವಲ್ಲ. ಮತ್ತೆ ಇಚ್ಛಾವಿಶೇಷವೇ. ಆದುದರಿಂದ ಇಚ್ಛಾವಿಶೇಷ ಸದ್ಭಾವ-ಅಸದ್ಭಾವಪ್ರಯುಕ್ತವಾಗಿ ಸೃಷ್ಟ್ಯಾದಿವ್ಯವಸ್ಥೆಯು ಆಗುವುದು ಎಂದರೆ ಹಾಗೆ ಹೇಳಕೂಡದು. ಏಕೆಂದರೆ—ಕಾಲದೇಶಾದಿಗಳಿಗೆ (೧) ಔಪಾಧಿಕಭೇದವೋ (೨) ಸ್ವಾಭಾವಿಕವಾದುದೋ, ೧ನೇದು ಕೂಡಲಾರದು. ಔಪಾಧಿಕಭೇದವು ನಿರಸ್ತವಾಗಿದೆ. ೨ನೇ ಕಲ್ಪದಲ್ಲಿ (ಸ್ವಾಭಾವಿಕವೆಂದು ಇಟ್ಟುಕೊಂಡರೆ) ಅಪಸಿದ್ಧಾಂತವೆನ್ನುತ್ತಾರೆ.—

ಮೂ ॥ ನ ಹಿ ಕಾಲವಿಭೇದೋಽಸ್ತಿ ತತ್ಪಕ್ಷೇಽಸ್ಮನ್ಮತೇ ಹರೇಃ ।
ವಿಶೇಷಕಾಲವಿನ್ಯೈತತ್ಸೃಷ್ಟ್ಯಾದೀಚ್ಛಾ ಸದಾತನಾ ॥ ೧೬೯ ॥

ಅ ॥ ತತ್ಪಕ್ಷೇ=ವೈಶೇಷಿಕಾದಿಗಳ ಮತದಲ್ಲಿ, ಕಾಲವಿಭೇದಃ=ಕಾಲ ಈಶ್ವರೇಚ್ಛೆಗಳಿಗೆ ಭೇದವು, ನಾಸ್ತಿ=ಇಲ್ಲ. ಹಿ=' ಆಕಾಶ ಕಾಲದಿಶಾಮೇಕೈಕತ್ವಾತ್ ' ಎಂದು ಅವರ ವಾಕ್ಯವು ಪ್ರಸಿದ್ಧವು. (ಹಾಗಾದರೆ ಈ ದೋಷವು ನಿಮಗೂ ಸಮಾನವೇ ಹೇಗೆಂದರೆ ಮಹದಾದ್ಯುಪಾದಾನಕಾರಣವಾದ ಪ್ರಕೃತಿಯು ನಿತ್ಯವೇ. ನಿಮಿತ್ತಕಾರಣವಾದ ಈಶ್ವರೇಚ್ಛೆಯೂ ಕಾಲಾದಿಗಳೂ ನಿತ್ಯವೇ. ಅದೇ ಪ್ರಲಯಕ್ಕೆ ಕಾರಣವು. ಆದುದರಿಂದ ಸೃಷ್ಟಿಪ್ರಲಯ

ಸಮಯನಿಯಮವು ನಿಮಗೂ ದುರ್ಘಟವೇ ಎಂದರೆ—) ಯದ್ಯಪಿ ಅಸ್ಮನ್ಮತೇ=ನಮ್ಮ ಮತದಲ್ಲಿ ಹರೇಃ=ಶ್ರೀ ಪರಮಾತ್ಮನ, ಇಚ್ಛಾ=ಇಚ್ಛೆಯು, ಪ್ರಕೃತ್ಯಾದಿಗಳೂ, ಸದಾತನಾ=ನಿತ್ಯಗಳು. (ಆದಾಗ್ಯೂ) ವಿಶೇಷಕಾಲಏವ=ವಿಶೇಷಕಾಲದಲ್ಲಿಯೇ. ಏತತ್ಸೃಷ್ಟ್ಯಾದಿ=ಈ ಮಹದಾದಿಗಳ ಸೃಷ್ಟಿಪ್ರಲಯಾದಿಗಳು, ಆಗುತ್ತವೆ.

ತಾ ॥ ನಾವು ಕಾಲದಲ್ಲಿ ಸ್ವಾಭಾವಿಕವಾಗಿಯೇ ಭೇದವನ್ನು ಅಂಗೀಕರಿಸುತ್ತೇವೆ. ತಥಾಚ ಕಾಲವಿಶೇಷವೇ ಸೃಷ್ಟಿಸಂಹಾರಗಳಿಗೆ ಕಾರಣವಾಗಿರುವುದರಿಂದ ಬೇರೆ ಕಾರಣಗಳಿದ್ದರೂ ಕಾಲವಿಶೇಷ ಸತ್ವ ಅಸತ್ವಗಳಿಂದ ಸೃಷ್ಟ್ಯಾದಿ ಸಮಯನಿಯಮವು ಯುಕ್ತವಾಗುತ್ತದೆ ॥ ೧೬೯ ॥

ನಿಮಿತ್ತಕಾರಣವನ್ನು ಹೇಳುತ್ತಾರೆ.

**ಮೂ ॥ ವಿಶೇಷಾಶ್ಚೈವ ಕಾಲಸ್ಯ ಹರೇರಿಚ್ಛಾವಶಾಃ ಸದಾ ॥ ೧೭೦ ॥**
**ಸರ್ವೇನಿಮೇಷಾ ಇತಿ ಹಿ ಶ್ರುತಿರೇವಾಹ ಸಾದರಂ ।**
**ಉದೀರಯತಿ ಕಾಲಾಖ್ಯಾಂ (ಖ್ಯ) ಶಕ್ತಿಮಿತ್ಯಸ್ಯ ವಾಗಪಿ ।**
**ಕಾಲಸ್ಯ ಕಾಲಗತ್ವೇನ ನ ವಿರೋಧೋಽಪಿ ಕಶ್ಚನ ॥ ೧೭೧ ॥**

ಅ॥ (ಮಹದಾದಿಗಳು ಮಾತ್ರವಲ್ಲ. ಮತ್ತೆ) ಕಾಲಸ್ಯ ವಿಶೇಷಾಶ್ಚ=ಕ್ಷಣ ಲವ ಮೊದಲಾದ ಕಾಲವಿಶೇಷಗಳೂ ಕೂಡ, ಸದಾ=ಯಾವಾಗಲೂ, (ನಿರಂತರಪ್ರವಾಹದಿಂದ) ಹರೇರೇವ=ಶ್ರೀ ಪರಮಾತ್ಮನದ್ದೇ, ಇಚ್ಛಾವಶಾಃ=ಇಚ್ಛಾಧೀನಗಳು. (ಹಾಗಾದರೆ ಕಾಲವಿಶೇಷಗಳಿಗೆ ಪರಮೇಶ್ವರನಿಂದ ಉತ್ಪತ್ತಿಯು ಯಾವ ಪ್ರಮಾಣದಿಂದ ಸಿದ್ಧವಾಗಿದೆ ಎಂದರೆ) ಸರ್ವೇ ನಿಮೇಷಾ ಇತಿ ಶ್ರುತಿರೇವ=**'ಸರ್ವೇ ನಿಮೇಷಾ ಜಜ್ಞಿರೇ ವಿದ್ಯುತಃ ಪುರುಷಾದಧಿ'** ಎನ್ನುವ ಶ್ರುತಿಯೇ, ಸಾದರಂ=ಆದರಪೂರ್ವಕವಾಗಿ, ಆಹ ಹಿ=ಕಾಲವಿಶೇಷಗಳಿಗೆ ಈಶ್ವರನಿಂದ ಉತ್ಪತ್ತಿಯನ್ನು ಹೇಳುತ್ತದಷ್ಟೆ. (ಹಾಗಾದರೆ ನಿಮೇಷಾದಿಗಳು ಕಣ್ಣು ರೆಪ್ಪೆಗಳ ಸಂಯೋಗಾದಿಗಳನ್ನು ಹೇಳುತ್ತವೆ. ಮುಖ್ಯವಾಗಿ ಕಾಲವನ್ನು ಹೇಳತಕ್ಕವುಗಳಲ್ಲ. ಆದುದರಿಂದ ಈ ಶ್ರುತಿಯು ಸ್ಪಷ್ಟವಾಗಿ ಕಾಲಕ್ಕೇನೇ ಈಶ್ವರನಿಂದ ಉತ್ಪತ್ತಿಯನ್ನೂ ಹೇಳಲಿಕ್ಕೆ ಸಮರ್ಥವಲ್ಲ. ಎಂದರೆ ಈ ವಿಷಯದಲ್ಲಿ ಸ್ಪಷ್ಟವಾದ ಸ್ಮೃತಿಯನ್ನೂ ಹೇಳುತ್ತಾರೆ.) ಕಾಲಾಖ್ಯಾಂ=ಕಾಲಾತ್ಮಿಕವಾದ ಕಾಲಾಖ್ಯವಾದ, ಶಕ್ತಿಂ=ಸಹಕಾರಿಶಕ್ತಿಯನ್ನೂ, ಉದೀರಯತಿ=ಹುಟ್ಟಿಸುತ್ತಾನೆ. ಇತ್ಯಸ್ಯ=**'ಸ್ಯೋಂತಃ ಶರೀರೇಽರ್ಪಿತಭೂತಸೂಕ್ಷ್ಮಃ ಕಾಲಾತ್ಮಿಕಾಂ ಶಕ್ತಿಮುದೀರಯಾನಃ'** ಎನ್ನುವ ಈಶ್ವರನ, ವಾಗಪಿ=ವಚನವೂ ಕೂಡ, ಕಾಲಸ್ಯ=ಕಾಲಕ್ಕೆ, ಆಹ=ಈಶ್ವರನಿಂದ ಉತ್ಪತ್ತಿಯನ್ನು ಹೇಳುತ್ತದೆ. (ಕಾಲವು ಜನಿಸುತ್ತಾದ ಎಲ್ಲಾ ವಸ್ತುಗಳಿಗೆ ನಿಮಿತ್ತವು. ಕಾಲದ ಉತ್ಪತ್ತಿಯಲ್ಲಿ ಕಾಲಾಂತರವಿಲ್ಲ. ಆದುದರಿಂದ ಹೇಗೆ ಅದಕ್ಕೆ ಉತ್ಪತ್ತಿಯು? ಪೂರ್ವಕಾಲವು ಪರಕಾಲಕ್ಕೆ ನಿಮಿತ್ತವು ಎಂದರೆ ಹಾಗೆ ಹೇಳಕೂಡದು. 'ಇದಾನೀಂ ಜಾತಃ ತದಾನೀಂ ಜಾತಃ' ಎಂದು ಅಧಿಕರಣವಾಗಿ ಕಾಲಕ್ಕೆ ಕಾರಣತ್ವವು ನಿಶ್ಚಿತವಾಗುವುದು. ಅಧಿಕರಣವು ಕಾರ್ಯೋತ್ಪತ್ತಿ ಸಮಾನಕಾಲೀನವೆಂದು 'ಗೇಹೇ ಜಾತಃ । ಗೋಷ್ಠೇ ಜಾತಃ' ಇತ್ಯಾದಿಗಳಲ್ಲಿ ನಿಶ್ಚಿತವಾಗಿದೆ. ಎಂದರೆ) ಕಾಲಸ್ಯ=ಕಾಲಕ್ಕೆ, ಕಾಲಗತ್ವೇನ=ಕಾಲದಲ್ಲಿ ಇರೋಣ ಇದ್ದುದರಿಂದ, ಕಶ್ಚನ=ಯಾವುದೊಂದೂ, ವಿರೋಧೋಽಪಿ=ವಿರೋಧವೂ ಕೂಡ, ನ=ಇಲ್ಲ. (ಅಂದರೆ ಕಾಲಕ್ಕೆ ಉತ್ಪತ್ತಿಯನ್ನೂ ಅಂಗೀಕರಿಸಿದರೆ ಸಾಧಕಮಾತ್ರವಿರುವುದಿಲ್ಲ ಯಾವ ವಿರೋಧವೂ ಇಲ್ಲ )

ತಾ ॥ ಸ. ರ. ವಿ. ಈಶ್ವರನ ಇಚ್ಛಾವಶದಿಂದಲೇ ಸ್ಥಿತಿ ಸೃಷ್ಟ್ಯಾದಿಗಳನ್ನು ಹೊಂದಿಸಿ ಕೊಡತಕ್ಕ ಕಾಲವಿಶೇಷಗಳೂ ಈಶ್ವರಾಧೀನಗಳೇ. '**ಸರ್ವೇ ನಿಮೇಷಾ ಜಜ್ಞಿರೇ, ವಿದ್ಯುತಃ ಪುರುಷಾದಧಿ**' ಚೆನ್ನಾಗಿ ಪ್ರಕಾಶಿಸಿಕೊಂಡಿರುವ ಶ್ರೀ ಹರಿಯಿಂದ ಕಾಲಭೇದಗಳೂ ಹುಟ್ಟಿದವು. '**ಕಲಾ ಮುಹೂರ್ತಾಃ ಕಾಷ್ಠಾಶ್ಚಾಹೋರಾತ್ರಾಶ್ಚ ಸರ್ವಶಃ । ಅಂತಃ ಶರೀರೇರ್ಪಿತ ಭೂತಸೂಕ್ಷ್ಮಃ ಕಾಲಾತ್ಮಿಕಾಂ ಶಕ್ತಿಮುದೀರಯಾನಃ । ಉವಾಸ ತಸ್ಮಿನ್ ಸಲಿಲೇ ।**' ಎನ್ನುವ ಭಾಗವತದಿಂದಲೂ ಕಾಲಾದಿಗಳೂ ಶ್ರೀ ಹರಿಯಿಂದಲೇ ಸೃಷ್ಟಿಸಲ್ಪಟ್ಟವು ಎಂದುಕ್ತ ವಾಯಿತು. ॥ ೧೭೧ ॥

ಹೀಗೆ ತಮ್ಮ ಮತದಲ್ಲಿ ಕಾಲವಿಶೇಷ ಭಾವಾಭಾವಪ್ರಯುಕ್ತವಾದ ಸೃಷ್ಟ್ಯಾದಿಗಳ ಸಮಯ ನಿಯಮವೆಂದು ಸಮರ್ಥಿತವಾಗಿದೆ. ಪ್ರಕಾರಾಂತರದಿಂದ ಸೃಷ್ಟ್ಯಾದಿಗಳ ಸಮಯನಿಯಮವನು ಸಮರ್ಥಿಸುತ್ತಾರೆ—

**ಮೂ ॥ ಅಸಂಖ್ಯಾತವಿಶೇಷತ್ವಾದಿಚ್ಛಾಯಾ ಅಪಿ ಸರ್ವದಾ ॥ ೧೭೨ ॥**
**ಈಶೋದೇಶಶ್ಚ ಕಾಲಶ್ಚ ಸ್ವಗತಾ ಏವ ಸರ್ವದಾ ।**
**ಈಶಾಧೀನೌ ಚ ತೌ ನಿತ್ಯಂ ತದಾಧಾರೌ ಚ ತದ್ಗತೌ ॥ ೧೭೩ ॥**
**ಇತಿ ಶ್ರುತಿರಪಿ ಪ್ರಾಹ ಕಾಲೇ ಸ್ವೋದ್ದಿಷ್ಟ ಏವ ತು ।**
**ತತ್ಕಾಲಸೃಷ್ಟಿಮೇವಾತೋ ವಾಂಛತೀಶಃ ಸದೈವ ಹಿ ।**
**ಸ್ಯಾತ್ಕಾಲಃ ಸ ತದೈವೇತಿ ಕಾಲಸ್ಯ ಸ್ವಗತತ್ವತಃ ॥ ೧೭೪ ॥**

ಅ ॥ ಸರ್ವದಾ (ವಿದ್ಯಮಾನಾಯಾ) ಅಪಿ = ಎಲ್ಲಾ ಹೊತ್ತಿಗೂ ಇರತಕ್ಕುದಾಗ್ಯೂ, ಇಚ್ಛಾಯಾಃ = ಈಶ್ವರೇಚ್ಛೆಗೆ. (ಶಕ್ತಿವ್ಯಕ್ತಿರೂಪವಾಗಿರತಕ್ಕ ನಿವ್ಯಕ್ತಾತ್ವಮೊದಲಾದ ಅಸಂಖ್ಯಾತ ವಿಶೇಷಗಳು ಇದ್ದುದರಿಂದ.) (ಆ ಇಚ್ಛಾವಿಶೇಷ ವ್ಯಕ್ತಿ, ಅವ್ಯಕ್ತಿಪ್ರಯುಕ್ತವಾಗಿ ಸೃಷ್ಟ್ಯಾದಿ ಗಳ ಸಮಯ ನಿಯಮಗಳು ಯುಕ್ತವಾಗುತ್ತವೆ.) ('ಕಾಲಸ್ಯ ಕಾಲಗತ್ವೇನ' ಎಂದು ಹೇಳಲ್ಪಟ್ಟಿದೆ. ಅದರಲ್ಲಿ ಕಾಲವು ತನ್ನಲ್ಲಿರುವುದೋ ಕಾಲಾಂತರದಲ್ಲಿರುವುದೋ, ಒಂದೂ ಕೂಡ ಲಾರದು. ತನಗೆ ತನ್ನ ಹೆಗಲಿನ ಆರೋಹಣವು ಹೇಗೆ ವಿರುದ್ಧವೋ ಹಾಗೆಯೇ ಕಾಲಕ್ಕೆ ಸ್ವಗ ತತ್ವವು ವಿರುದ್ಧವು. ಎರಡೂ ಕೂಡಲಾರದು. ಕಾಲಾಂತರವೇ ಇಲ್ಲ ಕಾಲಾಂತರವಿದ್ದರೆ ಕಾಲಾಂತರದ ಸೃಷ್ಟಿಯು ವ್ಯರ್ಥವು. ಅದೂ ಹುಟ್ಟುವ ವಿಷಯದಲ್ಲಿ ಕಾಲಾಂತರವನ್ನು ಅಂಗೀಕರಿಸಬೇಕಾಗುವುದು. ಆದುದರಿಂದ ಹಿಂದೆ ಹೇಳಿದ್ದನ್ನು ಪ್ರಮಾಣಪೂರ್ವಕವಾಗಿ ವಿವರಿಸುತ್ತಾರೆ) ಈಶಃ = ಶ್ರೀ ಹರಿಯು, ದೇಶಶ್ಚ = ಅವ್ಯಾಕೃತಾಕಾಶವೂ, ಕಾಲಶ್ಚ = ಕಾಲವೂ ಕೂಡ, ಸರ್ವದಾ = ಯಾವಾಗಲೂ, ಸ್ವಗತಾ ಏವ = ತನ್ನಲ್ಲಿಯೇ ಇರತಕ್ಕವುಗಳು. ತೌ = ದೇಶಕಾಲಗಳು, ನಿತ್ಯಂ = ಯಾವಾಗಲೂ, ಈಶಾಧೀನೌ = ಶ್ರೀ ಹರಿಯ ಅಧೀನಗಳು, ತದಾಧಾರೌ = ಶ್ರೀ ಹರಿಯೇ ಆಧಾರವಾಗಿ ಉಳ್ಳವುಗಳು, ತದ್ಗತೌ ಚ = ಶ್ರೀ ಹರಿಯಲ್ಲಿಯೇ ಇರತಕ್ಕವುಗಳು. (ಈ ಮೂರು ವಿಶೇಷಣಗಳಿಂದ ದೇಶಕಾಲಗಳ ಸತ್ತಾಪ್ರತೀತಿ ಪ್ರವೃತ್ತಿ ಗಳು ಪರಮೇಶ್ವರನ ಅಧೀನಗಳೆಂದು ಹೇಳಲ್ಪಡುತ್ತವೆ.) ಇತಿ = ಹೀಗೆ, ಶ್ರುತಿರಪಿ = ಶ್ರುತಿಯು, ಸಾಕ್ಷಿಯೂ ಕೂಡ, (ಯಾವ ಕಾರಣದ್ದೆಶೆಯಿಂದ, ಕಾಲಕ್ಕೆ ಸ್ವಗತತ್ವವನ್ನು ಹೇಳುತ್ತದೋ, ಸಾಕ್ಷಿಯಿಂದಲೂ ಸಿದ್ಧವಾಗಿದೆಯೋ, ಆದುದರಿಂದ) ಕಾಲಸ್ಯ = ಕಾಲಕ್ಕೆ, ಸ್ವಗತ ತ್ವತಃ = ತನ್ನಲ್ಲಿ ಇರೋಣ ಇದ್ದುದರಿಂದ (ಕಾಲವು ತನ್ನಲ್ಲಿ ಇದ್ದುದರಿಂದ,) ಸಃ ಕಾಲಃ = ಆ ಕಾಲವು, ತದೈವಸ್ಯಾತ್ = ಇರುತ್ತದೆ. ಇತಿ = ಈ ಪ್ರಕಾರ, ಈಶಃ = ಶ್ರೀ ಹರಿಯು, ಸದೈವ =

ಯಾವಾಗಲೂ ಸ್ವೋದ್ದಿಷ್ಟೇ ಏವ ಕಾಲೇ ತು=ತನಗೆ ಉದ್ದಿಷ್ಟವೇ (ಇಷ್ಟವೇ) ಆದ ಕಾಲದಲ್ಲಿ ತತ್ಕಾಲಸೃಷ್ಟಿಮೇವ=ಆಯಾಯ ಕಾಲಸೃಷ್ಟಿಯನ್ನೇ, ವಾಂಛತಿ=ಇಚ್ಛಿಸುತ್ತಾನೆ, ಹಿ=ಪ್ರಸಿದ್ಧವು.

**ತಾ** ॥ (1) ಕಾಲಾತಿರಿಕ್ತಕಾರ್ಯಗಳಿಗೇನೇ ಕಾಲವು ಅಧಿಕರಣವಾಗಿ ಕಾರಣವಾಗುತ್ತದೆ. ಕಾಲಕ್ಕೆ ಅಲ್ಲ. ಕೇವಲವಾಗಿ ನಾಳೆ ಘಟವನ್ನು ಸೃಷ್ಟಿಮಾಡತಕ್ಕವನಾಗುತ್ತೇನೆ ಎಂಬುವ ಇಚ್ಛೆಯಂತೆ ಈಶ್ವರನು ಕಾಲದ ಸೃಷ್ಟಿಯನ್ನು ಇಚ್ಛಿಸುತ್ತಾನೆ. ಅಲ್ಲಿ ಅಧಿಕರಣವಾಗಿ ಉದ್ದೇಶ್ಯವಾದ ಕಾಲವು ಸೃಜ್ಯಕಾಲವೇ. ಬೇರೆಯಲ್ಲ. ಆಧಾರಾಧೇಯಭಾವವು ಒಂದಕ್ಕೇನೇ ಶ್ರುತ್ಯಾದಿಸಿದ್ಧವಾಗುವುದರಿಂದ ಕೂಡುತ್ತದೆ. ಆದುದರಿಂದ ಕಾಲೋತ್ಪತ್ತಿವಿಷಯದಲ್ಲಿ ಯಾವ ಅನುಪಪತ್ತಿಯೂ ಇರುವುದಿಲ್ಲ. ॥ ೧೭೨ ॥ ೧೭೩ ॥ ೧೭೪ ॥

ಯಾವಾಗ ಈಶ್ವರೇಚ್ಛೆಯು ಸಿಸೃಕ್ಷಾ (ಸೃಷ್ಟಿಮಾಡಲಿಚ್ಛಾ) ಕಾರವಾಗಿ ವ್ಯಕ್ತವಾಗುತ್ತದೋ ಆಗ ಮಹದಾದಿಗಳ ಸೃಷ್ಟಿಯಾಗುತ್ತದೆ. ಯಾವಾಗ ಸಂಜಿಹೀರ್ಷಾ (ಸಂಹಾರಮಾಡಲಿಚ್ಛಾ) ರೂಪವಾದ ಈಶ್ವರೇಚ್ಛೆಯು ಉಂಟಾಗುತ್ತದೋ ಆಗ ಸಂಹಾರವಾಗುತ್ತದೆ ಎಂದು ಯಾವುದು ಹೇಳಲ್ಪಟ್ಟದೋ, ಅದರಲ್ಲಿ ಈ ವೈಚಿತ್ರ್ಯಕ್ಕೆ ಏನು ಕಾರಣವೆಂದು ಹೇಳಬೇಕು. ಕಾಲವಿಶೇಷವು ನಿಮಿತ್ತವೆನ್ನುವುದು ಯುಕ್ತವಲ್ಲ. ಕಾಲವಿಶೇಷವೂ ಈಶ್ವರೇಚ್ಛಾಧೀನವಾಗಿದೆ. ಪುರುಷಾರ್ಥಾಧೀನವೂ ಅಲ್ಲ. ಪರತಂತ್ರವಾಗಬೇಕಾದೀತು ಎಂದಾಶಂಕಿಸಿದರೆ—

**ಮೂ** ॥ **ಸ್ವಭಾವಾದೇವ ಹೀಚ್ಛೈಷಾ ದೇವಸ್ಯೈಷ ಇತಿ ಶ್ರುತೇಃ ॥ ೧೭೫ ॥**
**ಸ್ವಭಾವೋಽಪಿ ಪರೇಶೇಚ್ಛಾವಶ ಇತ್ಯುದಿತಃ ಪುರಾ ।**
**ನಿತ್ಯಾ ಅನಿತ್ಯಾಶ್ಚ ತತಸ್ತದಧೀನಾ ಇತಿ ಶ್ರುತಿಃ ॥ ೧೭೬ ॥**

**ಅ** ॥ ಸ್ವಭಾವಾದೇವ=ಸ್ವಭಾವದಿಂದಲೇ, ಏಷಾ=ವಿಚಿತ್ರವಾದ, ಇಚ್ಛಾ=ಇಚ್ಛೆಯು, ಹಿ = ಆದುದರಿಂದ ಕಾಲವಿಶೇಷಗಳಿಗೆ ಈಶ್ವರಾಧೀನತ್ವವಿದ್ದರೆ ಅನ್ಯೋನ್ಯಾಶ್ರಯದೋಷವು ಬರಬೇಕಾಗುವುದೆನ್ನುವುದು ಇಲ್ಲ, ಎಂದು ಪ್ರಸಿದ್ಧವು. ಸ್ವಭಾವವೆನ್ನುವುದು ಯಾವುದರಿಂದ ಎಂದರೆ— ದೇವಸ್ಯೈಷಃ ಇತಿ ಶ್ರುತೇಃ='**ದೇವಸ್ಯೈಷಃ ಸ್ವಭಾವೋಽಯಮಾಪ್ತಕಾಮಸ್ಯ ಕಾಸ್ಪೃಹಾ**' ಎನ್ನುವ ಶ್ರುತಿಯುದ್ದೇಶಿಯಿಂದ, (ಸ್ವಭಾವವೆನ್ನುವುದು ಅವಗತವಾಗುತ್ತದೆ.) (ಹಾಗಾದರೆ ಕಾಲಾದಿಗಳಲ್ಲಿ ವೈಚಿತ್ರ್ಯವನ್ನು ಕಲ್ಪಿಸಿರುವುದರಿಂದ ಏನು ಪ್ರಯೋಜನವು? ಏಕೆಂದರೆ— ಕಾರಣಗಳಿಗೂ ಕಾರ್ಯಗಳಿಗೂ ಸ್ವಭಾವದಿಂದಲೇ ಸಮಯನಿಯಮವು ಕೂಡಬಹುದು. ಕೊನೆಗಾದರೂ ಸ್ವಭಾವವಾದವನ್ನು ಅಂಗೀಕರಿಸಬೇಕು. ಅದಕ್ಕಿಂತ ಆದಿಯಲ್ಲಿಯೇ ಸ್ವಭಾವವಾದವನ್ನು ಅಂಗೀಕರಿಸುವುದು ಶ್ರೇಷ್ಠವು, ಎಂದರೆ) ಸ್ವಭಾವೋಽಪಿ=ಸ್ವಭಾವವೂ ಕೂಡ, ಪರೇಶೇಚ್ಛಾವಶಃ=ಶ್ರೀ ಹರಿಯ ಇಚ್ಛಾಧೀನವಾದುದು. ಇತಿ=ಹೀಗೆ, ಪುರಾ='ಚೇತನಾನಾಂ ವಿಶೇಷೋ ಯಃ' ಇತ್ಯಾದಿಗಳಲ್ಲಿ, ಉದಿತಃ=ಹೇಳಲ್ಪಟ್ಟದೆ. ತತಃ=ಆದಕಾರಣ ಸರ್ವ ಸ್ವಭಾವವೂ ಅವನ ಅಧೀನವಾಗಿರುವುದರಿಂದ: ನಿತ್ಯಾಃ=ನಿತ್ಯಗಳು, ಅನಿತ್ಯಾಶ್ಚ=ಅನಿತ್ಯಗಳೂ ಕೂಡ, ತದಧೀನಾಃ=(ಶ್ರೀ ಹರಿಯ ಅಧೀನಗಳು, ಇತಿ=ಎನ್ನುವ, ಶ್ರುತಿಃ=ಶ್ರುತಿಯು. ಸರ್ವ ವಸ್ತುಗಳಿಗೂ ಈಶ್ವರಾಧೀನತ್ವವನ್ನು ಹೇಳುತ್ತದೆ.)

**ತಾ** ॥ ಸ. ರ. ವಿ.— (1) ಅವಿಚಿತ್ರವಾದ ಈಶ್ವರೇಚ್ಛೆಯಿಂದ ಸೃಷ್ಟ್ಯಾದಿ ವಿಚಿತ್ರ ಕಾರ್ಯವು ಹೇಗೆ ಎಂದು ಹೇಳಕೂಡದು ಈಶ್ವರೇಚ್ಛೆಗೆ ಅನಂತ ವಿಶೇಷಗಳು ಇದ್ದಪ್ರಯುಕ್ತ

ಕಾಲದಂತೆ ಈಶದೇಶಗಳೂ ಕೂಡ ಸ್ವನಿರ್ವಾಹಕಗಳು. ಈಶನು ಸ್ವತಂತ್ರನು, ದೇಶವು ಸರ್ವಗತವು ಎಂದು ವ್ಯವಹಾರವಿದೆ. ದೇಶಕಾಲಗಳು ಸ್ವನಿರ್ವಾಹಕಗಳಾದಾಗ್ಯೂ ಈಶನು ಸ್ವಾಭಾವಿಕವಾಗಿಯೇ ಕಾಲದಲ್ಲಿ ಭೇದವಿದ್ದುದರಿಂದ ಹಾಗೆಯೇ ಸೃಷ್ಟಿಸುತ್ತಾನೆ. ಹೀಗೆಯೇ ಸ್ವೋಧಿಷ್ಟವಾದ ಕಾಲವಿಶೇಷದಲ್ಲಿಯೇ ಸೃಷ್ಟಿಯಾಗಲಿ, ಸಂಹಾರವಾಗಲಿ, ಎಂದೂ ಇಚ್ಛಿಸುತ್ತಾನೆ.

**ನ. ಚ. ವಿ— ಸೃಷ್ಟಿ ಸ್ಥಿತಿ ಲ್ಮಯ ಯತಿ ಪ್ರಕಾಶಾವೃತಿಬಂಧನಂ । ಸರ್ವಕ್ಷಣಾಣಾಮೇವೈಕಃ ಕುರ್ಯಾತ್ಸ್ವಾತ್ಮಿಕನೋಕ್ಷಣಂ । ಸರ್ಗ ಸ್ಥಿತಿ ಯತಿಜ್ಯೋತಿರ್ನಿತ್ಯಾನಂದಪ್ರದೋऽಸ್ಮರೇ । ಜೀಷ್ವ್ಯಸ್ಯದಕ್ಷ ಸರ್ವಾ ಸಾ ನೈಕವಿತ ಪರೋಹರಿಃ ॥**
ಎನ್ನುವ ಪರಮಶ್ರುತಿಯಲ್ಲಿ ಸೃಷ್ಟ್ಯಾದಿ ನಿಖಿಲಕರ್ತನು ಶ್ರೀ ಹರಿಯೇ ಎಂದು ಸಮರ್ಥಿತವಾಗಿದೆ ॥ ೧೭೫ ॥ ೧೭೬ ॥

ಪರಮಾಣು ನಿತ್ಯತ್ವವನ್ನು ಅಂಗೀಕರಿಸಿಕೊಂಡು ಪರಮಾಣ್ವಾರಂಭವಾದವನ್ನು ದೂಷಿಸಿ ಈಗ ಪರಮಾಣುವಿಗೆ ನಿತ್ಯತ್ವವೇ ಕೂಡುವುದಿಲ್ಲವೆನ್ನುತ್ತಾರೆ—

**"ಓಂ ರೂಪಾದಿಮತ್ವಾಚ್ಚ ವಿಪರ್ಯಯೋದರ್ಶನಾತ್ ಓಂ"**

|| ಸೂ. || ೧೫ ||

ಪಾರ್ಥಿವಾದಿ ಪರಮಾಣುಗಳಿಗೆ ರೂಪರಸಾದಿಗಳು ಇದ್ದಪ್ರಯುಕ್ತ ಅನಿತ್ಯತ್ವವು ಬರುತ್ತದೆ ಯಾವುದು ರೂಪಾದಿಗಳುಳ್ಳದ್ದೋ ಅದು ಅನಿತ್ಯವು ಎಂಬು ಘಟಾದಿಗಳಲ್ಲಿ ದೃಷ್ಟವಾಗಿದೆ.

ರೂಪಾದಿಗಳು ಇದ್ದರೂ ಕೂಡ ನಿತ್ಯತ್ವವು ಇರಲಿ. ಅಥವಾ ಅನಿತ್ಯತ್ವವಿರಲಿ. ಬಾಧಕವೇನೆಂದರೆ—

**"ಓಂ ಉಭಯಥಾ ಚ ದೋಷಾತ್ ಓಂ"** ಸೂ. || ೧೬ || ಅಧಿ. || ೬ ||

ಎರಡುಪ್ರಕಾರ ಇಟ್ಟುಕೊಂಡರೂ ದೋಷವಿದೆ. ನಿತ್ಯತ್ವವಿಟ್ಟುಕೊಂಡರೆ ಪರಮಾಣುವಿನಂತೆ ಸರ್ವವೂ ನಿತ್ಯವಾಗಬೇಕಾಗುವುದು. ಅನಿತ್ಯತ್ವವಿಟ್ಟುಕೊಂಡರೆ ಪರಮಾಣೂತ್ಪಾದಕವೇ ಇಲ್ಲದಿರುವುದರಿಂದ ಪರಮಾಣುವೇ ಇಲ್ಲವೆಂದಾಗಬೇಕಾಗುವುದು.

ಪರಮಾಣ್ವಾರಂಭವಾದವು ಅಪ್ರಾಮಾಣಿಕವೂ ಆಗಿದೆ ಎನ್ನುತ್ತಾರೆ—

**"ಓಂ ಅಪರಿಗ್ರಹಾಚ್ಚಾತ್ಯಂತಮನಪೇಕ್ಷಾ ಓಂ"** ಸೂ. ||೧೭ || ಅಧಿ. ೬ ||

ಪರಮಾಣ್ವಾರಂಭವಾದವು ಶ್ರುತ್ಯಾದಿಗಳಿಂದ ಸ್ವೀಕರಿಸಲ್ಪಡದೆ ಇರುವುದರಿಂದಲೂ, ಶ್ರುತ್ಯಾದಿಗಳಿಂದ ವಿರುದ್ಧವಾಗಿರುವುದರಿಂದಲೂ, ಹಿಂದೆ ಹೇಳಿದ ದೋಷಗಳಿಂದ ದುಷ್ಟವಾಗಿರುವುದರಿಂದಲೂ ಅತ್ಯಂತವಾಗಿ ಅನಾದರಣೀಯವೇ ಆಗಿದೆ. ಆದುದರಿಂದ ಉಪೇಕ್ಷಣೀಯವು.

ವೈಶೇಷಿಕಾದಿಗಳ ಮತದಲ್ಲಿ ಬೇರೆ ಅನುಪಪತ್ತಿಗಳನ್ನು ತೋರಿಸುತ್ತಾ 'ರೂಪಾದಿಮತ್ವಾಚ್ಚ ವಿಪರ್ಯಯೋದರ್ಶನಾತ್'' 'ಓಂ ಉಭಯಥಾ ಚ ದೋಷಾತ್'' ಎನ್ನುವ ಎರಡು ಸೂತ್ರಗಳನ್ನು ವ್ಯಾಖ್ಯಾನಮಾಡುತ್ತಾರೆ—

**ಮೂ ॥ ರೂಪಸ್ಪರ್ಶಾದಿಹೇತುಭ್ಯಃ ಪರಮಾಣೋರನಿತ್ಯತಾ ।**
**ಅನುಮೇಯಾ ಶ್ರುತೀನಾಂ ಚ ವಿರುದ್ಧತ್ವಾನ್ನ ತನ್ಮತಂ ।**
**ಉಪಾದೇಯಮತಶ್ಚಾಯಮವಿರುದ್ಧಃ ಸಮನ್ವಯಃ ॥ ೧೭೭ ॥**

**ಅ ||** ರೂಪಸ್ಪರ್ಶಾದಿಹೇತುಭ್ಯಃ = ರೂಪಸ್ಪರ್ಶಮೊದಲಾದ ಹೇತುಗಳಿಂದ, ಪರಮಾಣೋಃ = ಪರಮಾಣುವಿಗೆ. ಅನಿತ್ಯತಾ=ಅನಿತ್ಯತ್ವವು, ಅನುಮೇಯಾ = ಅನುಮೇಯಿಸತಕ್ಕದು. ('ಅಪರಿಗ್ರಹಾಚ್ಚಾತ್ಯಂತಮನಪೇಕ್ಷಾ' ಎನ್ನುವ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ.) ಪರಮಾಣ್ವಾರಂಭವಾದಕ್ಕೆ, ಶ್ರುತೀನಾಂ ಚ='ಆತ್ಮನ ಆಕಾಶಃ ಸಂಭೂತಃ' ಇದುಮೊದಲಾದ ಶ್ರುತಿಗಳ, ವಿರುದ್ಧತ್ವಾತ್=ವಿರೋಧವಿದ್ದುದರಿಂದ, ತನ್ಮತಂ=ವೈಶೇಷಿಕಾದಿಗಳ ಮತವು, ನ ಉಪಾದೇಯಂ = ಸ್ವೀಕರಿಸಕೂಡದು. ಅತಶ್ಚ = ವೈಶೇಷಿಕಾದಿಗಳ ಮತವು ಅನುಪಾದೇಯವಾಗಿರುವುದರಿಂದ, ಅಯಂ=ಸಕಲಗುಣಪೂರ್ಣ ಪರಬ್ರಹ್ಮವಿಷಯಕವಾದ, ಸಮನ್ವಯಃ = ಸಮನ್ವಯವು, (ಶಕ್ತಿತಾತ್ಪರ್ಯಲಕ್ಷಣಾನ್ಯತರಸಂಬಂಧವು) ಅವಿರುದ್ಧಃ = ವಿರುದ್ಧವಲ್ಲ. ಅಂದರೆ ವೈಶೇಷಿಕಾದಿಗಳ ಮತವೇ ಅನುಪಾದೇಯವಾಗಿರುವುದರಿಂದ ತದ್ವಿರೋಧದಿಂದ ಅಸಮಂಜಸನೆಂದು ತಿಳಿಯತಕ್ಕದ್ದಲ್ಲ.

**ತಾ ||** **ನ್ಯಾಯಸುಧಾ**— (1) ಪಾರ್ಥಿವ ಮೊದಲಾದ ನಾಲ್ಕುವಿಧ ಪರಮಾಣುಗಳಿಗೆ ವೈಶೇಷಿಕಾದಿಗಳು ನಿತ್ಯತ್ವವನ್ನು ತಿಳಿಯುತ್ತಾರೆ. ಅದು ಅಯುಕ್ತವು. ಪಾರ್ಥಿವಾಃ ಪಾಥಸೀಯಾಃ ತೈಜಸಾಶ್ಚ ಪರಮಾಣವಃ ಅನಿತ್ಯಾಃ ರೂಪವತ್ವಾತ್ ಪಟವತ್=ಪಾರ್ಥಿವ ಜಲೀಯ ತೈಜಸ ಪರಮಾಣುಗಳು ಅನಿತ್ಯಗಳು, ರೂಪವಿದ್ದುದ್ದರಿಂದ ಪಟದಂತೆ. ಅಥವಾ ಚತುರ್ವಿಧಾ ಅಪ್ಯನಿತ್ಯಾಃ ಸ್ಪರ್ಶವತ್ವಾತ್ ಪಟವತ್=ನಾಲ್ಕುವಿಧ ಪರಮಾಣುಗಳೂ ಅನಿತ್ಯಗಳು, ಸ್ಪರ್ಶವಿದ್ದಪ್ರಯುಕ್ತ ಪಟದಂತೆ. ಹೀಗೆಯೇ ಪಾರ್ಥಿವಾ ಆಪ್ಯಾಶ್ಚಾನಿತ್ಯಾಃ ರಸವತ್ವಾತ್ ಪಟವತ್= ಪಾರ್ಥಿವಗಳೂ ಜಲೀಯ ಪರಮಾಣುಗಳೂ ಕೂಡ ಅನಿತ್ಯಗಳು, ರಸವಿದ್ದಪ್ರಯುಕ್ತ ಪಟದಂತೆ. 'ಪಾರ್ಥಿವಾ ಅನಿತ್ಯಾ ಗಂಧವತ್ವಾತ್ ಪಟವತ್' ಪಾರ್ಥಿವಪರಮಾಣುಗಳು ಅನಿತ್ಯಗಳು, ಗಂಧ ಇದ್ದಪ್ರಯುಕ್ತ ಪಟದಂತೆ. ಇದುಮೊದಲಾದ ಅನುಮಾನಗಳಿಂದ ಪರಮಾಣು ನಿತ್ಯತ್ವವು ವಿರುದ್ಧವಾಗಿಯದೆ. (2) ಹಾಗಾದರೆ ನಾವೂ ಕೂಡ ಭೂತಸೂಕ್ಷ್ಮಗಳಿಗೆ ನಿತ್ಯತ್ವವನ್ನು ಅಂಗೀಕರಿಸಿರುವುದರಿಂದ ಹೇಗೆ ಹೀಗೆ ಅನುಮೇಯಿಸುವುದೆಂದರೆ— ಹೀಗೆ ಹೇಳಕೂಡದು. ಪರಮಾಣುಗಳು ಭೂತಸೂಕ್ಷ್ಮಗಳಲ್ಲ. ಮತ್ತೆ ಅಹಂಕಾರಮಾತ್ರದಿಂದುಪಚಿತಗಳಾದವುಗಳು. ವಿಕೃತಾಕಾರಗಳಾದವುಗಳು ಅನಿತ್ಯಗಳೇ. ಆದುದರಿಂದ ಹೀಗೆ ಹಿಂದೆ ಹೇಳಿದರೀತಿಯಿಂದ ಅನೇಕ ದೋಷಗಳಿಂದ ದೂಷಿತಗಳಾಗಿರುವಪ್ರಯುಕ್ತ ವೈಶೇಷಿಕಾದಿಗಳ ಮತವು ಉಪೇಕ್ಷಣೀಯವೇ ಆಗಿದೆ || ೧೭೭ ||
|| ಸೂ. || ೧೧ || ೧೨ || ೧೩ || ೧೪ || ೧೫ || ೧೬ || ೧೭ || ಅಧಿ. ೬ ||

**ವೈಶೇಷಿಕಾಧಿಕರಣವು ಸಮಾಪ್ತವಾಯಿತು.**

---

# ಸಮುದಾಯಾಧಿಕರಣವು.

ಹೀಗೆ ಹೈತುಕರನ್ನು ನಿರಾಕರಿಸಿ ಪಾಷಂಡಿಗಳಲ್ಲಿ ಪರಮಾಣುಪುಂಜವಾದಿಗಳಾದ ವೈಭಾಷಿಕ ಸೌತ್ರಾಂತಿಕರ ಮತವನ್ನು ಈ ಅಧಿಕರಣದಲ್ಲಿ ನಿರಾಕರಿಸುತ್ತಾರೆ—

**" ಓಂ ಸಮುದಾಯಉಭಯಹೇತುಕೇಽಪಿ ತದಪ್ರಾಪ್ತಿಃ ಓಂ "**
**|| ಸೂ. ೧೮ ||**

ಕಾಲಕರ್ಮಾದಿನಿಮಿತ್ತದಿಂದ ಕ್ಷಣಿಕವಾದ ಅಣುಹೇತುಕವಾದುದು ಸಮುದಾಯವು ಆಗುತ್ತದೆ. ಅವಯವಿಯು ಯಾವುದೊಂದೂ ಇಲ್ಲವೇ ಇಲ್ಲ, ಎನ್ನುವ ಮತದಲ್ಲಿ ಸಮುದಾಯವು ೧ ಒಂದು ಅಣುವಿನಿಂದ ಹುಟ್ಟಿದ್ದೋ, ೨ ಅಥವಾ ಅನೇಕ ಅಣುಗಳಿಂದ ಹುಟ್ಟಿದ್ದೋ? ಅವುಗಳಲ್ಲಿ ಒಂದನೇ ಪಕ್ಷವು 'ಏಕಸ್ಮಾತ್ ಸಮುದಾಯಃ' ಎನ್ನುವುದು ವ್ಯಾಹತ್ವಾದಿ ದೋಷಗಳಿಂದ ಕೂಡಿರುವುದರಿಂದ ಅಯುಕ್ತವು. ೨ನೇ ಕಲ್ಪವು (ಸಮುದಾಯವು ಅನೇಕ ಅಣುಗಳಿಂದ ಹುಟ್ಟಿದ್ದು ಎನ್ನುವುದೂ) ಅಯುಕ್ತವು. ೨ನೇ ಪಕ್ಷದಲ್ಲಿಯೂ ಸಮುದಾಯವು ಮಿಲಿತ ಅನೇಕಗಳಿಂದ ಹುಟ್ಟಿದ್ದು ಎಂದಂಗೀಕರಿಸಿದರೆ ಅಣುಗಳಿಗೆ ಮೇಲನವಾದಾಗ ಸಮುದಾಯವು, ಸಮುದಾಯವಾದಾಗ ಮೇಲನವು ಹೀಗೆ ಅನ್ಯೋನ್ಯಾಶ್ರಯದೋಷವು ಬರುವುದು. ಸಮುದಾಯವು ವಿರಲಾನೇಕ ಪರಮಾಣುಗಳಿಂದ ಹುಟ್ಟಿದ್ದು ಎಂದಂಗೀಕರಿಸಿದರೆ ಅಂತಹ ವಿರಲ ಅಣುಗಳು ಯಾವಾಗಲೂ ಇದ್ದುದರಿಂದ ಸಮುದಾಯವೂ ಯಾವಾಗಲೂ ಇರಬೇಕಾಗುವುದು. ಅಂತೂ ಪ್ರಲಯವೇ ಕೂಡದೆ ಹೋಗಬೇಕಾಗುವುದು.

ಈ ಅಧಿಕರಣದಲ್ಲಿ ಬೌದ್ಧಮತವನ್ನು ನಿರಾಕರಿಸುತ್ತಾರೆ. ಆ ಬೌದ್ಧರು ವೈಭಾಷಿಕರು ಸೌತ್ರಾಂತಿಕರು ಮಾಧ್ಯಮಿಕರು ಯೋಗಾಚಾರರು ಎಂದು ನಾಲ್ಕು ವಿಧರು. ಅದರಲ್ಲಿ ಜಗತ್ತು ಸತ್ಯವೇ, ಪರಮಾಣುಮಯವಾದುದು ಎಂದು ಹೇಳತಕ್ಕ ವೈಶೇಷಿಕಾದಿಗಳನ್ನು ನಿರಾಕರಿಸಿದ ಪ್ರಸಂಗದಿಂದ ಆ ಮತದಿಂದ ಹೆಚ್ಚು ಭೇದವಿಲ್ಲದಿರುವ ವೈಭಾಷಿಕ ಸೌತ್ರಾಂತಿಕರ ಮತವನ್ನು ಈಗ ನಿರಾಕರಿಸುತ್ತಾರೆ. ಈಗ ವಿಪ್ರತಿಪತ್ತಿಯನ್ನು ತೋರಿಸುತ್ತಾ ವೈಭಾಷಿಕ ಸೌತ್ರಾಂತಿಕರ ಮತವನ್ನು ಉಪನ್ಯಾಸಮಾಡುತ್ತಾರೆ—

**ಮೂ ॥ ವೈಭಾಷಿಕಾಶ್ಚ ಸೌತ್ರಾಂತಾಃ ಸ್ವರಸಕ್ಷಣಿಕಂ ಜಗತ್ ॥ ೧೭೮ ॥**
**ಅಣೂನಾಂ ಸಮುದಾಯಂ ಚ ಕಾಲಕರ್ಮನಿಮಿತ್ತತಃ ।**
**ಉತ್ಪತ್ತಿಕಾಲೇ ಯುಕ್ತಾನಾಮಾತ್ಮಾನಂ ಚ ಕ್ಷಣಸ್ಥಿತಂ (ತಿಂ) ।**
**ನಿತ್ಯಂ ಸಂತಾನಮೇತೇಷಾಂ ಪಂಚಸ್ಕಂಧಾತ್ಮನಾಸ್ಥಿತಂ ॥ ೧೭೯ ॥**

ಅ ॥ ವೈಭಾಷಿಕಾಃ = ವೈಭಾಷಿಕರು, ಸೌತ್ರಾಂತಾಶ್ಚ=ಸೌತ್ರಾಂತಿಕರು, ಸ್ವರಸಕ್ಷಣಿಕಂ=ಸ್ವಭಾವದಿಂದಲೇ ಕ್ಷಣಮಾತ್ರದಲ್ಲಿರತಕ್ಕದು ಎಂದು, ಜಗತ್=ಜಗತ್ತನ್ನು, ಆಹುಃ= ಹೇಳುತ್ತಾರೆ. (ಅಂದರೆ ಸ್ವಾಭಾವಿಕವಾಗಿಯೇ ಕ್ಷಣಿಕವಾದುದು, ವಸ್ತುವಿಗೆ ವಿನಾಶಿತ್ವವು ಸ್ವಭಾವವೇ. ಅದರಲ್ಲಿ ಕಾರಣಾಪೇಕ್ಷೆಯಿಲ್ಲ. ಮುದ್ಗರಾದಿಗಳೂ ವಸ್ತುವಿನ ವಿನಾಶಕ್ಕೆ ಕಾರಣಗಳಲ್ಲ. ಮತ್ತೆ ಘಟಾದಿಗಳದ್ದೆಶೆಯಿಂದ ಕಪಾಲಾದಿಗಳಿಗೆ ವಿಸದೃಶಕಾರ್ಯೋತ್ಪತ್ತಿಯಲ್ಲಿ ನಿಮಿತ್ತಗಳೇ ಆಗಿವೆ.) (ಹಾಗಾದರೆ ಕಾರಣಗಳಿಗೆ ಕ್ರಿಯೆಯಿಂದ ಸಂಯೋಗವಾದಾಗ ಕಾರಣ ಸಮವೇತವಾದುದಾಗಿ ಕಾರ್ಯವು ಹುಟ್ಟಬೇಕು. ಅದರ ಕಾರ್ಯವೂ ಹೀಗೆ, (ಅದರ ಕಾರ್ಯವೂ ಹೀಗೆ,) ಆದುದರಿಂದ ಜಗತ್ತಿಗೆ ಕ್ಷಣಿಕತ್ವವು ಹೇಗೆಂದರೆ—) (ಸಮುದಾಯವು ಮೇಲಕನಾದ ಪುರುಷನಿಂದ ಆಗುತ್ತದೆ. ಅಸ್ಮದಾದಿಗಳು ಮೇಲಕರಲ್ಲ. ಆದುದರಿಂದ ಈಶ್ವರನನ್ನು ಅಂಗೀಕರಿಸಬೇಕಾಗುವುದು. ಹಾಗೆಯೇ ಅವಯವಿಯನ್ನು ಅಂಗೀಕರಿಸದಿದ್ದರೆ ಗೋಘಟಾದಿ ವಿಲಕ್ಷಣಾಕಾರತ್ವವು ಬಾರದೆ ಹೋಗುವುದು ಎಂದಾಶಂಕಿಸಿದರೆ, ಕಾಲಕರ್ಮನಿಮಿತ್ತತಃ = ಕಾಲಕರ್ಮನಿಮಿತ್ತಗಳದ್ದೆಶೆಯಿಂದ, ಉತ್ಪತ್ತಿಕಾಲೇ = ಉತ್ಪತ್ತಿಕಾಲದಲ್ಲಿ, ಆದಿಸೃಷ್ಟಿಯಲ್ಲಿ, ಯುಕ್ತಾನಾಂ=ಸನ್ನಿಕೃಷ್ಟವಾಗಿ ಹುಟ್ಟತಕ್ಕ ಅಣೂನಾಂ=ಅಣುಗಳ, (ಹೇಗೆ

ಹೇಗೆ ಗೋಘಟಾದಿ ವಿಚಿತ್ರಾಕಾರವಾಗಿ ಪ್ರತೀತಿಯಾಗುವುದೋ, ಹಾಗೆಯೇ ಕರ್ಮಾದಿಗಳ ವಶದಿಂದಲೇ ಹಾಗೆ ಹಾಗೆ ಸನ್ನಿಕೃಷ್ಟಗಳಾದ ಪರಮಾಣುಗಳು ಹುಟ್ಟುತ್ತವೆ. ಇಂತಹ ಕಾರ್ಯೋತ್ಪತ್ತಿಯಲ್ಲಿ ಈಶ್ವರನಿಂದಾಗಲೀ ಪರಮಾಣುಪುಂಜದಿಂದ ವ್ಯತಿರಿಕ್ತವಾದ ಅವಯವಿ ಯಿಂದಾಗಲೀ ಏನು ಪ್ರಯೋಜನವು? ಸಿದ್ಧಾಂತಿಯೂ ಕೂಡ ಕರ್ಮಾದಿಗಳನ್ನು ನಿಮಿತ್ತವೆಂದೇ ಅಂಗೀಕರಿಸಬೇಕು. ಅವಯವಿಯು ಹುಟ್ಟಲಿಕ್ಕೆ ಅನುಗುಣವಾದುದು ಸಂಯೋಗವನ್ನು ಒಪ್ಪಬೇಕು. ಅಷ್ಟರಿಂದಲೇ ಸರ್ವವೂ ಕೂಡುತ್ತವೆ.) ಸಮುದಾಯಂ ಚ = ಸಮುದಾಯವನ್ನು (ಜಗತ್ತನ್ನಾಗಿ ಹೇಳುತ್ತಾರೆ. ಅಂದರೆ — ಅಣುಸಮುದಾಯಗಳೇ ಹಾಗೆ ಹಾಗೆ ಒಟ್ಟುಕೂಡಿದ್ದು ಗೋಘಟಾದಿಪ್ರತೀತಿವಿಷಯಗಳು. ಅಣುಸಮುದಾಯಗಳಿಂದ ಅತಿರಿಕ್ತವಾದುದು ಅವಯವಿಯು ಇಲ್ಲ. ಆದುದರಿಂದ ಕ್ಷಣಿಕತ್ವವು ವಿರುದ್ಧವಾಗುವುದಿಲ್ಲ.)(ಅನಾತ್ಮಪ್ರಪಂಚಮಾತ್ರವೇ ಕ್ಷಣಿಕವೋ ಅಂದರೆ ಅಲ್ಲವೆನ್ನುತ್ತಾರೆ.) ಆತ್ಮಾನಂ ಚ = ಆತ್ಮನನ್ನಾದರೂ, ಕ್ಷಣಸ್ಥಿತಂ = ಕ್ಷಣಿಕನನ್ನಾಗಿ (ಹೇಳುತ್ತಾರೆ. ಕ್ಷಣಿಕನಾದರೆ ಪ್ರತ್ಯಭಿಜ್ಞಾವಿರೋಧವೆಂದರೆ) ಏತೇಷಾಂ = ಈ ಅಣುಗಳ, ನಿತ್ಯಂ ಸಂತಾನಂ = ನಿತ್ಯವಾದ ಸಂತಾನವನ್ನು, ಪಂಚಸ್ಕಂಧಾತ್ಮನಾ = ಸಂಸ್ಕಾರ ಮೊದಲಾದ ಐದು ಸ್ಕಂಧರೂಪದಿಂದ, ಸ್ಥಿತಂ = (ತಿಂ) ಜಗತ್ಸೃಷ್ಟನನ್ನು ಇದ್ದವನನ್ನಾಗಿ, ಆಹುಃ = ಹೇಳು ತ್ತಾರೆ. (ಅಂತೂ ಪ್ರತ್ಯಭಿಜ್ಞೆಯು ಸಂತಾನವಿಷಯಕವಾದುದು) ॥ ೧೭೮ ॥ ೧೭೯ ॥

ಪಂಚಸ್ಕಂಧಗಳನ್ನು ಹೇಳುತ್ತಾರೆ. —

**ಮೂ ॥ ಸಂಸ್ಕಾರರೂಪವಿಜ್ಞಾನಸಂಜ್ಞಾದುಃಖಾತ್ಮನಾ ಸ್ಥಿತಿಃ ॥ ೧೮೦ ॥**
**ದುಃಖಾಭಾವಂ ಸುಖಂ ಚಾಹುರರೂಪಜ್ಞಾನಸಂತತಿಂ ।**
**ಮೋಕ್ಷಂ ಸ ಸಮುದಾಯೋ ಹಿ ನೈಕಸ್ಮಾದೇವಯುಜ್ಯತೇ ॥ ೧೮೧ ॥**
**ನೋಭಯೋಶ್ಚೋಭಯತ್ವಂ ಯತ್ಸಮುದಾಯವ್ಯಪೇಕ್ಷಯಾ ।**
**ಅತೋಽನ್ಯೋನ್ಯಾಶ್ರಯತ್ವೇನ ಸಮುದಾಯೋ ನ ಯುಜ್ಯತೇ ॥**
**॥ ೧೮೨ ॥**

ಅ ॥ ಸಂಸ್ಕಾರ ರೂಪ ವಿಜ್ಞಾನ ಸಂಜ್ಞಾ ದುಃಖಾತ್ಮನಾ = ಸಂಸ್ಕಾರಸ್ಕಂಧ, ರೂಪ ಸ್ಕಂಧ, ವಿಜ್ಞಾನಸ್ಕಂಧ, ಸಂಜ್ಞಾಸ್ಕಂಧ, ದುಃಖಸ್ಕಂಧ, ಈ ಐದು ರೂಪದಿಂದ, ಸ್ಥಿತಿಃ = ಸ್ಕಂಧ ಗಳ ಸ್ಥಿತಿಯು. (ಸುಖ ಮೊದಲಾದ ಪದಾರ್ಥಾಂತರಗಳು ಇದ್ದುದರಿಂದ ಐದೇ ಸ್ಕಂಧಗಳು ಎನ್ನುವುದು ಹೇಗೆ ಎಂದರೆ) ದುಃಖಾಭಾವಂ = ದುಃಖಾಭಾವವನ್ನು, ಸುಖಂ ಚ = ಸುಖವನ್ನಾಗಿ, ಆಹುಃ = ಹೇಳುತ್ತಾರೆ. ಚ = ಸುಖವು ವೇದನಾಸ್ಕಂಧದಲ್ಲಿ ಅಂತರ್ಭೂತವಾಗುತ್ತದೆಂದು ಕೆಲವರು ಹೇಳುತ್ತಾರೆ. ಅಥವಾ ಮೂರ್ತಾಭಾವವೇ ಆಕಾಶವು. ರೂಪಾದಿಗಳೇ ಪೃಥಿವ್ಯಾದಿಗಳು. ಇತ್ಯಾ ದ್ಯರ್ಥವನ್ನು ಚ ಶಬ್ದದಿಂದ ಇಟ್ಟುಕೊಳ್ಳಬೇಕು. ಅರೂಪಜ್ಞಾನಸಂತತಿಂ = ನಿರ್ವಿಷಯಕ ವಾದ ಜ್ಞಾನಸಂತತಿಯನ್ನೇ, ಮೋಕ್ಷಂ = ಮುಕ್ತಿಯನ್ನಾಗಿ, ಆಹುಃ = ಹೇಳುತ್ತಾರೆ. (ಇತರ ವಾದುದನ್ನು ಅಲ್ಲ. ಆದುದರಿಂದ ಪಂಚಸ್ಕಂಧಪ್ರಕ್ರಿಯೆಗೆ ಭಂಗವಿಲ್ಲ.) (ಹೀಗೆ ವೈಭಾಷಿಕ ಸೌತ್ರಾಂತಿಕ ಸಾಧಾರಣಮತವನ್ನು ಉಪನ್ಯಾಸಮಾಡಿ ಅವಾಂತರ ಭೇದವನ್ನು ನಿರಾಕರಣ ಪ್ರಸ್ತಾವದಲ್ಲಿಯೇ ಹೇಳಲಿಚ್ಛಿಸುತ್ತಾ 'ಪರಮಾಣುಸಮುದಾಯವೇ ಗೋಘಟ ಮೊದಲಾದ ಪ್ರಪಂಚವು, ಅದರಿಂದ ಅತಿರಿಕ್ತ ಅವಯವಿಯು ಯಾವುದೊಂದೂ ಇಲ್ಲ' ಎಂದು ಯಾವುದು ಹೇಳಲ್ಪಟ್ಟದೋ ಅದನ್ನು ನಿರಾಕರಿಸುವುದಕ್ಕಾಗಿ ' ಸಮುದಾಯ ಉಭಯಹೇತುಕೇಪಿ ತದ

ಪ್ರಾಪ್ತಿಃ ' ಎನ್ನುವ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ) ಸಃಸಮುದಾಯಃ = ಯಾವುದು ಗೋಘಟಾದಿಬುದ್ಧಿವಿಷಯವೆಂದು ಅಂಗೀಕೃತವಾಗಿದೆಯೋ, ಆ ಸಮುದಾಯವು, ಏಕಸ್ಮಾತ್= ಒಂದರಿಂದ, ನೈವ ಯುಜ್ಯತೇಹಿ=ಕೂಡುವುದಿಲ್ಲವಷ್ಟೆ. (ಅಂದರೆ ಸಮುದಾಯಕ್ಕೆ ೧ ಒಂದು ಪರಮಾಣುವು ಹೇತುವೋ, ೨ ಅನೇಕ ಪರಮಾಣುಗಳು ಹೇತುವೋ? ೧ನೇದು ಕೂಡಲಾರದು. ಒಂದು ಪರಮಾಣುವಿನಿಂದ ಸಮುದಾಯದ ಉತ್ಪತ್ತಿಯು ಕೂಡಲಾರದು. ಒಂದು ವೃಕ್ಷದಲ್ಲಿ ವೃಕ್ಷಸಮುದಾಯವೆಂಬುವ ಬುದ್ಧಿಯು ಕೂಡಲಾರದಷ್ಟೆ. (೨ನೇದನ್ನು ನಿರಾಕರಿಸುತ್ತಾರೆ.) ಉಭಯೋಃ=ಎರಡರ ಸಕಾಶದ್ದೆಶೆಯಿಂದ, ಸಮುದಾಯಃ=ಸಮುದಾಯವು, ನ ಯುಜ್ಯತೇ= ಕೂಡುವುದಿಲ್ಲ. (ಏಕೆ ಕೂಡುವುದಿಲ್ಲವೆಂದರೆ ಅನೇಕಗಳು ಹೇತುವು ಎನ್ನುವ ಕಲ್ಪದಲ್ಲಿಯೂ, ೧ ಅಸಮುದಿತವಾದ ಅನೇಕ ಹೇತುವಾಗಿ ಉಳ್ಳದ್ದೋ, ೨ ಅಥವಾ ಸಮುದಿತವಾದ ಅನೇಕ ಹೇತುವಾಗಿ ಉಳ್ಳದ್ದೋ? ೧ನೇ ಕಲ್ಪದಲ್ಲಿ ಎಲ್ಲಾ ಕಡೆಗಳಲ್ಲಿಯೂ ಗೋಘಟಾದಿ ಬುದ್ಧಿಯು ಬರಬೇಕಾಗುವುದು. ಅಸಮುದಿತ ಪರಮಾಣುಗಳು ಎಲ್ಲಾ ಕಡೆಗಳಲ್ಲಿಯೂ ಇವೆ. ಸಮುದಾಯಕ್ಕೆ ಅದು ಮಾತ್ರ ಕಾರಣವಾಗಿದೆ. ಸಮುದಾಯಾಂಗೀಕಾರವು ವ್ಯರ್ಥವೂ ಆಗಬೇಕಾಗುವುದು.) (೨ನೇದು ಕೂಡುವುದಿಲ್ಲ ಎನ್ನುವುದಕ್ಕೆ ಹೇತುವನ್ನು ಹೇಳುತ್ತಾರೆ.) ಯತ್=ಯಾವಕಾರಣದ್ದೆಶೆಯಿಂದ,ಉಭಯತ್ವಂ=ಉಭಯತ್ವವು, ಸಮುದಾಯವ್ಯಪೇಕ್ಷಯಾ= ಸಮುದಾಯವನ್ನು ಅಪೇಕ್ಷಿಸಿಕೊಂಡು, (ಅಂದರೆ ಉಭಯತ್ವವು (ಸಮುದಿತಾನೇಕತ್ವವು) ಸಮುದಾಯಸಾಪೇಕ್ಷವಾದುದು, ಸಮುದಾಯವು ಉಂಟಾದರೆ ಅನೇಕಗಳಿಗೆ ಸಮುದಿತತ್ವವು) ಆಗುತ್ತದೆ. ಆದುದರಿಂದ ಸಮುದಾಯವು ಕೂಡುವುದಿಲ್ಲ. (ಸಮುದಿತಾನೇಕತ್ವಕ್ಕೆ ಸಮುದಾಯದ ಅಪೇಕ್ಷೆಯಿದ್ದರೂ ಯಾವುದರಿಂದ ಸಮುದಾಯೋತ್ಪತ್ತಿಯಾಗುವುದಿಲ್ಲ ಎನ್ನುವ ಆಶಂಕೆಯನ್ನು ಪರಿಹರಿಸುತ್ತಾ ಸೂತ್ರಾರ್ಥವನ್ನು ಉಪಸಂಹಾರ ಮಾಡುತ್ತಾರ) ಅತಃ= ಆದುದರಿಂದ, ಅನ್ಯೋನ್ಯಾಶ್ರಯತ್ವೇನ = ಸಮುದಾಯಕ್ಕೂ ಸಮುದಿತ ಅನೇಕಗಳಿಗೂ, ಪರಸ್ಪರಾಪೇಕ್ಷೋತ್ಪತ್ತಿಕತ್ವವಿದ್ದುದರಿಂದ, ಸಮುದಾಯಃ=ಸಮುದಾಯವು, ನ ಯುಜ್ಯತೇ= ಕೂಡುವುದಿಲ್ಲ. (ಅಣುಗಳಿಗೆ ಸಮುದಾಯವು ಕೂಡದಿದ್ದ ಮೇಲೆ ಮಹಾನ್ ಏಕಃ ಎಂದು ಪ್ರತ್ಯಕ್ಷಬುದ್ಧಿವಿಷಯತ್ವವು ಕೂಡದಿರುವುದರಿಂದ ಅವಶ್ಯವಾಗಿ ಅವಯವಿಯನ್ನು ಅಂಗೀಕರಿಸಬೇಕು ॥ ೧೮೦ ॥ ೧೮೧ ॥ ೧೮೨ ॥

ಹಿಂದೆ ಹೇಳಿದ್ದನ್ನು ಆಕ್ಷೇಪಿಸಿ ಸಮಾಧಾನ ಹೇಳುತ್ತಾರೆ—

## "ಓಂ ಇತರೇತರ ಪ್ರತ್ಯಯತ್ವಾದಿತಿ ಚೇನ್ನೋತ್ಪತ್ತಿ ಮಾತ್ರನಿಮಿತ್ತ ನಿಮಿತ್ತತ್ವಾತ್ ಓಂ" ॥ ಸೂ. ೧೯ ॥

ಪ್ರಲಯವು ಕೂಡುವುದಿಲ್ಲ. ಅನ್ಯೋನ್ಯಾಶ್ರಯವೂ ಇದೆ ಎಂದು ಯಾವುದು ಮೊದಲು ಹೇಳಲ್ಪಟ್ಟದ್ದೋ, ಅದು ಕೂಡುವುದಿಲ್ಲ. ಅಣುವಿನಲ್ಲಿರತಕ್ಕ ಅನೇಕತ್ವಸಂಖ್ಯಾರೂಪವಾದ ಸಮುದಾಯವು ಯಾವಾಗಲೂ ಇದ್ದರೂ ಸಮುದಾಯಪ್ರತೀತಿವ್ಯವಹಾರಗಳು ಅಪೇಕ್ಷಾ ಬುದ್ಧಿಯ ಅಧೀನವಾಗಿರುವುದರಿಂದ ಸಾಮಿಪ್ಯ ಹೇತುಕವಾದ ಅಪೇಕ್ಷಾಬುದ್ಧಿಯು ಇಲ್ಲದಿರುವುದರಿಂದ ಸಮುದಾಯ ಪ್ರತೀತ್ಯಾದಿಗಳು ಇಲ್ಲದಿರುವುದರಿಂದ ಪ್ರಲಯಾದಿಗಳು ಕೂಡುತ್ತವೆ. ಎಂದು ಹೇಳಕೂಡದು. ವಿರಲಾಣುಗಳಿಗೆ ಮಿಲಿತಾಣುರೂಪಸಮುದಾಯೋತ್ಪತ್ತಿ ಮಾತ್ರದಲ್ಲಿ ನಿಮಿತ್ತತ್ವವಿದೆ, ಅಪೇಕ್ಷಾಬುದ್ಧಿ ಮೊದಲಾದವುಗಳಲ್ಲಿ ನಿಮಿತ್ತತ್ವವಿಲ್ಲ. ಕ್ಷಣಿಕವಾದವಲ್ಲಿ ಒಂದೊಂದು ಕಾರ್ಯವನ್ನು ಹುಟ್ಟಿಸಿಯೇ ಅಣುಗಳಿಗೆ ನಾಶವಿದುದ್ದರಿಂದ ಆದಿಯಲ್ಲಿ ದರ್ಶನವು,

ಆ ಮೇಲೆ ಅಪೇಕ್ಷಾಬುದ್ಧಿಯು, ಆ ಮೇಲೆ ಸಮುದಾಯ ವಿಷಯಕಗಳಾದ ದ್ವಿತ್ವವ್ಯವಹಾರಗಳು, ಎಲ್ಲವೂ ಒಂದು ಕಡೆ ಅಯುಕ್ತವು.

ಆಕ್ಷೇಪಾಂಶವನ್ನು ವ್ಯಾಖ್ಯಾನಮಾಡುತ್ತಾರೆ—

**ಮೂ ॥ ಅನ್ಯೋನ್ಯಾಪೇಕ್ಷಯಾ ಪುಂಸಃ ಸಮುದಾಯತ್ವವೇದನಂ ।**
**ಸ್ಯಾತ್ತತ್ಸದಾತನತ್ವೇಽಪಿ ತಚ್ಚ ಸಾಮೀಪ್ಯಹೇತುಕಂ ॥ ೧೮೩ ॥**
**ಇತಿ ಚೇತ್ಕಾರ್ಯಸಂಭೂತಿಮಾತ್ರವ್ಯಾಪೃತಿಕಾರಣಂ ।**
**ನ ತು ಕಾರ್ಯವಿಶೇಷೇಷು ವ್ಯಾಪೃತಂ ಕಾರಣಂ ಭವೇತ್ ॥೧೮೪॥**
**ಅತೋಽರ್ಥೇಂದ್ರಿಯಸಂಯೋಗಿರೂಪಕಾರಣತಾತ್ಮನಃ ।**
**ಸಂಯೋಗಿರೂಪರಾಹಿತ್ಯಾನ್ನೈವ ತಜ್ಜ್ಞಾನತಾಽಪಿ ಹಿ ॥ ೧೮೫ ॥**

ಅ ॥ (ಈ ಸಮುದಾಯವು ಕಾದಾಚಿತ್ಕವಾದರೆ ಅನ್ಯೋನ್ಯಾಶ್ರಯತ್ವವು ಬರಬಹುದು. ಹೀಗೆ ಇಲ್ಲ. ಇದನ್ನೇ ಸದಾತನವನ್ನಾಗಿ ಅಂಗೀಕರಿಸುತ್ತೇವೆ. ಹೀಗಾದರೆ ಸೃಷ್ಟಿಪ್ರಲಯ ವ್ಯವಸ್ಥೆಯು ಬಾರದೆಹೋಗುವುದು ಎಂದರೆ ಹೀಗೆಹೇಳಕೂಡದು. ಏಕೆಂದರೆ) (ಯತಃ = ಯಾವಕಾರಣದ್ದೆಸೆಯಿಂದ)ತತ್ಸದಾತನತ್ವೇಽಪಿ = ಸಮುದಾಯಕ್ಕೆ ಸದಾತನತ್ವವಿದ್ದರೂ, ಪುಂಸಃ= ಪುರುಷನಿಗೆ, ಸಮುದಾಯತ್ವವೇದನಂ = ಸಮುದಾಯತ್ವಜ್ಞಾನವು, (ಕದಾಚಿತ್ = ಕೆಲವುವೇಳೆ,) ಸ್ಯಾತ್ = ಆಗುವುದು, (ಆದುದರಿಂದ ಅದನ್ನು ಅಪೇಕ್ಷಿಸಿ ಸೃಷ್ಟ್ಯಾದಿವ್ಯವಸ್ಥೆಯು ಉಪಪನ್ನ ವಾಗುತ್ತದೆ.) (ಸಮುದಾಯಕ್ಕೆ ಸದಾತನತ್ವವಿದ್ದರೂ ಸಮುದಾಯವೇದನವೂಕೂಡ ಯಾವ ಕಾರಣದಿಂದ ಕಾದಾಚಿತ್ಕವು ಎಂದರೆ) ತಚ್ಚ = ಸಮುದಾಯತ್ವವೇದನವು, ಸಾಮೀಪ್ಯಹೇತುಕಂ = ಪರಮಾಣು ಸಾಮೀಪ್ಯವೇ ಹೇತುವಾಗಿಉಳ್ಳದ್ದು, (ಸಾಮೀಪ್ಯವುಯಾವಾಗಲೂ ಇರುವುದಿಲ್ಲ. ಆದಕಾರಣವೇದನವು ಕಾದಾಚಿತ್ಕವೇ.) (ಸಮುದಾಯವೇದನಕ್ಕೆ ಸಾಮೀಪ್ಯಹೇತುಕತ್ವವು ಯಾವ ಕಾರಣದಿಂದ ಎಂದರೆ) ಅನ್ಯೋನ್ಯಾಪೇಕ್ಷಯಾ = ಪರಸ್ಪರಪರಮಾಣುಜ್ಞಾನವನ್ನು ಅಪೇಕ್ಷಿಸಿ ಸಮುದಾಯತ್ವವೇದನವು ಆಗುತ್ತದೆ. (ಸಾಮೀಪ್ಯಹೊರತು ಅನ್ಯೋನ್ಯಜ್ಞಾನ ವಾಗುವುದಿಲ್ಲ.)ಇತಿಚೇತ್ = ಹೀಗೆ ಹೇಳಿದರೆ, (ಸಮಾಧಾನಾಂಶವನ್ನು ವ್ಯಾಖ್ಯಾನಮಾಡುತ್ತಾರೆ.) ಕಾರ್ಯಸಂಭೂತಿಮಾತ್ರವ್ಯಾಪೃತಿ = ಕಾರ್ಯೋತ್ಪತ್ತಿಮಾತ್ರದಲ್ಲಿ ವ್ಯಾಪಾರವುಳ್ಳದ್ದು, ಕಾರಣಂ = ಕಾರಣವು, (ಆದುದರಿಂದ ಹಿಂದೆಹೇಳಿದ್ದು ಕೂಡುವುದಿಲ್ಲ.) (ಆದಕಾರಣ ಯಥಾಶ್ರುತದಲ್ಲಿ ಇದು ಪರಿಹಾರಾಸಮರ್ಥವಾಗಿರುವುದರಿಂದ ಅದರ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ) ಕಾರ್ಯವಿಶೇಷೇಷು = ವಿಶೇಷಕಾರ್ಯಗಳಲ್ಲಿ, ಕಾರಣಂ = ಕಾರಣವು, ವ್ಯಾಪೃತಂ = ವ್ಯಾಪಾರ ವಿಶಿಷ್ಟವಾದುದು, ನ ಭವೇತ್ = ಆಗಲಾರದು, (ಕಾರಣಗಳು ಸ್ವಸದೃಶಕಾರ್ಯಗಳನ್ನು ಹುಟ್ಟಿಸುವುದರಲ್ಲಿಯೇ ವ್ಯಾಪಾರವುಳ್ಳವುಗಳೂ ವಿಸದೃಶಕಾರ್ಯಗಳನ್ನು ಹುಟ್ಟಿಸುವುದರಲ್ಲಿ ವ್ಯಾಪಾರವುಳ್ಳವುಗಳಲ್ಲ) (ಹೀಗಾದರೆ ಪ್ರಕೃತವೇನಾಯಿತೆಂದರೆ) ಅತಃ = ಕಾರಣಕ್ಕೆ ಸದೃಶಕಾರ್ಯ ಜನಕತ್ವನಿಯಮವಿದ್ದುದರಿಂದ, ಅರ್ಥೇಂದ್ರಿಯಸಂಯೋಗಿರೂಪಕಾರಣತಾ = ಗ್ರಾಹ್ಯಗ್ರಾಹಕ ರೂಪಗಳಾದವುಗಳು ಯಾವುದು ಅರ್ಥೇಂದ್ರಿಯಗಳೋ ಆ ಕಾರ್ಯಗಳನ್ನು ಕುರಿತು ಸಂಯೋಗಿರೂಪಕಾರಣತ್ವವು, ಸಂಯೋಗಿರೂಪರಾಹಿತ್ಯಾತ್ = ಕಾರಣಗಳಾದ ಅರ್ಥೇಂದ್ರಿ ಯಗಳಿಗೆ ಗ್ರಾಹ್ಯಗ್ರಾಹಕರೂಪಗಳು ಇಲ್ಲದಿರುವುದರಿಂದ, ನೈವ = ಕೂಡುವುದೇ ಇಲ್ಲವು. ಆತ್ಮನೋಽಪಿ = ಕಾರ್ಯಭೂತನಾದ ಆತ್ಮನಿಗೂ, ತಜ್ಜ್ಞಾನತಾ = ಸಮುದಾಯವಿಷಯಕವಾದ

ಜ್ಞಾನಇರುವತನವು, ನೈವ=ಕೂಡುವುದೇಇಲ್ಲ, ಹಿ = ಯಾವಕಾರಣದ್ದೆಶೆಯಿಂದ, ಆತ್ಮನಃ= ಕಾರಣನಾದಆತ್ಮನಿಗೆ, ತಜ್ಜ್ಞಾನತಾ = ಸಮುದಾಯವಿಷಯಕವಾದ ಜ್ಞಾನವಿರುವತನವು, ನೈವ=ಇಲ್ಲವೇಇಲ್ಲ.

ತಾ ॥ (1) ೧ ಕಾರಣವು ಸದೃಶವಾದ ಕಾರ್ಯವನ್ನು ಹುಟ್ಟಿಸುವ ಸ್ವಭಾವವುಳ್ಳದ್ದು ಆಗುವುದೋ, ೨ ಅಥವಾ ವಿಸದೃಶವಾದ ಕಾರ್ಯವನ್ನು ಹುಟ್ಟಿಸುವ ಸ್ವಭಾವವುಳ್ಳದ್ದೋ, ೩ ಉಭಯಸ್ವಭಾವವುಳ್ಳದ್ದೋ,೪ ಅಥವಾ ಉಭಯವನ್ನು ಹುಟ್ಟಿಸದೆ ಇರುವ ಸ್ವಭಾವವುಳ್ಳದೋ? ಅವುಗಳಲ್ಲಿ ೧ನೇ ಕಲ್ಪವನ್ನು ಅಂಗೀಕರಿಸಿದರೆ ಇಂದ್ರಿಯಕ್ಕೆ ಅವಿಷಯಗಳಾದ (ಅಂದರೆ ಗ್ರಾಹ್ಯ ರೂಪಗಳು ಆಗದಿರುವ) ವಿರಲಪರಮಾಣುಗಳದ್ದೆಶೆಯಿಂದ ಅಂತಹುಗಳೇ ಅಂದರೆ ಗ್ರಾಹ್ಯರೂಪ ಗಳಾಗದಿರುವ ವಿರಲಗಳೇ ಆದ ಪರಮಾಣುಗಳು ಹುಟ್ಟುವವುಗಳಲ್ಲದೆ ಇಂದ್ರಿಯಕ್ಕೆ ವಿಷಯ ವಾದವುಗಳು ಅಂದರೆ ಗ್ರಾಹ್ಯರೂಪಗಳಾದ ಮಿಲಿತಪರಮಾಣುಗಳು ಹುಟ್ಟಲಾರವು. ಅರ್ಥಾ ನಧಿಪತಿಗಳಾದ ಅಂದರೆ ಗ್ರಾಹಕರೂಪಗಳಾಗದೆಯಿರುವ ಇಂದ್ರಿಯಗಳದ್ದೆಶೆಯಿಂದ ಅಂತಹ ಇಂದ್ರಿಯಗಳೇ ಹುಟ್ಟುತ್ತವೆ. ಯಾವಾಗಲೂ ಗ್ರಾಹಕರೂಪಗಳಾದ ಇಂದ್ರಿಯಗಳು ಹುಟ್ಟ ಲಾರವು. ಅಸಮುದಾಯಜ್ಞಾನವಿಲ್ಲದೆಯಿರುವ ಆತ್ಮನದ್ದೆಶೆಯಿಂದ ಅಂತಹ ಆತ್ಮನೇ ಹುಟ ಯಾನು. ಯಾವಾಗಲೂ ಸಮುದಾಯಜ್ಞಾನವುಳ್ಳ ಆತ್ಮನು ಹುಟ್ಟಲಾರನು. ಗ್ರಾಹ್ಯರೂಪ್ಯ ಮೊದಲಾದ ಪರಮಾಣುಗಳು ಹುಟ್ಟುವುದಾದರೆ ಅದಕ್ಕೆ ಕಾರಣಗಳಾದ ಪರಮಾಣ್ವಾದಿಗಳಿಗೂ ಕೂಡ ಇಂದ್ರಿಯಲಂಬನತ್ವಾದಿ (ಗ್ರಾಹ್ಯರೂಪತ್ವಾದಿ)ಗಳನ್ನು ಅಂಗೀಕರಿಸಬೇಕಾಗುವುದು. ಕಾರಣಗಳಲ್ಲ ಧರ್ಮವನ್ನು ಒಪ್ಪಬಿಟ್ಟರೆ ಸದೃಶವಾದ ಕಾರ್ಯವನ್ನು ಹುಟ್ಟಿಸುವ ಸ್ವಭಾವಕ್ಕೆ ಭಂಗವು ಬರಬೇಕಾಗುವುದು ॥ ೧೮೩ ॥ ೧೮೪ ॥ ೧೮೫ ॥

ಕಾರಣವು ವಿಸದೃಶವಾದ ಕಾರ್ಯವನ್ನು ಹುಟ್ಟಿಸುವ ಸ್ವಭಾವವುಳ್ಳದ್ದು ಎನ್ನುವ ೨ನೇ ಪಕ್ಷವನ್ನು ಆಶಂಕಿಸುತ್ತಾರೆ --

**ಮೂ ॥ ವಿಶೇಷಕಾರ್ಯಜನಕಂ ಯದಿಕಾರಣಮಿಷ್ಯತೇ ।**
**ಕುತಃ ಸಮಾನರೂಪತ್ವಂ ಕಾರ್ಯಾಣಾಮಪಿ ಸರ್ವಶಃ ।**
**ಅತೋ ನಿಯತ್ಯಾ ಯತ್ಕಿಂಚಿದ್ಯಸ್ಯಕಸ್ಯಾಪಿ ಕಾರಣಂ ॥ ೧೮೬ ॥**

ಅ ॥ ಯದಿ=ಯಾವಪಕ್ಷದಲ್ಲಿ, ಕಾರಣಂ=ಕಾರಣವು, ವಿಶೇಷಕಾರ್ಯಜನಕಂ= ವಿಶೇಷಕಾರ್ಯವನ್ನು ಹುಟ್ಟಿಸತಕ್ಕದ್ದು, ಇಷ್ಯತೇ ಯದಿ=ಅಂಗೀಕರಿಸಲ್ಪಡುವುದಾದರೆ, (ತಥಾಚ ಇಂದ್ರಿಯಕ್ಕೆ ವಿಷಯಗಳಾಗದೆ ಇರುವ ವಿರಲಪರಮಾಣ್ವಾದಿಗಳದ್ದೆಶೆಯಿಂದ ಇಂದ್ರಿಯಕ್ಕೆ ವಿಷಯಭೂತಗಳಾದ ಮಿಲಿತಪರಮಾಣ್ವಾದಿಗಳ ಉತ್ಪತ್ತಿಯು ಕೂಡುತ್ತದೆ.) ಎಂದಾದರೆ— (ನಿರಾಕರಿಸುತ್ತಾರೆ.) (ಹಾಗಾದರೆ) ಸರ್ವಶೋಽಪಿ ಕಾರ್ಯಾಣಾಂ=ಎಲ್ಲಾ ಕಾರ್ಯಗಳಿಗೂ, ಸಮಾನರೂಪತ್ವಂ = ಸಮಾನರೂಪವುಳ್ಳತನವು, ಕುತಃ = ಯಾವುದರಿಂದ. (ಹಾಗಾದರೆ ಕಾರಣವು ಉಭಯಸ್ವಭಾವವುಳ್ಳದ್ದು ಎನ್ನುವ ೩ನೇ ಪಕ್ಷವಾಗಲಿ ಎಂದರೆ ಹಾಗೆ ಹೇಳಕೂಡದು. ವಿರೋಧವಿದ್ದುದರಿಂದ ಒಂದೂ ಹುಟ್ಟದೆ ಹೋಗಬೇಕಾಗುವುದು. ವಿರೋಧವಿಲ್ಲವೆಂದಾದರೆ ಹೇಳುತ್ತಾರೆ.) ಅತಃ=ಆದುದರಿಂದ, ಅನಿಯತ್ಯಾ=ಘಟವು ಘಟಕ್ಕೇನೇ, ನೀಲವು ನೀಲಕ್ಕೆನೇ ಎನ್ನುವ ನಿಯಮವಿಲ್ಲದೆ, ಯತ್ಕಿಂಚಿತ್=ಘಟಾದಿಗಳಾಗಲಿ, ನೀಲಾದಿಗಳಾಗಲಿ, ಯಸ್ಯ ಕಸ್ಯಾಪಿ=ಘಟಾದಿಗಳಿಗಾಗಲೀ, ಅಘಟಾದಿಗಳಿಗಾಗಲೀ, ನೀಲಾದಿಗಳಿಗಾಗಲೀ, ಅನೀಲಾದಿ

ಗಳಿಗಾಗಲೀ, ಕಾರಣಂ = ಕಾರಣವು, ಸ್ಯಾತ್ = ಆಗುವುದು. ಇನ್ನೇದ್ದೂ ಕೂಡಲಾರದು. ಅರ್ಥಕ್ರಿಯಾರಹಿತವಾದುದು ಅಸತ್ತಾಗಬೇಕಾಗುವುದು. ಅರ್ಥಕ್ರಿಯಾಕಾರಿತ್ವವೇ ಸತ್ವವೆಂದು ಸೌಗತರು ಹೇಳುತ್ತಾರೆ. (ಹಾಗಾದರೆ ಕಾರ್ಯಜನನಮಾತ್ರವು ವಸ್ತುವಿನ ಸ್ವಭಾವವೆಂದಂಗೀಕರಿಸುತ್ತೇವೆ. ಹಿಂದೆ ಹೇಳಿದವುಗಳಲ್ಲಿ ಯಾವ ಪಕ್ಷವನ್ನು ಅಂಗೀಕರಿಸುವುದಿಲ್ಲವೆಂದರೆ— ಆದ ಕಾರಣ ನಿಯಮವಿಲ್ಲದೆ ಯಾವುದಾದರೂ ಯಾವುದಾದರೊಂದಕ್ಕೆ ಕಾರಣವು ಆಗುವುದು॥ ೧೮೬ ॥

(೧) ಹಿಂದೆ ಹೇಳಿದ ಆಕ್ಷೇಪದ ಮೇಲೆ ಹೀಗೆ ಸಮಾಧಾನವನ್ನು ಶಂಕಿಸುತ್ತಾರೆ. ಹೇಗೆ ಸಿದ್ಧಾಂತಿಗಳ ಮತದಲ್ಲಿ ಇಂದ್ರಿಯಗಳಿಗೆ ಪ್ರಮಾಜನನ ಸ್ವಭಾವವಿದ್ದರೂ ಅವುಗಳು ದೋಷರೂಪಸಹಕಾರಿಬಲದಿಂದ ಅಪ್ರಮಾಣವನ್ನುಂಟುಮಾಡುವುದೋ, ಹಾಗೆ ಕಾರಣಕ್ಕೆ ಸದೃಶ ಕಾರ್ಯಜನಕತ್ವಸ್ವಭಾವವಿದ್ದರೂ ಅದೃಷ್ಟಾದಿಸಹಕಾರಿಸಾಮರ್ಥ್ಯದಿಂದ ಕದಾಚಿತ್ ವಿಸದೃಶ ಕಾರ್ಯಜನಕತ್ವವೂ ಕೂಡಬಹುದು. (೨) ಅಥವಾ ಸಾಂಖ್ಯರ ಮತದಲ್ಲಿ ಇಂದ್ರಿಯಾದಿಗಳು ಪ್ರಮಾ-ಅಪ್ರಮಾ ಇವು ಎರಡನ್ನು ಹುಟ್ಟಿಸುವ ಸ್ವಭಾವವುಳ್ಳವುಗಳೋ, ಅವುಗಳಲ್ಲಿ ಅಪ್ರಮಾಕ್ಕೆ ವಿರೋಧಿಗಳಾದ ಗುಣಗಳು ಸೇರಿದಾಗ ಪ್ರಮಾವನ್ನೇ ಉಂಟುಮಾಡುತ್ತಾವೆ. ಪ್ರಮಾಕ್ಕೆ ಪ್ರತಿಬಂಧಕಗಳಾದ ದೋಷಗಳು ಸೇರಿದಾಗ ಅಪ್ರಮಾವನ್ನುಂಟುಮಾಡುತ್ತಾವೆ ಹೇಗೋ ಹಾಗೆ ಕಾರಣಕ್ಕೆ ಉಭಯಸ್ವಭಾವತ್ವವಿದ್ದರೂ ಅದೃಷ್ಟಾದಿ ಸಹಕಾರಿ ಸಾಮರ್ಥ್ಯದಿಂದ ಯಾವುದಾದರೊಂದರ ಉತ್ಪತ್ತಿಯೂ ಕೂಡುತ್ತದೆ. (೩) ಹೇಗೆ ನೈಯಾಯಿಕಾದಿಗಳ ಮತದಲ್ಲಿ ಇಂದ್ರಿಯಾದಿಗಳು ಜ್ಞಾನವನ್ನು ಮಾತ್ರ ಹುಟ್ಟಿಸುವ ಸ್ವಭಾವವುಳ್ಳವುಗಳೋ ಗುಣವೊದಲಾದ ಸಹಕಾರಿಗಳ ಸಂಬಂಧದಿಂದ ಪ್ರಮಾದಿಗಳು ಹುಟ್ಟುತ್ತವೋ, ಹಾಗೆಯೇ ಕಾರಣವು ಕಾರ್ಯವನ್ನು ಹುಟ್ಟಿಸುವ ಸ್ವಭಾವವುಳ್ಳದ್ದು, ಅದೃಷ್ಟವೊದಲಾದ ಸಹಕಾರಿಗಳ ಸಂಬಂಧದಿಂದ ಕಾರಣಸದೃಶವಾದ ಅಥವಾ ವಿಸದೃಶವಾದ ಕಾರ್ಯವು ಹುಟ್ಟಬಹುದು ಎಂದರೆ—

ಮೂ॥ ಅದೃಷ್ಟಮಪಿ ತಸ್ಯೈವ ವಿಶೇಷಾಪಾದಕಂ ಕುತಃ ॥ ೧೮೭ ॥
ಯಸ್ಯ ಕಸ್ಯಾಪಿ ಯತ್ಕಿಂಚಿದ್ವಿಶೇಷಮುಪಪಾದಯೇತ್ ।
ಕಾರ್ಯಂ ಚ ಕಾರಣಂ ಚೈವ ಯತ್ಕಿಂಚಿದ್ಯಸ್ಯ ಕಸ್ಯಚಿತ್ ॥ ೧೮೮ ॥
ಭವೇನ್ನಿಯಾಮಕಾಭಾವಾದಿದಮಸ್ಯೈವ ಕಾರಣಂ ।
ಇತಿ ನಿತ್ಯವಿನಾಶಿತ್ವೇ ಕೇನ ಮಾನೇನ ಗಮ್ಯತೇ ।
ಇದಂ ನ ಜಾಯತೇಽಮುಷ್ಮಾದಿತ್ಯತ್ರಾಪಿ ನ ಕಾರಣಂ ॥ ೧೮೯ ॥

ಅ ॥ ಅದೃಷ್ಟಮಪಿ=ಅದೃಷ್ಟವೂ (ಸಹಕಾರಿಮಾತ್ರವೂ) ವಿಶೇಷಾಪಾದಕಂ = (೧ನೇ ಕಲ್ಪದಲ್ಲಿ) ವಿಸದೃಶಕಾರ್ಯಜನಕತ್ವಕ್ಕೆ, (೨ನೇ ಕಲ್ಪದಲ್ಲಿ) ಅನ್ಯತರ ಪ್ರತಿಬಂಧಕ್ಕೆ, (೩ನೇ ಕಲ್ಪದಲ್ಲಿ) ಉಭಯಜನಕತ್ವಕ್ಕೆ ಆಪಾದಕವಾದುದು, ಕುತಃ=ಯಾವಕಾರಣದಿಂದ, ತಸ್ಯೈವ= ಆ ಕಾರಣಕ್ಕೇನೇ, ವಿಶೇಷಾಪಾದಕಂ=ವಿಶೇಷವನ್ನು ಆಪಾದಿಸಕೊಡತಕ್ಕದು, ಕುತಃ=ಯಾವ ಕಾರಣದಿಂದ. (ಅಂದರೆ ವಿಶೇಷಾಪಾದಕವಾದ ಅದೃಷ್ಟವೂ ಕೂಡ ವಿವಕ್ಷಿತವಾದ ಕಾರಣಕ್ಕೇನೇ ವಿಶೇಷವನ್ನು ಹೊಂದಿಸಿಕೊಡುತ್ತದೋ, ಕಾರಣಮಾತ್ರಕ್ಕೆ ವಿಶೇಷವನ್ನು ಹೊಂದಿಸಿಕೊಡುತ್ತದೋ, ೧ನೇದ್ದು ಕೂಡಲಾರದು. ನಿಯಾಮಕಗಳಾದ ಕಾರಣ, ಜ್ಞಾಪಕಗಳು ಇಲ್ಲ. ಎರಡನೇ ಕಲ್ಪವನ್ನು ದೂಷಿಸುತ್ತಾರೆ.) ಯತ್ಕಿಂಚಿತ್ = ಯಾವುದಾದರೊಂದು ಅದೃಷ್ಟವು, ವಿಶೇಷಂ= ವಿಶೇಷವನ್ನು, ಉಪಪಾದಯೇತ್=ಹೊಂದಿಸಿಕೊಡುವುದು. (ಪೂರ್ವಪೂರ್ವತರಾದೃಷ್ಟಕ್ಕೂ

ವಿಶೇಷಾಪಾದಕತ್ವವಿದ್ದರೆ ಆ ಪೂರ್ವಪೂರ್ವತರಾದಿ ಅದೃಷ್ಟವೂ ಕೂಡ ಪರಮಾಣ್ವಾದಿಗಳಲ್ಲಿ ವಿಶೇಷವನ್ನು ಹೊಂದಿಸಿಕೊಡುವುದು. ತಥಾಚ ಸಮುದಾಯಪ್ರತೀತಿಗೆ ಸಮಯನಿಯಮವು ಬಾರದೆ ಹೋಗುವುದು ) ಯಸ್ಯ ಕಸ್ಯಾಪಿ=ಯಾವುದಾದರೊಂದಕ್ಕೂ, ವಿಶೇಷಂ=ವಿಶೇಷವನ್ನು, ಉಪಪಾದಯೇತ್=ಹೊಂದಿಸಿಕೊಡುವುದು. (ಕಾರಣಮಾತ್ರಕ್ಕೆ ವಿಶೇಷವನ್ನು ಆಪಾದಿಸಿಕೊಡ ತಕ್ಕ ಅದೃಷ್ಟವನ್ನು ಅಂಗೀಕರಿಸಿದರೆ ಆಗ ಎಲ್ಲಾ ಕಾರಣಗಳಿಗೂ ವಿಶೇಷವನ್ನು ಹೊಂದಿಸಿ ಕೊಡುವುದು. ತಥಾಚ ಘಟಪರಮಾಣುಗಳಿಗೆ ಮೇಲನವಾದರೆ ಎಲ್ಲಾ ಪರಮಾಣುಗಳಿಗೂ ಮೇಲನವಾಗುವುದು. ಎಲ್ಲಿಯೂ ಕೂಡ ಅಮಿಲಿತಪರಮಾಣುಗಳಿಗೆ ಅವಸ್ಥಿತಿಯು ಇರಲಾರದು) (ತಂತುಪಟಗಳಿಗೆ ಕಾರ್ಯಕಾರಣಭಾವವಿದೆ. ಪ್ರಮಿತವಾದುದನ್ನು ತಿರಸ್ಕರಿಸಲಿಕ್ಕೆ ಅನರ್ಹ ವಾಗಿದೆ. ಅದು ಹೇಗೆ ಹೇಗೆ ಉಪಪನ್ನವಾಗುತ್ತದೋ ಹಾಗೆ ಹಾಗೆ ಕಲ್ಪಿಸುವುದು ಇದು ನನಗೂ ಸಮಾನವೇ, ಎಂದರೆ—) ಯತ್ಕಿಂಚಿತ್=ಯಾವುದಾದರೂ ನೀಲಾದಿಗಳು, ಯಸ್ಯ ಕಸ್ಯಚಿತ್ ಏವ=ಯಾವುದಾದರೂ ಪೀತಾದಿಗಳಿಗೇನೇ, ಕಾರ್ಯಂ ಚ=ಕಾರ್ಯವೂ, ಸ್ಯಾತ್=ಆಗುವುದು ಯತ್ಕಿಂಚಿತ್=ಪೀತಾದಿಗಳು, ಯಸ್ಯ ಕಸ್ಯಚಿದೇವ=ನೀಲಾದಿಗಳಿಗೇನೇ, ಕಾರಣಂ=ಕಾರಣವು, ಸ್ಯಾತ್=ಆಗುವುದು. (ಏಕೆಂದರೆ ನೀಲವು ನೀಲದ್ದೇ ಕಾರ್ಯವು ಪೀತದ್ದಲ್ಲ, ನೀಲವೇ ನೀಲಕ್ಕೆ ಕಾರಣವು ಪೀತವಲ್ಲ ಎನ್ನುವ ವಿಷಯದಲ್ಲಿ) ನಿಯಾಮಕಾಭಾವಾತ್=ನಿಯಾಮಕವು ಇಲ್ಲವಿರುವು ದರಿಂದ, (ಸಮವಾಯ ಪರಿಣಾಮಗಳು ಇಲ್ಲವಾದರೂ ಯಾವುದು ಯಾವುದಕ್ಕಿಂತ ಮೊದಲು ಇರುವುದೋ ಅದೇವೇ ಅದಕ್ಕೆ ಕಾರಣವು. ಯಾವುದು ಯಾವುದಕ್ಕಿಂತ ಮೇಲೆ ಇರತಕ್ಕದ್ದೋ ಅದೇ ಅದಕ್ಕೆ ಕಾರ್ಯವು ಎನ್ನುವ ಅವಧಾರಣವು ಕೂಡುವುದರಿಂದ ನಿಯಾಮಕವಿಲ್ಲವೆನ್ನುವುದು ಅಸಿದ್ಧವೆಂದರೆ ಕಾರ್ಯನಿಯಮವನ್ನು ನಿರಾಕರಿಸುತ್ತಾರೆ.) ಇದಂ=ಈನೀಲವು, ಅಸ್ಯೈವ=ಈ ನೀಲಕ್ಕೇನೇ, ಕಾರಣಂ=ಕಾರಣವು. ಪೀತಕ್ಕೆ ಅಲ್ಲ. ಇತಿ=ಈಪ್ರಕಾರ, (ನೀಲಕ್ಕೆ ನೀಲಕಾರ್ಯ ತ್ವವು) ನಿತ್ಯವಿನಾಶಿತ್ವೇ = ನಿರನ್ವಯವಾಗಿ ವಿನಾಶೋತ್ಪಾದವಾಗುತ್ತದೆನ್ನುವ ಪಕ್ಷದಲ್ಲಿ, ಕೇನ ಮಾನೇನ=ಯಾವ ಪ್ರಮಾಣದಿಂದ, ಗಮ್ಯತೇ = ತಿಳಿಯಲ್ಪಡುತ್ತದೆ. (ಯಾವುದರಿಂದಲೂ ತಿಳಿಯಲ್ಪಡುವುದಿಲ್ಲ.) (ಪಶ್ಚಾದ್ಭಾವಮಾತ್ರವು ನೀಲದಿಂದ ಇದ್ದಂತೆಯೇ ಪೀತದಿಂದಲೂ ಇರು ತ್ತದೆ.) (ಕಾರಣನಿಯಮವನ್ನು ಕೂಡ ತಿರಸ್ಕರಿಸುತ್ತಾರೆ) ಇದಂ=ಈ ನೀಲವು, ಅಮುಷ್ಮಾತ್= ಈ ಪೀತದ್ದೆಶೆಯಿಂದ, ನ ಜಾಯತೇ=ಹುಟ್ಟುವುದಿಲ್ಲ. (ಮತ್ತೆ ನೀಲದಿಂದಲೇ) ಇತ್ಯತ್ರಾಪಿ= ನೀಲಕ್ಕೆ ಕಾರಣತ್ವನಿಶ್ಚಯದಲ್ಲಿಯೂ ಕೂಡ, ಕಾರಣಂ=ಪ್ರಮಾಣವು, ನಾಸ್ತಿ=ಇಲ್ಲ. ನೀಲಕ್ಕೆ ಹೇಗೆ ನೀಲಕ್ಕಿಂತ ಪೂರ್ವಭಾವಿತ್ವವಿದೆಯೋ ಹಾಗೆಯೇ ಪೀತಕ್ಕೂ ಕೂಡ ನೀಲಕ್ಕಿಂತ ಪೂರ್ವ ಭಾವಿತ್ವವು ಇದೆ. (ಹಾಗಾದರೆ ಹೇಗೆ ನಿಮಗೆ ಸಮವಾಯ ಪರಿಣಾಮಗಳು ಇಲ್ಲವಾದರೂ ಕುವಿಂದ ಪಟಗಳಿಗೆ ಕಾರ್ಯಕಾರಣಭಾವವು ನಿಶ್ಚಿತವಾಗುತ್ತದೋ ಹಾಗೆಯೇ ನನಗೂ ಆಗು ವುದು, ಎಂದರೆ 'ಇದಮಸ್ಯೈವ ಕಾರಣಂ' ಇತ್ಯಾದಿ ಆತ್ಮನಿಗೆ ನಿತ್ಯವಿನಾಶಿತ್ವವಿದೆ ಎನ್ನುವ ಪಕ್ಷ ದಲ್ಲಿ ಇದು ಇದಕ್ಕೆ ಕಾರಣವೆನ್ನುವ ನಿಶ್ಚಯವು ಕೂಡಲಿಕ್ಕಿಲ್ಲ. ನಮ್ಮ ಮತದಲ್ಲಿ ನಿಮಿತ್ತಕಾರ ಣಕ್ಕೂ ಕಾರ್ಯಕ್ಕೂ ಕಾರ್ಯಕಾರಣಭಾವಾವಧಾರಣವು ಅನನ್ಯಥಾಸಿದ್ಧವಾದ ಅನ್ವಯವ್ಯತಿ ರೇಕದಿಂದ ಕೂಡಬಹುದು. ಬೌದ್ಧರ ಮತದಲ್ಲಿ ಕೂಡಲಿಕ್ಕಿಲ್ಲ. ನಾವು ಅನ್ವಯವ್ಯತಿರೇಕಾನು ಸಂಧಾನವುಳ್ಳ ಆತ್ಮನಿಗೆ ಸ್ಥಾಯಿತ್ವವನ್ನು ಒಪ್ಪುತ್ತೇವೆ. ಸೌಗತರು ಆತ್ಮನಿಗೆ ಕ್ಷಣಿಕತ್ವವನ್ನು ಒಪ್ಪಿರುತ್ತಾರೆ. ಅಂತಹ ಕ್ಷಣಿಕಾತ್ಮನು ಕಾರಣತ್ವನಿಶ್ಚಾಯಕವಾದ ಅನ್ವಯವ್ಯತಿರೇಕಾನು ಸಂಧಾನವುಳ್ಳವನೆಂದು ಹೇಳಲಿಕ್ಕೆ ಬರುವುದಿಲ್ಲ ॥ ೧೮೭ ॥ ೧೮೮ ॥ ೧೯೯ ॥

(1) ಹೀಗೆ ಸಮುದಾಯವನ್ನು ನಿರಾಕರಿಸಿ ಸರ್ವಕ್ಕೂ ಕ್ಷಣಿಕತ್ವವನ್ನು ಈಗ ಪ್ರಮಾಣವಿಲ್ಲದಿರುವುದರಿಂದಲೂ ಪ್ರಮಾಣವಿರೋಧವಿದ್ದುದರಿಂದಲೂ ತಿರಸ್ಕರಿಸುವುದಕ್ಕಾಗಿ ಮೇಲಿನ ಗ್ರಂಥವು. ಹೇಗೆಂದರೆ— ಕೇವಲವಾಗಿ ಸಮುದಾಯವು ಕೂಡುವುದಿಲ್ಲವೆಂದಲ್ಲ. ಮತ್ತೆ ಸರ್ವಕ್ಕೂ ಕ್ಷಣಿಕತ್ವವೂ ಕೂಡುವುದಿಲ್ಲ. ಕ್ಷಣಿಕತ್ವದಲ್ಲಿ ಪ್ರಮಾಣವಿಲ್ಲ. (2) ಹಾಗಾದರೆ, ಪ್ರತ್ಯಕ್ಷವು ಅರ್ಥಗಳಿಗೆ ಕ್ಷಣಿಕತ್ವವನ್ನು ತಿಳಿಸಿಕೊಡುತ್ತದೆ. ಅದಾದರೂ ವರ್ತಮಾನಮಾತ್ರವನ್ನು ಗ್ರಹಿಸತಕ್ಕದ್ದು ಅರ್ಥಕ್ಕೆ ವರ್ತಮಾನಮಾತ್ರಕ್ಷಣಸಂಬಂಧಿಯಾದ ಸತ್ತಾವನ್ನು ವಿಷಯೀಕರಿಸುತ್ತದೆ. ಪೂರ್ವೋತ್ತರಕ್ಷಣಸಂಬಂಧಿಯಾದ ಸತ್ತಾವನ್ನು ವಿಷಯೀಕರಿಸುವುದಿಲ್ಲ. ಆದುದರಿಂದ ಅರ್ಥಗಳಿಗೆ ಕ್ಷಣಿಕತ್ವವು ಅಪ್ರಾಮಾಣಿಕವು ಹೇಗೆ? ಎಂದರೆ— ಕ್ಷಣಿಕತ್ವವೆಂದರೆ ಎಂತಹುದು. 'ಕ್ಷಣಸಂಬಂಧಿಸತ್ವವೋ ೨ ಕ್ಷಣಮಾತ್ರದಲ್ಲಿಯೇ ಉತ್ಪತ್ತಿವಿನಾಶವಿರುವಿಕೆಯೋ, ೩ ಅಥವಾ ಕ್ಷಣಾಂತರಕ್ಕೆ ಅಸಂಬಂಧಿಯಾಗಿ ಇದ್ದು ಏಕಕ್ಷಣಸಂಬಂಧಿತ್ವವೋ, ಇವುಗಳಲ್ಲಿ ಒಂದನೇದ್ದು ಇಷ್ಟವೇ.' ಸ್ಥಾಯಿಯಾದ ಅರ್ಥಕ್ಕೂ ಏಕಕ್ಷಣಸಂಬಂಧಿಯಾದ ಸತ್ತಾವನ್ನು ಸ್ವೀಕರಿಸಿರುತ್ತೇವೆ. ೨ನೇದ್ದನ್ನೂ ೩ನೇದ್ದನ್ನೂ ದೂಷಿಸುತ್ತಾರೆ—

**ಮೂ ॥ ವಿನಾಶೋತ್ಪತ್ತಯಶ್ಚೈವ ನ ದೃಶ್ಯಂತೇ ಸದಾತನಾಃ ।**
**ದೃಶ್ಯತೇ ಪ್ರತ್ಯಭಿಜ್ಞಾತಃ ಸ್ಥಿರತ್ವಂ ಸರ್ವವಸ್ತುಷು ॥ ೧೯೦ ॥**

ಅ ॥ ಸದಾತನಾಃ=ಪ್ರತಿಕ್ಷಣದಲ್ಲಿರತಕ್ಕ, ವಿನಾಶೋತ್ಪತ್ತಯಃ=ವಿನಾಶೋತ್ಪತ್ತಿಗಳು, ನೈವ ಚ ದೃಶ್ಯಂತೇ=ಕಾಣಲ್ಪಡುವುದೇ ಇಲ್ಲ. ಅಂದರೆ ಪ್ರತ್ಯಕ್ಷವು ಅರ್ಥಗಳಿಗೆ ವರ್ತಮಾನಕಾಲದಲ್ಲಿ ಸತ್ತಾವನ್ನು ವಿಷಯೀಕರಿಸುತ್ತದೆ ಮಾತ್ರವಲ್ಲದೆ ಕ್ಷಣಮಾತ್ರದಲ್ಲಿರತಕ್ಕ ಉತ್ಪತ್ತಿವಿನಾಶಗಳನ್ನು ವಿಷಯೀಕರಿಸುವುದಿಲ್ಲ. ಮತ್ತು ಕ್ಷಣಾಂತರಾಸಂಬಂಧಿತ್ವವನ್ನು ವಿಷಯೀಕರಿಸುವುದಿಲ್ಲ. ತಥಾಚ ಇಂತಹ ಪ್ರತ್ಯಕ್ಷದಿಂದ ಕ್ಷಣಿಕತ್ವವು ಹೇಗೆ ಸಿದ್ಧಿಸುವುದು? (ಹಾಗಾದರೆ ಪ್ರತ್ಯಕ್ಷವು ಅರ್ಥಕ್ಕೆ ಪೂರ್ವೋತ್ತರಕ್ಷಣವೃತ್ತಿತ್ವವನ್ನು ಕೂಡ ೧ ಗ್ರಹಿಸುತ್ತದೋ, ೨ ಇಲ್ಲವೋ, ವರ್ತಮಾನ ಮಾತ್ರ ಗ್ರಾಹಿಯಾದುದರಿಂದ ೧ನೇದ್ದು ಕೂಡಲಾರದು. ೨ನೇ ಕಲ್ಪದಲ್ಲಿ ಪ್ರತ್ಯಕ್ಷದಿಂದ ತೋರದಿರುವುದರಿಂದ ಪೂರ್ವೋತ್ತರಕ್ಷಣಗಳಿಗೆ ಅಸತ್ವವು ಸಿದ್ಧಿಸುವುದರಿಂದ ಕ್ಷಣಿಕತ್ವವೇ ಸಿದ್ಧವಾಗುತ್ತದೆ. ಎಂದರೆ— ೨ನೇದ್ದನ್ನು ಅಂಗೀಕರಿಸುತ್ತೇವೆ. ಯೋಗ್ಯವಾಗಿದ್ದು ತೋರದಿರುವುದೇ ಅಸತ್ವವನ್ನು ತಿಳಿಸಿಕೊಡುವುದರಿಂದ, ಪೂರ್ವೋತ್ತರಕ್ಷಣಕ್ಕೆ ಅಸತ್ವವೇ ಸಿದ್ಧವಾಗದಿರುವುದರಿಂದ ಹಿಂದೆ ಹೇಳಿದ ರೀತಿಯಿಂದ ಕ್ಷಣಿಕತ್ವವು ಸಿದ್ಧವಾಗುತ್ತದೆಂದು ಹೇಳಕೂಡದು. ವರ್ತಮಾನ ಮಾತ್ರ ಗ್ರಾಹಿತ್ವವನ್ನು ಪರರೇ ಹೇಳಿರುವುದರಿಂದ ಪೂರ್ವೋತ್ತರಕಾಲವೃತ್ತಿತ್ವವು ಪ್ರತ್ಯಕ್ಷ ಯೋಗ್ಯವಲ್ಲ. (3) ಅಥವಾ ೧ನೇ ಪಕ್ಷವೇ ಆಗಲಿ. ಕೆಲವು ಪ್ರತ್ಯಕ್ಷಕ್ಕೆ ವರ್ತಮಾನಮಾತ್ರ ಗ್ರಾಹಿತ್ವವಿದ್ದರೂ 'ತದೇವೇದಂ' ಎನ್ನುವ ಪ್ರತ್ಯಭಿಜ್ಞಾರೂಪವಾದ ಪ್ರತ್ಯಕ್ಷಕ್ಕೆ ವರ್ತಮಾನಮಾತ್ರ ಗ್ರಾಹಿತ್ವವಿಲ್ಲವೆನ್ನುತ್ತಾರೆ.) ಪ್ರತ್ಯಭಿಜ್ಞಾತಃ=ತದೇವೇದಂ ಎನ್ನುವ ಪ್ರತ್ಯಭಿಜ್ಞೆಯಿಂದ, ಸರ್ವವಸ್ತುಷು=ಎಲ್ಲಾ ವಸ್ತುಗಳಲ್ಲಿ, ಸ್ಥಿರತ್ವಂ=ಒಂದಕ್ಕೇನೇ ಅನೇಕ ಕ್ಷಣಸಂಬಂಧಿತ್ವವು, ದೃಶ್ಯತೇ=ವಿಷಯೀಕರಿಸಲ್ಪಡುತ್ತದೆ. ಅಂತೂ ಪ್ರತ್ಯಕ್ಷದಿಂದ ಕ್ಷಣಿಕತ್ವವು ಸಿದ್ಧಿಸುವುದಿಲ್ಲವೆಂದು ಇಷ್ಟೇ ಅಲ್ಲ. ಮತ್ತೆ ಸ್ಥಾಯಿತ್ವವು ಪ್ರತ್ಯಕ್ಷದಿಂದ ಸಿದ್ಧವಾಗುತ್ತದೆ, ಎಂದು ಹೇಳಿದುದರಿಂದ ಪರಪಕ್ಷದಲ್ಲಿ ಪ್ರಮಾಣವಿರೋಧವೂ, ತಮ್ಮ ಪಕ್ಷದಲ್ಲಿ ಪ್ರಮಾಣಸದ್ಭಾವವೂ ಹೇಳಲ್ಪಟ್ಟಿತು. ॥ ೧೯೦ ॥

ಪ್ರತ್ಯಕ್ಷವು ಬಾಧಕವಾಗದೆ ಇದ್ದಾಗ್ಯೂ ಅನುಮಾನವು ಬಾಧಕವು ಆಗುವುದು ಎಂದು ಶಂಕಿಸುತ್ತಾರೆ.

ಸೂ || ಫಲಾದೀನಾಂ ವಿಶೇಷೇಣ ಸರ್ವತ್ರಾಪ್ಯನುಮೀಯತೇ || ೧೯೧ ||
ಸತ್ವೇನ ಕ್ಷಣಿಕತ್ವಂ ಚೇದಾಕಾಶಸ್ಯಾವಿಶೇಷತಃ ।
ಅವಿಶೇಷೋऽಖಿಲಸ್ಯಾಪಿ ಸತ್ವಾತ್ಕಿಂ ನಾನುಮೀಯತೇ || ೧೯೨ ||

ಅ || ಫಲಾದೀನಾಂ =ಫಲ, ದೇಹದೀಪಾದಿಗಳಿಗೆ, ವಿಶೇಷೇಣ=ಪರಿಮಾಣಭೇದದಿಂದ, ಕ್ಷಣಿಕತ್ವಂ=ಕ್ಷಣಿಕತ್ವವು, ಅನುಮೀಯತೇ=ಅನುಮೇಯಿಸಲ್ಪಡುತ್ತದೆ. ತತಃ=ಆ ದೃಷ್ಟಾಂತದಿಂದ, ಸರ್ವತ್ರಾಪಿ=ಫಲಾದಿವ್ಯತಿರಿಕ್ತವಾದ ವಸ್ತುವಿನಲ್ಲಿಯೂ, ಸತ್ವೇನ=ಸತ್ವರೂಪವಾದ ಹೇತುವಿನಿಂದ, ಕ್ಷಣಿಕತ್ವಂ=ಕ್ಷಣಿಕತ್ವವು, ಅನುಮೀಯತೇ ಚೇತ್ = ಅನುಮೇಯಿಸಲ್ಪಡುವುದಾದರೆ, ಆಕಾಶಸ್ಯ=ಆಕಾಶಕ್ಕೆ, ಅವಿಶೇಷತಃ=ಪೂರ್ವೋತ್ತರಕ್ಷಣಗಳಿಗೆ ಭೇದವಿಲ್ಲದಿರುವುದರಿಂದ, ಅವಿಶೇಷಃ=ಪೂರ್ವೋತ್ತರಕ್ಷಣಗಳಲ್ಲಿ ಭೇದರಾಹಿತ್ಯವು, ಅಖಿಲಸ್ಯಾಪಿ=ವಿಪ್ರತಿಪನ್ನವಾದುದೆಲ್ಲಾದಕ್ಕೂ, ಸತ್ವಾತ್=ಸತ್ವದ್ದೆಶೆಯಿಂದ, ಕಿಂ=ಯಾವುದಕ್ಕಾಗಿ, ನಾನುಮೀಯತೇ=ಅನುಮೇಯಿಸಲ್ಪಡುವುದಿಲ್ಲ. ಅಥವಾ ಆಕಾಶಸ್ಯ=ಆಕಾಶಕ್ಕೆ, ಅವಿಶೇಷತಃ=ಪರಿಮಾಣಭೇದವು ಇಲ್ಲದಿರುವುದರಿಂದ, ಆ ದೃಷ್ಟಾಂತದಿಂದ, ಅಖಿಲಸ್ಯಾಪಿ = ಎಲ್ಲಾಫಲಾದಿಗಳಿಗೂ, ಅವಿಶೇಷಃ= ಪೂರ್ವೋತ್ತರಕಾಲಗಳಲ್ಲಿ ಪರಿಮಾಣಭೇದಾಭಾವವು, ಸತ್ವಾತ್ = ಸತ್ವದ್ದೆಶೆಯಿಂದ, ಕಿಂ= ಯಾವುದಕ್ಕಾಗಿ, ನಾನುಮೀಯತೇ = ಅನುಮೇಯಿಸಲ್ಪಡುವುದಿಲ್ಲ.

ತಾ || ನ್ಯಾಯಸುಧಾ— (1) 'ಯತ್ ಸತ್ ತತ್ ಕ್ಷಣಿಕಂ ಯಥಾಫಲಾದಿ ಸಂತಶ್ಚ ಪಂಚಸ್ಕಂಧಾಃ' ಯಾವುದು ಸತ್ತಾಗಿದೆಯೋ ಅದು ಕ್ಷಣಿಕವು ಫಲಾದಿಗಳಂತೆಯೇ ಪಂಚಸ್ಕಂಧಗಳೂ ಸತ್ತಾಗಿವೆ ಎನ್ನುವ ಅನುಮಾನವು ಸ್ಥಿರತ್ವವಿಷಯಕವಾದ ಪ್ರತ್ಯಭಿಜ್ಞೆಗೆ ಬಾಧಕವಾಗುವುದು. ಫಲಾದಿ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವಿಲ್ಲ (2) 'ಯದ್ವಿರುದ್ಧಪರಿಮಾಣಂತತ್ ನಾನಾವ್ಯಕ್ತಂ ಯಥಾಘಟಪಟೌ' ಯಾವುದು ವಿರುದ್ಧಪರಿಮಾಣವುಳ್ಳದ್ದೋ ಅದು ಭಿನ್ನಭಿನ್ನವಾಗಿಕಂಡದೆ ಘಟಪಟಗಳಂತೆಯೇ, 'ವಿರುದ್ಧಪರಿಮಾಣಂ ಚ ಫಲಾದಿಕಂ ಪೂರ್ವೋತ್ತರಕ್ಷಣಯೋಃ' ಪೂರ್ವೋತ್ತರಕ್ಷಣಗಳಲ್ಲಿ ಫಲಾದಿಗಳು ವಿರುದ್ಧಪರಿಮಾಣವುಳ್ಳದ್ದು, ಎನ್ನುವ ಅನುಮಾನದಿಂದ ಫಲಾದಿಗಳಿಗೆ ಕ್ಷಣಿಕತ್ವವು ಸಿದ್ಧಿಸುತ್ತದೆ. ಎಂದರೆ, ಪರಿಹರಿಸುತ್ತಾರೆ. 'ಯತ್ ಸತ್ ತತ್ ಅಕ್ಷಣಿಕಂ ಯಥಾಕಾಶಃ ಸಚ್ಚನೀಲಾದಿ' ಯಾವುದು ಸತ್ತೋ ಅದು ಅಕ್ಷಣಿಕವು ಆಕಾಶದಂತೆ, ನೀಲಾದಿಗಳೂ ಸತ್ತಾಗಿವೆ ಎನ್ನುವ ಪ್ರತ್ಯನುಮಾನದಿಂದ ಪ್ರತಿರುದ್ಧವಾಗಿರುವುದರಿಂದ ಕ್ಷಣಿಕತ್ವಸಾಧಕವಾದ ನಿಮ್ಮ ಅನುಮಾನಕ್ಕೆ ಆಭಾಸತ್ವವಿದ್ದ ಪ್ರಯುಕ್ತ ಸ್ಥಿರತ್ವಸಾಧಕಪ್ರತ್ಯಭಿಜ್ಞಾಬಾಧಕತ್ವವು ಕೂಡುವುದಿಲ್ಲ. ಆಕಾಶರೂಪ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವಿಲ್ಲ. **'ಆಕಾಶೋ ದ್ವೌ ನಿರೋಧೌ ಚ ನಿತ್ಯಂ ತ್ರಯಮಸಂಸ್ಕೃತಂ'** ಎಂದು ಪರರೇ ಆಕಾಶಕ್ಕೆ ಸ್ಥಾಯಿತ್ವವನ್ನು ಅಂಗೀಕರಿಸಿರುವರು. ಮತ್ತು ಕ್ಷಣಿಕತ್ವಸಾಧಕವಾದ ಪರಿಮಾಣಭೇದಾದಿಗಳೂಕೂಡ ಆಕಾಶದಲ್ಲಿ ಇಲ್ಲ. (3) ನೀನು ಹೇಳಿದ ಕ್ಷಣಿಕತ್ವಸಾಧಕವಾದ ಅನುಮಾನವು ಪ್ರತ್ಯಭಿಜ್ಞೆಗೆ ಬಾಧಕವಾಗಲು ಯೋಗ್ಯವಾಗುವುದಿಲ್ಲ. ಅನುಮಾನವು ಪ್ರತ್ಯಕ್ಷಕ್ಕಿಂತ ದುರ್ಬಲವಾಗಿರುವುದರಿಂದ ಪ್ರತ್ಯಕ್ಷದಿಂದ ಬಾಧ್ಯವಾಗಿದೆ. ಇಲ್ಲವಾದರೆ 'ಫಲಾದಿಕಂ ಪರಿಮಾಣಭೇದರಹಿತಂ ಸತ್ವಾದಾಕಾಶವತ್' ಫಲಮೊದಲಾದುದು ಪರಿಮಾಣಭೇದವಿರಹಿತವಾದುದು, ಸತ್ವವಿದ್ದಪ್ರಯುಕ್ತ ಆಕಾಶದಂತೆ ಎಂದೂ ಅನುಮಾನವು ಕೂಡಬಹುದು. ಈ ಅನುಮಾನಕ್ಕೆ ಪ್ರತ್ಯಕ್ಷಬಾಧ ಹೊರತು ಯಾವ ದೋಷವೂ ಇಲ್ಲ. ತಥಾಚ ದೃಷ್ಟಾಂತದಲ್ಲಿ ಕ್ಷಣಿಕತ್ವಕ್ಕೆ ಸಾಧಕವಾದುದು ಅಸಿದ್ಧವಾಗಿರುವುದರಿಂದ ಸಾಧ್ಯ

ವೈಕಲ್ಯವು ಬರುವುದು. ಆದುದರಿಂದ ಪ್ರತ್ಯಕ್ಷವಿರೋಧದಿಂದಲೇ ಈ ಅನುಮಾನಕ್ಕೆ ಅಪ್ರಾಮಾಣ್ಯವು ಇಲ್ಲವಾದರೆ ಅನ್ಯೋನ್ಯಾಶ್ರಯತ್ವವು ಪ್ರಸಕ್ತವಾಗುವುದು ಎಂದೇ ಹೇಳಬೇಕು. ಅದು ಪ್ರಕೃತದಲ್ಲಿಯೂ ಸಮವೇ. ಇದರಿಂದ 'ಆಕಾಶೇಚಾವಿಶೇಷಾತ್' ಎನ್ನುವ ಸೂತ್ರವು ವ್ಯಾಖ್ಯಾತವಾಯಿತು. (4) ಕ್ಷಣಿಕತ್ವಸಾಧಕವಾದ ಅನುಮಾನಕ್ಕೆ ಸತ್ಪ್ರತಿಪಕ್ಷತ್ವವನ್ನು ಬಾಧಿತವಿಷಯತ್ವವನ್ನು ಹೇಳತಕ್ಕವನಿಂದ ಆಕಾಶದಲ್ಲಿ ವ್ಯಭಿಚಾರವೂ ಸೂಚಿತವಾಯಿತು. (5) ನಿಮ್ಮ ಅನುಮಾನಕ್ಕೂ ಫಲಾದಿಗಳಿಂದ ವ್ಯಭಿಚಾರವೊದು ಹೇಳಕೂಡದು. ಅಲ್ಲಿಯೂ ಕ್ಷಣಿಕತ್ವವು ಇಲ್ಲವೆಂದು ಹೇಳುವೆವು ॥ ೯೧ ॥ ೯೨ ॥

ಆಕಾಶಕ್ಕೆ ಸತ್ವವಿರುತ್ತಿದ್ದರೆ ಅಕ್ಷಣಿಕತ್ವವು ಬರುತ್ತಿತ್ತು. ಆಕಾಶಕ್ಕೆ ಸತ್ವವೇ ಇಲ್ಲ. ಆಕಾಶಕ್ಕೆ ಮೂರ್ತಾಭಾವರೂಪತ್ವವಿದೆ. ಭಾವತ್ವವೇ ಇಲ್ಲಿ ಸತ್ವವೊದು ವಿವಕ್ಷಿತವಾಗಿದೆ. ಸಸ್ವರೂಪತ್ವವೇ ಸತ್ವವೆಂದು ಹೇಳುವುದಾದರೂ ಅಭಾವವು ನಿಃಸ್ವರೂಪವೆಂದಂಗೀಕೃತವಾಗಿದೆ ಎಂದಾಶಂಕಿಸಿ ಹೇಳುತ್ತಾರೆ.

**ಮೂ ॥ ಯದ್ಯಾಕಾಶಸ್ಯ ಸತ್ವಂ ನ ಕುತ ಏವ ನರಾದಿಷು ।**
**ಸಧರ್ಮಿಪ್ರತಿಯೋಗಿತ್ವಮಭಾವಸ್ಯ ನಿಯಾಮಕಂ ॥ ೯೩ ॥**
**ತೌ ವಿನಾ ನಹ್ಯಭಾವಶ್ಚ ಕ್ವಚಿದ್ದೃಷ್ಟಃ ಕದಾಚನ ।**
**ಅಧರ್ಮಿ ಪ್ರತಿಯೋಗಿತ್ವಮಾಕಾಶಸ್ಯಾವಗಮ್ಯತೇ ॥ ೯೪ ॥**
**ಸ್ವೀಕಾರತ್ಯಾಗತೋದೃಷ್ಟದೃಷ್ಟಯೋಃ ಸರ್ವವಸ್ತುಷು ।**
**ಗುಣಾನುನತ್ತ ಏವಾಸೌ ವಿದಧಾತ್ಯಧಿಕಂ ಪುನಃ ॥ ೯೫ ॥**

ಅ ॥ ಯದಿ=ಯಾವ ಪಕ್ಷದಲ್ಲಿ, ಆಕಾಶಸ್ಯ=ಆಕಾಶಕ್ಕೆ, ಸತ್ವಂ=ಸತ್ವವು, ನ= ಇಲ್ಲವೋ, ನರಾದಿಷು = ಮನುಷ್ಯರೇ ಮೊದಲಾದವರಲ್ಲಿ ಕುತ ಏವ = ಹೇಗೆ ತಾನೇ ಬರುವುದು. (ಅಂದರೆ (೧) ಆಕಾಶಕ್ಕೆ ಸತ್ವವಿಲ್ಲವೆಂದಂಗೀಕರಿಸಿ, ಪ್ರತ್ಯನುಮಾನದಲ್ಲಿಯೂ ಅತಿಪ್ರಸಂಗಾನುಮಾನದಲ್ಲಿಯೂ ದೃಷ್ಟಾಂತಕ್ಕೆ ಸಾಧನವೈಕಲ್ಯವೂ ತನ್ನ ಅನುಮಾನಕ್ಕೆ ವ್ಯಭಿಚಾರಾಭಾವವೂ ಹೇಳಲ್ಪಡುವುದಾದರೆ ಆಗ ದೇಹಾದಿಗಳಲ್ಲಿ ಸತ್ವವು ಹೇಗೆ ತಾನೇ ಸಿದ್ಧವಾಗಬಹುದು ಎಂದು ಹೇಳುತ್ತೇವೆ. ತಥಾ ಚ ಪರಕೀಯ ದೃಷ್ಟಾಂತಕ್ಕೂ ಸಾಧನವೈಕಲ್ಯವು ಬರುವುದು. (೨) ವಿಧಿಮುಖ ಪ್ರತ್ಯಯವೇದ್ಯವಾಗಿರುವುದರಿಂದ ದೇಹಾದಿಗಳಿಗೆ ಭಾವತ್ವವೂ, ಪ್ರಮಾವಿಷಯತ್ವವಿದ್ದುದರಿಂದ ಸತ್ವವೂ ಹೇಳಲ್ಪಡುವುದಾದರೆ ಅದು ಆಕಾಶದಲ್ಲಿಯೂ ಸಮಾನವೇ.) (ಪ್ರಮಾಣಾಂತರದಿಂದ ಆಕಾಶಕ್ಕೆ ಅಭಾವತ್ವವನ್ನು ನಿವಾರಿಸುವುದಕ್ಕಾಗಿ ಉಪೋದ್ಘಾತವನ್ನು ಹೇಳುತ್ತಾರೆ.) ಸಧರ್ಮಿಪ್ರತಿಯೋಗಿತ್ವಂ = ಎಲ್ಲಿ ಅಭಾವವು ಇದೆಯೋ ಅದು ಧರ್ಮಿಯು, ಯಾವುದರ ಅಭಾವವೋ ಅದು ಅದಕ್ಕೆ ಪ್ರತಿಯೋಗಿಯು, ಆ ಉಭಯವತ್ವವು, ಅಭಾವಸ್ಯ = ಅಭಾವಕ್ಕೆ, ನಿಯಾಮಕಂ = ವ್ಯಾಪಕವು, (ಅಂದರೆ ಯಾವುದು ಅಭಾವವೋ, ಅದೆಲ್ಲಾ ಧರ್ಮಿಪ್ರತಿಯೋಗಿಗಳಿಂದ ಕೂಡಿದ್ದೇ ಆಗಿದೆ. ಉದಾ = ಘಟಾದ್ಯಭಾವವು. ಅದು ಭೂತಲ ಮೊದಲಾದ ಧರ್ಮಿಯಿಂದಲೂ ಘಟ ಮೊದಲಾದ ಪ್ರತಿಯೋಗಿಯಿಂದಲೂ ಕೂಡಿದ್ದೇ ಆಗಿದೆ.) (ಹಾಗಾದರೆ ಇದು ಕೂಡುವುದಿಲ್ಲ. ಅಭಾವಕ್ಕೆ ಧರ್ಮಿಪ್ರತಿಯೋಗಿ ಸಾಹಿತ್ಯನಿಯಮವು ೧ ದೇಶದಿಂದ ಆಗುವುದೋ, ೨ ಕಾಲದಿಂದಲೋ? ೧ನೇ ಕಲ್ಪದಲ್ಲಿ ಧರ್ಮಿಯಿಂದ ಸಮಾನದೇಶತ್ವವಿಲ್ಲ. ಭೂತಲವು ಸ್ವಾಶ್ರಯದಲ್ಲಿಯೂ ಅಭಾವವು

ಭೂತಲದಲ್ಲಿಯೂ ಇರುತ್ತದೆ. ಪ್ರತಿಯೋಗಿಯಿಂದಲಾದರೂ ವಿರುದ್ಧವೇ. ೨ನೇದ್ದು ಯದ್ಯಪಿ ಧರ್ಮಿಯಿಂದ ಕಥಂಚಿತ್ ಸಮಾನದೇಶತ್ವವು ಕೂಡಬಹುದು. ಆದಾಗ್ಯೂ ಪ್ರತಿಯೋಗಿಯಿಂದ ಸಮಾನದೇಶತ್ವವು ಕೂಡುವುದೇ ಇಲ್ಲ. ಪ್ರಾಗಭಾವ ಪ್ರಧ್ವಂಸಾಭಾವಗಳಿಗೆ ಪ್ರತಿಯೋಗಿ ಭಿನ್ನಕಾಲತ್ವನಿಯಮವಿದೆ ಎನ್ನುವ ಆಶಂಕೆಯನ್ನು ಪರಿಹರಿಸುತ್ತಾ ಅಭಾವಕ್ಕೆ ಧರ್ಮಿಪ್ರತಿಯೋಗಿಸಾಹಿತ್ಯವ್ಯಾಪ್ಯತ್ವವನ್ನು ಉಪಪಾದಿಸುತ್ತಾರೆ.) ತೌ ವಿನಾ=ಧರ್ಮಿಪ್ರತಿಯೋಗಿಗಳ ಜ್ಞಾನವಿಲ್ಲದೆ, ಅಭಾವಶ್ಚ=ಅಭಾವವಾದರೂ, ಕ್ವಚಿತ್=ಎಲ್ಲಿಯೂ, ಕದಾಚನ=ಯಾವಾಗಲೂ, ನ ಹಿ ದೃಷ್ಟಃ=ಕಾಣಲ್ಪಡಲೇ ಇಲ್ಲ ಚ=ಅಭಾವವು ಕಾಣಲ್ಪಡತಕ್ಕದು ಧರ್ಮಿಪ್ರತಿಯೋಗಿಗಳು ಪ್ರತೀತಿಯಾಗುವಾಗಲೇ ಕಾಣಲ್ಪಡುತ್ತದೆ. ಹಿ=ಅನ್ವಯವ್ಯತಿರೇಕಗಳೆರಡೂ ಪ್ರಸಿದ್ಧಗಳು. (ಹೀಗೆ ಅಭಾವಕ್ಕೆ ಧರ್ಮಿಪ್ರತಿಯೋಗಿಸಾಹಿತ್ಯವು ಪ್ರತೀತಿಯಲ್ಲಿ ವ್ಯಾಪಕವಾದರೆ ಇದರಿಂದ ಏನಾಯಿತೆಂದರೆ)ಅಧರ್ಮಿಪ್ರತಿಯೋಗಿತ್ವಂ=ಧರ್ಮಿಪ್ರತಿಯೋಗಿಸಾಹಿತ್ಯಾಭಾವವು, ಆಕಾಶಸ್ಯ= ಆಕಾಶಕ್ಕೆ, ಅವಗಮ್ಯತೇ=ತಿಳಿಯಲ್ಪಡುತ್ತದೆ. (ಅಂದರೆ ಪ್ರತೀತಿಯಲ್ಲಿ ಅಭಾವಕ್ಕೆ ವ್ಯಾಪಕವಾದ ಸಧರ್ಮಿಪ್ರತಿಯೋಗಿತ್ವವು ಆಕಾಶದಿಂದ ವ್ಯಾವೃತ್ತವಾಗುತ್ತದೆ. ಏಕೆಂದರೆ, ಆಕಾಶ ಎಂದೇ ಅವಗತವಾಗುತ್ತದೆ. 'ಅತ್ರ ಇದಂ ನಾಸ್ತಿ' ಎಂದು ಆಕಾಶವು ಅವಗತವಾಗುವುದಿಲ್ಲ.) (ಎರಡು ಸೂತ್ರಗಳ ಅರ್ಥವನ್ನು ಉಪಸಂಹಾರಮಾಡುತ್ತಾರೆ.) ಸರ್ವವಸ್ತುಷು=ಎಲ್ಲಾ ವಸ್ತುಗಳಲ್ಲಿ, ಅದೃಷ್ಟದೃಷ್ಟಯೋಃ ಸ್ವೀಕಾರತ್ಯಾಗತಃ=ಕ್ಷಣಿಕ ಮೊದಲಾದ ಅದೃಷ್ಟದ ಸ್ವೀಕಾರದ್ದೆಶೆಯಿಂದಲೂ, ದೃಷ್ಟವಾದ ಸ್ಥಿರತ್ವಾದಿಗಳ ತ್ಯಾಗದಿಂದಲೂ, ಅಸೌ=ಸೌಗತನು, ಪುನಃ= ಮತ್ತು, ಉನ್ಮತ್ತೇ ಏವ=ಉನ್ಮತ್ತನಲ್ಲಿಯೇ, ಅಧಿಕಂ=ಹೆಚ್ಚಾಗಿ, (ತನ್ನಿಂದ) ಗುಣಾನ್= ಗುಣಗಳನ್ನು, ವಿದಧಾತಿ=ಮಾಡುತಾನೆ (ಅಂದರೆ ಉನ್ಮತ್ತನನ್ನೂ ಕೂಡ ತನ್ನ ದೆಶೆಯಿಂದ ಅಧಿಕ ವಿವೇಕವುಳ್ಳವನನ್ನು ಸ್ಥಾಪಿಸುತ್ತಾನೆ.) ಉನ್ಮತ್ತನು ಸರ್ವತ್ರ ಅಪ್ರಮಿತವಾದುದನ್ನು ಸ್ವೀಕರಿಸುವುದಿಲ್ಲ. ಪ್ರಮಿತವಾದುದನ್ನು ಬಿಡುವುದೂ ಇಲ್ಲ. ॥ ೧೯೩ ॥ ೧೯೪ ॥ ೧೯೫ ॥

ಪರಮಾಣುಗಳಿಂದ ಮಿಲಿತಾಣುರೂಪವಾದ ಅಸದೃಶಕಾರ್ಯಜನನವೇ ಅಯುಕ್ತವೆನ್ನುತ್ತಾರೆ—

## "ಓಂ ಉತ್ತರೋತ್ಪಾದೇ ಚ ಪೂರ್ವನಿರೋಧಾತ್ ಓಂ"

॥ ಸೂ. ೨೦ ॥

ಮೇಲೆ ಆಗತಕ್ಕ ಸ್ವಸದೃಶಕಾರ್ಯವು ಹುಟ್ಟುವ ಸಮಯದಲ್ಲಿಯೇ ಮೊದಲು ಇರುವ ಕಾರಣನಾಶವಾಗುವುದರಿಂದ ಕ್ಷಣಿಕನಾದದಲ್ಲಿ ಕಾರಣಕ್ಕೆ ಸದೃಶಕಾರ್ಯವನ್ನುಂಟುಮಾಡುವುದರಲ್ಲಿಯೇ ಸಾಮರ್ಥ್ಯವಿದ್ದುದರಿಂದ ಕಾರ್ಯವನ್ನುಂಟುಮಾಡಿ ಆಮೇಲೆ ಅದರಲ್ಲಿ ವೈಸಾದೃಶ್ಯವನ್ನುಂಟುಮಾಡುತ್ತದೆಂದು ಹೇಳುವುದು ಅಯುಕ್ತವು.

ಈ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

**ಮೂ ॥ ಉತ್ತರೋತ್ಪತ್ತಿಮಾತ್ರೇಣ ವಿನಾಶಾತ್ಪೂರ್ವವಸ್ತುನಃ ।**
**ನ ಸಂಸ್ಕಾರಾಧಿಕರ್ತೃತ್ವಂ ಚ ಯುಜ್ಯತೇ ಕಸ್ಯಚಿತ್ಕ್ವಚಿತ್ ॥ ೧೯೬ ॥**
**ಆತೋ ಜ್ಞಾತಂ ಮಯೇತ್ಯಾದಿ ನ ಜ್ಞೇಯಮನುಮಾಕುತಃ।**
**ಏಕತ್ವಮನನುಭೂತಿಸ್ಥಂ ತ್ವಕ್ಷಾತ್ಪ್ರನಿಮಾರ್ಗನಿ (ನ) ಕಾ ಭಿದಾ।**
**ಕುತ ಆತ್ಮಾದಿಕೇಷು ಸ್ಯಾದ್ಭಲ್ಯೇವಾನುಭವೋ ಯತಃ ॥ ೧೯೭ ॥**

ಅ ॥ ಉತ್ತರೋತ್ಪತ್ತಿಮಾತ್ರೇಣ=ಮೇಲಿನ ಸದೃಶಕಾರ್ಯದ ಉತ್ಪತ್ತಿಮಾತ್ರದಿಂದಲೇ, ಪೂರ್ವವಸ್ತುನಃ=ಮೊದಲಿನ ವಸ್ತುವಿಗೆ, ವಿನಾಶಾತ್=ವಿನಾಶವಾಗುವುದರಿಂದ, ಕಸ್ಯಚಿತ್=ಯಾವುದೊಂದು ಕಾರಣಕ್ಕೂ, ಕ್ವಚಿತ್=ಯಾವುದೊಂದು ಕಾರ್ಯದಲ್ಲಿಯೂ, ಸಂಸ್ಕಾರಾರ್ಪಕತ್ವಂಚ=ಸಂಸ್ಕಾರಾಧಾಯಕತ್ವವು, ನ ಯುಜ್ಯತೇ=ಕೂಡುವುದಿಲ್ಲ. ಅತಃ=ಆತ್ಮನಿಗೆ ಕ್ಷಣಿಕತ್ವವಿದ್ದುದರಿಂದಲೂ, ಸಂಸ್ಕಾರಾರ್ಪಣವು ಕೂಡದಿರುವುದರಿಂದಲೂ, ಮಯಾ ಜ್ಞಾತಂ ಇತ್ಯಾದಿ, ನ ಜ್ಞೇಯಂ=ಯಾವುದು ಲಿಂಗವು ನನ್ನಿಂದ ಸಾಧ್ಯದಿಂದ ವ್ಯಾಪ್ತಿಯುಳ್ಳದ್ದಾಗಿ ತಿಳಿಯಲ್ಪಟ್ಟಿತೋ ಅದು ಇಲ್ಲಿ ಇದೆ ಎಂದು ತಿಳಿಯಲು ಅಶಕ್ಯವು. (ಆದುದರಿಂದ), ಅನುಮಾ = ಅನುಮಾನವು, (ಆಗಮಾದಿಗಳೂಕೂಡ) ಕುತಃ=ಎಲ್ಲಿಂದ(ಹಾಗಾದರೆ ಸರ್ವಲೋಕಸಿದ್ಧವಾದುದನ್ನು ಅಪಲಾಪ ಮಾಡುವುದಕ್ಕೆ ಕೂಡದಿರುವುದರಿಂದ ಅನುಮಾನಾದಿ ವ್ಯವಹಾರವನ್ನು ಒಪ್ಪಲೇಬೇಕು. ಅದರ ಬಲದಿಂದಲೇ ಅಲೌಕಿಕವಾದಾಗ್ಯೂ ಒಟ್ಟು ಇಲ್ಲವಿದ್ದಕ್ಕೆ ಸಂಸ್ಕಾರಾರ್ಪಕತ್ವವನ್ನು ಕಲ್ಪಿಸುತ್ತೇವೆ ಎಂದರೆ) (ಪೂರ್ವೋತ್ತರಕಾಲಗಳಲ್ಲಿ), ಅನುಭೂತಿಸ್ಥಂ = ಪ್ರತ್ಯಭಿಜ್ಞಾಸಿದ್ಧವಾದ, ಏಕತ್ವಂ= ಏಕತ್ವವನ್ನು, ತ್ಯಕ್ತ್ವಾ=ಬಿಟ್ಟು, ನಿರ್ಮಾನಿಕಾ=ಪ್ರಮಾಣ ಬಾಧಿತವೂ, ಪ್ರಮಾಣವಿರಹಿತವೂ ಆದ, ಭಿದಾ=ಭೇದವು, ಆತ್ಮಾದಿಕೇಷು=ಆತ್ಮಮೊದಲಾದವರಲ್ಲಿ, ಕುತಃ= ಯಾವಕಾರಣದಿಂದ, ಸ್ಯಾತ್=ಅಂಗೀಕರಿಸಲು ಅರ್ಹವಾಗುವುದು. (ಅಂದರೆ ಅನುಮಾನಾದಿ ವ್ಯವಹಾರಾನ್ಯಥಾನುಪಪತ್ತಿಮಾತ್ರದಿಂದ ಅಲೌಕಿಕವನ್ನು ಕಲ್ಪಿಸುವುದೋ?, ಅದವಾ ಆತ್ಮಾದಿಗಳಿಗೆ ಕ್ಷಣಿಕತ್ವವಿದ್ದುದರಿಂದ ಅಲೌಕಿಕತ್ವವನ್ನು ಕಲ್ಪಿಸುವುದೋ? ೧ನೇದ್ದು ಕೂಡಲಾರದು. ಆತ್ಮಾದಿಗಳಿಗೆ ಸ್ಥಾಯಿತ್ವದಿಂದಲೇ ಅನುಮಾನಾದಿ ವ್ಯವಹಾರವು ಕೂಡುತ್ತದೆ. ೨ನೇದ್ದಾದರೂ ಆತ್ಮಾದಿಗಳಿಗೆ ಕ್ಷಣಿಕತ್ವವು ಸಿದ್ಧವಾಗಿದ್ದರೆ ಆಗುತ್ತಿತ್ತು, ಕ್ಷಣಿಕತ್ವವೇ ಸಿದ್ಧವಾಗಲಿಲ್ಲ. ಅದು ಪ್ರಮಾಣ ಬಾಧಿತವೂ, ಪ್ರಮಾಣ ಶೂನ್ಯವೂ ಆಗಿದೆ.) (ಹಾಗಾದರೆ ಪ್ರತ್ಯಭಿಜ್ಞಾನವು ಭ್ರಾಂತಿಯೆಂದು ಹೇಳಲ್ಪಟ್ಟದೆ. ಆದಕಾರಣ ಅದರಿಂದ ಆತ್ಮಾದಿಗಳಿಗೆ ಐಕ್ಯವು ಹೇಗೆ ಸಿದ್ಧಿಸುವುದೆಂದರೆ—) ಯತಃ = ಯಾವಕಾರಣದ್ದೆಸೆಯಿಂದ, ಅನುಭವಃ = ಅನುಭವವು, ಬಲ್ಯೇವ=ಪ್ರಬಲವೇ ಆಗಿದೆಯೋ ಅಂದರೆ ತರ್ಕಬಲದಿಂದ ಅನುಮಾನವು ನಿರವಕಾಶವಾಗಿ ಪ್ರಬಲವಾದಾಗ ಅದರ ವಿರೋಧದಿಂದ ಪ್ರತ್ಯಭಿಜ್ಞಾನವು ಭ್ರಾಂತಿಯಾಗುವುದು. ಯಾವಾಗ ತರ್ಕಕ್ಕೆ ಹಿಂದೆ ಹೇಳಿದ ಪ್ರಕಾರ ಆಭಾಸತ್ವವಿದೆಯೋ, ಆವಾಗ ಕ್ಷಣಿಕತ್ವಾನುಮಾನಕ್ಕೆ ಪ್ರಾಬಲ್ಯವು ಹೇಗೆ ಸಿದ್ಧಿಸುವುದು? ಪ್ರತ್ಯಭಿಜ್ಞೆಗೆ ಅದರಿಂದ ಬಾಧವೂ ಕೂಡ ಹೇಗೆ ಬಂದೀತು? ಅಬಾಧಿತವಾದ ಪ್ರತ್ಯಭಿಜ್ಞಾನುಭವವು ಯಾವ ಕಾರಣದಿಂದ ಪ್ರಬಲವೇ ಆಗಿದೆಯೋ, ಆದುದರಿಂದ ಆತ್ಮಾದಿಗಳಿಗೆ ಏಕತ್ವವು ಅದರಿಂದ ಸಿದ್ಧವಾಯಿತು ॥ ೧೯೬ ॥ ೧೯೭ ॥

ಹಾಗಾದರೆ ಮೇಲಿನದ್ದು ಹುಟ್ಟುವಾಗಲೇ ಮೊದಲಿನದ್ದಕ್ಕೆ ನಾಶವು ಬರಲಿ, ಆದಾಗ್ಯೂ ಮೊದಲಿನದ್ದಕ್ಕೆ ಮೇಲೆ ಇದ್ದುದರಲ್ಲಿ ಸಂಸ್ಕಾರವನ್ನು ಹುಟ್ಟಿಸುವುದಿಲ್ಲ ಎನ್ನುವುದು ಹೇಗೆ ಎಂದರೆ—

**ಮೂ ॥ ಕಾರ್ಯಕಾರಣಯೋಶ್ಚೈಕಕಾಲೀನತ್ವಂ ವಿನಾ ಕಥಂ ॥ ೧೯೮ ॥**
**ಪೂರ್ವಸಂಸ್ಕಾರಯೋಗೀ ಸ್ಯಾದುತ್ತರೋ ನಿಯಮೇನ ಚ ।**
**ಸಂಬದ್ಧಾ ಏವ ಸಂಸ್ಕಾರಮನ್ಯತ್ರಾದಧತೇಽಖಿಲಾಃ ।**
**ಅಸಂಬದ್ಧಃ ಕಥಂ ಪೂರ್ವ ಉತ್ತರೇ ವಾಸನಾಕರಃ ॥ ೧೯೯ ॥**

ಅ || ಕಾರ್ಯಕಾರಣಯೋಶ್ಚ=ಕಾರ್ಯಕಾರಣಗಳಿಗೆ, ಏಕಕಾಲೀನತ್ವಂ=ಏಕಕಾಲೀನತ್ವವನ್ನು, ವಿನಾ=ಹೊರತು, ಕಥಂ=ಹೇಗೆ, ಉತ್ತರಃ=ಮೇಲಿನದ್ದು, ನಿಯಮೇನ=ನಿಯಮದಿಂದ, ಪೂರ್ವಸಂಸ್ಕಾರಯೋಗೀ=ಪೂರ್ವದಿಂದ ಆಹಿತವಾದ ಸಂಸ್ಕಾರದಿಂದ ಕೂಡಿದ್ದು, ಕಥಂ=ಹೇಗೆ, ಸ್ಯಾತ್=ಆಗುವುದು. (ಅಂದರೆ ಮೇಲಿನದ್ದು ಹುಟ್ಟದೊಡನೆಯೇ ಪೂರ್ವದ್ದು ನಾಶವಾಗುವುದರಿಂದ ಕಾರ್ಯಕಾರಣಗಳಿಗೆ ಏಕಕಾಲೀನತ್ವವು ಇಲ್ಲವೆಂದು ಲಭ್ಯವಾಗುತ್ತದೆ. ಏಕಕಾಲೀನತ್ವವಿಲ್ಲದೆ ಪೂರ್ವಾಹಿತಸಂಸ್ಕಾರಯೋಗಿತ್ವವು ಮೇಲಿನದ್ದಕ್ಕೆ ಕೂಡುವುದಿಲ್ಲ. ಅಥವಾ ಏಕಕಾಲೀನತ್ವವಿದ್ದರೇನೇ ಸಂಸ್ಕಾರಾಪಾದಕತ್ವವು ದೃಷ್ಟವಾಗಿದೆ. ಭಿನ್ನಕಾಲೀನತ್ವವಿದ್ದರೆ ದೃಷ್ಟವಾಗಲಿಲ್ಲ ಎಂದು ವ್ಯಾಪ್ತಿಯಿದೆ.) (ಹಾಗಾದರೆ ಏಕಕಾಲೀನತ್ವವಿಲ್ಲವಾದರೂ ಸಂಸ್ಕಾರಾಪಾದಕತ್ವವು ಏಕೆ ಆಗಲಾರದೆಂದರೆ—) (ಯಸ್ಮಾತ್=ಯಾವ ಕಾರಣದ್ದೆಸೆಯಿಂದ) ಅಖಿಲಾಃ=ಎಲ್ಲಾ ಸಂಸ್ಕಾರಾಧಾಯಕಗಳಾದ ಚಂಪಕಕುಸುಮ ಮೊದಲಾದ ಪದಾರ್ಥಗಳು, ಸಂಬದ್ಧಾಏವ=ತೈಲಾದಿಗಳಿಂದ ಸಂಬದ್ಧಗಳಾಗಿಯೇ, ಅನ್ಯತ್ರ=ತೈಲಾದಿಗಳಲ್ಲಿ ಸಂಸ್ಕಾರಂ=ಸಂಸ್ಕಾರವನ್ನು, ಆದಧತೇ=ಉಂಟುಮಾಡುತ್ತವೆ. ಅಸಂಬದ್ಧಗಳಾದವುಗಳು ಸಂಸ್ಕಾರಾಧಾಯಕಗಳು ಆಗುವುದಿಲ್ಲ ಎನ್ನುವ ನಿಯಮವಿದೆ. ಭಿನ್ನಕಾಲದಲ್ಲಿರತಕ್ಕ ವಸ್ತುಗಳಿಗೆ ಸಂಬಂಧವು ಕೂಡಲಾರದು. ಆದುದರಿಂದ) ಅಸಂಬದ್ಧಃ=ಮೇಲೆ ಆಗುವ ವಸ್ತುವಿನಿಂದ ಸಂಬಂಧವಿಲ್ಲದದಿರುವ, ಪೂರ್ವಃ=ಮೊದಲಿನದ್ದು, ಉತ್ತರೇ=ಮೇಲೆ ಇರುವ ವಸ್ತುವಿನಲ್ಲಿ, ಕಥಂ=ಹೇಗೆ, ವಾಸನಾಕರಃ=ಸಂಸ್ಕಾರವನ್ನು ಮಾಡೀತು? (ಅಂದರೆ ಮೇಲೆ ಆಗತಕ್ಕ ವಸ್ತುವಿನಲ್ಲಿ ಸಂಸ್ಕಾರವನ್ನು ಮಾಡಲಾರದು.) || ೯೮ || ೯೯ ||

ಹಿಂದೆ ಹೇಳಿದ ಅರ್ಥವು ಬುದ್ಧಿಯಲ್ಲಿ ಆರೂಢವಾಗುವುದಕ್ಕಾಗಿ ಸಂಗ್ರಹಮಾಡಿ ಹೇಳುತ್ತಾರೆ—

**ಮೂ || ಏಕಕಾಲತಯಾ ಯೋಗಂ ವಿನಾ ಸಂಸ್ಕಾರತಃ ಕಥಂ || ೨೦೦ ||**
**ಕ್ಷಣಮಾತ್ರಮವಸ್ಥಾನಂ ಸ್ವೀಕೃತಂ ಸರ್ವವಸ್ತುಷು ।**
**ಪೂರ್ವಮಧ್ಯಾಪರಕಲಾ ವಿಕಲಃ ಕ್ಷಣ ಇಷ್ಯತೇ || ೨೦೧ ||**

ಅ || ಏಕಕಾಲತಯಾ ವಿನಾ=ಏಕಕಾಲದಲ್ಲಿರೋಣವನ್ನು ಹೊರತು, (ಕಾರ್ಯಕಾರಣಗಳಿಗೆ ಸಂಬಂಧವು ಕೂಡುವುದಿಲ್ಲ.) ಯೋಗಂ ವಿನಾ=ಸಂಬಂಧವಿಲ್ಲದೆ, (ಕಾರಣಕ್ಕೆ ಕಾರ್ಯದಲ್ಲಿ ಸಂಸ್ಕಾರಾಪಾದಕತ್ವವೂ ಕೂಡುವುದಿಲ್ಲ.) ಸಂಸ್ಕಾರತೋ ವಿನಾ=ಸಂಸ್ಕಾರವನ್ನು ಹೊರತು, ಕಥಂ=ಹೇಗೆ, (ಅನುಮಾನಾದಿ ವ್ಯವಹಾರವು.) (ಕಾರಣವು ಕಾರ್ಯವು ಹುಟ್ಟಿದೊಡನೆಯೇ ವಿನಾಶವಾಗುವುದಾದರೆ ಇದಾಗಬಹುದಿತ್ತು. ಅದೇನೇ ಯಾವುದರಿಂದ ಸಿದ್ಧವಾಯಿತೆಂದರೆ) ಸರ್ವವಸ್ತುಷು=ಎಲ್ಲಾ ವಸ್ತುಗಳಲ್ಲಿ, ಕ್ಷಣಮಾತ್ರಂ=ಒಂದು ಕ್ಷಣಮಾತ್ರ, ಅವಸ್ಥಾನಂ = ಅವಸ್ಥಿತಿಯು, ಸ್ವೀಕೃತಂ = (ಬುದ್ಧರಿಂದ) ಸ್ವೀಕರಿಸಲ್ಪಟ್ಟಿದೆ. (ಕಾರಣವು ಒಂದು ಕ್ಷಣದ ಪೂರ್ವಭಾಗದಲ್ಲಿ ಸ್ಥಿತಿಯನ್ನು ಹೊಂದಿದ್ದಾಗಿ, ಮಧ್ಯಭಾಗವಾಗುವಾಗ ಕಾರ್ಯವನ್ನು ಹುಟ್ಟಿಸಿ ಅಪರಭಾಗದಲ್ಲಿ ಸಂಸ್ಕಾರವನ್ನುಂಟುಮಾಡಿ ನಷ್ಟವಾಗುತ್ತದೆಂದು ಅಂಗೀಕರಿಸಿದರೆ ಯಾವ ದೋಷವೂ ಇಲ್ಲವೆಂದಾಶಂಕಿಸಿದರೆ) ಪೂರ್ವಮಧ್ಯಾಪರ ಕಲಾವಿಕಲಃ=ಪೂರ್ವಭಾಗ, ಮಧ್ಯಭಾಗ, ಅಪರಭಾಗ ಎಂದು ಅಂಶವಿಲ್ಲದಿರುವುದು, ಕ್ಷಣಃ = ಕ್ಷಣವು ಇಷ್ಯತೇ=ಬೌದ್ಧರಿಂದ ಅಂಗೀಕರಿಸಲ್ಪಡುತ್ತದೆ.

**ತಾ ॥ ನ್ಯಾಯಸುಧಾ**— (1) 'ಪೂರ್ವಕ್ಷಣಃ ಉತ್ತರಕ್ಷಣೇ ಸಂಸ್ಕಾರಾಧಾಯಕೋ ನ ಭವತಿ ತೇನಾಸಂಬದ್ಧತ್ವಾತ್ ಯೋ ಯೇನಾಸಂಬದ್ಧೋ ನಾಸೌ ತತ್ರ ಸಂಸ್ಕಾರಾಧಾಯಕಃ ಯಥಾ ಸಂಪ್ರತಿಪನ್ನಃ' ಪೂರ್ವಕ್ಷಣವು ಉತ್ತರಕ್ಷಣದಲ್ಲಿ, ಸಂಸ್ಕಾರವನ್ನು ಹುಟ್ಟಿಸುವುದು ಆಗುವುದಿಲ್ಲ. ಅದರಿಂದ ಸಂಬಂಧಿಸಲ್ಪಡದೆ ಇರುವುದರಿಂದ ಯಾವುದು ಯಾವುದರಿಂದ ಸಂಬಂಧಿಸಲ್ಪಡದೆ ಇರುವುದೋ ಅದು ಅಲ್ಲಿ ಸಂಸ್ಕಾರಾಧಾಯಕವಾಗುವುದಿಲ್ಲ. ಸಮ್ಮತವಾದ ಚಂಪಕಾದಿ ಪುಷ್ಪದಂತೆ. (2) ಅಥವಾ ಯಾವುದು ಎಲ್ಲಿ ಸಂಸ್ಕಾರಾಧಾಯಕವೋ ಅದು ಅದರಿಂದ ಸಂಬದ್ಧವಾಗುದಾಗಿಯೇ ದೃಷ್ಟವಾಗಿದೆ, ತೈಲಸಂಬದ್ಧವಾದ ಚಂಪಕದಂತೆ. ಅಸಂಬದ್ಧವಾದುದಕ್ಕೂ ಸಂಸ್ಕಾರಾಧಾಯಕತ್ವವಿದ್ದರೆ ಕಸ್ತೂರಿಯು ಸಂಬದ್ಧವಾದ ವಸ್ತ್ರವನ್ನೆಂಬಂತೆ ತನ್ನಿಂದ ಅಸಂಬದ್ಧವಾದ ಊರಿನಲ್ಲಿರುವ ಎಲ್ಲಾ ವಸ್ತುಗಳನ್ನು ಪರಿಮಳೀಕರಿಸಬೇಕಾದೀತು. (3) 'ಅಸಂಬದ್ಧಶ್ಚ ಪೂರ್ವಃ ಉತ್ತರೇಣ ತತೋ ಭಿನ್ನಕಾಲೀನತ್ವಾತ್ ಸಂಪ್ರತಿಪನ್ನವತ್' ಮೊದಲಿನದ್ದು ಮೇಲಿನಿಂದ ಅಸಂಬದ್ಧವಾಗಿದೆ, ಅದರಿಂದ ಭಿನ್ನಕಾಲೀನತ್ವವಿದ್ದುದರಿಂದ ನಿಶ್ಚಿತವಾದುದರಂತೆ. ಭಿನ್ನಕಾಲದಲ್ಲಿರತಕ್ಕವುಗಳಿಗೂ ಸಂಬಂಧ ಹೇಳಿದರೆ ಹಿಂದೆ ಹೇಳಿದ ಅತಿಪ್ರಸಂಗವು (4) 'ಭಿನ್ನಕಾಲೀನಶ್ಚ ಪೂರ್ವ ಉತ್ತರೇಣ ತದುತ್ಪಾದ ಏವ ನಷ್ಟತ್ವಾತ್ ಸಮ್ಮತವತ್'' ಮೊದಲಿನದ್ದು ಮೇಲಿನಿಂದ ಭಿನ್ನಕಾಲದಲ್ಲಿ ಇರತಕ್ಕದ್ದು, ಅದು ಹುಟ್ಟುವಾಗಲೇ ನಷ್ಟವಾಗಿರುವುದರಿಂದ ಸಮ್ಮತದಂತೆ, (5) ಕಾರ್ಯಕಾರಣಗಳಿಗೆ ಉತ್ತರಕಾಲ ಪೂರ್ವಕಾಲವೃತ್ತಿತ್ವವು ಆವಶ್ಯಕವು. ಯೌಗಪದ್ಯವಿದ್ದರೆ ಕಾರ್ಯಕಾರಣಭಾವವು ಕೂಡಲಾರದು. ಆದುದರಿಂದ ಪೂರ್ವಕ್ಷಣದಲ್ಲಿರತಕ್ಕ ಕಾರಣವು ಕಾರ್ಯಕ್ಷಣದಲ್ಲಿಯೂ ಇದ್ದರೆ ಆಗ ಸರ್ವವಸ್ತುಗಳಿಗೂ ಕ್ಷಣಮಾತ್ರದಲ್ಲಿ ಅಂಗೀಕೃತವಾದ ಅನವಸ್ಥಿತಿಯು ಭಗ್ನವಾಗುವುದು. ಆದುದರಿಂದ ಕ್ಷಣಿಕತ್ವಾಂಗೀಕಾರವೇ ಉತ್ತರೋತ್ಪತ್ತಿಯಲ್ಲಿ, ಪೂರ್ವವಿರೋಧವನ್ನು ತಿಳಿಸಿಕೊಡುತ್ತದೆ ॥ ೨೦೦ ॥ ೨೦೧ ॥

ಕಾರ್ಯಗಳಿಗೆ ಪ್ರತಿಕ್ಷಣದಲ್ಲಿ ಉತ್ಪತ್ತಿಯೇ ಕೂಡುವುದಿಲ್ಲವೆನ್ನುತ್ತಾರೆ—

**"ಓಂ ಅಸತಿ ಪ್ರತಿಜ್ಞೋಪರೋಧೋ ಯೌಗಪದ್ಯಮನ್ಯಥಾ ಓಂ"**
**॥ ಸೂ. ೨೧ ॥**

ಪ್ರತಿಕ್ಷಣದಲ್ಲಿ ಕಾರ್ಯೋತ್ಪತ್ತಿಯು ಯುಕ್ತವಲ್ಲ. ಏಕೆಂದರೆ- ಕಾರಣವು ನಷ್ಟವಾದಮೇಲೆ ಕಾರ್ಯವು ಹುಟ್ಟುತ್ತದೋ, ಕಾರಣವು ಇರುವಾಗಲೇ ಕಾರ್ಯವು ಹುಟ್ಟುತ್ತದೋ? ೧ನೇ ಕಲ್ಪದಲ್ಲಿ ಕಾರಣವಿಲ್ಲವಿರಲು ಕಾರ್ಯೋತ್ಪತ್ತಿಯು ಎಂದು ಹೇಳಿದರೆ ಅದು ಅದರ ಕಾರ್ಯವು ಎನ್ನುವ ಪ್ರತಿಜ್ಞೆಗೆ ಹಾನಿಯು ಬರುವುದು. ಕಾರಣವಿರುವಾಗ ಉತ್ತರೋತ್ಪತ್ತಿಯು ಎನ್ನುವ ಅಂತ್ಯಪಕ್ಷದಲ್ಲಿ ಕಾರ್ಯಗಳಿಗೆ ಅವಿಚ್ಛಿನ್ನವಾಗಿ ಉತ್ಪತ್ತಿಯು ಆಗಬೇಕಾಗುವುದು. ಅಂದರೆ ಕಾರಣವು ಕಾರ್ಯಕ್ಷಣದಲ್ಲಿಯೂ ಇರುವುದಾದರೆ ಕಾರಣಕ್ಕೆ ವಿನಾಶಕವು ಇಲ್ಲದಿರುವುದರಿಂದ ಪುನಃ ಅದರಿಂದ ಕಾರ್ಯೋತ್ಪತ್ತಿಗಳಾಗುವವು, ಅವುಗಳಿಂದಲೂ ಹಾಗೆ, ಹೀಗೆ ಸರ್ವಕಾರ್ಯಗಳಿಗೂ ಉತ್ಪತ್ತಿಯು ಅವಿಚ್ಛಿನ್ನವಾಗಬೇಕಾಗುವುದು.

ಹೀಗೆ ಕ್ಷಣಿಕವಾದದಲ್ಲಿ ಕಾರ್ಯೋತ್ಪತ್ತಿಯನ್ನು ನಿರಾಕರಿಸಿ ವಿನಾಶವನ್ನು ನಿರಾಕರಿಸುತ್ತಾರೆ—

**"ಓಂ ಪ್ರತಿಸಂಖ್ಯಾಪ್ರತಿಸಂಖ್ಯಾನಿರೋಧಾಪ್ರಾಪ್ತಿರವಿಚ್ಛೇದಾತ್ ಓಂ"** ॥ ಸೂ. ೨೨ ॥

ಕಾರ್ಯಗಳಿಗೆ ವಿರಾಮವೇ ಇಲ್ಲದಿರುವುದರಿಂದ ಬುದ್ಧಿಪೂರ್ವಕನಾಶವೂ ಅಬುದ್ಧಿ ಪೂರ್ವಕನಾಶವೂ ಕೂಡದೆ ಹೋಗಬೇಕಾಗುವುದು ಅಂದರೆ, ಕಾರಣವು ಇರುವಾಗ ಕಾರ್ಯವು ಆಗಿಯೇ ಆಗುತ್ತದೆ ಎನ್ನುವ ನಿಯಮವನ್ನು ಅಂಗೀಕರಿಸಿರುವುದರಿಂದ ಪ್ರತಿಕ್ಷಣದಲ್ಲಿ ಕಾರ್ಯ ವನ್ನು ಹುಟ್ಟಿಸಿ ನಷ್ಟವಾಗುತ್ತದೆಂದು ಹೇಳುವಾಗ ಉತ್ಪತ್ತಿಕ್ಷಣವೇ ಕಾರ್ಯವಿಯೋಗಕ್ಷಣ ವಾಗಿರುವುದರಿಂದ ಕಾರ್ಯವಿಯೋಗಕಾಲದಲ್ಲಿ ಕಾರಣವು ಸತ್ತೇ ಆಗಿ ಕಾರ್ಯವನ್ನು ಹುಟ್ಟಿಸು ವುದು. ಅದರ ಉತ್ಪತ್ತಿ ಅನಂತರದಲ್ಲಿಯೂ ಹೀಗೆ, ಆದುದರಿಂದ ನೀವು ಅಂಗೀಕರಿಸಿದ ಪ್ರತಿಕ್ಷಣ ವಿನಾಶವು ಹೇಗೆ ಆಗುವುದು? ಹಾಗೆಯೇ ಸತ್ತಾದ ಘಟಕ್ಕೇನೇ ಆತ್ಯಂತಿಕನಾಶವು. ಆದುದ ರಿಂದ ಇದು ಸತ್ತಾಗಿರುವುದರಿಂದ ಕಾರ್ಯವನ್ನು ಹುಟ್ಟಿಸುವುದು. ಅದರ ಕಾರ್ಯವೂ ಹೀಗೆ. ಆದುದರಿಂದ ನೀನು ಅಂಗೀಕರಿಸಿದ ಸಂತಾನೋಚ್ಛೇದವೂ ಹೇಗೆ ಆದೀತು?

ಅರ್ಥಕ್ರಿಯಾಕಾರಿತ್ವರೂಪವಾದ ಸತ್ತ್ವವು ಅನ್ಯಥಾ ಅನುಪಪನ್ನವಾಗುವುದರಿಂದ ಭಾವ ಗಳಿಗೆ ಕ್ಷಣಿಕತ್ವವನ್ನು ಅಂಗೀಕರಿಸಬೇಕು ಎಂದಾಶಂಕಿಸಿದರೆ—

### "ಓಂ ಉಭಯಥಾ ಚ ದೋಷಾತ್ ಓಂ" ॥ ಸೂ. ೨೩ ॥

ಕಾರಣವು ಇರುವಾಗ ಕಾರ್ಯವು ಆಗಿಯೇ ಆಗುತ್ತದೆನ್ನುವ ನಿಯಮವಿದ್ದರೂ ಇಲ್ಲ ದಿದ್ದರೂ ದೋಷವಿದೆ. ೧ನೇ ಕಲ್ಪದಲ್ಲಿ ಕಾರಣವೂ ಕೂಡ ಕಾರ್ಯವು ಇರುವತನಕ ಇರತಕ್ಕ ದಾದುದರಿಂದ ಕಾರ್ಯಕಾರಣಭಾವವಿಲ್ಲ. ಅಂತ್ಯಪಕ್ಷದಲ್ಲಿ ಆ ಕಾಲದಲ್ಲಿ ಅರ್ಥಕ್ರಿಯೆಯು ಇಲ್ಲ ದಿರುವುದರಿಂದ ಅಸತ್ತ್ವವು ಬರಬೇಕಾಗುವುದರಿಂದ ಯಾವಾಗಲೂ ಅದರಿಂದ ಕಾರ್ಯೋ ತ್ಪತ್ತಿಯು ಆಗಲಾರದು.

ಹಾಗಾದರೆ 'ಯತ್ ಸತ್ ತತ್ ಕ್ಷಣಿಕಂ ಯಥಾ ದೀಪಾದಿ' ಎನ್ನುವ ಅನುಮಾನದಿಂದ ಭಾವಗಳಿಗೆ ಕ್ಷಣಿಕತ್ವವಿರಲಿ ಎಂದಾಶಂಕಿಸಿದರೆ—

### "ಓಂ ಆಕಾಶೇ ಚಾವಿಶೇಷಾತ್ ಓಂ" ॥ ಸೂ. ೨೪ ॥

ದೀಪದಲ್ಲಿ ಹೇಗೋ ಹಾಗೆಯೇ ಆಕಾಶದಲ್ಲಿಯೂ ಕೂಡ ಪರಿಮಾಣವಿಶೇಷವಿಲ್ಲದಿರುವುದ ರಿಂದ. ಅಂದರೆ ಆಕಾಶದಲ್ಲಿ ಪರಿಮಾಣವಿಶೇಷವು ಕಾಣದಿರುವುದರಿಂದ ಆಕಾಶಕ್ಕೆ ಅಕ್ಷಣಿಕತ್ವವು ಸಿದ್ಧವಾಗಿದೆ, ಆ ದೃಷ್ಟಾಂತದಿಂದ ಸತ್ತ್ವಹೇತುವಿನಿಂದಲೇ ಎಲ್ಲಾದಕ್ಕೂ ಅಕ್ಷಣಿಕತ್ವವನ್ನು ಸಾಧಿಸಲಿಕ್ಕೆ ಶಕ್ಯವಾಗುವುದು.

ಬಾಧಿತವಾಗಿರುವುದರಿಂದಲೂ ನೀನು ಹೇಳಿದ ಕ್ಷಣಿಕತ್ವಸಾಧಕವಾದ ಅನುಮಾನವು ಅಯುಕ್ತವೆನ್ನುತ್ತಾರೆ—

### "ಓಂ ಅನುಸ್ಮೃತೇಶ್ಚ ಓಂ" ॥ ಸೂ. ೨೫ ॥

'ತದೇವೇದಂ' ಎನ್ನುವ ಪ್ರತ್ಯಭಿಜ್ಞೆಯು ಇದ್ದುದರಿಂದಲೂ ಅನುಮಾನದಿಂದ ಕ್ಷಣಿಕತ್ವವು ಸಿದ್ಧವಾಗುವುದಿಲ್ಲ ॥ ೨೦೦ ॥ ೨೦೧ ॥ ಸೂ. ೧೮ ॥ ೧೯ ॥ ೨೦ ॥ ೨೧ ॥ ೨೨ ॥ ೨೩ ॥ ೨೪ ॥ ॥ ೨೫ ॥ ಅಧಿ. ೬ ॥

'ಅಸತಿ ಪ್ರತಿಜ್ಞೋಪರೋಧೋ ಯೌಗಪದ್ಯಮನ್ಯಥಾ' ಎನ್ನುವುದನ್ನು ವ್ಯಾಖ್ಯಾನ ಮಾಡುತ್ತಾ ಅದನ್ನು ವಿಕಲ್ಪದಿಂದ ಪ್ರಶ್ನೆಮಾಡುತ್ತಾರೆ—

**ಮೂ ॥ ಪೂರ್ವಭಾವಭವಂ ಕಾರ್ಯಮುತ ತನ್ನಾಶಸಂಭವಂ ।**
**ಯೌಗಪದ್ಯಂ ಸತಿ ಭವೇದುತ್ಪಾದ್ಯಾನಾಮಶೇಷತಃ ॥ ೨೦೨ ॥**
**ವಿನಾಶೇ ಚೇನ್ನ ತತ್ಕಾರ್ಯಂ ಕಾರ್ಯೋತ್ಪತ್ತೌ ಚ ಕಾ ಪ್ರಮಾ ।**
**ಅಭೇದೇಽಪಿ ವಿಶೇಷೇಣ ದೇಹದೀಪಫಲಾದಿಷು ॥ ೨೦೩ ॥**
**ವಿಶೇಷದರ್ಶನಂ ಯುಕ್ತಮಸ್ಮಾಕಮನುಭೂತಿತಃ ।**
**ವಿಶೇಷದರ್ಶನಂ ಮಾನಂ ಯದಿ ನ ಸ್ಥೈರ್ಯದೃಕ್ಕುತಃ ॥ ೨೦೪ ॥**

ಅ ॥ (ಅರ್ಥಕ್ರಿಯಾಕಾರಿತ್ವವು ಸತ್ವವೆಂದು ಪರರಿಗೆ ಅಭಿಮತವು. ಅದು ಕ್ಷಣಿಕವಸ್ತುವಿನಲ್ಲಿ ಕೂಡಲಾರದು. ಹೇಗೆಂದರೆ) ಕಾರ್ಯಂ=ಕಾರ್ಯವು, ೧ ಪೂರ್ವಭಾವಭವಂ=ಕಾರಣವು ಇರುವಾಗ ಆಗುತ್ತದೋ, (ಅಂದರೆ ಕ್ಷಣಿಕವಾದ ವಸ್ತುವಿನದ್ದೆಶೆಯಿಂದ ಉಂಟಾಗತಕ್ಕ ಕಾರ್ಯವು ಕಾರಣವು ಇರುವಾಗಲೇ ಆಗುತ್ತದೋ, ಅಂದರೆ ಕಾರಣಸತ್ತಾಸಮಾನಕಾಲೀನ ಸತ್ತಾವುಳ್ಳದ್ದೋ.) ೨ ಉತ=ಅಥವಾ, ತನ್ನಾಶಸಂಭವಂ = ಆ ಕಾರಣವು ನಾಶವಾದಮೇಲೆ ಹುಟ್ಟತಕ್ಕದ್ದೋ, (೧ನೇ ಕಲ್ಪದಲ್ಲಿ ದೋಷವನ್ನು ಹೇಳುತ್ತಾರೆ.) ಸತಿ = ಕಾರಣವಿರುವಾಗ ಕಾರ್ಯವು ಆಗುವುದಾದರೆ (ಕಾರಣವು, ಕ್ಷಣಿಕವು, ಕಾರ್ಯವು ಕಾರಣಸತ್ತಾಸಮಾನಕಾಲೀನವಾದ ಸತ್ತಾವುಳ್ಳದ್ದೆಂದಾದರೆ ಕಾರ್ಯಕಾರಣಗಳು ಒಟ್ಟಿಗೆ ಹುಟ್ಟುತ್ತವೆ ಎಂದು ಹೇಳಿದಂತೆ ಆಯಿತು. ಕ್ಷಣದಲ್ಲಿ ಭಾಗವಿಲ್ಲವೆಂದು ಹೇಳಿರುವುದರಿಂದ ಅದರ ಕಾರ್ಯಗಳಿಗೂ ಇದೇ ನ್ಯಾಯವು, ಹೀಗೆ ಅದರ ಸಂತಾನದಲ್ಲಿರತಕ್ಕ) ಅಶೇಷತಃ ಉತ್ಪಾದ್ಯಾನಾಂ=ಎಲ್ಲಾ ಕಾರ್ಯಗಳಿಗೆ, ಯೌಗಪದ್ಯಂ=ಏಕಕಾಲದಲ್ಲಿರುವಿಕೆಯು ಭವೇತ್=ಆಗುವುದು. (ಅದಾದರೂ ಪ್ರತ್ಯಕ್ಷಾದಿವಿರುದ್ಧವಾಗಿದೆ.) (೨ನೇದ್ದನ್ನು ನಿರಾಕರಿಸುತ್ತಾರೆ.) ವಿನಾಶೇ ಚೇತ್=ಕಾರಣವು ವಿನಾಶವಾದ ಮೇಲೆ ಕಾರ್ಯವು ಆಗುವುದಾದರೆ, ತತ್=ಅದು, ತತ್ಕಾರ್ಯಂ ನ=ಅದರ ಕಾರ್ಯವು ಆಗುವುದಿಲ್ಲವೆಂದು ಪ್ರಾಪ್ತವಾಯಿತು. (ಇಲ್ಲವಾದರೆ ಎಲ್ಲಿಯೂ ಎಲ್ಲದರ ಕಾರ್ಯವೂ ಆಗಬೇಕಾಗುವುದು.) (ಹಾಗಾದರೆ ಪ್ರತಿಕ್ಷಣದಲ್ಲಿಯೂ ಕಾರ್ಯೋತ್ಪತ್ತಿಯಿದೆ. ಕಾರಣವಿಲ್ಲದೆ ಕಾರ್ಯವು ಹುಟ್ಟಲಿಕ್ಕೆ ಸಮರ್ಥವಲ್ಲ. ಹಾಗಿದ್ದರೆ ನಿತ್ಯದಲ್ಲಿಯೂ ಸತ್ವವೂ ಅಸತ್ವವೂ ಬರಬೇಕಾಗುವುದು. ಆದುದರಿಂದ ಕಾರ್ಯೋತ್ಪತ್ತಿಯೋ ಅನ್ಯತರ ಪಕ್ಷದೋಷವನ್ನು ಆಭಾಸೀಕರಿಸುವುದು. ಪಕ್ಷಾಂತರವನ್ನಾಗಲೀ ತಿಳಿಸಿಕೊಡುವುದು, ಎಂದರೆ) ಕಾರ್ಯೋತ್ಪತ್ತೌ ಚ=ಕಾರ್ಯದ ಉತ್ಪತ್ತಿವಿಷಯದಲ್ಲಿ ಆದರೂ, ಕಾ ಪ್ರಮಾ=ಏನು ಪ್ರಮಾಣವು? (ಅಂದರೆ ಪ್ರತಿಕ್ಷಣದಲ್ಲಿಯೂ ಕಾರ್ಯೋತ್ಪತ್ತಿಯಲ್ಲಿ ಪ್ರಮಾಣವಿರುತ್ತಿದ್ದರೆ ಇದಾಗಬಹುದಿತ್ತು. ಪ್ರಮಾಣವೇ ಇಲ್ಲ.) (ಹಾಗಾದರೆ 'ಯತ್ ಸತ್ ತತ್ ಕ್ಷಣಿಕಂ ಯಥಾ ದೇಹಾದಿ ಸಚ್ಚ ವಿವಾದಪದಂ' ಯಾವುದು ಸತ್ತಾಗಿದೆಯೋ ಅದು ಕ್ಷಣಿಕವು, ದೇಹಾದಿಗಳಂತೆಯೇ, ವಿವಾದವಿಷಯವಾದ ಕಾರ್ಯವೂ ಸತ್ತಾಗಿದೆ, ಎನ್ನುವುದು ಪ್ರತಿಕ್ಷಣದಲ್ಲಿ ಕಾರ್ಯೋತ್ಪತ್ತಿಯಲ್ಲಿ ಪ್ರಮಾಣವು ಎಂದು ಹೇಳಕೂಡದು. ಇದನ್ನೇ ನಿರಾಕರಿಸುವೆವು. ದೇಹಾದಿಗಳಲ್ಲಿಯೂ ಕ್ಷಣಿಕತ್ವವಿಲ್ಲದಿರುವುದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವು.) (ಹಾಗಾದರೆ ದೇಹಾದಿಗಳಿಗೆ ಪೂರ್ವೋತ್ತರಕ್ಷಣಗಳಲ್ಲಿ ಪರಿಮಾಣಭೇದದಿಂದ ಭೇದವು ಸಿದ್ಧವಾದರೆ ಕ್ಷಣಿಕತ್ವವು ಸಿದ್ಧವಾಗುತ್ತದೆಂದು ಹೇಳಲ್ಪಟ್ಟದೆ ಎಂದರೆ) ಅಭೇದೇಽಪಿ=ಪೂರ್ವೋತ್ತರಕ್ಷಣಗಳಲ್ಲಿ ಭೇದವಿಲ್ಲವಾದರೂ, ವಿಶೇಷೇಣ = (ಆರಂಭವಾದದೆಶೆಯಿಂದ) ವೈಲಕ್ಷಣ್ಯದಿಂದ, ದೇಹದೀಪಫಲಾದಿಷು = ದೇಹ ದೀಪ-ಫಲ-ಅಂಕುರ ಮೊದಲಾದವುಗಳಲ್ಲಿ, ವಿಶೇಷದರ್ಶನಂ= ಪರಿಮಾಣಭೇದದರ್ಶನವು, ಅಸ್ಮಾಕಂ=ಪರಿಣಾಮವಾದಿಗಳ ಮತದಲ್ಲಿ, ಯುಕ್ತಂ = ಯುಕ್ತ

ವಾಗುವುದು. (ಅಂದರೆ ಆರಂಭವಾದಿಗಳು ಪರಿಮಾಣವನ್ನು ಯಾವದ್ದ್ರವ್ಯಭಾವಿಯನ್ನಾಗಿ ಅಂಗೀಕರಿಸುತ್ತಾರೆ. ಪರಿಮಾಣಭೇದವು ಅವಯವಸಂಖ್ಯಾತಿಶಯಾನತಿಶಯಾಧೀನವಾಗಿದೆ. ಅವಯವಾಪಚಯವಾಗುವ ಕಾಲಕ್ಕೆ ದ್ರವ್ಯವಿನಾಶವು ಅವಯವ ಉಪಚಯವಾಗುವಾಗ ದ್ರವ್ಯದ ಉತ್ಪತ್ತಿಯೂ ಆಗುವುದು. ಆದುದರಿಂದ ಅವಯವಗಳ ಪರಿಮಾಣಭೇದವು ದ್ರವ್ಯವನ್ನು ಭೇದಿಸುವುದು. ನಮ್ಮ ಮತದಲ್ಲಿ ಅದೂ ಪೂರ್ವೋತ್ತರಕಾಲದಲ್ಲಿದ್ದುದೇ ಆದ ದ್ರವ್ಯವು. ಅವಯವ ಉಪಚಯ ಅಪಚಯಗಳಿಂದ ಆಯಾವ ಪರಿಮಾಣವುಳ್ಳದ್ದಾಗಿ ವಿಕಾರವನ್ನು ಹೊಂದುತ್ತದೆ? ಅದರಲ್ಲಿ ಪರಿಮಾಣಭೇದವು ಅತ್ಯಂತಭೇದವಿಲ್ಲವೆಂದು ತಿಳಿಸಿಕೊಡುತ್ತದೆ. (ಮತ್ತು ಫಲಾದಿಗಳಿಗೆ ಪೂರ್ವೋತ್ತರ ಕ್ಷಣಗಳಲ್ಲಿ ೧ ಭೇದವು ಸಾಧಿಸಲ್ಪಡುತ್ತದೋ, ೨ ಅಥವಾ ಅಭೇದಾಭಾವವು ಸಾಧಿಸಲ್ಪಡುತ್ತದೋ? ೧ನೇ ಕಲ್ಪದಲ್ಲಿ ಸಿದ್ಧಸಾಧನವು. ನಾವೂ ಕೂಡ ಭೇದವನ್ನು ಅಂಗೀಕರಿಸಿರುತ್ತೇವೆ. ಅಷ್ಟರಿಂದಲೇ ಕ್ಷಣಿಕತ್ವವು ಸಿದ್ಧವಾಗಲಿಲ್ಲ. ೨ನೇ ಕಲ್ಪದಲ್ಲಿ ದೋಷವನ್ನು ಹೇಳುತ್ತಾರೆ.) ಅನುಭೂತಿತಃ='ತದಿದಂ ಫಲಂ' ಎನ್ನುವ ಪ್ರತ್ಯಭಿಜ್ಞೆಯಿಂದ (ಪೂರ್ವೋತ್ತರಕ್ಷಣಗಳಲ್ಲಿ ಆ ಫಲಕ್ಕೆ ಅಭೇದವು ಸಿದ್ಧಿಸುವುದರಿಂದ ಅನುಮಾನವು ಬಾಧಿತವಾಯಿತು.) (ಭ್ರಾಂತಿರೂಪವಾದ ಪ್ರತ್ಯಭಿಜ್ಞೆಯು ಅಭೇದವನ್ನು ಸಾಧಿಸಲಿಕ್ಕೆ ಸಮರ್ಥವಲ್ಲವೆಂದರೆ— ಭ್ರಾಂತಿರೂಪವಾದ ಪರಿಮಾಣಭೇದದರ್ಶನವು ಭೇದವನ್ನು ಸಾಧಿಸುವುದಕ್ಕಾಗಿ ಸಮರ್ಥವಲ್ಲವೆನ್ನುತ್ತೇವೆ. ಪರಿಮಾಣಭೇದದರ್ಶನವು ಬಾಧಕವಿಲ್ಲದಿರುವುದರಿಂದ ಪ್ರಮಾಣವೇ ಎಂದರೆ) ಯದಿ=ಯಾವ ಪಕ್ಷದಲ್ಲಿ, ವಿಶೇಷದರ್ಶನಂ=ವಿಶೇಷದರ್ಶನವು, ಮಾನಂ=ಪ್ರಮಾಣವೋ ತರ್ಹಿ=ಹಾಗಾದರೆ, ಸ್ಥೈರ್ಯದೃಕ್=ಸ್ಥೈರ್ಯದರ್ಶನವು ಸ್ಥಿರತ್ವಸಾಧಕವಾದ 'ತದೇವೇದಂ' ಎನ್ನುವ ಪ್ರತ್ಯಭಿಜ್ಞೆಯು, ಕುತಃ=ಯಾವ ಕಾರಣದಿಂದ, ಮಾನಂ = ಪ್ರಮಾಣವು, ನ=ಅಲ್ಲ (ಸ್ಥೈರ್ಯದರ್ಶನವೂ ಕೂಡ ಬಾಧಕವಿರಹಿತವಾಗಿದೆ) (ಪ್ರತಿಸಂಖ್ಯೇತ್ಯಾದಿ ಎರಡು ಸೂತ್ರಗಳು ಭಾಷ್ಯದಲ್ಲಿಯೇ ಸ್ಪಷ್ಟವಾಗಿರುವುದರಿಂದ ಇಲ್ಲಿ ವ್ಯಾಖ್ಯಾತವಾಗಲಿಲ್ಲ.) ॥ ೨೦೨ ॥ ೨೦೩ ॥ ೨೦೪ ॥

'ದುಃಖಾಭಾವಂ ಸುಖಂಚಾಹುಃ' ಎಂದು ಯಾವುದು ಅನೂದಿತವಾಗಿದೆಯೋ ಅದನ್ನು ನಿರಾಕರಿಸುತ್ತಾರೆ.

**ಮೂ ॥ ದಿಕ್‌ಸುಖೇ ಚ ಖದೃಷ್ಟಾಂತಾದ್ಭಾವೌ ಸಚ್ಚೇತ್ಕ್ವಚಿದ್ಭವೇತ್ ।**
**ವಿಶ್ವಂ ಪ್ರತ್ಯಕ್ಷಗಂ ತ್ಯಕ್ತ್ವಾ ತಯೋರ್ಯೋಽನುಮಿತಂ ವದೇತ್ ।**
**ಮಾಯಾವಾದಿವದೇವಾಸಾವುಪೇಕ್ಷ್ಯೋ ಭೂತಿಮಿಚ್ಛತಾ ॥ ೨೦೫ ॥**

**ಅ ॥** ಖದೃಷ್ಟಾಂತಾತ್=ಆಕಾಶಕ್ಕೆ ಭಾವತ್ವವಿಷಯದಲ್ಲಿ ಯಾವ ನ್ಯಾಯವು ಹೇಳಲ್ಪಟ್ಟದೋ, ಅದರಿಂದ (ಅಂದರೆ ಧರ್ಮಿ ಪ್ರತಿಯೋಗಿ ನಿರಪೇಕ್ಷವಾಗಿಯೇ ವಿಧಿರೂಪವಾಗಿ ಪ್ರತೀತಿವಿಷಯವಾಗುವುದರಿಂದ, ಸತ್=ಭಾವವಸ್ತುವು, ಕ್ವಚಿತ್=ಕೆಲವುಕಡೆ, ಭವೇಚ್ಚೇತ್=ಇರುವುದಾದರೆ, (ಆ ದೃಷ್ಟಾಂತದಿಂದ) ದಿಕ್ ಸುಖೇಚ=ದಿಕ್ ಸುಖಗಳೂ ಕೂಡ, ಭಾವೌ=ಭಾವಪದಾರ್ಥಗಳು. (ಇಲ್ಲವಾದರೆ ರೂಪಾದಿಗಳಿಗೂ ಭಾವತ್ವವು ಬಾರದೆಹೋಗಬೇಕಾಗುವುದು) (ಯದ್ಯಪಿ ದಿಕ್ಕುಗಳು ಆಕಾಶದಿಂದ ಭಿನ್ನಗಳಲ್ಲ. ಆದಾಗ್ಯೂ ಆಕಾಶಕ್ಕೆ ಭಾಗವಿದೆ ಎಂದು ತಿಳಿಸುವುದಕ್ಕಾಗಿ ದಿಕ್ಕನ್ನು ತೆಗೆದುಕೊಂಡದ್ದು. ಇದರಿಂದ " **ಆಕಾಶೇಚಾವಿಶೇಷಾತ್** " ಎನ್ನುವ ಸೂತ್ರವನ್ನು ರೀತ್ಯಂತರದಿಂದ ವ್ಯಾಖ್ಯಾನಮಾಡಿದರು. ಆಕಾಶ ಮೊದಲಾದುವುಗಳಿಗೆ ಭಾವತ್ವವನ್ನು ಸಮರ್ಥಿಸಿರುವುದರಿಂದ ಜಗತ್ತು ಪಂಚಸ್ಕಂಧಾತ್ಮಕವೆನ್ನುವುದು ನಿರಸ್ತವಾಯಿತು. ಆತ್ಮನಿಗೆ ಜ್ಞಾನಾತ್ಮಕತ್ವವು ನಮಗೂ ಸಮ್ಮತವೇ. (ಇದೆಲ್ಲಾ ಆಗಬಹುದು. ಆದರೆ ವೈಭಾಷಿಕ

ಸೌತ್ರಾಂತಿಕರದ್ದು ಯಾವುದು ಸಾಧಾರಣವಾದುದು ಸ್ವಮತವಿರುದ್ಧವಾದುದು ಯಾವುದಿದೆಯೋ ಅದೇ ಸೂತ್ರಕಾರರಿಂದ ನಿರಾಕೃತವಾಗಿದೆ. ಯಾವುದು ಸೌತ್ರಾಂತಿಕರ ಸಿದ್ಧಾಂತವಿಶೇಷವೋ ಅದೂ (ಅಂದರೆ ಪ್ರಮೇಯವು ಎರಡು ವಿಧವಾಗಿರುವುದರಿಂದ ಪ್ರಮಾಣವು ಪ್ರತ್ಯಕ್ಷ ಅನುಮಾನ ವೆಂದು ಎರಡು ವಿಧವು. ಅದರಲ್ಲಿ ಜ್ಞಾನಾತಿರಿಕ್ತವಾದ ಎಲ್ಲಾ ರೂಪಾದಿ ಪ್ರಪಂಚವೂ ಅನು ಮೇಯವೇ ಆಗಿದೆ. ಪ್ರತ್ಯಕ್ಷವಲ್ಲ. ನೀಲಾದ್ಯಾಕಾರವಾದ ಜ್ಞಾನವಾದರೂ ಪ್ರತ್ಯಕ್ಷವೇದ್ಯವು, ಎನ್ನುವುದೂ) ಏಕೆ ನಿರಾಕೃತವಾಗಲಿಲ್ಲವೆಂದರೆ, ತಯೋಃ=ವೈಭಾಷಿಕ ಸೌತ್ರಾಂತಿಕರ ಮಧ್ಯ ದಲ್ಲಿ, ಯಃ=ಯಾವ ಸೌತ್ರಾಂತಿಕನು, ವಿಶ್ವಂ=ರೂಪಮೊದಲಾದುದನ್ನು, ಪ್ರತ್ಯಕ್ಷಗಂ=ಪ್ರತ್ಯಕ್ಷ ವಿಷಯವಾದುದನ್ನು, ತ್ಯಕ್ತ್ವಾ=ಬಿಟ್ಟು, (ಅಂದರೆ ರೂಪಮೊದಲಾದ ಜಗತ್ತಿಗೆ, ವೈಭಾಷಿಕಾದಿ ಗಳು ಅಂಗೀಕರಿಸಿದ ಪ್ರತ್ಯಕ್ಷ ವೇದ್ಯತ್ವವನ್ನೂ ಅಂಗೀಕರಿಸದೆ) ಅನುಮಿತಂ=ಅನುಮಿತವಾದು ದನ್ನಾಗಿ, ವದೇತ್=ಹೇಳುವನೋ, (ಅಂದರೆ ರೂಪಾದಿ ಜಗತ್ತಿಗೆ ಅನುಮಾನ ವೇದ್ಯತ್ವವನ್ನು ಅಂಗೀಕರಿಸುವನೋ, ಅಸೌ=ಇವನು, ಭೂತಿಂ=ಐಶ್ವರ್ಯವನ್ನು, ಇಚ್ಛತಾ=ಇಚ್ಛಿಸುವವನಿಂದ, ಮಾಯಾವಾದಿವದೇವ=ಮಾಯಾವಾದಿಯಂತೆ, ಉಪೇಕ್ಷ್ಯಃ=ಉಪೇಕ್ಷಾರ್ಹನು.

ತಾ || ಹೇಗೆ ಸಮಸ್ತ ದುರ್ಮತಗಳನ್ನು ಸೂತ್ರಕಾರರು ತಿರಸ್ಕರಿಸಿದವರೂಕೂಡ ಮಾಯಾವಾದವು ಅತ್ಯಂತ ನಿರ್ದಲವಾಗಿರುವುದರಿಂದ ಉಪೇಕ್ಷಾರ್ಹವೆಂದು ಆಲೋಚಿಸಿ ಈ ಪಾದದಲ್ಲಿ ಈಷತ್ಸಬಲಗಳಾದ ಸಾಂಖ್ಯಾದಿ ಸಮಯಗಳಿಂದ ಕೂಡಿಕೊಂಡು ನಿರಾಕರಿಸಲಿಲ್ಲವೋ ಹಾಗೆಯೇ ಬಾಹ್ಯಾನುಮೇಯತಾ ವಾದವೂ ಕೂಡ ಅತಿ ನಿರ್ದಲವಾಗಿರು ವುದರಿಂದ ಉಪೇಕ್ಷಾರ್ಹವೆಂದಾಲೋಚಿಸಿ ಈ ಪಾದದಲ್ಲಿ ನಿರಾಕರಿಸಲಿಲ್ಲ || ೨೦೫ ||

ಹಾಗಾದರೆ 'ಅಪ್ರತಿಷಿದ್ಧಮನುಮತಂ ಭವತಿ' ಎನ್ನುವ ನ್ಯಾಯದಿಂದ ನೀಲ ಮೊದಲಾದ ಜಗತ್ತಿಗೆ ಅಪ್ರತ್ಯಕ್ಷತ್ವವು ಸೂತ್ರಕಾರರಿಗೆ ಅಭಿಮತವೇ ಆಗಿದೆ ಎಂದು ಏಕೆ ಕಲ್ಪಿಸಲ್ಪಡುವುದಿಲ್ಲ ಎಂದರೆ, ಹೀಗೆ ಶಂಕಿಸಕೂಡದು. ಪ್ರಮಾಣಾವಿರುದ್ಧವಾದುದು, ಪ್ರಮಾಣಾನುಸಾರಿಯಾದುದು ಸೂತ್ರಕಾರರ ಅಭಿಪ್ರಾಯವನ್ನು ಕಲ್ಪಿಸಬೇಕು. ಈ ಅರ್ಥವು ಹಾಗೆ ಅಲ್ಲವೆನ್ನುವ ಅಭಿಪ್ರಾಯ ದಿಂದ ಹೇಳುತ್ತಾರೆ—

**ವ್ಯಾ || ಸರ್ವಪ್ರಮಾಣಸಿದ್ಧಂ ಯದ್ಬುದ್ಧೇರ್ಭೇದೇನ ಸರ್ವದಾ |**
**ಕಥಂ ನು ತಸ್ಯ ಬುದ್ಧಿತ್ವಂ ವಿಶ್ವಮನ್ಯಚ್ಚ ಕಿಂಪ್ರಮಾ || ೨೦೬ ||**

ಅ || (1) ನೀಲಮೊದಲಾದ ಅರ್ಥವು ಪ್ರತ್ಯಕ್ಷವಲ್ಲವೆಂದು ಹೇಳಲು ಶಕ್ಯವಾಗುವುದಿಲ್ಲ. ನೀಲಾದಿಪ್ರತೀತಿಯು ಅಪರೋಕ್ಷವೆಂದು ಸಾಕ್ಷಿಸಿದ್ಧವಾಗಿದೆ. ಮತ್ತು ನೀಲಮೊದಲಾದ ಪ್ರತೀತಿಯು ಇಂದ್ರಿಯವ್ಯಾಪಾರಾನಂತರದಲ್ಲಿ ಆಗತಕ್ಕದೆಂದು ಅನುಮಾನಸಿದ್ಧವೂ ಆಗಿದೆ. (2) ಹಾಗಾದರೆ ಯಾವ ಅರ್ಥದಿಂದ ಯಾವಜ್ಞಾನವು ಹುಟ್ಟುತ್ತದೋ ಅದು ಆ ಆಕಾರವುಳ್ಳದ್ದು ಆಗುತ್ತದೆ. ಆ ಜ್ಞಾನವು ಸ್ವಪ್ರಕಾಶವಾಗಿರುವುದರಿಂದ ಸ್ವಗತವಾದ ನೀಲಾದ್ಯಾಕಾರವನ್ನೂ ಕೂಡ ಸಾಕ್ಷಾತ್ಕರಿಸುತ್ತದೆ. ಆದುದರಿಂದ ಅಪರೋಕ್ಷವಾಗಿ ತೋರತಕ್ಕ ನೀಲಾದ್ಯಾಕಾರ ಸಮೂಹವು ಬುದ್ಧಿಯಲ್ಲಿ ಇರತಕ್ಕದಾದುದರಿಂದ ಯಾವದೋಷವೂ ಇಲ್ಲ. ಎಂದರೆ) ಯತ್ = ಯಾವುದು, ಅಪರೋಕ್ಷವಾಗಿ ತೋರತಕ್ಕ ನೀಲಾದ್ಯಾಕಾರ ಸಮೂಹವು, ಬುದ್ಧೇಃ = ಬುದ್ಧಿಯಿಂದ, ಭೇದೇನ=ಭೇದದಿಂದ, ಸರ್ವದಾ=ಯಾವಾಗಲೂ, ಸರ್ವಪ್ರಮಾಣಸಿದ್ಧಂ= ಸರ್ವಪ್ರಮಾಣದಿಂದ ಸಿದ್ಧವಾಗಿದೆಯೋ, ತಸ್ಯ=ಆ ನೀಲಾದ್ಯಾಕಾರಸಮೂಹಕ್ಕೆ, ಕಥಂನು=

ಹೇಗೆತಾನೇ, ಬುದ್ಧಿತ್ವಂ=ಬುದ್ಧಿತ್ವವು, (ಅಂಗೀಕರಿಸಲ್ಪಡುತ್ತದೆ. ಅಂದರೆ 'ಇದಂನೀಲಂ' ಎಂದು ನೀಲಾದ್ಯಾಕಾರವು ಜ್ಞಾನಭಿನ್ನವಾದ ಬಾಹ್ಯಪದಾರ್ಥವಾಗಿಯೇ ಅಪರೋಕ್ಷವಾಗಿ ತೋರುತ್ತದೆ. ಯಾವಾಗಲಾದರೂ ಅಹಂ ನೀಲಂ ಎಂದು ಜ್ಞಾನರೂಪವಾದ ಆಂತರ ಪದಾರ್ಥವಾಗಿ ತೋರುವುದಿಲ್ಲ. ಮತ್ತು ನೀಲಾದ್ಯಪರೋಕ್ಷಜ್ಞಾನಾನಂತರದಲ್ಲಿ ನೀಲಪದಾರ್ಥ ವನ್ನು ಅಪೇಕ್ಷಿಸುವವನು ನಿಯಮದಿಂದ ಬಾಹ್ಯಪ್ರದೇಶದಲ್ಲಿಯೇ ಪ್ರವೃತ್ತಿಮಾಡುತ್ತಾನೆ. ಅದರಿಂದ ಬಾಹ್ಯಾರ್ಥವೇ ಇವನಿಂದ ಸಾಕ್ಷಾತ್ಕೃತವಾಗಿದೆ ಎಂದು ತಿಳಿದುಬರುತ್ತದೆ. ಮತ್ತು ಅಪರೋಕ್ಷವಾಗಿ ಯಾವುದನ್ನು ನೋಡುತ್ತಿಯೆಂದು ಪ್ರಶ್ನಿಸಿಕೊಂಡ ಆಪ್ತನು ಬೆರಳನ್ನು ತೋರಿಸಿ ಬಾಹ್ಯಪದಾರ್ಥವನ್ನೇ ತೋರಿಸುತ್ತಾನೆ. ಆಂತರಪದಾರ್ಥವನ್ನು ತೋರಿಸುವುದಿಲ್ಲ. ಆದುದರಿಂದ ಈ ಪ್ರಮಾಣಗಳಿಂದ ಅಪರೋಕ್ಷವಾಗಿ ತೋರತಕ್ಕ ನೀಲಾದ್ಯಾಕಾರವು ಬುದ್ಧಿಯಿಂದ ಭಿನ್ನ ವಾದುದೆಂದೇ ನಿಶ್ಚಿತವಾಗುತ್ತದೆ. ಮತ್ತು ಬಾಹ್ಯಾರ್ಥವು ಪ್ರತ್ಯಕ್ಷವಲ್ಲವೆಂದು ಹೇಳುವುದಾದರೆ ಆ ವಿಷಯದಲ್ಲಿ ಬೇರೆಪ್ರಮಾಣವಿಲ್ಲದಿರುವುದರಿಂದ ಬಾಹ್ಯಾರ್ಥಾಂಗೀಕಾರವು ಕೂಡದೆಹೋಗ ಬೇಕಾಗುವುದೆನ್ನುತ್ತಾರೆ) ಅನ್ಯಚ್ಚ=ಜ್ಞಾನದಿಂದಭಿನ್ನವಾದ, ವಿಶ್ವಂ=ಜಗತ್ತು, ಕಿಂಪ್ರಮಂ= ಯಾವಪ್ರಮಾಣವುಳ್ಳದ್ದು. ॥ ೨೦೬ ॥

ಇನ್ನೂ ಈ ಮತದಲ್ಲಿ ಅತಿಸ್ಫುಟಗಳಾದ ಅನೇಕ ದೋಷಗಳಿದ್ದ ಪ್ರಯುಕ್ತ ಹೇಯ ಗಳೆಂದು ಶಿಷ್ಯರಿಗೇನೇ ತಿಳಿಯಲು ಶಕ್ಯಗಳಾಗುತ್ತವೆನ್ನುತ್ತಾರೆ.

**ಮೂ ॥ ಸರ್ವಲೋಕೋ ಬಿಭೇತ್ಯಂಜೋ ಯಸ್ಮಾದನುಭವಾತ್ಸದಾ ॥೨೦೭॥**
**ತಸ್ಯಾಪಲಾಪಿನಃ ಕಿಂ ನ ನಿಷ್ಪ್ರಮಾಣಕವಾದಿನಃ ।**
**ಸೋಽಹಂ ತದಿದಮೇವಾಹಂ ಸುಖೀ ಸದ್ಗಗನಂ ದಿಶಃ ।**
**ಸತ್ಯಾ ಇತ್ಯಾದ್ಯನುಭವಾಃ ಸದಾ ತತ್ಪ್ರತಿಪಕ್ಷಗಾಃ ॥ ೨೦೮ ॥**

ಅ ॥ ಸರ್ವಲೋಕಃ = ಎಲ್ಲಾಜನರು, ಯಸ್ಮಾತ್ = ಯಾವ, ಅನುಭವಾತ್ = ಅನುಭವದ್ದೆಶೆಯಿಂದ, ಸದಾ=ಯಾವಾಗಲೂ, ಅಂಜಃ=ಚನ್ನಾಗಿ, ಬಿಭೇತಿ=ಹೆದರುತ್ತಾರೋ, ತಸ್ಯ = ಅನುಭವವನ್ನು, ಅಪಲಾಪಿನಃ = ಅಪಲಾಪಮಾಡತಕ್ಕ, ನಿಷ್ಪ್ರಮಾಣಕವಾದಿನಃ = ಅಪ್ರಾಮಾಣಿಕವಾದುದನ್ನು ಹೇಳತಕ್ಕ, ತಸ್ಯ = ಸೌತ್ರಾಂತಿಕನಿಗೆ, ಕಿಂ = ಯಾವುದು, ದೂಷಣವು, ನ=ಬರಲಾರದು, ಎಲ್ಲಾದೂಷಣಗಳೂ ಬಂದೇಬರುತ್ತವೆ. ಸೋಽಹಂ = ಅವನೇ ನಾನು, (ಎಂದು ಆತ್ಮೈಕತ್ವ ಗ್ರಾಹಿಯಾದ ಪ್ರತ್ಯಭಿಜ್ಞಾನುಭವವು) ತತ್ ಇದಂ= ಅದು ಇದು, (ಎಂದು ಅನಾತ್ಮವಸ್ತು ವಿಷಯಕವಾದ ಪ್ರತ್ಯಭಿಜ್ಞೆಯು) ಅಹಂ ಸುಖೀ= ನಾನು ಸುಖಿಯು, (ಎಂದು ಸುಖಕ್ಕೆ ವಿಧಿತ್ವಾನುಭವವು,) ಸತ್ ಗಗನಂ = ಆಕಾಶವು ಭಾವರೂಪವಾದುದು, ದಿಶಃ ಸತ್ಯಾಃ = ದಿಕ್ಕುಗಳುಭಾವರೂಪಗಳು, (ಹೀಗೆ ಆಕಾಶಕ್ಕೂ ದಿಕ್ಕುಗಳಿಗೂ ಭಾವತ್ವಾನುಭವವು) ಇತ್ಯಾದ್ಯನುಭವಾಃ=ಇದುಮೊದಲಾದ, 'ಇದಂನೀಲಂ' 'ನಾಹಂ ನೀಲಂ' ಇದುಮೊದಲಾದ ಅನುಭವಗಳು, ತತ್ಪ್ರತಿಪಕ್ಷಗಾಃ = ಅವರಿಂದ ಅಂಗೀ ಕರಿಸಲ್ಪಟ್ಟ ಅರ್ಥಕ್ಕಿಂತ ವಿರುದ್ಧಾರ್ಥವನ್ನು ವಿಷಯೀಕರಿಸತಕ್ಕವುಗಳು.

**ತಾ ॥ ನ್ಯಾಯಸುಧಾ:—** (1) ಮಾಧ್ಯಮಿಕಾದಿಗಳು ಬಾಹ್ಯಾರ್ಥಾದಿಗಳನ್ನು ಅಪಲಾಪಮಾಡುವವರಾದಾಗ್ಯೂ ಅನುಭವದ್ದೆಶೆಯಿಂದ ಹೆದರುವವರಾಗಿ ಸಾಂವೃತ ಸತ್ವಾದಿ ಗಳನ್ನು ಅಂಗೀಕರಿಸುತ್ತಾರೆ. ಆದುದರಿಂದ ಸರ್ವರೂ ಈ ಅನುಭವವನ್ನು ಅನುಸರಿಸಲೇಬೇಕು. ಆ ಅನುಭವವನ್ನೂಕೂಡ ಯಾವ ಸೌತ್ರಾಂತಿಕನು ಅಪರೋಕ್ಷವಾದ ನೀಲಾದ್ಯಾಕಾರಕ್ಕೆ

ಅನುಭವಸಿದ್ಧವಾದ ಬಾಹ್ಯತ್ವವನ್ನು ತಿರಸ್ಕರಿಸಿರುವುದರಿಂದ ಅಪಲಾಪ ಮಾಡುತ್ತಾನೋ, ಹಾಗೆಯೇ ನೀಲಾದ್ಯಾಕಾರವು ಬುದ್ಧಿಸ್ಥವಾಗಿದೆ ಎನ್ನುವ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದ ಪ್ರಮಾಣವಿರಹಿತವಾದುದನ್ನಾಗಿ ಹೇಳುತ್ತಾನೆ. ಅಂತಹ ಅನುಭವವನ್ನು ಅಪಲಾಪ ಮಾಡತಕ್ಕ ಪ್ರಮಾಣವಿರಹಿತವಾದುದನ್ನು ಹೇಳತಕ್ಕ ಸೌತ್ರಾಂತಿಕನಿಗೆ ಸರ್ವದೂಷಣವೂ ಬಂದೇಬರುವುದು. ॥ ೨೦೭ ॥ ೨೦೮ ॥

ವೈಭಾಷಿಕ ಸೌತ್ರಾಂತಿಕರ ಮತ ನಿರಾಕರಣವನ್ನುಪಸಂಹಾರ ಮಾಡುತ್ತಾರೆ.

**ಮೂ ॥ ಅತೋ ನಿರ್ಮಾನಮಖಿಲಪ್ರಮಾಣಪ್ರತಿಪಕ್ಷಗಂ ।**
**ದುರ್ಮತಂ ಕೋ ನು ಗೃಹ್ಣೀಯಾದ್ವಿನಾಽಸುರತತಿಂ ಕ್ವಚಿತ್॥೨೦೯ ॥**

**ಅ ॥** ಅತಃ = ಆದುದರಿಂದ, ನಿರ್ಮಾನಂ = ನಿಷ್ಪ್ರಮಾಣಕವಾದ, ಅಖಿಲಪ್ರಮಾಣ ಪ್ರತಿಪಕ್ಷಗಂ = ಸರ್ವಪ್ರಮಾಣವಿರುದ್ಧಾರ್ಥವಿಷಯಕವಾದ, ದುರ್ಮತಂ = ಕೆಟ್ಟ ಮತವನ್ನು, ಅಸುರತತಿಂ = ದುರ್ಜನರ ಸಮುದಾಯವನ್ನು, ವಿನಾ = ಹೊರತು, ಕ್ವಚಿತ್ = ಎಲ್ಲಿಯೂ, ಕೋ ನು = ಯಾವನು, ಗೃಹ್ಣೀಯಾತ್ = ಸ್ವೀಕರಿಸಿಯಾನು?

**ತಾ ॥ ನ್ಯಾಯಸುಧಾ—** (1) ದಿಙ್ನಾಗ ಮೊದಲಾದವರು ಅನೇಕರು ಈ ಮತವನ್ನು ಸ್ವೀಕರಿಸಿರುವುದರಿಂದ 'ಕೋ ನು ಗೃಹ್ಣೀಯಾತ್' ಎನ್ನುವ ಆಕ್ಷೇಪವು ಹೇಗೆ ಕೂಡುತ್ತದೆಂದರೆ ಈ ಆಕ್ಷೇಪವು ಸತ್ಪುರುಷವಿಷಯಕವಾದುದೇ. ಅಸುರವಿಷಯಕವಲ್ಲ. ಅವರು ಅಸುರರೇ. ಆದುದರಿಂದ ಈ ಆಕ್ಷೇಪವು ಕೂಡಬಹುದು ॥ ೨೦೯ ॥ ಸೂ. ೧೮ ॥ ೧೯ ॥ ೨೦ ॥ ೨೧ ॥ ೨೨ ॥ ॥ ೨೩ ॥ ೨೪ ॥ ೨೫ ॥ ಅಧಿ. ೭ ॥

**ಸಮುದಾಯಾಧಿಕರಣವು ಸಮಾಪ್ತವಾಯಿತು.**



## ಶೂನ್ಯಾಧಿಕರಣವು.

ಶೂನ್ಯವಾದಿಗಳಾದ ಮಾಧ್ಯಮಿಕರ ಮತವನ್ನು ಈ ಅಧಿಕರಣದಲ್ಲಿ ನಿರಾಕರಿಸುತ್ತಾರೆ—

**" ಓಂ ನಾಸತೋ ದೃಷ್ಟತ್ವಾತ್ ಓಂ " ॥ ಸೂ. ೨೬ ॥**

ಶೂನ್ಯಕ್ಕೆ ಜಗತ್ಕಾರಣತ್ವವು ಯುಕ್ತವಲ್ಲ. ಪ್ರಮಾಣವಿಲ್ಲದಿರುವುದರಿಂದ. ಏಕೆ ಪ್ರಮಾಣ ವಿಲ್ಲವೆಂದರೆ— ಶೂನ್ಯಕಾರಣತ್ವವು ಎಲ್ಲಿಯೂ ಪ್ರತ್ಯಕ್ಷವಾಗದಿರುವುದರಿಂದ ಮತ್ತು ಶೂನ್ಯ ಕಾರಣತ್ವಬೋಧಕವಾದ ಆಗಮವು ಕಾಣದಿರುವುದರಿಂದ ಅಥವಾ ಶೂನ್ಯದ್ದೆಶೆಯಿಂದ ಜಗತ್ತಿಗೆ ಉತ್ಪತ್ತಿಯಿಲ್ಲ.

ಈ ಅಧಿಕರಣದಲ್ಲಿ ಮಾಧ್ಯಮಿಕರ ಮತವನ್ನು ನಿರಾಕರಿಸುತ್ತಾರೆ. ಆ ಮತಕ್ಕೆ ಹಿಂದೆ ಹೇಳಿದ ಅರ್ಥದಿಂದ ವಿರೋಧವನ್ನು ತೋರಿಸುವುದಕ್ಕಾಗಿ ಉಪನ್ಯಾಸಮಾಡುತ್ತಾರೆ—

ಮೂ ॥ ಅಪರಃ ಶೂನ್ಯಮಖಿಲಂ ಮನೋವಾಚಾಮಗೋಚರಂ ॥ ೨೧೦ ॥
ನಿರ್ವಿಶೇಷಂ ಸ್ವಯಂ ಭಾತಂ ನಿರ್ಲೇಪಮಜರಾಮರಂ ।
ಅಶೇಷದೋಷರಹಿತಮನಂತಂ ದೇಶಕಾಲತಃ ॥ ೨೧೧ ॥
ವಸ್ತುತಶ್ಚ ತದಸ್ಮೀತಿ ನಿತ್ಯೋಪಾಸಾಪರೋಕ್ಷಿತಂ ।
ರಾಗಾದಿದೋಷರಹಿತಂ ತದ್ಭಾವಂ ಯೋಗಿನಂ ನಯೇತ್ ॥ ೨೧೨ ॥

ಅ ॥ ಅಪರಃ=ಮಾಧ್ಯಮಿಕನು, ಅಖಿಲಂ=ಪಂಚಸ್ಕಂಧಾತ್ಮಕನಿಖಿಲಜಗತ್ತು, ಶೂನ್ಯಮೇವ =ಶೂನ್ಯರೂಪವೇ. (ಶೂನ್ಯದಿಂದ ಭಿನ್ನವಾದುದಲ್ಲ.) ಮತ್ತು ಶೂನ್ಯವು, ಮನೋವಾಚಾಂ = ಮನೋವಚನಗಳಿಗೆ, (ಪ್ರಮಾಣಮಾತ್ರಕ್ಕೆ) ಅಗೋಚರಂ = ಅವಿಷಯವು, ನಿರ್ವಿಶೇಷಂ=ಸರ್ವವಿಶೇಷವಿರಹಿತವಾದುದು, ಸ್ವಯಂ ಭಾತಂ=ಪರಪ್ರಕಾಶ್ಯವಲ್ಲ, ನಿರ್ಲೇಪಂ=ಧರ್ಮಾಧರ್ಮಸಂಬಂಧವಿರಹಿತವಾದುದು, ಅಜರಾಮರಂ = ಜರಾಮರಣವಿಲ್ಲದಿರುವುದು, ಅಶೇಷದೋಷರಹಿತಂ = ದುಃಖನೊದಲಾದ ನಿಖಿಲದೋಷಗಳಿಂದ ವಿರಹಿತವಾದುದು, ದೇಶಕಾಲತಃ ಅನಂತಂ= ದೇಶಕಾಲಗಳಿಂದ ಪರಿಚ್ಛೇದವಿರಹಿತವಾದುದು, ವಸ್ತುತಶ್ಚಾನಂತಂ= ವಸ್ತ್ವಂತರಪ್ರತಿಯೋಗಿಕಾನ್ಯೋನ್ಯಾಭಾವರಹಿತವಾದುದು, ತತ್ ಅಸ್ಮಿ ಇತಿ ನಿತ್ಯೋಪಾಸಾಪರೋಕ್ಷಿತಂ=ಆ ಶೂನ್ಯವೇ ನಾನು ಆಗಿದ್ದೇನೆಂಬ ನಿತ್ಯೋಪಾಸನೆಯಿಂದ ಅಪರೋಕ್ಷೀಕರಿಸಲ್ಪಟ್ಟದ್ದು, ಇಂತಹ, ತತ್=ಆ ಶೂನ್ಯವು, ಯೋಗಿನಂ = ರಾಗಾದಿದೋಷಗಳಿಂದ ವಿರಹಿತನಾದ ಯೋಗಿಯನ್ನು, ತದ್ಭಾವಂ=ಶೂನ್ಯತ್ವರೂಪವಾದ ಮೋಕ್ಷವನ್ನು, ನಯೇತ್=ಹೊಂದಿಸಿಕೊಡುವುದು, ಇತಿ=ಹೀಗೆ, ಬ್ರೂತೇ=ಹೇಳುತ್ತಾನೆ ॥ ೨೧೦ ॥ ೨೧೧ ॥ ೨೧೨ ॥

ಶೂನ್ಯಸ್ವರೂಪವು ಇಂತಹುದೆಂದಾದರೆ 'ಅಖಿಲಂ ಶೂನ್ಯಂ' ಎಂದು ಹೇಳಿದ್ದು ಹೇಗೆ ಕೂಡುತ್ತದೆ, ಎಂದರೆ—

ಮೂ॥ ತಸ್ಯೈವಾನಾದಿಸಂವೃತ್ಯಾ ನಾನಾಭೇದಾತ್ಮಕಂ ಜಗತ್ ।
ಸದಿವಾಭಾತಿ ಸತ್ಯತ್ವಂ ಸಾಂವೃತಂ ತಸ್ಯ ಚೇಷ್ಯತೇ ॥ ೨೧೩ ॥
ಪಾರಮಾರ್ಥಿಕಸತ್ಯತ್ವಂ ಶೂನ್ಯಾದನ್ಯಸ್ಯ ನ ಕ್ವಚಿತ್ ।
ಸಾಂವೃತೇನೈವ ಸತ್ವೇ(ತ್ಯೇ)ನ ವ್ಯವಹಾರೋಽಖಿಲೋ ಭವೇತ್ ॥ ೨೧೪ ॥
ಶೂನ್ಯಾತ್ಸಂವೃತಿಯೋಗೇನ ವಿಶ್ವಮೇತತ್ಪ್ರವರ್ತತೇ ।
ಸೃಷ್ಟಿಕಾಲೇಷು ನಶ್ಯಾಂತೇ ಸ್ತಿಮಿತಂ ಶೂನ್ಯತಾಂ ವ್ರಜೇತ್ ।
ಇತಿ ಬ್ರೂತೇ ತಮುದ್ದಿಶ್ಯ ಜಗಾದ ಜಗತಾಂ ಗುರುಃ ॥ ೨೧೫ ॥

ಅ ॥ ತಸ್ಯೈವ=ಆ ಶೂನ್ಯದ್ದೇ, ಅನಾದಿಸಂವೃತ್ಯಾ=ಅನಾದಿಯಾದ ವಿಶ್ವಾರೋಪನಿಮಿತ್ತಕವಾದ ಅವಿದ್ಯೆಯಿಂದ, ನಾನಾಭೇದಾತ್ಮಕಂ=ಅನೇಕ ಭೇದರೂಪವಾದ (ಪಂಚಸ್ಕಂಧಾತ್ಮಕವಾದ) ಜಗತ್=ಜಗತ್ತು, ಸದಿವ=ಸತ್ಯವಾಗಿ, ಆಭಾತಿ=ತೋರುತ್ತದೆ. (ಪಕ್ಷಾಂತರವನ್ನು ಹೇಳುತ್ತಾರೆ.) ತಸ್ಯ ಚ=ಆರೋಪಿತವಾದ ಜಗತ್ತಿಗೆ, ಸಾಂವೃತಂ ಸತ್ಯತ್ವಂ=ಸಾಂವೃತಸತ್ಯತ್ವವೂ, ಇಷ್ಯತೇ=ಅಂಗೀಕರಿಸಲ್ಪಡುತ್ತದೆ. (ಆದುದರಿಂದ ಸತ್ ಎನ್ನುವ ಪ್ರತ್ಯಯದಿಂದ ವಿರೋಧವಿಲ್ಲ.) (ಜಗತ್ತಿಗೆ ಸತ್ವವಿದ್ದರೆ ಅದು ಅಸತ್ ಎನ್ನುವುದು ಹೇಗೆ? 'ಸದಿವ ಆಭಾತಿ' ಎಂದು ಹೇಳಿದ್ದು ಹೇಗೆ ಕೂಡುತ್ತದೆಂದರೆ) ಪಾರಮಾರ್ಥಿಕಸತ್ಯತ್ವಂ=ಸರ್ವಥಾ ಅಬಾಧ್ಯತ್ವ

ರೂಪವಾದ ಸತ್ವವು, ಶೂನ್ಯಾತ್ = ಶೂನ್ಯತತ್ವದ್ವೇಶಿಯಿಂದ, ಅನ್ಯಸ್ಯ=ಇತರವಾದುದಕ್ಕೆ, ಕ್ವಚಿತ್=ಎಲ್ಲಿಯೂ, ನ=ಇಲ್ಲ. (ತಥಾಚ ಜಗತ್ತಿನಲ್ಲಿ ಪಾರಮಾರ್ಥಿಕ ಸತ್ವವು ಇಲ್ಲದಿರುವುದರಿಂದ ಜಗತ್ತು ಅಸತ್ತೆಂದು ಹೇಳಲ್ಪಡುತ್ತದೆ.) (ಪಾರಮಾರ್ಥಿಕ ಸತ್ವವು ಇಲ್ಲವಾದರೆ ಜಗತ್ತಿನಲ್ಲಿ ಅರ್ಥಕ್ರಿಯಾದಿ ವ್ಯವಹಾರವು ಹೇಗೆ ಕೂಡುತ್ತದೆಂದರೆ) ಸಾಂವೃತೇನ್ನೈವ ಸತ್ವೇನ=ಸಾಂವೃತ ಸತ್ವದಿಂದಲೇ, ಅಖಿಲಃ ವ್ಯವಹಾರಃ=ಹಾನ, ಉಪಾದಾನ, ಉಪೇಕ್ಷಾ, ಅಭಿಜ್ಞಾ, ಅಭಿವದನ, ಅರ್ಥಕ್ರಿಯಾರೂಪವಾದ ವ್ಯವಹಾರವು, ಭವೇತ್=ಆಗುವುದು. (ಸ್ವಪ್ನದಂತೆ ವ್ಯವಹಾರವೂ ಅಸತ್ತಾಗಿದೆ. ಸರ್ವಕ್ರಿಯಾವಿರಹಿತವಾಗಿರುವುದರಿಂದ ಪಾರಮಾರ್ಥಿಕ ಸತ್ವವೇ ವ್ಯವಹಾರ ವಿರೋಧಿಯು. ಸತ್ವಾಭಾವವಲ್ಲ. (ಸೃಷ್ಟಿಪ್ರಲಯವಿಷಯಕವಾದ ವಿವಾದವನ್ನು ತೋರಿಸುತ್ತಾರೆ.) ಶೂನ್ಯಾತ್=ಶೂನ್ಯತತ್ವದ್ವೇಶಿಯಿಂದ, ಸಂವೃತಿಯೋಗೇನ = ವಿಶ್ವಾರೋಪನಿಮಿತ್ತಕವಾದ ಅಜ್ಞಾನದ ಸಂಬಂಧದಿಂದ, ಏತತ್ ವಿಶ್ವಂ=ಈ ಜಗತ್ತು, ಸೃಷ್ಟಿಕಾಲೇ=ಸೃಷ್ಟಿಕಾಲದಲ್ಲಿ, ಪ್ರವರ್ತತೇ=ಹುಟ್ಟುತ್ತದೆ. ಪುನಃ ಚ=ಮತ್ತು, ಅಂತೇ = ಪ್ರಲಯಕಾಲದಲ್ಲಿ, ಸ್ತಿಮಿತಂ= ನಿಷ್ಕ್ರಿಯವಾದುದು, ಶೂನ್ಯತಾಂ=ಶೂನ್ಯತ್ವವನ್ನು, (ಸ್ವಾಪ್ನಗಜಾದಿಗಳಂತೆಯೇ) ವ್ರಜೇತ್= ಹೊಂದುವುದು. ಇತಿ=ಹೀಗೆ ಮಾಧ್ಯಮಿಕನು, ಬ್ರೂತೇ=ಹೇಳುತ್ತಾನೆ. (ಹೀಗೆ ಉಪನ್ಯಸ್ತವಾದ ಮತದ ನಿರಾಸಾರ್ಥವಾಗಿ ಅಧಿಕರಣವನ್ನು ಅವತರಿಸುತ್ತಾರೆ.) ತಂ=ಆತನನ್ನು, ಉದ್ದಿಶ್ಯ= ಉದ್ದೇಶಿಸಿ, ಜಗತಾಂ ಗುರುಃ=ಜಗದ್ಗುರುಗಳಾದ ವೇದವ್ಯಾಸರು, ಜಗಾದ=(ಈ ಅಧಿಕರಣವನ್ನು) ಹೇಳಿದರು ॥ ೨೧೩ ॥ ೨೧೪ ॥ ೨೧೫ ॥

ಶೂನ್ಯದಿಂದಲೇ ಈ ಜಗತ್ತು ಹುಟ್ಟುತ್ತದೆಂದು ಯಾವುದು ಹೇಳಲ್ಪಟ್ಟದೋ ಆ ಯಥಾಶ್ರುತವನ್ನು ತಿರಸ್ಕರಿಸುವುದಕ್ಕಾಗಿ '**ಓಂ ನಾಸತೋ ದೃಷ್ಟತ್ವಾತ್ ಓಂ**' ಎನ್ನುವ ಸೂತ್ರವು.

ಈ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ --

**ಮೂ ॥ ನಾಸತೋ ಜಗತೋ ಭಾವೋ ನ ಹಿ ದೃಷ್ಟಾಽಸತೋ ಜನಿಃ ।**
**ಸತಃ ಕ್ವಚಿತ್ಪ್ರಮಾಣಂ ಚ ದೃಷ್ಟಿರೇವಾಖಿಲಾದ್ವರಂ ॥ ೨೧೬ ॥**

ಅ ॥ ಅಸತಃ=ಸರ್ವ ವಿಶೇಷಗಳಿಂದ ವಿರಹಿತವಾಗಿರುವುದರಿಂದ ಗಗನಕುಸುಮದಿಂದ ಸಮಾನವಾದ ಶೂನ್ಯತತ್ವದ್ವೇಶಿಯಿಂದ, ಜಗತಃ=ಜಗತ್ತಿಗೆ, ಭಾವಃ=ಉತ್ಪತ್ತಿಯು, ನ=ಕೂಡುವುದಿಲ್ಲ (ಏಕೆಂದರೆ) ಸತಃ=ಉಂಟಾಗತಕ್ಕ ಕಾರ್ಯಕ್ಕೆ, ಕ್ವಚಿತ್=ಎಲ್ಲಿಯೂ, ಅಸತಃ= ಅಸತ್ತಿನಿಂದ, ಜನಿಃ = ಉತ್ಪತ್ತಿಯು, ಹಿ=ಯಾವ ಕಾರಣದಿಂದ, ನ ದೃಷ್ಟಾ=ಕಾಣಲ್ಪಡಲ್ಲೇ ಇಲ್ಲವೋ, (ಇದೆಲ್ಲಾ ಆಗುತ್ತಿತ್ತು. ಪ್ರಮಾಣಸಾಮಾನ್ಯಾಭಾವವು ಪ್ರಮೇಯಾಭಾವವನ್ನು ಸಾಧಿಸಿಕೊಡುತ್ತದೆ. ಅಲ್ಲದೆ ಪ್ರಮಾಣ ವಿಶೇಷಾಭಾವವು ಪ್ರಮೇಯಾಭಾವವನ್ನು ಸಾಧಿಸುವುದಿಲ್ಲ.) (ಪ್ರಮಾಣವಿಶೇಷಾಭಾವದಿಂದಲೂ ಪ್ರಮೇಯಾಭಾವವು ಸಿದ್ಧಿಸುವುದಾದರೆ ಅಸ್ಮದಾದಿ ಪ್ರತ್ಯಕ್ಷವ್ಯಾವೃತ್ತಿಯಿಂದ ಧರ್ಮಾದಿಗಳ ಅಭಾವಸಿದ್ಧಿಯೂ ಆಗಬೇಕಾಗುವುದು. ಆದಕಾರಣ ಇಲ್ಲಿಯೂ 'ಪ್ರಮಾಣಾಭಾವಾತ್' ಎಂದು ಹೇತುವನ್ನುಹೇಳಬೇಕು. ವ್ಯಭಿಚಾರವು ಬರುವುದರಿಂದ ಅದೃಷ್ಟತ್ವಾತ್ ಎಂದು ಪ್ರತ್ಯಕ್ಷಾಭಾವವನ್ನುಹೇಳುವುದು ಹೇಗೆ ಕೂಡುತ್ತದೆಂದರೆ) ದೃಷ್ಟಿರೇವ = ಪ್ರತ್ಯಕ್ಷವೇ, ಅಖಿಲಾತ್=ನಿಖಿಲ ಅನುಮಾನದಿಂದಲೂ ಆಗಮದಿಂದಲೂ, ವರಂ ಪ್ರಮಾಣಂ ಚ= ಶ್ರೇಷ್ಠವಾದ ಪ್ರಮಾಣವು.

**ತಾ ॥** ನ್ಯಾಯಸುಧಾ— (1) 'ನಾಸತೋ ಜಗತೋ ಭಾವಃ' ಎಂದು ಪ್ರತಿಜ್ಞಾಮಾಡಿ, ಯಾವುದರಿಂದ ಎಂಬ ಆಕಾಂಕ್ಷಾ ಬಂದರೆ ' ಆ ವಿಷಯದಲ್ಲಿ ಪ್ರಮಾಣವಿಲ್ಲದಿರುವುದ

ರಿಂದ ಎನ್ನುವ ಹೇತುವನ್ನು ಮನಸ್ಸಿನಲ್ಲಿಟ್ಟುಕೊಂಡು ಆ ವಿಷಯದಲ್ಲಿ ಹೇಗೆ ಪ್ರಮಾಣವಿಲ್ಲವೆನ್ನುವ ವಿಚಾರವು ಬಂದರೆ ಅನುಮಾನ ಆಗಮಗಳಿಗೆ ಪ್ರತ್ಯಕ್ಷವು ಮೂಲವಾಗಿರುವುದರಿಂದ ಪ್ರತ್ಯಕ್ಷವೇ ಶ್ರೇಷ್ಠಪ್ರಮಾಣವೆಂದು ಇಟ್ಟುಕೊಂಡು ಮೊದಲು 'ಅದೃಷ್ಟತ್ವಾತ್' ಎನ್ನುವುದರಿಂದ ಪ್ರತ್ಯಕ್ಷಾಭಾವವನ್ನು ತೋರಿಸಿದರು. ಪ್ರಧಾನಪ್ರತಿಜ್ಞೆಯಲ್ಲಿ ಪ್ರತ್ಯಕ್ಷಾಭಾವವನ್ನೇ ಹೇತುವೆಂದು ಹೇಳಿದ್ದಲ್ಲ. ಆದುದರಿಂದ ಹಿಂದೆ ಹೇಳಿದ ವ್ಯಭಿಚಾರ ರೂಪದೋಷವು ಬರುವುದಿಲ್ಲ.

(2) ಹಾಗಾದರೆ ಅನುಮಾನಾದಿಗಳೂ ಇಲ್ಲವೆಂದೂ ಹೇಳಬೇಕು, ಎಂದರೆ— ಅಹುದು. ಶೂನ್ಯವಾದಿಯು ವೇದಾದಿಗಳಿಗೆ ಪ್ರಾಮಾಣ್ಯವನ್ನು ಅಂಗೀಕರಿಸುವುದಿಲ್ಲ. ಶೂನ್ಯವಾದಿಗಳ ಆಗಮಕ್ಕೆ ನಾವು ಪ್ರಾಮಾಣ್ಯವನ್ನು ಅಂಗೀಕರಿಸುವುದಿಲ್ಲ. ಆದುದರಿಂದ ಅಂತೂ ಉಭಯ ಸಂಪ್ರತಿಪನ್ನವಾದ ಆಗಮವು ಇಲ್ಲ. ಪ್ರತ್ಯಕ್ಷವು ಅನುಮಾನಕ್ಕೆ ಉಪಜೀವ್ಯವಾಗಿರುವುದರಿಂದ ಪ್ರತ್ಯಕ್ಷವಿಲ್ಲದಿರುವುದರಿಂದ ಅನುಮಾನವಿಲ್ಲವೆನ್ನುವುದೂ ಸಿದ್ಧವೇ ಆಗಿದೆ. ಪ್ರತ್ಯಕ್ಷದಿಂದ ಎಲ್ಲಿಯಾದರೂ ಉಪಲಬ್ಧವಾದುದನ್ನೇ ಅನುಮಾನದಿಂದ ಸಾಧಿಸಬೇಕು. ಆದುದರಿಂದ ಹೇಳದೆ ಇದ್ದರೂ ಅನುಮಾನಾದಿಗಳು ಇಲ್ಲವೆಂದು ಹಿಂದೆ ಹೇಳಿದ ಪ್ರಕಾರ ಸಿದ್ಧವಾಗುವುದರಿಂದ ಅದೃಷ್ಟತ್ವಾತ್ ಎಂದೇ ಸೂತ್ರಕಾರರು ಹೇಳಿರುವರು. ॥ ೨೧೬ ॥

ಶೂನ್ಯದ್ವೇಶೆಯಿಂದ ಜಗತ್ತು ಹುಟ್ಟುತ್ತದೆನ್ನುವ ವಿಷಯದಲ್ಲಿ ಪ್ರತ್ಯಕ್ಷವಾಗಲೀ, ಆಗಮವಾಗಲೀ ಪ್ರಮಾಣವಾಗದಿದ್ದರೂ ಅನುಮಾನವು ಪ್ರಮಾಣವಾಗುವುದು. ಅಸತ್ತಿನದ್ವೆಶೆಯಿಂದ ಸತ್ತುಹುಟ್ಟುತ್ತದೆನ್ನುವ ವಿಷಯದಲ್ಲಿ ಪ್ರತ್ಯಕ್ಷವಿಲ್ಲದಿರುವುದರಿಂದ ದೃಷ್ಟಾನುಮಾನವು (ಪ್ರತ್ಯಕ್ಷಕ್ಕೆ ಯೋಗ್ಯವಾದ ಅರ್ಥವನ್ನು ಅನುಮೇಯಿಸಿಕೊಡತಕ್ಕದ್ದು) ಕೂಡದಿದ್ದಾಗ್ಗೂ ಸಾಮಾನ್ಯತೋ ದೃಷ್ಟಾನುಮಾನವು (ಪ್ರತ್ಯಕ್ಷಕ್ಕೆ ಅಯೋಗ್ಯವಾದ ಅರ್ಥವನ್ನು ಅನುಮೇಯಿಸಿಕೊಡತಕ್ಕದ್ದು) ಕೂಡುತ್ತದೆ. ಕಾರಣಕ್ಕೆ ಸತ್ವವನ್ನು ನಿಷೇಧಮಾಡಿದರೆ ಅಸತ್ತಿನಿಂದಲೇ ಉತ್ಪತ್ತಿಯು ಸಿದ್ಧಿಸುವುದು ಎಂದಾಶಂಕಿಸಿದರೆ ಅನುಮಾನಗಳಿಗೆ ತರ್ಕ ಪ್ರತಿಹತಿಯನ್ನು ಹೇಳುವುದಕ್ಕಾಗಿ ಸೂತ್ರವು.

**"ಓಂ ಉದಾಸೀನಾನಾಮಪಿ ಚೈವಂ ಸಿದ್ಧಿಃ ಓಂ"** ॥ ಸೂ. ೨೭ ॥

ಅಸತ್ತಿಗೆ ಕಾರಣತ್ವವಿದ್ದರೆ ಹೇಯೋಪಾದೇಯ ಬುದ್ಧಿಗೆ ವಿಷಯಗಳಾಗದಿರುವ ಗಗನ ಕುಸುಮಾದಿಗಳ ಸಕಾಶದಿಂದಲೂ ಸೌರಭ್ಯಾದಿ ಕಾರ್ಯವು ಸಿದ್ಧಿಸಬೇಕಾಗುವುದು. ಅವುಗಳಿಂದ ಕಾರ್ಯವು ಸಿದ್ಧಿಸದೆ ಇರುವುದಾದರೆ ಶೂನ್ಯದ್ವೆಶೆಯಿಂದಲೂ ಕಾರ್ಯವು ಆಗದೆ ಹೋಗಬೇಕಾಗುವುದು. ಅಸತ್ವವು ಎರಡರಲ್ಲಿಯೂ ಸಮಾನವೇ.

ಈ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ —

**ಮೂ ॥ ಯದ್ಯೇವಂ ಸತ್ತ್ವಮಸತ್ತ್ವಾನ್ಮಧುರಾದಿವ ಪೀನತಾ ॥ ೨೧೭ ॥**
**ಭವೇಜ್ಜನಸ್ಯ ಮಾರ್ಜಾರಶೃಂಗಂ ಗೋರಿವ ಘಾತಕಂ ।**
**ಕಾರ್ಯಾರ್ಥೀ ಕಾರಣಂ ಸತ್ತ್ವೇ ನೋಪಾದದ್ಯಾತ್ಕಥಂಚನ ॥ ೨೧೮ ॥**
**ನ ಪ್ರವರ್ತತೇ ಚೇಷ್ಟಾಯ ಶೂನ್ಯಾದೇವೇಷ್ಟಸಂಭವಾತ್ ॥**
**ದೇಶಕಾಲಾದಿನಿಯಮೋ ನ ಹಿ ಶೂನ್ಯಾತ್ಸತೋ ಭವೇತ್ ॥ ೨೧೯ ॥**

ಅ ॥ ಯದಿ=ಯಾವ ಪಕ್ಷದಲ್ಲಿ, ಏವಂ=ಹೀಗೆ, (ಅಂದರೆ ಅಸತ್ತಿನ ದೆಶೆಯಿಂದಲೇ, ಯಾವುದಾದರೊಂದು ಕಾರ್ಯವು ಹುಟ್ಟುವುದಾದರೆ ಆಗ, ಮಧುರಾದಿವ = ಮಧುರ ಮೊದಲಾದ ರಸದಿಂದಲೆಂಬಂತೆ, ಸಪ್ತಮರಸಾತ್ = ಏಳನೇರಸದ್ದೆಶೆಯಿಂದ, ಜನಸ್ಯ=ಜನರಿಗೆ, ಪೀನತಾ=ಪೀನತ್ವವು, ಭವೇತ್= ಆಗುವುದು. ಗೋಃಶೃಂಗಮಿವ = ಗೋವಿನ ಶೃಂಗದಂತೆ, ಮಾರ್ಜಾರಶೃಂಗಮಪಿ=ಬೆಕ್ಕಿನ ಕೋಡೂ ಕೂಡ, ಜನಸ್ಯ=ಜನರಿಗೆ, ಘಾತಕಂ=ಘಾತಕವಾದುದು, ಭವೇತ್=ಆಗುವುದು. (ಹೀಗೆಯೇ ಹೇಯೋಪಾದೇಯೋಪೇಕ್ಷಣೀಯ ಬುದ್ಧಿಗೆ ಅವಿಷಯಗಳಾದ ಸಪ್ತಮರಸಾದಿಗಳ ಸಕಾಶದ್ದೆಶೆಯಿಂದಲೂ ಪೀನತ್ವಾದಿ ಕಾರ್ಯವು ಸಿದ್ಧಿಸಬೇಕಾಗುವುದು ) (ರೀತ್ಯಂತರದಿಂದ ವ್ಯಾಖ್ಯಾನ ಮಾಡುತ್ತಾರೆ.) (ಅಸತ್ತಿನಿಂದಲೇ ಕಾರ್ಯವು ಹುಟ್ಟುವುದಾದರೆ ಆಗ) ಕಾರ್ಯಾರ್ಥೀ=ಪಟ ಮೊದಲಾದ ಕಾರ್ಯಗಳನ್ನು ಇಚ್ಛಿಸತಕ್ಕ ಕುವಿಂದ ಮೊದಲಾದವರು, ಸಚ್ಚ ಕಾರಣಂ = ಸತ್ತಾದ ತಂತು ಮೊದಲಾದ ಕಾರಣವನ್ನು, ಕಥಂಚನ=ಸರ್ವಪ್ರಕಾರದಿಂದಲೂ, ನೋಪಾದದ್ಯಾತ್ = ತೆಗೆದುಕೊಳ್ಳಲಾರನು. (ಅಸತ್ತಿನಿಂದಲೇ ಪಟಾದಿಗಳು ಹುಟ್ಟಬಹುದಷ್ಟೆ.) (ಅತಿಪ್ರಸಂಗಾಂತರವನ್ನು ಹೇಳುತ್ತಾರೆ.) (ಅಸತ್ತಿನ ದ್ದೆಶೆಯಿಂದ ಕಾರ್ಯವು ಹುಟ್ಟುವುದಾದರೆ ಸತ್ತಾದ ಕಾರಣವನ್ನು ತೆಗೆದುಕೊಳ್ಳುವುದು ಕೂಡುವುದಿಲ್ಲವೆಂದು ಇಷ್ಟೇ ಅಲ್ಲ. ಮತ್ತೆ) ಶೂನ್ಯಾದೇವ = ಶೂನ್ಯದ್ದೆಶೆಯಿಂದಲೇ, ಇಷ್ಟಸಂಭವಾತ್=ಇಷ್ಟಾರ್ಥವು ಕೂಡುವುದರಿಂದ, ಇಷ್ಟಾಯ ಚ=ಇಷ್ಟವಾದ ಪಟಾದಿಗಳನ್ನು ಹುಟ್ಟಿಸುವುದಕ್ಕಾಗಿ, ನ ಪ್ರವರ್ತೇತ ಚ=ಪ್ರವರ್ತಿಸಲಿಕ್ಕಿಲ್ಲ. ಪ್ರಯತ್ನ ಮಾಡಲಿಕ್ಕೂ ಇಲ್ಲ. ಏಕೆಂದರೆ- ಶೂನ್ಯದಿಂದಲೇ ಇಷ್ಟಸಿದ್ಧಿಯು ಆಗಬಹುದಷ್ಟೆ! (ಇದರಿಂದ ತಂತು ಮೊದಲಾದ ಉಪಾದಾನಾದಿಗಳಲ್ಲಿ ಉದಾಸೀನರಾದವರೂ, ಚಿಕೀರ್ಷಾದಿರಹಿತರೂ ಆದ ಪುರುಷರಿಗೂ ಪಟಾದಿಗಳು ಸಿದ್ಧಿಸಬೇಕಾಗುವುವು. ಎಂದು ಸೂತ್ರವು ವ್ಯಾಖ್ಯಾತವಾಯಿತು ) (ಪ್ರಕಾರಾಂತರದಿಂದ ವ್ಯಾಖ್ಯಾನ ಮಾಡುತ್ತಾರೆ.) ಶೂನ್ಯಾತ್ಸತಃ = ಶೂನ್ಯದಿಂದಲೇ ಆಗತಕ್ಕ ಕಾರ್ಯಕ್ಕೆ, ದೇಶಕಾಲಾದಿನಿಯಮಃ=ದೇಶಕಾಲವಯೋವಸ್ಥಾ ನಿಯಮವು, ನ ಹಿ ಭವೇತ್=ಆಗಲಾರದು.

ತಾ ॥ (1) ಶೂನ್ಯದಿಂದಲೇ ಜಗತ್ತು ಉಂಟಾಗುವುದಾದರೆ ಆಗ ಗೋಧಿಗಳು ಕಪ್ಪುಭೂಮಿಯಲ್ಲಿ ಹುಟ್ಟುತ್ತವೆ. ಪಾಂಡುಭೂಮಿಯಲ್ಲಿ ಹುಟ್ಟುವುದಿಲ್ಲ. (2) ವಸಂತಋತುವಿನಲ್ಲಿ ಕಿಂಶುಕವೃಕ್ಷಗಳು ಪುಷ್ಪಿತಗಳಾಗುತ್ತವೆ. ವರ್ಷಋತುವಿನಲ್ಲಿ ಪುಷ್ಪಿತಗಳು ಆಗುವುದಿಲ್ಲ. (3) ಮೂರು ವರುಷದ ಗೋವು ಗರ್ಭವನ್ನು ಧರಿಸುತ್ತದೆ. ಒಂದು ಎರಡು ವರ್ಷದ ಗೋವು ಗರ್ಭವನ್ನು ಧರಿಸುವುದಿಲ್ಲ. (4) ಸತುಷಗಳಾದ ಧಾನ್ಯಗಳೇ (ಹೊಟ್ಟುವುಳ್ಳ ಭತ್ತಗಳೇ) ಅಂಕುರಗಳನ್ನು ಹುಟ್ಟಿಸುತ್ತವೆ. ಹೊಟ್ಟು ಇಲ್ಲದೆ ಇರುವ ವ್ರೀಹಿಗಳು ಅಂಕುರಗಳನ್ನು ಹುಟ್ಟಿಸಲಾರವು. ಇದು ಮೊದಲಾದ ದೇಶಕಾಲಾದಿ ನಿಯಮವು ಕಾರ್ಯೋತ್ಪತ್ತಿಯಲ್ಲಿ ಕೂಡಲಾರದು ಇದರಿಂದ ಉದಾಸೀನಗಳಾದ ಅಂದರೆ ದೇಶಕಾಲಾದಿ ನಿಯಮವನ್ನು ಅಪೇಕ್ಷಿಸದೆ ಇರುವ ಕಾರ್ಯಗಳಿಗೂ ಉತ್ಪತ್ತಿಯಾಗಬೇಕಾಗುವುದು ಎಂದು ವ್ಯಾಖ್ಯಾತವಾಯಿತು. ಅಂತೂ ಶೂನ್ಯದಿಂದಲೇ ಕಾರ್ಯವು ಹುಟ್ಟುವುದಾದರೆ ಕರ್ತೃ ಉಪಾದಾನ ನಿಮಿತ್ತ ಕಾರಣಗಳ ಅಪೇಕ್ಷೆಯು ಬಾರದೆ ಹೋಗಬೇಕಾಗುವುದು. ॥ ೨೧೭ ॥ ೨೧೮ ॥ ೨೧೯ ॥

ಹಾಗಾದರೆ ಆದಿ ಸೃಷ್ಟಿಯಲ್ಲಿಯೇ ಶೂನ್ಯದ್ದೆಸೆಯಿಂದ ಕಾರ್ಯೋತ್ಪತ್ತಿಯನ್ನು ಹೇಳುತ್ತೇವೆ. ಸರ್ವದಾ ಅಲ್ಲ. ಬೇರೆ ಸಮಯದಲ್ಲಿ ಆದರೂ ಕರ್ತೃಮೊದಲಾದ ಕಾರಣಗಳ ಸಮುದಾಯದಿಂದಲೇ ಕಾರ್ಯೋತ್ಪತ್ತಿಯೆಂದು ಹೇಳುತ್ತೇವೆ. ಆದುದರಿಂದ ಅತಿಪ್ರಸಂಗವಿಲ್ಲವೆಂದಾಶಂಕಿಸಿದರೆ—

**ಮೂ ॥ ಪುರುಷೇಚ್ಛಾನುಸಾರೇಣ ಯದಿ ಕಿಂಚಿತ್ಪ್ರಜಾಯತೇ ।**
**ಕಿಂ ನಾನುಮೀಯತೇ ತದ್ವದ್ವಸ್ತುತ್ವಾತ್ಪುರುಷೋದ್ಭವಃ ।**
**ಸರ್ವಸ್ಯಾಪಿ [ನ ಚಾಭಾವೋ ವಿಶ್ವಂ ಸದಿತಿ ಗಮ್ಯತೇ] ॥ ೨೨೦ ॥**

**ಅ ॥** ಯದಿ=ಯಾವ ಪಕ್ಷದಲ್ಲಿ, ಪುರುಷೇಚ್ಛಾನುಸಾರೇಣ=ಪುರುಷರ ಇಚ್ಛೆಯನ್ನು ಅನುಸರಿಸಿ, ಕಿಂಚಿತ್=ಅಧುನಾತನ ಕಾರ್ಯವು, ಪ್ರಜಾಯತೇ=ಹುಟ್ಟುವುದಾದರೆ, ತದ್ವತ್= ಹಾಗೆಯೇ, ಅಧುನಾತನಕಾರ್ಯದಂತೆ, ವಸ್ತುತ್ವಾತ್=ಕಾರ್ಯತ್ವವಿದ್ದುದರಿಂದ, ಸರ್ವಸ್ಯಾಪಿ= ಆದಿಕಾಲೀನ ಕಾರ್ಯಕ್ಕೂ, ಕಿಂ=ಯಾವುದಕ್ಕಾಗಿ, ಪುರುಷೋದ್ಭವಃ=ಪುರುಷೇಚ್ಛೆಯನ್ನು ಅನುಸರಿಸಿ ಉತ್ಪತ್ತಿಯು, ನಾನುಮೀಯತೇ=ಅನುಮೇಯಿಸಲ್ಪಡುವುದಿಲ್ಲ.

**ತಾ ॥** ಇದರಿಂದ, ನಾ=ಪುರುಷನು, ಸತಃ=ಆದಿಕಾಲೀನ ಕಾರ್ಯಕ್ಕೆ, ಕರ್ತನೆಂದು ಅನುಮೇಯಿಸಲಿಕ್ಕೆ ಯೋಗ್ಯನು. ಏಕೆಂದರೆ ಕಂಡದ್ದರಿಂದ ಅಂದರೆ ಈಗಿನ ಕಾರ್ಯಗಳು ಪುರುಷಕರ್ತೃಕಗಳೆಂದು ನಿಶ್ಚಿತಗಳಾಗಿವೆ ಎಂದು 'ನಾಸತೋಽದೃಷ್ಟತ್ವಾತ್' ಎಂದು ಪ್ರಥಮ ಸೂತ್ರವನ್ನು ಪ್ರಕಾರಾಂತರದಿಂದ ವ್ಯಾಖ್ಯಾನಮಾಡಿದಂತೆ ಆಯಿತು ॥ ೨೨೦ ॥

ಜಗತ್ತಿಗೆ ಯಾವುದು ಅಸತ್ವವು ಹೇಳಲ್ಪಟ್ಟದೋ ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವು.

**"ಓಂ ನಾಭಾವ ಉಪಲಬ್ಧೇಃ ಓಂ"** ॥ ಸೂ. ೨೮ ॥

ಜಗತ್ತು ಅಸತ್ತಲ್ಲ, ಸತ್ ಎಂದು ತೋರುವುದರಿಂದ.

ಈ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ.—

**ಮೂ ॥ [ಸರ್ವಸ್ಯಾಪಿ] ನ ಚಾಭಾವೋ ವಿಶ್ವಂ ಸದಿತಿಗಮ್ಯತೇ ।**
**ಯತೋಽನುಭವರೋಧೇ ತು ವಚನಂ ವಾದಿನಃ ಕುತಃ ॥ ೨೨೧ ॥**
**ಸ್ವಪ್ನಭ್ರಾಂತಿವದೇವೇದಂ ಸಂವೃತ್ತ್ಯೈವೋಪಲಭ್ಯತೇ ।**
**ಯದಿ ಸತ್ವೇನ [ಕಿಂಚಾತ್ರಭ್ರುವೋನ್ಯೈವ ನಿವರ್ತತೇ] ॥ ೨೨೨ ॥**

**ಅ ॥** ಯತಃ = ಯಾವಕಾರಣದ್ದೆಸೆಯಿಂದ, ವಿಶ್ವಂ = ಜಗತ್ತು, ಸದಿತಿ=ಸತ್ತೆಂದು, ಗಮ್ಯತೇ=ತಿಳಿಯಲ್ಪಡುತ್ತದೊ. (ಆದಕಾರಣ) ವಿಶ್ವಂ = ಜಗತ್ತು, ಅಭಾವಃ = ಅಸತ್ತೂ, ನಚ = ಅಲ್ಲ, (ಇದರಿಂದ ಜಗತ್ತು ಸತ್ಯವೆನ್ನುವ ವಿಷಯದಲ್ಲಿ ಪ್ರತ್ಯಕ್ಷಪ್ರಮಾಣವು ಹೇಳಲ್ಪಟ್ಟಿತು.) (ಪ್ರತ್ಯಕ್ಷದಿಂದ ಜಗತ್ತು ಸತ್ ಎಂದು ತೋರಿದಾಗ್ಯೂ ಅಸತ್ತಾದರೆ ದೋಷವೇನೆಂದರೆ) ಅನುಭವರೋಧೇತು = ಅನುಭವ ವಿರೋಧವಾದರೂ ಮಾಡಲ್ಪಟ್ಟರೆ, ವಾದಿನಃ = ವಾದಿಯು, ವಚನಂ = ವಚನವು, ಕುತಃ = ಎಲ್ಲಿಂದ, ಅಂದರೆ ಸಿದ್ಧಿಸದೆ ಹೋಗ ಬೇಕಾಗುವುದು. (ಅಂದರೆ—ಸತ್ತೆಂದು ತೋರಿದಾಗ್ಯೂ ಅಸತ್ತಾಗುವುದಾದರೆ ಆಗ ಶೂನ್ಯ ವಾದಿಯು ಉತ್ತರವನ್ನು ಹೇಳಿದಾಗ್ಯೂ 'ನೀನು ಹೇಳಲೇಇಲ್ಲ' ಆದುದರಿಂದ ನಿನಗೆ, ಪ್ರತಿಭಾ ಇಲ್ಲ ಎಂದು ಹೇಳತಕ್ಕ ಪರನನ್ನು ಕುರಿತು ಶೂನ್ಯವಾದಿಗೆ ತನ್ನಮಾತನ್ನು ಸಾಧಿಸಲಿಕ್ಕೆ ಉಪಾಯವಿಲ್ಲದಿರುವುದರಿಂದ ಪರಾಜಯವೇ ಬರಬೇಕಾಗುವುದು. ನನ್ನ ಮಾತು ಪ್ರಾಶ್ನಿಕಾದಿ ಗಳಿಂದ ತಿಳಿಯಲ್ಪಟ್ಟರುವುದರಿಂದ ಆ ನನ್ನಮಾತು ಇಲ್ಲವೆಂದು ಹೇಗೆಹೇಳುವುದೆಂದರೆ, ಆಗ

ಪ್ರತ್ಯಕ್ಷಕ್ಕೆ ಪ್ರಾಮಾಣ್ಯವು ಅಂಗೀಕೃತವಾಯಿತು. ಆದುದರಿಂದ ಸತ್ಯವೆಂದು ತಿಳಿಯಲ್ಪಟ್ಟ ಜಗತ್ತು ಅಸತ್ತು ಹೇಗೆ ಆದೀತು?) (ಹಿಂದೆ ಹೇಳಿದ ದೋಷಪರಿಹಾರವನ್ನು ಶಂಕಿಸುತ್ತಾರೆ.) ಸ್ವಪ್ನಭ್ರಾಂತಿವದೇವಯದಿ= ಹೇಗೆ ಅಸತ್ತೇ ಆದ ಗಜಾದಿಗಳೂ ಸರ್ಪಾದಿಗಳೂ ಸ್ವಪ್ನದಲ್ಲಿಯೂ ಭ್ರಾಂತಿಯಲ್ಲಿಯೂ ಸತ್ ಎಂದು ತೋರುತ್ತವೋ, ಹಾಗೆಯೇ, ಇದಂ = ಅಸತ್ತೇ ಆದ ಈ ಜಗತ್ತು, ಸತ್ವೇನ = ಸತ್ಯತ್ವದಿಂದ, ಸಂವೃತ್ಯೈವ = ವಿಶ್ವಾರೋಪನಿಮಿತ್ತಕವಾದ ಅಜ್ಞಾನ ದಿಂದಲೇ, ಉಪಲಭ್ಯತೇ = ತೋರುತ್ತದೆ. ॥ ೨೨೧ ॥ ೨೨೨ ॥

ಸ್ವಪ್ನಾದಿಗಳು ಸತ್ ಎಂದು ತೋರಿದಾಗ್ಯೂ ಅಸತ್ವವು ಹೇಗೆ ಅವುಗಳಿಗೆ ಇರುವುದೋ ಹಾಗೆಯೇ ಜಗತ್ತು ಅಸತ್ತು ಎಂದು ಏಕೆ ಆಗಲಾರದೆಂದರೆ—

## 'ಓಂ ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್ ಓಂ' ॥ ಸೂ ॥ ೨೯ ॥

ಜಗತ್ತು ಸ್ವಾಪ್ನಪದಾರ್ಥಕ್ಕೆತೋರುವ ಜಾಗ್ರತ್ವಾದಿಗಳಂತೆಯೋ ರಜ್ಜುಭುಜಂಗಾದಿಗ ಳಂತೆಯೋ ಅಸತ್ತು ಅಲ್ಲ. ದೃಷ್ಟಾಂತದಲ್ಲಿ ಇದು ಸ್ವಾಪ್ನಪದಾರ್ಥವು, ಜಾಗ್ರದ್ಗಜಾದಿಗಳಲ್ಲ, ಇದು ಹಗ್ಗವೇ ಹಾವಲ್ಲ ಎಂದು ಬಾಧವಿದ್ದಂತೆಯೋ ದಾರ್ಷ್ಟಾಂತಿಕವಾದ ಜಗತ್ತಿನಲ್ಲಿ ಬಾಧವಿಲ್ಲ. ಹೀಗೆ ಬಾಧ ಬಾಧಾಭಾವರೂಪವಾದ ವೈಧರ್ಮ್ಯವು ಇದೆ.

ಈ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

**ಮೂ ॥ [ಯದಿಸತ್ವೇನ] ಕಿಂ ಚಾತ್ರ ಭ್ರಮೋನೈವ ನಿವರ್ತತೇ ।**
**ಅನಾದೇರಸ್ಯ ವಿಶ್ವಸ್ಯ ನಿವೃತ್ತಿರ್ಯದಿ ಚೇಷ್ಯತೇ ।**
**ನಿವೃತ್ತಿಶ್ಚ ನಿವೃತ್ತೇತ ತಸ್ಯಾಃ ಭ್ರಾಂತಿತ್ವಸಂಭವಾತ್ ॥ ೨೨೩ ॥**

ಅ ॥ (ರಜ್ಜು ಸರ್ಪಾದಿಗಳಲ್ಲಿ ಸತ್ಯಪ್ರತ್ಯಯವು ಹೇಗೆ ಭ್ರಮವೋ, ಹಾಗೆಯೇ ಪ್ರಪಂಚ ದಲ್ಲಿ ಸತ್ವಪ್ರತ್ಯಯವು ಭ್ರಮವು ಆಗಿದ್ದರೆ ಹೀಗೆ ಆಗುತ್ತಿತ್ತು. ಹೀಗೆ ಇಲ್ಲ. ಹಾಗೆ ಇದ್ದರೆ) ಅತ್ರ=ಪ್ರಪಂಚದಲ್ಲಿ, ಭ್ರಮಃ—ಸತ್ವಭ್ರಮವು, ಕಿಂ ಚ=ಯಾವುದಕ್ಕಾಗಿ, ನೈವ ನಿವರ್ತತೇ= ಹೊರಟುಹೋಗುವುದಿಲ್ಲ. (ಜ್ಞಾನಗಳಿಗೆ ಭ್ರಮತ್ವನಿಶ್ಚಯವು ಬಾಧಜ್ಞಾನಾಧೀನವಾದುದು. ಸಂಪ್ರತಿಪನ್ನ ಸ್ಥಳದಲ್ಲಿ ಹಾಗೆ ದೃಷ್ಟವಾಗಿದೆ. ಕೇವಲ ಜ್ಞಾನತ್ವಾಧೀನತ್ವವಿದ್ದರೆ ಬಾಧಜ್ಞಾನವು ಹುಟ್ಟುವುದಕ್ಕಿಂತ ಮೊದಲೂ ರಜ್ಜುಸರ್ಪಾದಿ ಜ್ಞಾನದಲ್ಲಿ ಲೌಕಿಕ ಪರೀಕ್ಷಕರಿಗೆ ಭ್ರಮತ್ವ ನಿಶ್ಚಯವು ಬರಬೇಕಾಗುವುದು. ಹೀಗೆ ಎಲ್ಲಿಯೂ ದೃಷ್ಟವಾಗಲಿಲ್ಲ. ಪ್ರಪಂಚದಲ್ಲಿ ಸತ್ವಜ್ಞಾನಕ್ಕೆ ಬಾಧಕವನ್ನು ನೋಡಲಾರೆವು. ಆದುದರಿಂದ ಭ್ರಮತ್ವನಿಶ್ಚಯವು ಯುಕ್ತವಲ್ಲ. ಮತ್ತು ಸ್ವಪ್ನಕ್ಕೆ ಭ್ರಾಂತಿತ್ವಾಭಾವವು ಭ್ರಮಕ್ಕೆ ಅಧಿಷ್ಠಾನಾದ್ಯಪೇಕ್ಷಾನಿಯಮವು ಸಾಂವೃತಸತ್ಯಕ್ಕೆ ವ್ಯವಹಾರ ನಿರ್ವಾಹಕತ್ವಾಭಾವವು ಸಮರ್ಥಿತವಾಗಿದೆ. (೧. ಪ್ರಪಂಚಜ್ಞಾನಕ್ಕೆ ಈಗ ಬಾಧವಿಲ್ಲವೆಂದು ಹೇಳಲ್ಪಡುತ್ತದೋ, ೨. ಅಥವಾ ಉತ್ತರಕಾಲದಲ್ಲಿಯೂ ಬಾಧವಿಲ್ಲವೆಂದು ಹೇಳಲ್ಪಡುತ್ತದೋ, ೧ನೇ ಕಲ್ಪದಲ್ಲಿ ಅಷ್ಟರಿಂದ ನಿಮಗೂ ಶುಕ್ತಿರಜತಾದಿಗಳಲ್ಲಿ ಸತ್ಯತ್ವವು ಕೂಡದಿರುವುದರಿಂದ ಪ್ರಪಂಚ ಸತ್ಯತ್ವ ನಿಶ್ಚಯವು ಆಗಲಾರದು. ೨ನೇದ್ದು ಕೂಡುವುದಿಲ್ಲ. 'ಪ್ರಪಂಚ ಪ್ರತ್ಯಯೋ ಬಾಧಿಷ್ಯತೇ ಪ್ರತ್ಯಯತ್ವಾತ್ ಸಂಪ್ರತಿಪನ್ನವತ್'=ಪ್ರಪಂಚ ಪ್ರತ್ಯಯವು ಬಾಧಿಸಲ್ಪಡುವುದು, ಪ್ರತ್ಯಯತ್ವವಿದ್ದುದರಿಂದ ನಿಶ್ಚಿತವಾದ ಶುಕ್ತಿರಜತಾದಿಜ್ಞಾನದಂತೆ, ಎಂದು ಮುಂದಿನ ಬಾಧವು ಸಿದ್ಧಿಸುವುದು ಎಂದರೆ) ಅನಾದೇಃ = ಅನಾದಿಯಿಂದ ಅನುವೃತ್ತವಾದ, ಅಸ್ಯ ವಿಶ್ವಸ್ಯ = ಈ ಪ್ರಪಂಚಪ್ರತ್ಯಯಕ್ಕೆ, ನಿವೃತ್ತಿಃ=ಬಾಧವು, ಯದಿ = ಯಾವ ಪಕ್ಷದಲ್ಲಿ, ಇಷ್ಯತೇ=

ಅಂಗೀಕರಿಸಲ್ಪಡುತ್ತದೋ, ತಸ್ಯಾಃ=ನಿವೃತ್ತಿಗೆ, ಭ್ರಾಂತಿತ್ವಸಂಭವಾತ್=ಭ್ರಾಂತಿತ್ವವು ಕೂಡು ವುದರಿಂದ, ನಿವೃತ್ತಿಶ್ಚ=ಬಾಧವೂ, ನಿವೃತ್ತೇತ = ಬಾಧಿಸಲ್ಪಡಬೇಕಾಗುವುದು. (ಪ್ರತ್ಯಯತ್ವ ವಿದ್ದುದರಿಂದ ಪ್ರಪಂಚಪ್ರತ್ಯಯಕ್ಕೆ ಬಾಧವು ಅನುಮೇಯಿಸಲ್ಪಡುವುದಾದರೆ ಆಗ ಅವಶ್ಯವಾಗಿ ಬಾಧಜ್ಞಾನಕ್ಕೂ ಬಾಧವು ಆವಶ್ಯಕವು. ಬಾಧಕ ಪ್ರತ್ಯಯಕ್ಕೆ ಬಾಧ್ಯತ್ವವಿದ್ದರೆ ಪ್ರಪಂಚ ಪ್ರತ್ಯಯಕ್ಕೆ ಯಾಥಾರ್ಥ್ಯವು ಸಿದ್ಧಿಸುವುದು. ॥ ೨೨೩ ॥

ಹಾಗಾದರೆ ಪ್ರಪಂಚನಿವೃತ್ತಿಯೆಂದರೆ ಶೂನ್ಯವೇ. ಅದೃಷ್ಟತ್ವವಿದ್ದುದರಿಂದ ಅದಾದರೂ ಪರಮಾರ್ಥರೂಪವು. ಕಲ್ಪಿತವಲ್ಲ. ಆದುದರಿಂದ ಆ ಪ್ರತ್ಯಯಕ್ಕೆ ಬಾಧ್ಯತ್ವವು ಹೇಗೆ ಬಂದೀತು? ಆದರೆ ಪ್ರಪಂಚವು ದೃಷ್ಟವಾಗಿರುವುದರಿಂದ ಕಲ್ಪಿತತ್ವವು ಕೂಡುವುದರಿಂದ ಆ ಪ್ರತ್ಯಯವೇ ಬಾಧ್ಯವಾಗುವುದು. ಪ್ರಪಂಚಪ್ರತ್ಯಯತ್ವಾತ್ ಎಂದು ಹೇತುವನ್ನು ಇಟ್ಟುಕೊಳ್ಳಬೇಕು. ಎಂದರೆ—

**ಮೂ ॥ ದೃಷ್ಟಸ್ಯ ಭ್ರಾಂತಿತಾ ಚೇತ್ಸ್ಯಾದದೃಷ್ಟೇನ ಭ್ರಮಃ ಕುತಃ ।**
**ಗವಾಮಶೃಂಗಿಭಾವೇನ ನ ಹಿ ಸ್ಯಾಚ್ಛಶಶೃಂಗಿತಾ ॥ ೨೨೪ ॥**
**ಅಸ್ಮಾಕಂ ತು ಪ್ರಮಾಣೇನ ಪ್ರಸಾದಾದೀಶ್ವರಸ್ಯ ಚ ।**
**ಉಕ್ತಭಂಗ್ಯಾಗಮಾನಾಂ ಚ ಪ್ರಾಮಾಣ್ಯಾದುಜ್ಯತೇಽಖಿಲಂ ॥ ೨೨೫ ॥**

ಅ ॥ ದೃಷ್ಟಸ್ಯ = ಕಾಣಲ್ಪಟ್ಟದ್ದಕ್ಕೆ, ಭ್ರಾಂತಿತಾ ಚೇತ್ = ಕಲ್ಪಿತತ್ವವಿರುವುದಾದರೆ, ಅದೃಷ್ಟೇ=ಕಾಣಲ್ಪಡದೆ ಇರುವುದರಲ್ಲಿ, ಭ್ರಮಃ=ಕಲ್ಪಿತತ್ವವು, ಕುತಃ=ಯಾವುದರಿಂದ, ನ ಸ್ಯಾತ್=ಆಗಲಾರದು? (ಅಂದರೆ ಸರ್ವಪ್ರಮಾಣಗಳಿಂದ ಕಾಣಲ್ಪಟ್ಟ ಪ್ರಪಂಚಕ್ಕೆ ಕಲ್ಪಿತತ್ವ ವನ್ನು ಇಟ್ಟುಕೊಂಡು ಪ್ರಪಂಚಸತ್ತಾ ಪ್ರತ್ಯಯಕ್ಕೆ ಬಾಧ್ಯತ್ವಸ್ವೀಕಾರವು ಯಾವಪ್ರಮಾಣ ದಿಂದಲೂ ಅದೃಷ್ಟವಾದ ಶೂನ್ಯಕ್ಕೆ ಅಕಲ್ಪಿತತ್ವವನ್ನು ಇಟ್ಟುಕೊಂಡು ಶೂನ್ಯಸತ್ವಪ್ರತ್ಯಯಕ್ಕೆ ಅಬಾಧ್ಯತ್ವವನ್ನುಪಪಾದಿಸಿದ್ದು ಎನ್ನುವುದೂ ವಿಪರೀತವು. ಏಕೆಂದರೆ— ಪ್ರಾಮಾಣಿಕವಾದದ್ದು ಅಕಲ್ಪಿತವು, ಅಪ್ರಾಮಾಣಿಕವು ಕಲ್ಪಿತವೆನ್ನುವುದು ಸರ್ವಸಮ್ಮತವು) (ಇದನ್ನೇ ದೃಷ್ಟಾಂತದಿಂದ ತೋರಿಸುತ್ತಾರೆ) ಗವಾಂ=ಗೋವುಗಳ, ಅಶೃಂಗಿಭಾವೇನ=ಅಶೃಂಗಿಭಾವದಿಂದ, ಸಹಿತಾ= ಕೂಡಿಕೊಂಡು ಇದ್ದುದು, ಶಶಶೃಂಗಿತಾ=ಮೊಲದಕೋಡು, ನ ಹಿ ಸ್ಯಾತ್=ಆಗಲಾರದಷ್ಟೆ. (ಅಂದರೆ ಒಬ್ಬನು ಗೋವುಗಳಿಗೆ ಶೃಂಗವದೆ ಎನ್ನುತ್ತಾನೆ. ಇನ್ನೊಬ್ಬನು ಮೊಲಕ್ಕೆ ಕೋಡು ಇದೆ ಎನ್ನುತ್ತಾನೆ. ಅದರಲ್ಲಿ ಪರರು ಹೇಳಿದ ಪ್ರಕಾರ ಗೋವುಗಳಿಗೆ ಶೃಂಗವದೆ ಎನ್ನುವುದು ದೃಷ್ಟವಾಗಿರುವುದರಿಂದ ಕಲ್ಪಿತವು ಅದೃಷ್ಟವಾಗಿರುವುದರಿಂದ ಶಶಶೃಂಗವಾದರೂ ಕಲ್ಪಿತವಾದ ದ್ದಲ್ಲ, ಎಂದಾಗಬೇಕಾಗುವುದು ಹೀಗೆ ಲೋಕದಲ್ಲಿ ಪ್ರತೀತಿಯಿಲ್ಲ. ಲೋಕಾನುಸಾರವಾ ಗಿಯೇ ಪರಮಾರ್ಥವನ್ನು ತಿಳಿಯಬೇಕು. ಬೇರೆ ಪ್ರಕಾರವಲ್ಲ. ಆದುದರಿಂದ ಹಿಂದೆ ಹೇಳಿದ ಪ್ರಕಾರ ಪ್ರತ್ಯಕ್ಷಬಲದಿಂದ ಜಗತ್ಸತ್ಯತ್ವವು ಸಾಧಿಸಲ್ಪಟ್ಟಿತು. ಬಾಧಶಂಕೆಯೂ ಪರಿಹರಿಸಲ್ಪ ಟ್ಟಿತು. ಅದರಿಂದ ಏನು ಸಿದ್ಧವಾಯಿತೆಂದರೆ— ಸತ್ಪದಾರ್ಥಕ್ಕೂ ಕಾರಣತ್ವವಿಷಯದಲ್ಲಿ ಪ್ರಮಾಣ ವಿಲ್ಲವೆಂದು ಪೂರ್ವಪಕ್ಷಿಯಿಂದ ಯಾವುದು ಹೇಳಲ್ಪಟ್ಟದೋ ಅದು ಪರಿಹೃತವಾಯಿತೆಂದು ಹೇಳುತ್ತಾ ವಿಷಯಾಂತರದಲ್ಲಿಯೂ ಸಾಮ್ಯಕರಣವನ್ನೂ ಕೂಡ ಪರಿಹರಿಸುತ್ತಾರೆ.) ಅಸ್ಮಾಕಂ ತು=ಸತ್ಕಾರಣತ್ವವಾದಿಗಳಾದ ನಮಗಾದರೂ, ಪ್ರಮಾಣೇನ=ಪ್ರಮಾಣದಿಂದ, ಈಶ್ವರಸ್ಯ= ಈಶ್ವರನ, ಪ್ರಸಾದಾಚ್ಚ=ಸಂಕಲ್ಪದಿಂದ, ಉಕ್ತಭಂಗ್ಯಾ=ಆರಂಭಣಾಧಿಕರಣದಲ್ಲಿ ಹೇಳಿದ

ಪ್ರಕಾರ, ಆಗಮಾನಾಂ ಚ=ಆಗಮ ಅನುಮಾನಗಳಿಗೆ, ಪ್ರಾಮಾಣ್ಯಾತ್ ಚ=ಪ್ರಮಾಣತ್ವ ವಿದ್ದುದರಿಂದಲೂ, ಅಖಿಲಂ=ಪರರು ಆಕ್ಷೇಪಿಸಿದ್ದೆಲ್ಲವೂ, ಯುಜ್ಯತೇ=ಕೂಡುತ್ತದೆ.

ತಾ ॥ **ನ್ಯಾಯಸುಧಾ** — (1) ಸತ್ಕಾರ್ಯತ್ವವಾದಿಗಳಾದ ನಮಗೆ ಪರರು ಆಕ್ಷೇಪಿಸಿದ್ದೆಲ್ಲವೂ ಯುಕ್ತವಾಗುತ್ತದೆ. ಹೇಗೆಂದರೆ— ಬಾಧವಿಲ್ಲದಿರುವ ಪ್ರಮಾಣದಿಂದ ಜಗತ್ತಿಗೆ ಸತ್ಯತ್ವವು ಸಿದ್ಧವಾಗುತ್ತಿರಲು ಪುಷ್ಪಾದಿ ಕಾರಣಗಳಾದ ಮಧುರರಸವೊದಲಾದುವುಗಳಿಗೆ ಸತ್ವವು ಸಿದ್ಧವಾಗುತ್ತದೆ. ವಿಚಿತ್ರ ಸ್ವಭಾವವಿರುವುದೆಂದು ಪ್ರಮಾಣದಿಂದ ಸಿದ್ಧಗಳಾದ ತಂತ್ವಾದಿಗಳಿಗೆ ಮೃದಾದಿ ಕಾರ್ಯಕಾರಿತ್ವವು ಪ್ರಸಕ್ತವಾಗುವುದಿಲ್ಲ. ಪ್ರಮಾಣದಿಂದಲೇ ಸತ್ತಿಗೆ ಕಾರಣತ್ವವು ತೋರುವುದರಿಂದ ಅನುಪಪತ್ತಿಯು ಆಭಾಸಭೂತವೇ ಆಯಿತು. ಪ್ರಮಾಣದಿಂದ ಸತ್ತೆಂದು ಪ್ರಮಿತಗಳಾದ ಮಧುರಾದಿಗಳಿಗೆ ಸದ್ಬುದ್ಧಿಮಾತ್ರ ವೈಲಕ್ಷಣ್ಯವನ್ನು ಕಲ್ಪಿಸುವುದು ಅಯುಕ್ತವೇ. (2) ಈಶ್ವರನು ಸರ್ವಕಾರಣನಾದಾಗ್ಯೂ ತಂತ್ವಾದಿಗಳ ಅಪೇಕ್ಷೆಯಿಂದಲೇ ಕಾರ್ಯವು ಹುಟ್ಟಲಿ ಎಂದು ಈಶ್ವರನ ಸಂಕಲ್ಪದಿಂದ ತಂತ್ವಾದಿಗಳ ಅಪೇಕ್ಷೆಯೂ ಪುರುಷಪ್ರಯತ್ನಾದ್ಯಪೇಕ್ಷೆಯೂ, ದೇಶಕಾಲಾದಿ ನಿಯಮವೂ ಕೂಡ ಕೂಡುತ್ತದೆ. ಹೀಗೆ ನಿರ್ವಿಶೇಷವಾದ ಶೂನ್ಯಕ್ಕೆ ಸಂಕಲ್ಪವು ಕೂಡುವುದಿಲ್ಲ. ಆರಂಭಣಾಧಿಕರಣದಲ್ಲಿ ಹೇಳಿದ ಪ್ರಕಾರ ಇಲ್ಲಿ ಆಗಮ ಅನುಮಾನಗಳು ಪ್ರಮಾಣಗಳಾಗಿರುವುದರಿಂದ ಇದು ಅಪ್ರಾಮಾಣಿಕವಲ್ಲ. ಪ್ರಥಮ ಸೂತ್ರದಲ್ಲಿ ಹೇಳಿದ ಪ್ರಕಾರ ಆಗಮ ಪ್ರಾಮಾಣ್ಯವು ಸಿದ್ಧವಾಗಿರುವುದರಿಂದ ವೇದಾದ್ಯಾಗಮ ಪ್ರಾಮಾಣ್ಯವು ಅಸಿದ್ಧವಲ್ಲ. (3) ಬ್ರಹ್ಮಾದಿಗಳಿಗೆ ಪರಮೇಶ್ವರನ ನಿಯೋಗವನ್ನು ಅನುಷ್ಠಾನ ಮಾಡಿದರೆ ಪರಮಪುರುಷಾರ್ಥವು ಸಿಗುವುದರಿಂದ ಈಶ್ವರನು ಅವರಲ್ಲಿ ಕೃಪೆಯಿಂದ ಸೃಷ್ಟ್ಯಾದಿಗಳಲ್ಲಿ ಬ್ರಹ್ಮಾದಿಗಳನ್ನು ಅಪೇಕ್ಷಿಸುತ್ತಾನೆ ಎಂದು ತಿಳಿಸುವುದಕ್ಕಾಗಿ 'ಪ್ರಸಾದಾತ್' ಎಂದು ಹೇಳಿದ್ದು ॥ ೨೨೪ ॥ ೨೨೫ ॥

ಮೊದಲು ಜಗತ್ತಿಗೆ ಸತ್ಯತ್ವವನ್ನು ಸಾಧಿಸುವುದಕ್ಕಾಗಿ ಉಪನ್ಯಸ್ತವಾದ ಪ್ರತ್ಯಕ್ಷಕ್ಕೆ ಅನ್ಯಥಾ ಸಿದ್ಧಿಯನ್ನು ಆಶಂಕಿಸಿ ಅವಕ್ಕೆ ಪರಿಹಾರವಾಗಿ **'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್'** ಎನ್ನುವ ಸೂತ್ರವು ವ್ಯಾಖ್ಯಾತವಾಯಿತು. ಈಗ ವಿಶ್ವಮಿಥ್ಯಾತ್ವದಲ್ಲಿ ಪರರಿಂದ ಹೇಳಲ್ಪಟ್ಟ ಅನುಮಾನವನ್ನು ದೂಷಿಸಿಯೂ ಅದನ್ನು ವ್ಯಾಖ್ಯಾನಮಾಡುವುದಕ್ಕಾಗಿ ಮಿಥ್ಯಾತ್ವವಿಷಯದಲ್ಲಿ ಅನುಮಾನವನ್ನು ಶಂಕಿಸುತ್ತಾರೆ—

**ಮೂ ॥ ದೃಶ್ಯತ್ವಾದ್ವಿಮತಂ ಮಿಥ್ಯಾ ಸ್ವಪ್ನವಚ್ಚೇದಿಯಂ ಚ ಮಾ ॥**
**ಮಿಥ್ಯಾ ಚೇತ್ಸಾಧ್ಯಸಿದ್ಧಿರ್ನ ವ್ಯಭಿಚಾರೋ ನ ಚೇದ್ಭವೇತ್ ॥೨೨೬॥**

ಅ ॥ ವಿಮತಂ=ವಿವಾದವಿಷಯವಾದ ಗಗನಾದಿಯು, ಮಿಥ್ಯಾ=ಮಿಥ್ಯಾಭೂತವು, ದೃಶ್ಯತ್ವಾತ್ = ತೋರುವುದರಿಂದ, ಸ್ವಪ್ನವಚ್ಚೇತ್=ಸ್ವಪ್ನದಂತೆ ಎಂದಾದರೆ— (ಅಂದರೆ ಈ ಅನುಮಾನದಿಂದ ವಿಶ್ವಮಿಥ್ಯಾತ್ವವು ಸಿದ್ಧಿಸುವುದರಿಂದ ಜಗತ್ತಿಗೆ ಸತ್ಯತ್ವವನ್ನು ಹೇಗೆ ಅಂಗೀಕರಿಸುವುದು) (ದೂಷಿಸುವುದಕ್ಕಾಗಿ ಪ್ರಶ್ನಿಸುತ್ತಾರೆ.) ಇಯಂ ಚ ಮಾ = (ಜಗತ್ತು ಇರಲಿ,) ಈ ದೃಶ್ಯತ್ವಾನುಮಾನವೇ, (೧ ಮಿಥ್ಯಾಭೂತವಾದುದೋ, ೨ ಸತ್ಯಭೂತವಾದುದೋ, ೧ನೇದ್ದನ್ನು ದೂಷಿಸುತ್ತಾರೆ.) ಮಿಥ್ಯಾ ಚೇತ್=ಮಿಥ್ಯೆಯೆಂದಾದರೆ, ಸಾಧ್ಯಸಿದ್ಧಿರ್ನ=ಸಾಧ್ಯವು ಸಿದ್ಧಿಸುವುದಿಲ್ಲ. (೨ನೇ ಕಲ್ಪದಲ್ಲಿ ದೃಶ್ಯತ್ವವು ೧ ದೃಶ್ಯವೋ? ೨ ಅದೃಶ್ಯವೋ? ೧ನೇದ್ದನ್ನು ದೂಷಿಸುತ್ತಾರೆ.) ನ ಚೇತ್ = ದೃಶ್ಯತ್ವವು ಮಿಥ್ಯೆಯಲ್ಲವೆಂದಾದರೆ (ಮತ್ತು ದೃಶ್ಯವಾದರೆ ಆಗ)

**ವ್ಯಭಿಚಾರಃ ಭವೇತ್**=ದೃಶ್ಯತ್ವದಲ್ಲಿಯೇ ವ್ಯಭಿಚಾರವು ಬರುವುದು. (೨ನೇ ಕಲ್ಪದಲ್ಲಿ ದೃಶ್ಯತ್ವ ಹೇತುವಿಗೆ ಅಜ್ಞಾನಾಸಿದ್ಧಿಯು.) ॥ ೨೨೬ ॥

ಇದು ಕೂಡಬಹುದು, ದೃಶ್ಯತ್ವವು ಮಿಥ್ಯಾಭೂತವಾದುದೆಂದೇ ಹೇಳುತ್ತೇವೆ. ಮಿಥ್ಯಾಭೂತವಾದ ದೃಶ್ಯತ್ವಕ್ಕೆ ಸಾಧ್ಯ ಸಾಧಕತ್ವವು ಕೂಡಲಾರದೆಂದು ಹೇಳಕೂಡದು. ಏಕೆಂದರೆ— ವರ್ಣದೈರ್ಘ್ಯಾದಿಗಳು ಮಿಥ್ಯಾಭೂತಗಳಾದಾಗ್ಯೂ ಅವುಗಳಿಗೂ ಸಾಧಕತ್ವವು ಉಭಯರಿಗೂ ಸಿದ್ಧವಾಗಿದೆ. ಚಾಕ್ಷುಷತ್ವಾದಿಗಳಿಗಾದರೂ ಸಾಧಕತ್ವವು ವ್ಯವಹಾರಸಿದ್ಧವಾಗದಿರುವುದರಿಂದಲೇ ಅಸಾಧಕತ್ವವು. ಮಿಥ್ಯಾತ್ವಪ್ರಯುಕ್ತ ಅಸಾಧಕತ್ವವಲ್ಲ ಎಂದಾಶಂಕಿಸಿದರೆ—

**ಮೂ ॥ ಸಾಧಕತ್ವಮಸತ್ಯಸ್ಯ ಸಾಧ್ಯಂ ವಿಪ್ರತಿಪತ್ತಿತಃ ।**
**ತಸ್ಯ ಚೇತ್ಯನವಸ್ಥಾ ಸ್ಯಾತ್ಸತ್ವಂ ಚಾಸ್ಯಾನುಭೂತಿತಃ ॥**
**ಅನುಭೂತಿವಿರೋಧೇನ ಮಿಥ್ಯಾತ್ವೇ ನಾ ನ ಕಾಚನ ॥ ೨೨೭ ॥**

ಅ ॥ (ಸ. ರ. ವಿ.)(ಯದಿ=ಯಾವ ಪಕ್ಷದಲ್ಲಿ,) ಅಸತ್ಯಸ್ಯ=ಅಸತ್ಯವಾದ ಪ್ರಮಾಣಕ್ಕೆ, ಸಾಧಕತ್ವಂ=ಸಾಧಕತ್ವವು, ಸಾಧ್ಯಂ=ಸತ್ಯವಾದ ಪ್ರಮಾಣವನ್ನು ಅಂಗೀಕರಿಸದೆ ಇರುವುದರಿಂದ ಅಸತ್ಯವಾದ ಪ್ರಮಾಣಾಂತರದಿಂದ ಸಾಧಿಸಲ್ಪಡುತ್ತದೋ, (ತರ್ಹಿ=ಹಾಗಾದರೆ) ತಸ್ಯ ಚ=ಅದಕ್ಕೂ ಕೂಡ, (ಅಸತ್ಯವಾದ ಪ್ರಮಾಣಾಂತರದಿಂದ ಸಾಧಕತ್ವವು ಸಾಧಿಸಲ್ಪಡುತ್ತದೆ.) ಇತಿ=ಹೀಗೆ, ವಿಪ್ರತಿಪತ್ತಿತಃ = ವಿವಾದಗ್ರಸ್ತವಾಗಿರುವುದರಿಂದ, ಅನವಸ್ಥಾ = ಅನವಸ್ಥೆಯು, ಸ್ಯಾತ್=ಬರುವುದು. (ಈ ಕಾರಣದಿಂದಲೂ ಅನುಮಾನದಿಂದ ಪ್ರಪಂಚಕ್ಕೆ ಮಿಥ್ಯಾತ್ವವು ಸಿದ್ಧಿಸುವುದಿಲ್ಲವೆನ್ನುತ್ತಾರೆ.) ಅಸ್ಯ=ಪ್ರಪಂಚಕ್ಕೆ, ಸತ್ವಂ ಚ=ಸತ್ಯತ್ವವು, ಅನುಭೂತಿತಃ=ಅನುಭವದ್ದೆಶೆಯಿಂದ, (ಸಿದ್ಧವಾಗಿದೆ.) (ಆದುದರಿಂದ ಅನುಮಾನವು ಬಾಧಿತವಿಷಯವಾಯಿತು.)(ಸುಧಾ) ಅಥವಾ ಯಾವ ಉದಾಹರಣದಲ್ಲಿ ಮಿಥ್ಯಾತ್ವವು ಸಂಪ್ರತಿಪನ್ನವಾಗಿದೆಯೋ ಅಲ್ಲಿ ಸಾಧಕತ್ವವಿಷಯದಲ್ಲಿ, ಯಾವ ಉದಾಹರಣದಲ್ಲಿ ಸಾಧಕತ್ವವು ಸಮ್ಮತವಾಗಿದೆಯೋ ಅಲ್ಲಿ ಮಿಥ್ಯಾತ್ವವಿಷಯದಲ್ಲಿ, ವಿಪ್ರತಿಪತ್ತಿತಃ=ವಿವಾದವಿದ್ದುದರಿಂದ, ಅಸತ್ಯಸ್ಯ=ಅಸತ್ಯವಾದುದಕ್ಕೆ, ಸಾಧಕತ್ವಂ=ಸಾಧಕತ್ವವು, ಸಾಧ್ಯಮೇವ = ಸಾಧಿಸಲಿಕ್ಕೆಯೋಗ್ಯವೇ ಆಗಿದೆ. ಅಲ್ಲದೆ ನಮಗೆ ಸಿದ್ಧವಾಗಲಿಲ್ಲ. (ವಿಪ್ರತಿಪತ್ತಿಯಿದ್ದರೆ ಸಾಧಕತ್ವವನ್ನಾಗಲೀ, ಮಿಥ್ಯಾತ್ವವನ್ನಾಗಲೀ ಸಾಧಿಸಿಕೊಡುವೆನೆಂದರೆ— ೧ ಸತ್ಯವಾದ ಪ್ರಮಾಣದಿಂದ ಸಾಧಿಸುವುದೋ? ೨ ಮಿಥ್ಯಾಭೂತವಾದ ಪ್ರಮಾಣದಿಂದ ಸಾಧಿಸುವುದೋ? ೧ನೇ ಕಲ್ಪದಲ್ಲಿ ಸತ್ಯವಾದ ಪ್ರಮಾಣವು ದೃಶ್ಯವೋ? ಅದೃಶ್ಯವೋ? ದೃಶ್ಯವೆನ್ನುವ ಕಲ್ಪದಲ್ಲಿ ದೃಶ್ಯತ್ವಹೇತುವಿಗೆ ವ್ಯಭಿಚಾರವು. ಅದೃಶ್ಯವೆನ್ನುವ ಕಲ್ಪದಲ್ಲಿ ಅಜ್ಞಾನಾಸಿದ್ಧಿಯು, ಎಂದು ಉತ್ತರವು ಮೊದಲೇ ಹೇಳಲ್ಪಟ್ಟದೆ. ೨ ಮಿಥ್ಯಾಭೂತವಾದ ಪ್ರಮಾಣದಿಂದ ಸಾಧಿಸುವುದೆನ್ನುವ ೨ನೇ ಕಲ್ಪದಲ್ಲಿ ದೋಷವನ್ನು ಹೇಳುತ್ತಾರೆ.) ತಸ್ಯ ಚ=(ನಮಗೆ ಮಿಥ್ಯಾಭೂತವಾದುದಕ್ಕೆ ಸಾಧಕತ್ವವು ಎಲ್ಲಿಯೂ ಸಮ್ಮತವಲ್ಲ. ಆದುದರಿಂದ) ಮಿಥ್ಯಾಭೂತವಾದುದಕ್ಕೂ, ಸಾಧಕತ್ವಂ=ಸಾಧಕತ್ವವು, ಸಾಧ್ಯಂ=ಸಾಧ್ಯವೇ ಆಗಿದೆ. (ಅದಕ್ಕೂ ಸಾಧಕತ್ವವನ್ನು ಸಾಧಿಸಿಕೊಡುತ್ತೇನೆಂದರೆ ಇದೇ ರೀತಿಯಾಗಿ) ಇತಿ=ಹೀಗೆ, ಅನವಸ್ಥಾ=ಅನವಸ್ಥೆಯೂ, ಸ್ಯಾತ್=ಬರುವುದು. (ಸರ್ವವೂ ಅಸತ್ಯವು, ಸಾಧಕವು ಎಂದು ಸಾಧಿಸಿಕೊಡುವ ಒಂದು ಪ್ರಮಾಣವಿಲ್ಲ. ಸದ್ವಾದಿಯು ಯಾವಾಗಲೂ ಸತ್ವಾಸತ್ವೋದಾಸೀನವಾದ ಪ್ರಮಾಣದಿಂದ ಸಾಧ್ಯಸಿದ್ಧಿಯನ್ನು ಅಂಗೀಕರಿಸಲಾರನು. ಆದುದರಿಂದ ಹಿಂದೆ ಹೇಳಿದ ಪ್ರಕಾರ ಅನವಸ್ಥೆಯು ಬಂದೇ ಬರುತ್ತದೆ.) (ಹೀಗೆ ಅಸಿದ್ಧಿ ವ್ಯಭಿಚಾರಗಳಿಂದ ದೃಶ್ಯತ್ವಾನುಮಾನವನ್ನು ನಿರಾಕರಿಸಿ ಅದಕ್ಕೆ

ಪ್ರಮಾಣಬಾಧವನ್ನೂ ಹೇಳುತ್ತಾರೆ.) ಅಸ್ಯ=ಈ ಪ್ರಪಂಚಕ್ಕೆ, ಸತ್ವಂ ಚ=ಸತ್ಯತ್ವವು, ಅನುಭೂತಿತಃ=ಅನುಭವದ್ವೆಶೆಯಿಂದ, (ಸಿದ್ಧವಾಗಿದೆ. ಆದುದರಿಂದ ಅನುಮಾನವು ಬಾಧಿತಸಾಧ್ಯವುಳ್ಳದ್ದಾಯಿತು.) ದೃಶ್ಯತ್ವಾನುಮಾನಕ್ಕೆ ಈ ದೋಷದಿಂದ ಆಭಾಸತ್ವವಿದೆ ಎಂದು ಇಷ್ಟೆ ಅಲ್ಲ. ಮತ್ತೆ ಪ್ರಪಂಚಮಿಥ್ಯಾತ್ವವಿಷಯದಲ್ಲಿ ಯಾವುದು ಜಡತ್ವವಾಗಲೀ, ಪರಿಚ್ಛಿನ್ನತ್ವವಾಗಲೀ ಅನುಮಾನವು ಪರರಿಂದ ಹೇಳಲ್ಪಡುತ್ತದೋ, ಅದಕ್ಕೂ ಆಭಾಸತ್ವವಿದೆ ಎನ್ನುತ್ತಾರೆ.) ಅನುಭೂತಿವಿರೋಧೇನ = ಅನುಭವವಿರೋಧದಿಂದಲೂ, (ಹಿಂದೆ ಹೇಳಿದ ಅಸಿದ್ಧಿವ್ಯಭಿಚಾರದಿಂದಲೂ) ಮಿಥ್ಯಾತ್ವೇ = ಜಗನ್ಮಿಥ್ಯಾತ್ವವಿಷಯದಲ್ಲಿ, ಕಾಚನ=ಯಾವುದೊಂದೂ, ಪ್ರಮಾ =ಪ್ರಮಾಣವು, ನ=ಇಲ್ಲ.

**ತಾ** ॥ ಜಡತತ್ವಾದಿಗಳು ಸತ್ಯವೋ, ಮಿಥ್ಯೆಯೋ, ಸತ್ಯವೆನ್ನುವ ಕಲ್ಪದಲ್ಲಿ ಜಡತ್ವಾದಿಯು ಜಡತತ್ವಾದಿಗಳುಳ್ಳದ್ದು ಅಹುದೋ, ಅಲ್ಲವೋ ಗನೇಕಲ್ಪದಲ್ಲಿ ವ್ಯಭಿಚಾರವು. ಎನೇಕಲ್ಪದಲ್ಲಿ ಪರರು ಶೂನ್ಯದಿಂದ ಇತರವಾದುದೆಲ್ಲವೂ ಜಡವೂ, ಪರಿಚ್ಛಿನ್ನವೂ ಆಗಿದೆ ಎಂದಂಗೀಕರಿಸಿರುವುದರಿಂದ ಅಪಸಿದ್ಧಾಂತವು. ೨ ಜಡತತ್ವಾದಿಗಳು ಮಿಥ್ಯೆಯಾದರೆ ಮಿಥ್ಯಾಭೂತವಾದುದಕ್ಕೆ ಸಾಧಕತ್ವವು ಸಮ್ಮತವಾಗದಿರುವುದರಿಂದ ಅದರಿಂದ ಸಾಧ್ಯಸಿದ್ಧಿಯು ಆಗಲಾರದು. ॥ ೨೨೭ ॥

**ಸ. ರ. ವಿ** — ಪ್ರತ್ಯಕ್ಷಾನುಭವವು ಜಗತ್ತಿಗೆ ವರ್ತಮಾನಕಾಲದಲ್ಲಿರತಕ್ಕ ಸತ್ವವನ್ನು ಗೃಹಿಸುತ್ತದೆ. ಅನುಮಾನವಾದರೂ ಭವಿಷ್ಯತ್ಕಾಲದಲ್ಲಿರತಕ್ಕ ನಿವೃತ್ತಿಯನ್ನು ಗೃಹಿಸುತ್ತದೆ. ಆದುದರಿಂದ ಬಾಧ್ಯಬಾಧಕಭಾವಯಿಲ್ಲ, ಎಂದಾಶಂಕಿಸಿದರೆ—

**ನ್ಯಾಯಸುಧಾ** — ಅನುಮಾನಗಳಿಗೆ ಅನುಭವವಿರೋಧವು ಇರುತ್ತಿದ್ದರೆ ಅಸತ್ವವು ಬರುತ್ತಿತ್ತು. ಅನುಭವವಿರೋಧವು ಇಲ್ಲ. ಮಿಥ್ಯಾತ್ವರೂಪವಾದ ಬಾಧ್ಯತ್ವವು ಅನುಮಾನಸಾಧ್ಯವು. ಮಿಥ್ಯಾತ್ವಾಭಾವವು ಪ್ರತ್ಯಕ್ಷವೇದ್ಯವಲ್ಲ. ಪ್ರತ್ಯಕ್ಷವು ವರ್ತಮಾನಮಾತ್ರವನ್ನು ವಿಷಯೀಕರಿಸುವುದರಿಂದ ಕಥಂಚಿತ್ ವರ್ತಮಾನಕಾಲದಲ್ಲಿರತಕ್ಕ ಬಾಧಾಭಾವವನ್ನು ವಿಷಯೀಕರಿಸಿದರೂ ಕಾಲಾಂತರದಲ್ಲಿರತಕ್ಕ ಬಾಧಾಭಾವವಿಷಯತ್ವವು ಕೂಡಲಾರದು, ಎಂದಾಶಂಕಿಸಿದರೆ—

**ಮೂ ॥ ಅತೀತಾನಾಗತೌ ಕಾಲಾವಪಿ ನಃ ಸಾಕ್ಷಿಗೋಚರೌ ॥ ೨೨೮ ॥**
**ತತ್ಸಂಬಂಧಿತಯಾ ಸತ್ವಮಪಿ ದೃಷ್ಟಸ್ಯ ಸಾಕ್ಷಿಗಂ ।**
**ದೃಢದೃಷ್ಟಂ ತು ಯದ್ದೃಷ್ಟಂ ದೃಷ್ಟಾಭಾಸಸ್ತತೋಽಪರಂ ॥ ೨೨೯ ॥**

**ಅ** ॥ ಅತೀತಾನಾಗತೌ ಕಾಲಾವಪಿ = ಭೂತಭವಿಷ್ಯತ್ಕಾಲಗಳೂ ವರ್ತಮಾನಕಾಲವೂ ಕೂಡ, ನಃ = ನಮಗೆ, ಸಾಕ್ಷಿಗೋಚರೌ = ಸಾಕ್ಷಿವಿಷಯಗಳು, (ಇಲ್ಲವಾದರೆ ಕಾಲಘಟಿತವಾದ ವ್ಯವಹಾರವು ಕೂಡಲಾರದು.) (ವರ್ತಮಾನವಲ್ಲದಿರುವ ಕಾಲವೂ ಸಾಕ್ಷಿವಿಷಯವು ಎಂದಾದರೆ ಪ್ರಕೃತವೇನಾಯಿತೆಂದರೆ) ತತ್ಸಂಬಂಧಿತಯಾ ಸತ್ವಮಪಿ = ಕಾಲಾಂತರಸಂಬಂಧಿಯಾಗಿರುವ ಅಬಾಧ್ಯತ್ವವೂಕೂಡ, ಸಾಕ್ಷಿಗಂ = ಸಾಕ್ಷಿವಿಷಯವು. (ವರ್ತಮಾನಕಾಲದಲ್ಲಿರತಕ್ಕ ಬಾಧಾಭಾವವುಮಾತ್ರ ಅನುಭವವೇದ್ಯವೆಂದಲ್ಲ. ಮತ್ತೆ ಸರ್ವಕಾಲದಲ್ಲಿರತಕ್ಕ ಬಾಧಾಭಾವವೂ ಅನುಭವವೇದ್ಯವೇ. ಅದು ಹೇಗೆಂದರೆ)(ಪ್ರತ್ಯಕ್ಷಾದಿಪ್ರತೀತಿಪ್ರಾಮಾಣ್ಯವು ಸಾಕ್ಷಿಗ್ರಾಹ್ಯವಾಗಿರುವುದರಿಂದ) ದೃಷ್ಟಸ್ಯ = ಪ್ರತ್ಯಕ್ಷಾದಿ ಪ್ರತೀತಿವಿಷಯವಾದುದಕ್ಕೆ ಬಾಧಾಭಾವವು,

ಸಾಕ್ಷಿಗಂ = ಸಾಕ್ಷಿಯಿಂದಸಿದ್ಧವಾಗಿದೆ. (ವಿಷಯಕ್ಕೆ ತ್ರೈಕಾಲಿಕಾಬಾಧ್ಯತ್ವವನ್ನು ಗ್ರಹಿಸದೆ ವಿಷಯಪ್ರತೀತಿಗೆ ಪ್ರಾಮಾಣ್ಯವು ಗ್ರಾಹ್ಯವಾಗಲಾರದು. ಪ್ರತೀತಿಯನ್ನು ಗ್ರಹಿಸತಕ್ಕಸಾಕ್ಷಿಗೆ ಪ್ರತೀತಿ ಪ್ರಾಮಾಣ್ಯವನ್ನು ಗ್ರಹಿಸತಕ್ಕ ಸ್ವಭಾವವಿದ್ದುದರಿಂದ ಸಾಕ್ಷಿಯುಪ್ರಾಮಾಣ್ಯವನ್ನು ಗೃಹಿಸುತ್ತಾ ಪ್ರತೀತಿವಿಷಯಕ್ಕೆ ತ್ರೈಕಾಲಿಕಾಬಾಧ್ಯತ್ವವನ್ನು ವ್ಯವಸ್ಥಾಮಾಡಿಕೊಡುವುದಾದರೆ ಆಗ ಶುಕ್ತಿರಜತಾದಿ ಪ್ರತೀತಿಯನ್ನೂ ಕೂಡ ಸಾಕ್ಷಿಯೇ ಗೃಹಿಸತಕ್ಕದು. ಆದುದರಿಂದ ಆ ಪ್ರತೀತಿಗೂ ಪ್ರಾಮಾಣ್ಯವನ್ನು ಗ್ರಹಣಮಾಡಬೇಕಾದೀತು. ತಥಾಚ ಪ್ರತೀತಿವಿಷಯವಾದ ರಜತಾದಿಗಳಿಗೂ ತ್ರೈಕಾಲಿಕಾಬಾಧ್ಯತ್ವವು ಸಿದ್ಧಿಸಬೇಕಾಗುವುದು ಎಂದಾಶಂಕಿಸಿದರೆ ದೃಷ್ಟ ಶಬ್ದವನ್ನು ವ್ಯಾಖ್ಯಾನಮಾಡುತ್ತಾರೆ.) ಯತ್ = ಯಾವುದು, ದೃಢದೃಷ್ಟಂ = ನಿರ್ದೋಷವೆಂದು ನಿಶ್ಚಿತವಾದ ಪ್ರತೀತಿಯಿಂದ ವಿಷಯೀಕೃತವಾಗಿದೆಯೋ ಅದೇ, ದೃಷ್ಟಂ=ದೃಷ್ಟವೆನ್ನಿಸಿ ಕೊಳ್ಳುತ್ತದೆ. (ಏಕೆಂದರೆ) ತತಃ ಅಪರಂ=ಅದಕ್ಕಿಂತ ಇತರವಾದ ಸಂಮುಗ್ಧವಾದ ದೃಷ್ಟವು, ದೃಷ್ಟಾಭಾಸಃ = ದೃಷ್ಟಾಭಾಸವು, (ಮುಖ್ಯ ಅಮುಖ್ಯಗಳ ಮಧ್ಯದಲ್ಲಿ ಮುಖ್ಯವನ್ನು ಇಟ್ಟು ಕೊಳ್ಳುವುದೇ ನ್ಯಾಯವು. ಆದುದರಿಂದ 'ದೃಷ್ಟಸ್ಯಸಾಕ್ಷಿಗಂ' ಎನ್ನುವಲ್ಲಿ ದೃಷ್ಟಶಬ್ದದಿಂದ ದೃಢದೃಷ್ಟವೇ ವಿವಕ್ಷಿತವಾಗಿರುವುದರಿಂದ ದೃಷ್ಟಾಭಾಸಗಳಾದ ಶುಕ್ತಿರಜತಾದಿಗಳಿಗೆ ಅಬಾಧ್ಯತ್ವವು ಹಿಂದೆ ಹೇಳಿದ ರೀತಿಯಿಂದ ಸಿದ್ಧಿಸಲಾರದು. ॥ ೨೨೮ ॥ ೨೨೯ ॥

ದೃಶ್ಯತ್ವಾದ್ಯನುಮಾನಗಳು ಸತ್ಪ್ರತಿಪಕ್ಷಿತಗಳಾಗಿವೆ ಎನ್ನುತ್ತಾರೆ—

**ಮೂ ॥ ಭ್ರಾಂತೇಃ ಸಂವೃತಿಸತ್ಯಸ್ಯ ವಿಶೇಷೋಽವ್ಯಭಿಚಾರವಾನ್ ।**
**ತೇನಾಪ್ಯಂಗೀಕೃತಃ ಸಮ್ಯಕ್ ಸ ನಃ ಸತ್ಯತ್ವಮೇವ ಹಿ ॥ ೨೩೦ ॥**

ಅ ॥ ಭ್ರಾಂತೇಃ = ಭ್ರಾಂತಿವಿಷಯವೆಂದು ಸಂಪ್ರತಿಪನ್ನವಾದ ಶುಕ್ತಿರಜತಾದಿಗಳ ದ್ವೆಶೆಯಿಂದ, ಸಂವೃತಿಸತ್ಯಸ್ಯ = ಸಂವೃತಿಸತ್ಯವೆಂದಂಗೀಕೃತವಾದ (ವ್ಯಾವಹಾರಿಕವಾದ) ಜಗತ್ತಿಗೆ, ವಿಶೇಷಃ=ವೈಲಕ್ಷಣ್ಯವು, ಅವ್ಯಭಿಚಾರವಾನ್=ಯಾವಾಗಲಾದರೂ ಎಲ್ಲಿಯೂ ಕೂಡ ನಿಶ್ಚಿತವಾದ ಮಿಥ್ಯಾತ್ವವುಳ್ಳದರಲ್ಲಿ ಇಲ್ಲದಿರುವುದಾಗಿ, ತೇನಾಪಿ=ಶೂನ್ಯವಾದಿಯಿಂದಲೂ ಕೂಡ, ಸಮ್ಯಕ್ = ಸಂದೇಹವಿಲ್ಲದೇನೇ, ಅಂಗೀಕೃತಃ = ಅಂಗೀಕರಿಸಲ್ಪಟ್ಟದೆ. ಸ ಏವ ಹಿ=ಅದೇ ವಿಶೇಷವು, ನಃ=ನಮ್ಮ ಮತದಲ್ಲಿ, (ವಿಶ್ವಸ್ಯ=ಜಗತ್ತಿಗೆ) ಸತ್ಯತ್ವಂ=ಸತ್ಯತ್ವವನ್ನು, ಸಾಧಯಿಷ್ಯತಿ = ಸಾಧಿಸಿಕೊಡುವುದು. (ಆದುದರಿಂದ ದೃಶ್ಯತ್ವಾದ್ಯನುಮಾನಗಳು ಸತ್ಪ್ರತಿಪಕ್ಷಿತಗಳಾಗಿವೆ. ತಥಾಚ 'ವಿಶ್ವಂ ಕಾಲತ್ರಯಾಬಾಧ್ಯಂ ಪ್ರಾತೀತಿಕವಿಲಕ್ಷಣತ್ವಾತ್ ವ್ಯತಿರೇಕೇಣ ಶುಕ್ತಿರಜತಾದಿವತ್' ಜಗತ್ತು ಕಾಲತ್ರಯದಲ್ಲಿಯೂ ಬಾಧ್ಯವಲ್ಲ, ಪ್ರಾತಿಭಾಸಿಕದಿಂದ ವಿಲಕ್ಷಣವಾಗಿರುವುದರಿಂದ ವ್ಯತಿರೇಕದಿಂದ ಶುಕ್ತಿರಜತಾದಿಗಳಂತೆಯೇ ಅಂದರೆ ಶುಕ್ತಿರಜತವು ಹಿಂದೆ ಹೇಳಿದ ಸಾಧ್ಯ ಹೇತು ಎರಡೂ ಇಲ್ಲದಿರುವುದು. ತಥಾಚ ಆಕಾಶಾದಿ ಜಗತ್ತು ಕಾಲತ್ರಯಬಾಧ್ಯತ್ವರೂಪ ಮಿಥ್ಯಾತ್ವವುಳ್ಳದ್ದೆಂದು ಹೇಳುವುದಾದರೆ ಅಂತಹ ಶುಕ್ತಿರಜತಾದಿಗಳಿಂದ ವೈಲಕ್ಷಣ್ಯವು ಜಗತ್ತಿಗೆ ಹೇಳಿದ್ದು ಕೂಡದೆ ಹೋಗಬೇಕಾದೀತು. ಅಂತಹ ಪ್ರಾತಿಭಾಸಿಕವಾದ ಶುಕ್ತಿರಜತಾದಿಗಳಿಂದ ವೈಲಕ್ಷಣ್ಯವನ್ನು ಅವರೇ ಜಗತ್ತಿನಲ್ಲಿ ಒಪ್ಪಿರುವುದರಿಂದ ಅದರಿಂದಲೇ ಜಗತ್ತಿಗೆ ಕಾಲತ್ರಯಾಬಾಧ್ಯತ್ವರೂಪವಾದ ಸತ್ಯತ್ವವು ಸಿದ್ಧವಾಗುವುದೆಂದು ಸಾಧಿಸುವೆವು ॥ ೨೩೦ ॥

ಹಾಗಾದರೆ ಶುಕ್ತಿರಜತಾದಿಗಳಿಗೆ ಶೂನ್ಯತತ್ವಜ್ಞಾನದಿಂದ ಮೊದಲು ಶುಕ್ತ್ಯಾದಿಜ್ಞಾನದಿಂದಲೇ ನಿವೃತ್ತಿಯಾಗುತ್ತದೆ. ಪ್ರಪಂಚಕ್ಕಾದರೂ ಶೂನ್ಯಜ್ಞಾನದಿಂದ ಯಾವಾಗಲೋ ಒಮ್ಮೆ

ನಿವೃತ್ತಿಯಾಗುವುದು. ಹೀಗೆ ನಾನು ಪ್ರಾತೀತಿಕ ಸಾಂವೃತಗಳಿಗೆ ವೈಲಕ್ಷಣ್ಯವನ್ನು ಅಂಗೀಕರಿಸಿರುವೆನು. ವಿರೋಧವಿದ್ದುದರಿಂದ, ಈ ವೈಲಕ್ಷಣ್ಯವು ಜಗತ್ಸತ್ಯತ್ವದಲ್ಲಿ ನಿಮಗೆ ಹೇತೂಕರಿಸಲಿಕ್ಕೆ ಶಕ್ಯವಲ್ಲ. ಎಂದಾಶಂಕಿಸಿದರೆ—

**ಮೂ ॥ ವಿಜ್ಞಾನಾದ್ವ್ಯಭಿಚಾರೋಽಸ್ಯ ಕದಾಚಿತ್ಸ್ಯಾದಿತಿ ಪ್ರಮಾ ।**
**ನೈವ ದೃಷ್ಟಾ ಪ್ರಮಾ ಸಾ ಚ ನ ಭವೇತ್ಸ್ವವಿರೋಧತಃ ॥ ೨೩೧ ॥**

**ಅ ॥** ವಿಜ್ಞಾನಾತ್ = ಶೂನ್ಯತತ್ವಜ್ಞಾನದ್ದೆಸೆಯಿಂದ, ಅಸ್ಯ = ಈ ಪ್ರಪಂಚಕ್ಕೆ, ವ್ಯಭಿಚಾರಃ = ನಿವೃತ್ತಿಯು, ಕದಾಚಿತ್ = ಕೆಲವುಸೇಳೆ, ಸ್ಯಾತ್ = ಆಗುವುದು, ಇತಿ = ಈ ವಿಷಯದಲ್ಲಿ, ಪ್ರಮಾ = ಪ್ರಮಾಣವು, ನೈವ ದೃಷ್ಟಾ = ಕಾಣಲ್ಪಡಲೇ ಇಲ್ಲ. (ಪ್ರಪಂಚಕ್ಕೆ ಶೂನ್ಯಜ್ಞಾನ ನಿವರ್ತ್ಯತ್ವರೂಪವಾದ ವಿಶೇಷವು ಅಪ್ರಾಮಾಣಿಕವಾಗಿರುವುದರಿಂದ ಅಂಗೀಕರಿಸಲಿಕ್ಕೆ ಬರುವುದಿಲ್ಲ. ಅಪ್ರಾಮಾಣಿಕವಾದ ಶೃಂಗದಿಂದ ಕುದುರೆಯು ರಾಸಭದಿಂದ ವಿಶೇಷವುಳ್ಳದ್ದಾಗಿ ಕಾಣಲ್ಪಡಲಾರದು.) (ಹಾಗಾದರೆ 'ಇದಂ ಕದಾಚಿತ್ ಬಾಧಿಷ್ಯತೇ ದೃಶ್ಯತ್ವಾತ್ ಶುಕ್ತಿರಜತಾದಿವತ್' ಈ ಜಗತ್ತು ಯಾವಾಗಲೋ ಒಮ್ಮೆ ಬಾಧ್ಯವಾಗುವುದು ದೃಶ್ಯವಾಗಿರುವುದರಿಂದ ಶುಕ್ತಿರಜತಾದಿಗಳಂತೆಯೇ, ಎನ್ನುವ ಅನುಮಾನದಿಂದ ಹಿಂದೆ ಹೇಳಿದ ಶೂನ್ಯಜ್ಞಾನನಿವರ್ತ್ಯತ್ವರೂಪವಾದ ವೈಲಕ್ಷಣ್ಯವು ಸಿದ್ಧಿಸುವಪ್ರಯುಕ್ತ ಈ ಶೂನ್ಯಜ್ಞಾನನಿವರ್ತ್ಯತ್ವರೂಪವಾದ ವೈಲಕ್ಷಣ್ಯವು ಅಪ್ರಾಮಾಣಿಕವೆಂದು ಹೇಳಿದ್ದು ಹೇಗೆಂದರೆ— ಅದಕ್ಕೆ ಹಿಂದೆ ಹೇಳಿದ ದೋಷವನ್ನೇ ಹೇಳುತ್ತಾರೆ.) (ಯಾ = ಯಾವುದು ಪ್ರಮಾಣವೆಂದು ಶಂಕಿಸಲ್ಪಡುವುದೋ) ಸಾ ಚ = ಅದೂ ಕೂಡ, ಸ್ವವಿರೋಧತಃ = ಬಾಧ್ಯತ್ವರೂಪವಾದ ಸ್ವವಿಷಯಕ್ಕೂ, ದೃಶ್ಯತ್ವರೂಪತನಗೂ, ದೃಶ್ಯತ್ವವಿರೋಧದಿಂದ ಬಾಧ್ಯತ್ವಾಪಾದಕತ್ವರೂಪ ವಿರೋಧವು ಬರುವುದರಿಂದ, ಪ್ರಮಾ = ಪ್ರಮಾಣವು, ನ ಭವೇತ್ = ಆಗಲಾರದು.

**ತಾ ॥ ನ್ಯಾಯಸುಧಾ**— (1) ಯಾವ ಹೇತುವಿನ ವಿಷಯವು ಬಾಧ್ಯವಾಗಿದೆಯೋ, ಯಾವುದು ತಾನೂ ಕೂಡ ಬಾಧ್ಯವಾಗಿದೆಯೋ ಅದು ಹೇಗೆ ಪ್ರಮಾಣವಾದೀತು? ಆದಕಾರಣ ಶೂನ್ಯಜ್ಞಾನನಿವರ್ತ್ಯತ್ವರೂಪವಾದ ಈ ವಿಶೇಷವು ಅಪ್ರಾಮಾಣಿಕವಾಗಿರುವುದರಿಂದ ಅಂಗೀಕರಿಸಲಿಕ್ಕೆ ಅಶಕ್ಯವಾಗಿದೆ. ಆದುದರಿಂದ ಬೇರೆ ಯಾವ ಪ್ರಮಾಣಗಮ್ಯತ್ವ ಅರ್ಥಕ್ರಿಯಾಕಾರಿತ್ವರೂಪವಾದ ವಿಶೇಷವು ಪ್ರಾಮಾಣಿಕವಾಗಿಯೂ ಪ್ರಮಾಣಾವಿರೋಧಿಯಾಗಿಯೂ ಅಂಗೀಕರಿಸತಕ್ಕದ್ದೋ ಅದೇ ನಮಗೆ ಜಗತ್ಸತ್ಯತ್ವದಲ್ಲಿ ಹೇತುವಾಗುವುದು ॥ ೨೩೧ ॥

## ದೃಶ್ಯತ್ವ ಮೊದಲಾದ ಮಿಥ್ಯಾತ್ವಹೇತುಗಳಿಗೆ ಪ್ರತಿಪಕ್ಷೋಕ್ತಿಯು.

ಹೀಗೆ ಪ್ರಪಂಚ ಮಿಥ್ಯಾತ್ವ ಸಾಧಕಗಳಾದ ಅನುಮಾನಗಳನ್ನು ನಿರಾಕರಿಸಿ ಈಗ ಅನುಮಾನಗಳಿಗೆ ಅನುಗ್ರಾಹಕವಾಗಿಯೂ, ಸತ್ಯತ್ವ ಪ್ರತ್ಯಕ್ಷಕ್ಕೆ ಪ್ರತಿಕೂಲವಾಗಿಯೂ ಪರೋತ್ಪ್ರೇಕ್ಷಿತವಾದ ತರ್ಕವನ್ನೂ ಕೂಡ ನಿರಾಕರಿಸುವುದಕ್ಕಾಗಿ ಆಶಂಕಿಸುತ್ತಾರೆ—

**ಮೂ॥ ಭೇದೋ ವಿಶೇಷ್ಯಧರ್ಮ್ಯಾದಿಗ್ರಹಣಾಪೇಕ್ಷಯಾ ಯದಿ ।**
**ಅನ್ಯೋನ್ಯಾಶ್ರಯತಾ ಹೇತೋಃ ದುರ್ಗ್ರಾಹ್ಯ ಇತಿ ಯನ್ಮತಮ್ ॥ ೨೩೨ ॥**
**ಸ್ವರೂಪಂ ವಸ್ತುನೋ ಭೇದೋ ಯನ್ನ ತಸ್ಯ ಗ್ರಹೇಗ್ರಹಃ ।**
**ಅನ್ಯಥಾಽಸ್ಯಾಮುನಾ ಭೇದಃ ಇತಿ ವಕ್ತುಂ ನ ಶಕ್ಯ(ಯುಜ್ಯ)ತೇ ॥೨೩೩॥**

ಅಗೃಹೀತೋ ಯದಾ ಭೇದಃ ತದಾ ಸ್ವಸ್ಮಾದಿತಿ ಗ್ರಹಃ ।
ಸ್ಯಾತ್ಪ್ರತೀತಿವಿರೋಧಾಚ್ಚ ನ ಹಿ ಕಶ್ಚಿತ್ತಥಾವದೇತ್ ॥ ೨೩೪ ॥

ಅ ॥ ವಿಶೇಷ್ಯಧರ್ಮ್ಯಾದಿಗ್ರಹಣಾಪೇಕ್ಷಯಾ = ವಿಶೇಷ್ಯ, ಧರ್ಮಿ, ಮೊದಲಾದ ವಿಶೇಷಣ ಪ್ರತಿಯೋಗಿಗಳ ಜ್ಞಾನವನ್ನು ಅಪೇಕ್ಷಿಸಿ, ಯದಿ=ಯಾವಪಕ್ಷದಲ್ಲಿ, ಭೇದಃ=ಭೇದವು, ಗೃಹ್ಯತೇ = ತಿಳಿಯಲ್ಪಡುವುದೋ, ತರ್ಹಿ = ಹಾಗಾದರೆ, ಅನ್ಯೋನ್ಯಾಶ್ರಯತಾಹೇತೋಃ= ಅನ್ಯೋನ್ಯಾಶ್ರಯತ್ವ ರೂಪದೋಷವು ಬರುತ್ತದೆ ಎನ್ನುವ ಕಾರಣದಿಂದ, ದುರ್ಗ್ರಾಹ್ಯಃ = ಆ ಭೇದವನ್ನು ತಿಳಿದುಕೊಳ್ಳಲಿಕ್ಕೇನೇ ಸಾಧ್ಯವಾಗಲಾರದು. ಇತಿ=ಹೀಗೆ, ಯತ್=ಯಾವುದು, ಭೇದವು ದುರ್ಗ್ರಾಹ್ಯವೆಂದು ಹೇಳಲ್ಪಟ್ಟದೋ, ತತ್=ಆ ಭೇದಕ್ಕೆ ದುರ್ಗ್ರಾಹ್ಯತ್ವರೂಪವಾದ ದೂಷಣವು, ನ=ಕೂಡುವುದಿಲ್ಲ. (ಅದು ಹೇಗೆಂದರೆ) ಯತ್=ಯಾವಕಾರಣದ್ದೆಶೆಯಿಂದ, ಭೇದಃ=ಭೇದವು, ವಸ್ತುನಃ=ಧರ್ಮಿರೂಪವಾದ ವಸ್ತುವಿನ, ಸ್ವರೂಪಂ= ಸ್ವರೂಪವ್ರೋ, ತತ್= ಆ ಕಾರಣದ್ದೆಶೆಯಿಂದ, ತಸ್ಯ=ಆ ವಸ್ತುವಿನ, ಗ್ರಹೇ=ಜ್ಞಾನವಾಗುತ್ತಿರಲು, ಗ್ರಹಃ=ಆ ಮೇಲೆ ಭೇದ ಗ್ರಹವು ಎನ್ನುವುದು, ನ=ಇಲ್ಲ. (ಮತ್ತೆ ವಸ್ತುವಿನ ಜ್ಞಾನವೇ ಭೇದಜ್ಞಾನವು, ತಥಾಚ= ಧರ್ಮಿಜ್ಞಾನ— ಭೇದಜ್ಞಾನವೆನ್ನುವ ಬೇರೆ ಬೇರೆ ಎರಡು ಜ್ಞಾನಗಳೇ ಇಲ್ಲದಿರುವುದರಿಂದ ಧರ್ಮ್ಯಾದಿ ಜ್ಞಾನವು ಬಂದಮೇಲೆ ಭೇದಜ್ಞಾನವು. ಭೇದಜ್ಞಾನವು ಬಂದಮೇಲೆ ತತ್ಸಾಪೇಕ್ಷವಾದ ಧರ್ಮ್ಯಾದಿ ಜ್ಞಾನವು ಎಂದು ಇದೇ ಮೊದಲಾದ ರೀತಿಯಿಂದ ಹಿಂದೆ ಹೇಳಿವ ಅನ್ಯೋನ್ಯಾಶ್ರಯತ್ವ ರೂಪದೋಷವು ಇರುವುದಿಲ್ಲ. ಆದುದರಿಂದ ಭೇದವು ದುರ್ಗ್ರಾಹ್ಯವೆಂದು ಹೇಳಿದ್ದು ಹೇಗೆ) (ಯಾವನು ಭೇದವನ್ನೇ ಒಪ್ಪುವುದಿಲ್ಲವ್ರೋ ಅಂತಹವನಿಗೆ ಭೇದಕ್ಕೆ ಧರ್ಮಿಸ್ವರೂಪತ್ವವನ್ನು ಸಮರ್ಥಿಸುವುದೇ ಅಗತ್ಯವಿಲ್ಲ.) ಯಾವನು ಭೇದವನ್ನು ಅಂಗೀಕರಿಸಿ ಭೇದಕ್ಕೆ ವಸ್ತುಸ್ವರೂಪತ್ವವನ್ನು ಅಂಗೀಕರಿಸುವುದಿಲ್ಲವೋ ಅವನನ್ನು ಕುರಿತು ಧರ್ಮಿಸ್ವರೂಪತ್ವವನ್ನು ಸಮರ್ಥಿಸುತ್ತಾರೆ. ಯಾವ ಕಾರಣದ್ದೆಶೆಯಿಂದ ವಸ್ತುವಿನ ಜ್ಞಾನವಾದಾಗ, ಭೇದಕ್ಕೆ ಅಜ್ಞಾನವಿಲ್ಲವ್ರೋ, ಆದಕಾರಣ ಭೇದವು ವಸ್ತುವಿನ ಸ್ವರೂಪವು. (ವಸ್ತುವಿನ ಜ್ಞಾನವಾಗುವ ಕಾಲದಲ್ಲಿಯೇ ಭೇದವೂ ಗೃಹೀತ ವಾಗುವುದಾದರೆ ಇದಾಗಬಹುದಿತ್ತು. ಹೀಗೆ ಇಲ್ಲ. ಮತ್ತೆ ವಸ್ತುವಿನ ಜ್ಞಾನಬಂದಮೇಲೆಯೇ ಭೇದವು ಗೃಹೀತವಾಗುತ್ತದೆ. ನಿರ್ವಿಕಲ್ಪಕ ಜ್ಞಾನದಲ್ಲಿ ಕೇವಲ ವಸ್ತುವು ತೋರುತ್ತದೆ. ಭೇದವಾದರೂ ವಸ್ತುವು ತೋರಿದಮೇಲೆ ಪ್ರತಿಯೋಗಿ ಸ್ಮರಣವಿದ್ದಾಗ ತೋರುತ್ತದೆ. ಹೇಗೆ ಸಾದೃಶ್ಯವೂ, ಅಭಾವವೂ ಕೂಡ ಪ್ರತಿಯೋಗ್ಯಾದಿಗಳ ಸ್ಮರಣ ಬಂದಮೇಲೆಯೇ ತೋರುತ್ತದೋ, ಹಾಗೆಯೇ ಎಂದಾಶಂಕಿಸಿದರೆ—) ಅನ್ಯಥಾ = ಭೇದವು ವಸ್ತುವು ತೋರುವಾಗ ತೋರದಿದ್ದರೆ ಆಗ, ಅಸ್ಯ=ಘಟಕ್ಕೆ, ಅಮುನಾ=ಈ ಪಟದಿಂದ, ಭೇದಃ=ಭೇದವು, ಇತಿ=ಹೀಗೆ, ವಕ್ತುಂ= ಹೇಳಲಿಕ್ಕೆ, ನಶಕ್ಯತೇ = ಕೂಡುವುದಿಲ್ಲ. ಅಂದರೆ ಉತ್ತರಕಾಲದಲ್ಲಿ ಹೀಗೆ ಸವಿಕಲ್ಪಕ ಜ್ಞಾನವೂ ಹುಟ್ಟಲಾರದು. ಇಂತಹ ವ್ಯವಹಾರವೂ ಬರಲಾರದು. (ವಸ್ತುದರ್ಶನವಾಗುವಾಗ ಭೇದಸ್ಫೂರ್ತಿಯನ್ನು ಅಂಗೀಕರಿಸದೆ ಇರುವವನಿಗೆ 'ಅಸ್ಯ ಅಮುನಾಭೇದಃ' ಎಂದು ಪಶ್ಚಾತ್ಕಾಲೀನವಾದ ಸವಿಕಲ್ಪಕಜ್ಞಾನವೂ ಹಾಗೆ ವ್ಯವಹಾರವೂ ಕೂಡುವುದಿಲ್ಲವೆಂದು ಇಷ್ಟುಮಾತ್ರವಲ್ಲ. ಮತ್ತೇನೆಂದರೆ) ಯದಾ = ಯಾವಾಗ, ಭೇದಃ = ಭೇದವು, ಅಗೃಹೀತಃ = ಗ್ರಹಿಸಲ್ಪಡುವುದಿಲ್ಲವೋ. ತದಾ = ಆಗ, ಸ್ವಸ್ಮಾತ್= ತನ್ನದ್ದೆಶೆಯಿಂದ, (ತಾನು ಭಿನ್ನನೆಂದು) ಗ್ರಹಃಸ್ಯಾತ್= ಸವಿಲ್ಪಕವಾದ ಭೇದಜ್ಞಾನವು ಬರಬೇಕಾಗುವುದು. (ಹೀಗೆ ಆಗಲಿ ಎಂದರೆ) ಪ್ರತೀತಿವಿರೋಧಾತ್ = 'ಪಟಾತ್ ಘಟೋಭಿನ್ನಃ' ಎಂದೇ ಸವಿಕಲ್ಪಕವಾದ ಪ್ರತೀತಿಯು ಅನುಭೂತ

ವಾಗುತ್ತದೆ. ಯಾವಾಗಲಾದರೂ ತನ್ನದ್ವೆಶೆಯಿಂದ ತಾನೂ ಭಿನ್ನವೆಂದು ಅನುಭೂತ ವಾಗುವುದಿಲ್ಲ. ಆದಕಾರಣ (ಪ್ರತೀತಿವಿರೋಧವಿದ್ದುದರಿಂದ, (ಇಂತಹಸವಿಕಲ್ಪಕಜ್ಞಾನವು ಅಂಗೀಕರಿಸಲು ಯೋಗ್ಯವಲ್ಲ.) (ಮತ್ತೂ ತನ್ನದ್ವೆಶೆಯುಂದ ತಾನು ಭಿನ್ನನೆಂದು ಸವಿಕಲ್ಪಕ ಭೇದಜ್ಞಾನವು ಆಗುವುದಾದರೆ ಆಗ ಕೆಲವುವೇಳೆ ಅಂತಹವಾಗ್ವ್ಯವಹಾರವೂ ಬರಬೇಕಾಗುವುದು. ವಾಗ್ವ್ಯವಹಾರವಾದರೂ ಇಲ್ಲವೆನ್ನುತ್ತಾರೆ.) ಕಶ್ಚಿತ್ = ಯಾರೊಬ್ಬನೂ, ತಥಾ = ಹಾಗೆ, ನಹಿವದೇಚ್ಚ = ಹೇಳಲಾರನಷ್ಟೆ.

**ತಾ ||** ಸ. ರ. ವಿ— (1) ಪಂಚಭೇದರೂಪವಾದ ಪ್ರಪಂಚವು ಅಂಗೀಕೃತವಾಗಿದೆ. ಆ ಪ್ರಪಂಚವು ಭೇದವನ್ನು ನಿರೂಪಿಸಲಿಕ್ಕೆ ಅಶಕ್ಯವಾಗಿರುವುದರಿಂದ ಅವಸ್ತುಭೂತವಾಗುವುದು. ಅದಾದರೂ 'ಅನಯೋರ್ಭೇದಃ' ಎಂದು ವಿಶೇಷಣ ವಿಶೇಷ್ಯಭಾವವನ್ನು ಅಪೇಕ್ಷಿಸಿ ಭೇದ ಸಿದ್ಧಿಯು, ವಿಶೇಷಣ ವಿಶೇಷ್ಯಭಾವವು 'ಇದಮಸ್ಮಾದ್ಭಿನ್ನಂ' ಎಂದು ಭೇದಸಾಪೇಕ್ಷಿತವಾಗಿದೆ. (2) ಮತ್ತು ಧರ್ಮಿಪ್ರತಿಯೋಗಿಯನ್ನು ಅಪೇಕ್ಷಿಸಿ ಭೇದವು ಸಿದ್ಧಿಸುವುದು. ಧರ್ಮಿಪ್ರತಿಯೋಗಿ ಭಾವವು ಭೇದವನ್ನು ಅಪೇಕ್ಷಿಸಿಕೊಂಡಿದೆ, ಹೀಗೆ ಅನ್ಯೋನ್ಯಾಶ್ರಯವು ಬರುವುದರಿಂದ ಹೇಗೂ ಭೇದವನ್ನು ನಿರೂಪಿಸಲಿಕ್ಕೆ ಶಕ್ಯವಲ್ಲ. ಎಂದಾಶಂಕಿಸಿದರೆ— ಧರ್ಮ್ಯಾದಿಪ್ರತೀತಿಯು ಬೇರೆ, ಭೇದಪ್ರತೀತಿಯು ಬೇರೆ ಎಂದಾಗಿದ್ದರೆ ಅನ್ಯೋನ್ಯಾಶ್ರಯತ್ವವು ಬರುತ್ತಿತ್ತು. ಹೀಗೆ ಇಲ್ಲ. ಭೇದವು ಧರ್ಮಿಸ್ವರೂಪವಾಗಿದೆ, ಧರ್ಮಿಪ್ರತಿಯೋಗಿಗಳು ಗೃಹೀತಗಳಾಗುವಾಗ ಭೇದ ಗ್ರಹಣವು ಕೂಡಬಹುದು. ಇಲ್ಲವಾದರೆ ಇದು ಘಟವೋ, ಪಟವೋ ಎಂದು ಸಂಶಯವು ಬರಬೇಕಾಗುವುದು.

**ನ್ಯಾಯಸುಧಾ—** (1) ಪ್ರಪಂಚವು ವ್ಯಾವಹಾರಿಕಸತ್ಯವಾಗದಿದ್ದರೆ ಆಗ ಪ್ರತಕ್ಷ ವಿಷಯವೂ ಆಗದೆ ಹೋಗಬೇಕಾಗುವುದು. ಹೇಗೆಂದರೆ— ಅನೇಕ ಭೇದವಿಶಿಷ್ಟವಾದುದು ಪ್ರಪಂಚವೆಂದು ಅಂಗೀಕರಿಸಲ್ಪಡುವುದು. ಭೇದವು ಪ್ರತ್ಯಕ್ಷವಿಷಯುವಾಗದಿದ್ದರೆ ಪ್ರಪಂಚವೂ ಪ್ರತ್ಯಕ್ಷವಿಷಯವಾಗಲಿಕ್ಕಿಲ್ಲ. ಭೇದವಿಲ್ಲದೆ ಪ್ರಪಂಚಪ್ರತೀತಿಯಾಗುವುದಾದರೆ ಅದ್ವಿತೀಯ ಶೂನ್ಯಪ್ರತೀತಿಯು ಬರಬೇಕಾಗುವುದು. ಭೇದಪ್ರತೀತಿಯೇ ಕೂಡುವುದಿಲ್ಲ. ಭೇದವು ತೋರು ವಾಗ 'ಘಟಪಟೌ ಭಿನ್ನೌ' ಎಂದು ಘಟಪಟಗಳಿಗೆ ವಿಶೇಷಣವಾಗಿ ಆಗಲೀ 'ಘಟಪಟಯೋ ರ್ಭೇದಃ' ಎಂದು ಘಟಪಟಗಳಿಗೆ ವಿಶೇಷ್ಯವಾಗಿ ಆಗಲೀ ತಿಳಿಯಲ್ಪಡಬೇಕು. 'ಭೇದಃ' ಎಂಬೇ ಪ್ರತೀತಿಯಿಲ್ಲ. ಅಥವಾ 'ಘಟಾತ್ ಪಟೋ ಭಿನ್ನಃ' ಎಂದು ಘಟಪ್ರತಿಯೋಗಿಕವಾಗಿ ಆಗಲೀ 'ಘಟಾತ್ ಪಟಸ್ಯ ಭೇದಃ' ಎಂದು ಪಟಧರ್ಮಿಕವಾಗಿ ಆಗಲೀ ಭೇದಜ್ಞಾನವೆಂದು ಇಟ್ಟುಕೊಳ್ಳ ಬೇಕು. ಎರಡು ಕಡೆಗಳಲ್ಲಿಯೂ ಅನ್ಯೋನ್ಯಾಶ್ರಯತ್ವವು, ವಿಶೇಷ್ಯಗಳಾದ ಘಟಪಟಗಳ ಜ್ಞಾನವಾದಾಗ ಅವುಗಳಿಗೆ ವಿಶೇಷಣವಾಗಿ ಭೇದವನ್ನು ತಿಳಿಯಬೇಕು. 'ದಂಡೀ ದೇವದತ್ತಃ' ಎನ್ನುವಲ್ಲಿ ದೇವದತ್ತನನ್ನು ಕಾಣದಿದ್ದರೆ ದಂಡವು ದೇವದತ್ತನಿಗೆ ವಿಶೇಷಣವೆನ್ನುವ ಜ್ಞಾನವು ಕೂಡಲಾರದು. ವಿಶೇಷ್ಯಜ್ಞಾನಕ್ಕೆ ಭೇದದ ಅಪೇಕ್ಷೆಯಿದೆ. ಭೇದವು ತೋರದಿದ್ದರೆ 'ಘಟಪಟೌ' ಎಂದು ದ್ವಿತ್ವವಿಶಿಷ್ಟವಾದ ಅರ್ಥಪ್ರತೀತಿಯು ಕೂಡುವುದಿಲ್ಲ. (2) ಹೀಗೆ ವಿಶೇಷ್ಯವಾಗಿ ಭೇದವು ತೋರುವಾಗಲೂ ಇಟ್ಟುಕೊಳ್ಳಬೇಕು. ಹಾಗೆಯೇ ಧರ್ಮಿಪ್ರತಿಯೋಗಿಗಳ ಜ್ಞಾನವಾದಾಗ ಭೇದಜ್ಞಾನವು. ಭೇದಜ್ಞಾನವಾದರೆ ಧರ್ಮಿಪ್ರತಿಯೋಗಿಗಳ ಜ್ಞಾನವು. ಭೇದಜ್ಞಾನವಿಲ್ಲದಿರು ವಾಗ ಧರ್ಮಿಪ್ರತಿಯೋಗಿಗಳ ಭಾವವನ್ನು ತಿಳಿಯಲಿಕ್ಕೆ ಶಕ್ಯವಾಗುವುದಿಲ್ಲ. ಹಾಗಿದ್ದರೆ ಘಟ ದ್ವೆಶೆಯಿಂದ ಘಟಕ್ಕೆ ಬೇದವು ಎಂದೂ ಪ್ರತೀತಿಯು ಬರಬೇಕಾಗುವುದು. ಅನ್ಯೋನ್ಯಾಶ್ರಯ ವುಳ್ಳ ಕಾರ್ಯಗಳು ಕೂಡಲಾರವು. ಆದುದರಿಂದ ಭೇದವು ವಾಸ್ತವವಾಗದಿದ್ದರಿಂದ ಅದರ

ಪ್ರತೀತಿಯು ಕೂಡದಿರಲು ಪ್ರಪಂಚವೂ ಕೂಡ ವಾಸ್ತವವಾಗದೆ ಹೋಗಬೇಕಾಗುವುದು. ಆದುದರಿಂದ ಭೇದರೂಪ ಪ್ರಪಂಚವು ಅವಿಚಾರಿತ ರಮಣೀಯವಾದ ಅಜ್ಞಾನಮೂಲವೆಂದೇ ಅಂಗೀಕರಿಸಬೇಕು. ಎಂದಾಶಂಕಿಸಿದರೆ— ಭೇದವು ದುರ್ಗ್ರಾಹ್ಯವೆಂದು ಯಾವುದು ಹೇಳ ಲ್ಪಟ್ಟದೋ ಅದು ಸರ್ವಥಾ ಕೂಡುವುದಿಲ್ಲ. (3) ಯಾರು ಭೇದವನ್ನು ಅಂಗೀಕರಿಸಿ ಅದಕ್ಕೆ ವಸ್ತುಸ್ವರೂಪತ್ವವನ್ನು ಅಂಗೀಕರಿಸುವುದಿಲ್ಲವೋ ಆತನಿಗೆ 'ವಿಮತೋ ಭೇದೋ ಘಟಸ್ವರೂಪಂ ಭವಿತುಮರ್ಹತಿ ಘಟಗ್ರಹೇ ಅಗೃಹ್ಯಮಾಣತ್ವರಹಿತತ್ವಾತ್ ಘಟಸ್ವರೂಪವತ್' ವಿವಾದವಿಷಯ ವಾದ ಭೇದವು ಘಟಸ್ವರೂಪವು ಆಗಲಿಕ್ಕೆ ಯೋಗ್ಯವಾಗಿದೆ, ಘಟಜ್ಞಾನವಾಗುವಾಗ ಅಗೃಹ್ಯ ಮಾಣತ್ವವು ಇಲ್ಲದಿರುವುದರಿಂದ ಘಟಸ್ವರೂಪದಂತೆ. ಆದುದರಿಂದ ವಸ್ತುವು ತೋರುವಾಗಲೇ ಭೇದವು ತೋರುವುದರಿಂದ ಭೇದವು ವಸ್ತುವಿನ ಸ್ವರೂಪವೇ. ॥ ೨೩೨ ॥ ೨೩೩ ॥ ೨೩೪ ॥

ಹೀಗೆ ತಮ್ಮ ಮತದಪ್ರಕಾರ ಭೇದಪ್ರತೀತಿಯೇ ಧರ್ಮಿಪ್ರತೀತಿಯೆಂದು ಹೇಳಿ ಅನ್ಯೋನ್ಯಾ ಶ್ರಯತ್ವವನ್ನು ಪರಿಹರಿಸಿ ಭೇದವು ಧರ್ಮಿಯಿಂದ ಭಿನ್ನವೆಂದು ಹೇಳುವವರ ಮತದಲ್ಲಿಯೂ ಹಿಂದೆ ಹೇಳಿದ ದೋಷದ ಪರಿಹಾರವನ್ನು ಹೇಳುತ್ತಾರೆ—

**ಮೂ ॥ ಧರ್ಮಿತ್ವಪ್ರತಿಯೋಗಿತ್ವತದ್ಭೇದಾ ಯುಗಪದ್ಯದಿ ।**
**ವಿಶೇಷಣಂ ವಿಶೇಷ್ಯಂ ಚ ತದ್ಭಾವಶ್ಚೈವ ಗೃಹ್ಯತೇ ॥ ೨೩೫ ॥**
**ಕೋ ವಿರೋಧಃ ಸ್ವರೂಪೇಣ ಗೃಹೀತೋ ಭೇದ ಏವ ತು ।**
**ಅಸ್ಯಾಮುಷ್ಮಾದಿತಿ ಪುನಃ ವಿಶೇಷೇಣೈವ ಗೃಹ್ಯತೇ ॥ ೨೩೬ ॥**

**ಅ ॥** ಯದಿ = ಯಾವಪಕ್ಷದಲ್ಲಿ, ಧರ್ಮಿತ್ವಪ್ರತಿಯೋಗಿತ್ವತದ್ಭೇದಾಃ = ಧರ್ಮಿತ್ವ, ಪ್ರತಿಯೋಗಿತ್ವ, ಧರ್ಮಿಪ್ರತಿಯೋಗಿಗಳಿಗೆ ಇರುವ ಭೇದಗಳೂ, ಧರ್ಮಿಪ್ರತಿಯೋಗಿಗಳೂ, ಯುಗಪತ್ = ಏಕಕಾಲದಲ್ಲಿ, ವಿಶೇಷಣಂ = ವಿಶೇಷಣವು, ವಿಶೇಷ್ಯಂ ಚ = ವಿಶೇಷ್ಯವೂ, ತದ್ಭಾವಶ್ಚ = ವಿಶೇಷಣತ್ವವೂ ವಿಶೇಷ್ಯತ್ವವೂ ಕೂಡ, ಗೃಹ್ಯತೇ ಏವ = ಗ್ರಹಿಸಲ್ಪಡುತ್ತದೋ ಆಗ, ಕೋ ವಿರೋಧಃ = ಯಾವ ವಿರೋಧವು? ಭೇದಃ = ಭೇದವು, ಸ್ವರೂಪೇಣ = ಸ್ವರೂಪದಿಂದ, ಗೃಹೀತಃ = ಗ್ರಹಿಸಲ್ಪಟ್ಟರೇನೇ, ಅಸ್ಯ = ಇದಕ್ಕೆ, ಅಮುಷ್ಮಾತ್ = ಇದರಿಂದ, ಭೇದ ಏವ = ಭೇದವೆಂದೇ, ಅನಯೋಃ ಭೇದಃ = ಇವರಿಗೆ ಭೇದವು, ಭಿನ್ನೌ ಇಮೌ = ಇವರು ಭೇದವುಳ್ಳವರು, ಇತಿ = ಹೀಗೆ, ಪುನಃ = ಮತ್ತು, ವಿಶೇಷೇಣೈವ = ವಿಶೇಷದಿಂದಲೇ, ಗೃಹ್ಯತೇ = ಗ್ರಹಿಸಲ್ಪಡುತ್ತದೆ

**ತಾ ॥ ನ್ಯಾಯಸುಧಾ—** (1) ನಿರ್ವಿಕಲ್ಪಕಪ್ರತೀತಿಯಲ್ಲಿ ಅನ್ಯೋನ್ಯಾಶ್ರಯತ್ವವುಹೇಳ ಲ್ಪಡುತ್ತದೋ, ೨ ಅಥವಾ ಸವಿಕಲ್ಪಕ ಪ್ರತೀತಿಯಲ್ಲಿಯೋ, ೧ ನೇದ್ದು ಕೂಡಲಾರದು. ಧರ್ಮಿ ಪ್ರತಿಯೋಗಿ ಸ್ವರೂಪಗಳೂ ಧರ್ಮಿತ್ವ ಪ್ರತಿಯೋಗಿತ್ವಗಳಿಗೂ, ಅವುಗಳ ಭೇದಕ್ಕೂ ಭೇದಗಳಿ ಗಾಗಲೀ ಏಕಕಾಲದಲ್ಲಿ ಎರಡಕ್ಕೂ ಪ್ರತೀತಿಯಿದೆ. ಹಾಗೆಯೇ ವಿಶೇಷಣ ವಿಶೇಷ್ಯಭೂತಗಳಾದ ಘಟಪಟಗಳಿಗೂ ಭೇದಕ್ಕೂ ಧರ್ಮಗಳಿಗೂ ಏಕಕಾಲದಲ್ಲಿ ಪ್ರತೀತಿಯಿದೆ. ಏಕಕಾಲದಲ್ಲಿಯೇ ಎಲ್ಲವೂ ಇಂದ್ರಿಯ ಸನ್ನಿಕೃಷ್ಟವಾಗಿದೆ. ದರ್ಶನಯೋಗ್ಯವೂ ಆಗಿದೆ. (2) ನಿರ್ವಿಕಲ್ಪಕಪ್ರತೀತಾರ್ಥ ಗಳಿಗೆ ಅನ್ಯೋನ್ಯವೈಶಿಷ್ಟ್ಯಮಾತ್ರವು ಸವಿಕಲ್ಪಕಜ್ಞಾನದಲ್ಲಿ ತೋರುತ್ತದೆ, ಹೆಚ್ಚು ತೋರುವುದಿಲ್ಲ. ಅಲ್ಲಿಯೂ ಹೀಗೆ. ಅಂತೂ ಅನ್ಯೋನ್ಯಾಶ್ರಯತ್ವವಿಲ್ಲ. ಹೀಗೆ ಭಿನ್ನಭೇದವಾದಿಗಳು ಹೇಳು ತ್ತಾರೆ— ಒಂದೇ ನಿರ್ವಿಕಲ್ಪಕ ಜ್ಞಾನದಲ್ಲಿ ಭೇದವೂ, ಭೇದಿಗಳೂ ಏಕಕಾಲದಲ್ಲಿ ತೋರುವಾಗ ಅದರಲ್ಲಿ ಒಂದು ಭೇದಿಯನ್ನು ಅವಧೀಕರಿಸಿ 'ಏತಸ್ಮಾತ್ ಅಯಂ ಭಿನ್ನಃ' ಎಂಬ ಸವಿಕಲ್ಪಕ

ಜ್ಞಾನವು ಹುಟ್ಟುವುದರಿಂದ ಅತಿರಿಕ್ತಭೇದಪಕ್ಷದಲ್ಲಿ ಅನ್ಯೋನ್ಯಾಶ್ರಯತ್ವವು ಹೇಗೆ? ॥ ೨೩೫-೨೩೬ ॥

ಹಿಂದೆ ಹೇಳಿದ ಪ್ರಕಾರ ಅನ್ಯೋನ್ಯಾಶ್ರಯತ್ವವನ್ನು ನಿರಾಕರಿಸಿ ಈಗ ದೂಷಣಾಂತರವನ್ನು ಪ್ರತಿಜ್ಞಾಮಾಡುತ್ತಾರೆ—

**ಮೂ ॥ ಕಿಂಚ ಭೇದಃ ಕಥಂ ಗ್ರಾಹ್ಯಃ ಇತಿ ಯಃ ಪರಿಪೃಚ್ಛತಿ ।**
**ಧರ್ಮ್ಯಾದಿ ಭೇದಗ್ರಹಣಾತ್ತೇನೋಕ್ತೋಽನ್ಯೋನ್ಯಸಂಶ್ರಯಃ ॥**
**॥ ೨೩೭ ॥**

**ಅನ್ಯತ್ವಾಗ್ರಹಣೇ ಪ್ರೋಕ್ತಃ ಕಥಮನ್ಯೋನ್ಯಸಂಶ್ರಯಃ ।**
**ಅನ್ಯತ್ವಂ ಯದಿ ಸಿದ್ಧಂ ಸ್ಯಾತ್ಕಥಮನ್ಯೋನ್ಯಸಂಶ್ರಯಃ ॥ ೨೩೮ ॥**

ಅ ॥ ಕಿಂಚ=ಬೇರೆ ದೂಷಣವೂ ಹೇಳಲ್ಪಡುತ್ತದೆ. ಹೇಗೆಂದರೆ— (ಇಲ್ಲಿ೧ ಧರ್ಮ್ಯಾದಿ ಪ್ರತೀತಿಯನ್ನು ಅಪೇಕ್ಷಿಸಿ ಭೇದವು ತೋರುವುದಾದರೆ ಆಗ ಅನ್ಯೋನ್ಯಾಶ್ರಯತ್ವವು ಬರುವುದು ಎಂದಾಪಾದಿಸುತ್ತೀರೋ? ೨ ಅಥವಾ ಭೇದವು ತೋರುವುದಾದರೆ ಆಗ ಅನ್ಯೋನ್ಯಾಶ್ರಯತ್ವವು ಬರುವುದು? ಎಂದು ಆಪಾದಿಸುತ್ತೀರೋ?) (೧ನೇ ಕಲ್ಪದಲ್ಲಿ ದೋಷವನ್ನು ಹೇಳುತ್ತಾರೆ.) ಭೇದಃ=ಭೇದವು, ಕಥಂ=ಹೇಗೆ, ಗ್ರಾಹ್ಯಃ=ತಿಳಿಯಲ್ಪಡುವುದು, ಇತಿ=ಹೀಗೆ, ಯಃ=ಯಾವನು ಪರಿಪೃಚ್ಛತಿ=ಕೇಳುತ್ತಾನೋ, (ಆಕ್ಷೇಪಿಸುತ್ತಾನೋ,) ಧರ್ಮ್ಯಾದಿಭೇದಗ್ರಹಣಾತ್=ಧರ್ಮ್ಯಾದಿ ಗ್ರಹಣ ಸಾಪೇಕ್ಷವಾಗಿ ಭೇದಗ್ರಹಣವಾಗೋಣದರಿಂದ, ತೇನ = ಅವರಿಂದ, ಅನ್ಯೋನ್ಯ ಸಂಶ್ರಯಃ=ಅನ್ಯೋನ್ಯಾಶ್ರಯವು, ಉಕ್ತಃ=ಹೇಳಲ್ಪಟ್ಟದೆ. ಇದು ಪರಸ್ಪರ ವ್ಯಾಹತವಾಗಿದೆ. (ಹೇಗೆಂದರೆ— ಭೇದವನ್ನು ಗ್ರಹಿಸಲಿಕ್ಕೆ ಸಾಧ್ಯವಿಲ್ಲವೆಂದು ಪ್ರತಿಜ್ಞಾಮಾಡಿ ಅದರ ಉಪಪತ್ತಿಗಾಗಿ ಇದನ್ನು ಹೇಳಬೇಕು. ಇದರಿಂದ ಭೇದವು ಧರ್ಮ್ಯಾದಿ ಪ್ರತೀತಿಯನ್ನು ಅಪೇಕ್ಷಿಸಿ ತೋರುವುದಾದರೆ ಆಗ ಅನ್ಯೋಶ್ರಯತ್ವವು ಬರುವುದು. ತಥಾಚ 'ನ ಪ್ರತೀಯೇತ' ಎಂದಾಪಾದಿಸಿರುವುದರಿಂದ 'ಪ್ರತೀಯೇತ ಚ' ಇದುದರಿಂದ ಅದರ ಪ್ರತೀತಿಯು ಧರ್ಮ್ಯಾದಿಗ್ರಹಣಾಪೇಕ್ಷಿತವಾದುದು ಎಂದು ಲಬ್ಧವಾಯಿತು. ಆದುದರಿಂದ ಪೂರ್ವೋತ್ತರ ವಿರೋಧವಿಲ್ಲದಿರುವುದು ಹೇಗೆ? (೨ನೇ ಕಲ್ಪದಲ್ಲಿ ಪರರು ಎಲ್ಲಿಯೂ ಭೇದವನ್ನು ಗ್ರಹಿಸಲೇ ಇಲ್ಲವೋ ಅಥವಾ ಕೆಲವುಕಡೆ ತಿಳಿದಿರುವರೋ, ೧ನೇದ್ದನ್ನು ದೂಷಿಸುತ್ತಾರೆ,) ಅನ್ಯತ್ವಾಗ್ರಹಣೇ = ಅನ್ಯತ್ವವನ್ನು ತಿಳಿಯದೆ ಇದ್ದರೆ, ಪ್ರೋಕ್ತಃ=ಹೇಳಲ್ಪಟ್ಟ, ಅನ್ಯೋನ್ಯಸಂಶ್ರಯಃ=ಅನ್ಯೋನ್ಯಾಶ್ರಯವು, ಕಥಂ=ಹೇಗೆ? (ಅಂದರೆ ಅನ್ಯತ್ವವು ಎಲ್ಲಿಯೂ ಗೃಹೀತವಾಗದಿದ್ದರೆ ಆಗ ನಿರಾಶ್ರಯತ್ವವಿದ್ದುದರಿಂದ ಅನ್ಯೋನ್ಯಾಶ್ರಯತ್ವವನ್ನು ಆಪಾದಿಸಲಿಕ್ಕೇನೇ ಬರುವುದಿಲ್ಲ. ಆ ಅನ್ಯೋನ್ಯಾಶ್ರಯತ್ವವು ಪ್ರತೀತಗಳಾದ ಎರಡು ವಸ್ತುಗಳಿಗೆ ಕಾರ್ಯಕಾರಣಭಾವವನ್ನು ಆಶ್ರಯಿಸಿದರೆ ಆಪಾದಿಸಲ್ಪಡುವುದು.) (೨ನೇದ್ದನ್ನು ದೂಷಿಸುತ್ತಾರೆ.) ಅನ್ಯತ್ವಂ=ಬೇದವು, ಯದಿ= ಯಾವಪಕ್ಷದಲ್ಲಿ, ಸಿದ್ಧಂ ಸ್ಯಾತ್= ಪ್ರತೀತವಾಗಿದ್ದರೆ, ಅನ್ಯೋನ್ಯಸಂಶ್ರಯಃ = ಅನ್ಯೋನ್ಯಾಶ್ರಯವು, ಕಥಂ=ಹೇಗೆ, ಸ್ಯಾತ್= ಬರುವುದು? (ಅನ್ಯೋನ್ಯಾಶ್ರಯತ್ವವಿದ್ದರೆ ಭೇದಪ್ರತೀತಿಯೇ ಬಾರದೆಹೋಗುವುದು. ಅನ್ಯೋನ್ಯಾಶ್ರಯವುಳ್ಳ ಕಾರ್ಯಗಳು ಎಲ್ಲಿಯೂ ಆಗುವುದಿಲ್ಲ ॥ ೨೩೭ ॥ ೨೩೮ ॥

ಹಾಗಾದರೆ ಇದರಿಂದ ಈ ತರ್ಕಕ್ಕೆ ಯಾವ ದೋಷವು ಉಕ್ತವಾಯಿತೆಂದರೆ—

**ಮೂ ॥ ಏತಾದೃಶಸ್ಯ ವಕ್ತಾರಾವುಭೌ ಜಾತ್ಯುತ್ತರಾಕರೌ ।**
**ಮಾಯಿಮಾಧ್ಯಮಿಕಶ್ಚೈವ ತದುಪೇಪೇಕ್ಷ್ಯೌ ಬುಭೂಷುಭಿಃ ॥ ೨೩೯ ॥**

ಅ || ಏತಾದೃಶಸ್ಯ=ಇಂತಹುದನ್ನು, ವಕ್ತಾರೌ=ಹೇಳತಕ್ಕ, ಮಾಯಿಮಾಯಾ=ಮಾಯಾ ವಾದಿಯು, ಮಾಧ್ಯಮಿಕಶ್ಚೈವ = ಶೂನ್ಯವಾದಿಯೂ ಕೂಡ, ಉಭೌ=ಇಬ್ಬರೂ, ಜಾತ್ಯುತ್ತ ರಾಕರೌ=ಜಾತ್ಯುತ್ತರಕ್ಕೆ ಮುಖ್ಯಾಶ್ರಯರು. ತತ್=ಜಾತ್ಯುತ್ತರಕ್ಕೆ ಮುಖ್ಯಾಶ್ರಯರಾಗಿರುವುದ ರಿಂದ, ಬುಭೂಷುಭಿಃ=ತಿಳಿಯಲಿಚ್ಛಿಸುವವರಿಂದ, ಉಪೇಕ್ಷ್ಯೌ ಏವ=ಉಪೇಕ್ಷಾರ್ಹರೇ ಸರಿ. (ಪರಿಹಾರಕ್ಕಾಗಿ ಪ್ರತಿವಾದಿಗಳನ್ನಾಗಿ ಮಾಡಕೂಡದು.)

ತಾ || ಸಾಧಕಯುಕ್ತಿಗಳಿಂದ ಕೂಡಿದ ಪೂರ್ವಪಕ್ಷಿಗಳ ವಚನವನ್ನೇ ನಿರಾಕರಿಸ ಬೇಕು. ಸಾಧಕಯುಕ್ತಿಯಿಲ್ಲದಿರುವ ಪೂರ್ವಪಕ್ಷಿಗಳ ವಚನವು ನಿರಾಕರಣಾರ್ಹವೇ ಅಲ್ಲ. ಈ ಹೇಳಿದ ಅನ್ಯೋನ್ಯಾಶ್ರಯತ್ವಾದಿಗಳು ವ್ಯಾಹತಗಳಾಗಿರುವುದರಿಂದ ಜಾತ್ಯುತ್ತರಗಳು ಆದುದ ರಿಂದೆ ಸೂತ್ರಕಾರರು ಉಪೇಕ್ಷೆಮಾಡಿರುವರು. ಶ್ರೀಮದಾಚಾರ್ಯರು ಶಿಷ್ಯವ್ಯುತ್ಪಾದನಕ್ಕಾಗಿ ನಿರಾಕರಿಸಿರುವರು ॥ ೨೩೯ ॥

ಇದೆಲ್ಲಾ ಆಗಬಹುದಿತ್ತು. ಆದರೆ ಶೂನ್ಯವಾದಿಯು ಶೂನ್ಯವೇ ಜಗತ್ಕಾರಣವೆಂದು ತಿಳಿಯುತ್ತಾನೆ. ಮಾಯಾವಾದಿಗಳಾದರೂ ಬ್ರಹ್ಮನು ಜಗತ್ಕಾರಣನೆಂದು ಹೇಳುತ್ತಾನೆ. ಆದುದರಿಂದ 'ನಾಸತೋಽದೃಷ್ಟತ್ವಾತ್' ಇತ್ಯಾದಿಗಳಲ್ಲಿ ಮಾಡಿದ ಶೂನ್ಯವಾದಿನಿರಾಸಕ್ಕೆ ಮಾಯಾವಾದದಲ್ಲಿ ಅತಿದೇಶವು ಹೇಗೆ ಕೂಡುತ್ತದೆ? ಮತವೈಷಮ್ಯವಿದ್ದರೆ ಅತಿದೇಶವು ಕೂಡಲಾರದು ಎಂದರೆ—

ಮೂ || ಯಚ್ಛೂನ್ಯವಾದಿನಃ ಶೂನ್ಯಂ ತದೇವ ಬ್ರಹ್ಮಮಾಯಿನಃ ।
ನ ಹಿ ಲಕ್ಷಣಭೇದೋಽಸ್ತಿ ನಿರ್ವಿಶೇಷತ್ವತಸ್ತಯೋಃ ॥ ೨೪೦ ॥

ಅ || ಯತ್=ಯಾವುದು, ಶೂನ್ಯವಾದಿನಃ=ಶೂನ್ಯವಾದಿಗಳು, ಶೂನ್ಯಂ=ಶೂನ್ಯ ವನ್ನು ಜಗತ್ಕಾರಣವನ್ನಾಗಿ ಹೇಳುತ್ತಾರೋ, ತದೇವ=ಆ ಶೂನ್ಯವನ್ನೇ, ಮಾಯಿನಃ=ಮಾಯಾ ವಾದಿಗಳು, ಬ್ರಹ್ಮ=ಬ್ರಹ್ಮನನ್ನಾಗಿ, (ಹೇಳುತ್ತಾರೆ. ಆದುದರಿಂದ ಅತಿದೇಶವು ಯುಕ್ತವು. ಅದು ಹೇಗೆಂದರೆ) ತಯೋಃ=ಶೂನ್ಯಬ್ರಹ್ಮರಿಗೆ, ನಿರ್ವಿಶೇಷತ್ವತಃ = ವಿಶೇಷವಿಲ್ಲದಿರುವುದರಿಂದ, ಲಕ್ಷಣಭೇದಃ=ಲಕ್ಷಣಭೇದವು, ನ ಹಿ ಅಸ್ತಿ=ಇಲ್ಲವಷ್ಟೆ. (ಲಕ್ಷಣಭೇದದಿಂದ ಏಪ್ರತಿಪನ್ನವಾದ ಭೇದವನ್ನು ಬೋಧಿಸಬೇಕು. ಈ ಭೇದವು ಶೂನ್ಯಬ್ರಹ್ಮರಿಗೆ ಕೂಡಲಾರದು. ಶೂನ್ಯಬ್ರಹ್ಮ ಗಳೆರಡೂ ನಿರ್ವಿಶೇಷಗಳೆಂದು ಅಂಗೀಕೃತಗಳಾಗಿವೆ ॥ ೨೪೦ ॥

ಹಾಗಾದರೆ ವಿಶೇಷವಿಲ್ಲದಿರುವುದರಿಂದ ಬಾಹ್ಯಲಕ್ಷಣಭೇದವಿಲ್ಲವಿದ್ದರೂ ಬ್ರಹ್ಮನಿಗೆ ಸತ್ಯ ಜ್ಞಾನ ಅನಂತ ಆನಂದಾತ್ಮಕತ್ವರೂಪವಾದ ಸ್ವಲಕ್ಷಣವನ್ನು ಮಾಯಾವಾದಿಯು ಅಂಗೀಕರಿ ಸಿರುವನು. ಶೂನ್ಯವಾದಿಯು ಶೂನ್ಯಕ್ಕೆ ಅಂಗೀಕರಿಸಲಿಲ್ಲ. ಆದಕಾರಣ ಬ್ರಹ್ಮಶೂನ್ಯರಿಗೆ ಭೇದವು ಬರುವುದು ಎಂದಾಶಂಕಿಸಿದರೆ—

ಮೂ || ಅನೃತಾದಿವಿರೋಧಿತ್ವಮುಭಯೋಶ್ಚ ಸ್ವಲಕ್ಷಣಂ ।
ಸ್ವವಾಕ್ಯಾಭಾವಸಂವಾದಾನ್ನಕೃತ್ಯಂ ಪ್ರತಿವಾದಿನಃ ॥ ೨೪೧ ॥
ತತ್ಪಕ್ಷೇ ಇತಿ ವೈಧರ್ಮ್ಯಾನ್ನಸ್ವಪ್ನಾದಿವದಿತ್ಯಜಃ ।
ಅಪ್ರಯತ್ನಾನ್ನಿರಾಚಕ್ರೇ ಚೇತಿದೃಷ್ಟಿವಿರುದ್ಧತಾಂ ।
ನಿಷ್ಪ್ರಮಾಣತ್ವಮುಷ್ಯಸ್ಯ ಸೂಚಯಾಮಾಸ ವಿಶ್ವಕೃತ್ ॥ ೨೪೨ ॥

ಅ || ಉಭಯೋಃಶ್ಚ = ಬ್ರಹ್ಮಶೂನ್ಯಗಳೆರಡಕ್ಕೂ, ಅನೃತಾದಿವಿರೋಧಿತ್ವಂ=ಅನೃತ ಜಡಾದಿ ವಿರೋಧಿತ್ವವು, ಸ್ವಲಕ್ಷಣಂ=ಸ್ವರೂಪಭೂತವಾದ ಲಕ್ಷಣವು. (ಅಂದರೆ ಬ್ರಹ್ಮನಿಗೆ ನಿತ್ಯಜ್ಞಾನಾದ್ಯಾತ್ಮಕತ್ವವೆಂದರೆ ಅನೃತ ಜಡಾದಿ ವಿರೋಧಿತ್ವವೇ ಮಾಯಾವಾದಿಗೆ ಅಭಿಮತ ವಾಗಿದೆ. "**ಅನೃತಜಡವಿರೋಧಿರೂಪಮಂತತ್ರಯಮಲಬಂಧನ ದುಃಖತಾ ವಿರುದ್ಧಂ**" ಎಂದು ಮುರಾರಿಸ್ತಬಕದಲ್ಲಿ ಶಂಕರಾಚಾರ್ಯರಿಂದಲೇ ಸತ್ಯಾದಿ ಪದವು ಅಂತಾದಿ ವಿರೋಧಿ ಪರವು, ಸತ್ಯತ್ವಾದಿ ಸ್ವರೂಪ ಲಕ್ಷಣಪರವಲ್ಲವೆಂದು ವ್ಯಾಖ್ಯಾತವಾಗಿದೆ. ಶೂನ್ಯವಾದಿಯು ಶೂನ್ಯಕ್ಕೂ '**ಜಾಡ್ಯಸಂವೃತಿದುಃಖಾಂತ ಪೂರ್ವದೋಷವಿರೋಧಿ ಯತ್ |**' ಎಂದು ಅನೃತಾದಿವಿರೋಧಿತ್ವವನ್ನು ಒಪ್ಪಿರುತ್ತಾನೆ. ಆದುದರಿಂದ ಇದೂ ಭೇದಕವಲ್ಲ. ಆದಕಾರಣ ಅತಿದೇಶವು ಯುಕ್ತವೇ.) (ಇದೆಲ್ಲಾ ಆಗಬಹುದಿತ್ತು. ಆದರೆ ಪ್ರಪಂಚ ಮಿಥ್ಯಾತ್ವಾನು ಮಾನವನ್ನು ನಿರಾಕರಿಸುವುದಕ್ಕಾಗಿ '**ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್**' ಎಂದು ಸೂತ್ರವು. ಅದರಲ್ಲಿ "ಭ್ರಾಂತೇಃ ಸಂವೃತಿಸತ್ಯಸ್ಯ" ಎಂದು ಯಾವದು ದೂಷಣವು ಹೇಳಲ್ಪಟ್ಟಿದೆಯೋ, ಅದೇ ವೈಧರ್ಮ್ಯಾತ್ ಎಂದು ಸೂತ್ರದಲ್ಲಿ ತೋರುತ್ತದೆ. ಪುನಃ ದೃಶ್ಯತ್ವಕ್ಕೆ ಸತ್ಯತ್ವವಿದ್ದರೆ ದೃಶ್ಯತ್ವದಲ್ಲಿಯೇ ವ್ಯಭಿಚಾರವು ಪ್ರಸಕ್ತವಾಗುವುದರಿಂದ ದೃಶ್ಯತ್ವಕ್ಕೆ ಮಿಥ್ಯಾತ್ವ ವನ್ನು ಹೇಳಬೇಕು. ತಥಾ ಚ ಅಸಾಧಕತ್ವವೆಂದು ಯಾವ ದೋಷವು ಹೇಳಲ್ಪಟ್ಟಿದೆಯೋ ಅದು ಸೂತ್ರದಲ್ಲಿ ಕಾಣಲ್ಪಡುವುದಿಲ್ಲ. ಆದುದರಿಂದ ಈ ವ್ಯಾಖ್ಯಾನವು ಹೇಗೆಂದರೆ— ಸ್ವವಾಕ್ಯಾ ಭಾವಸಂವಾದಾತ್ = ದೃಶ್ಯತ್ವಾಭಾವಸಂವಾದದೃಷ್ಟಿಯಿಂದ, (ದೃಶ್ಯತ್ವವು ಮಿಥ್ಯೆಯೆನ್ನುವ ವಿಷಯದಲ್ಲಿ ಶೂನ್ಯವಾದಿಗೂ ಸಮ್ಮತಿಯು ಇದ್ದುದರಿಂದ), ತತ್ಪಕ್ಷೇ = ದೃಶ್ಯತ್ವಕ್ಕೆ ಮಿಥ್ಯಾತ್ವ ಸಾಧನ ವಿಷಯದಲ್ಲಿ, ಪ್ರತಿವಾದಿನಃ = ಜಗತ್ಸತ್ಯತ್ವವನ್ನು ಹೇಳುವ ಪ್ರತಿವಾದಿಗೆ, ಕೃತ್ಯಂ= ಕರ್ತವ್ಯವು, ನ=ಇಲ್ಲ. ಇತಿ= ಈ ಕಾರಣದೃಷ್ಟಿಯಿಂದ, ವೈಧರ್ಮ್ಯಾತ್ = ವಿರುದ್ಧ ಧರ್ಮಾಧಿ ಕರಣತ್ವವು ಇದ್ದುದರಿಂದ, ಸ್ವಪ್ನಾದಿವತ್=ಸ್ವಾಪ್ನಗಜಾದಿಗಳಂತೆಯೇ, ನ=ಅಲ್ಲ, ಇತಿ=ಆದ ಕಾರಣ, ಅಜಃ=ವೇದವ್ಯಾಸರು, ಅಪ್ರಯತ್ನಾತ್=ದೃಶ್ಯತ್ವ ಮಿಥ್ಯಾತ್ವವನ್ನು ಅವರೇ ಒಪ್ಪಿರು ವುದರಿಂದ ಮಿಥ್ಯಾಭೂತವಾದುದು ಅಸಾಧಕವೆನ್ನುವುದು ಸುಪ್ರಸಿದ್ಧವಾಗಿರುವುದರಿಂದ ಈ ಸ್ಫುಟ ದೂಷಣವನ್ನು ಹೇಳುವ ವಿಷಯದಲ್ಲಿ ಪ್ರಯತ್ನವನ್ನು ಮಾಡದೇನೇ, ನಿರಾಚಕ್ರೇ="ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್" ಈ ಸೂತ್ರದಿಂದ, ಬಾಧತದಭಾವರೂಪವಾದ ವೈಧರ್ಮ್ಯ ಮಾತ್ರವನ್ನು ಹೇಳಿಯೇ ಜಗನ್ಮಿಥ್ಯಾತ್ವವನ್ನು ನಿರಾಕರಿಸಿದರು ಚೇತಿ=ವೈಧರ್ಮ್ಯಾಚ್ಚ ಎನ್ನುವಲ್ಲಿದ್ದ ಚ ಶಬ್ದದಿಂದ, ಅಸ್ಯ=ಮಿಥ್ಯಾತ್ವಕ್ಕೆ, ವಿಶ್ವಕೃತ್ = ವೇದವ್ಯಾಸರು, ದೃಷ್ಟಿವಿರುದ್ಧತಾಂ= ಪ್ರತ್ಯಕ್ಷವಿರುದ್ಧತ್ವವನ್ನು, ನಿಷ್ಪ್ರಮಾಣತ್ವಮಪಿ= ಪ್ರಮಾಣರಾಹಿತ್ಯವನ್ನು ಕೂಡ, ಸೂಚಯಾ ಮಾಸ=ಸೂಚಿಸಿದರು. || ೨೪೧ || ೨೪೨ || ಸೂ. || ೨೬ || ೨೭ || ೨೮ || ೨೯ || ಅಧಿ. || ೮ ||

**ಶೂನ್ಯಾಧಿಕರಣವು ಸಮಾಪ್ತವಾಯಿತು.**



# ಅನುಪಲಬ್ಧ್ಯಧಿಕರಣವು

ನಿತ್ಯವಾದ ನಿರ್ದೋಷವಾದ ವಿಜ್ಞಾನತತ್ವ ಒಂದೇ. ತದ್ರೂಪವೇ ಜಗತ್ತು. ಜ್ಞಾನ ದಿಂದಲೇ ಜಗದುತ್ಪತ್ತ್ಯಾದಿಗಳು ಆಗುತ್ತವೆ, ಎನ್ನುವ ವಾದವನ್ನು ನಿರಾಕರಿಸುತ್ತಾರೆ.

"ಓಂ ನ ಭಾವೋಽನುಪಲಬ್ಧೇಃ ಓಂ" ॥ ಸೂ. ೩೦ ॥

ಜಗತ್ತು ಜ್ಞಾನಾತ್ಮಕವಲ್ಲ. ಅಂದರೆ ಜ್ಞಾನವೇ ಜಗದಾಕಾರವಾಗಿ ಪರಿಣಾಮವನ್ನು ಹೊಂದುತ್ತದೆ ಎನ್ನುವುದು ಅಲ್ಲ. ಪ್ರಮಾಣವಿಲ್ಲ. ಮತ್ತು ಜ್ಞಾನಜ್ಞೇಯಗಳಿಗೆ ಭೇದವು ಸಾಕ್ಷಿಸಿದ್ಧವಾಗಿರುವುದರಿಂದ ಉಪಲಬ್ಧಿವಿರೋಧವೂ ಬರುವುದು.

ಈ ಅಧಿಕರಣದಲ್ಲಿ ಯೋಗಾಚಾರರ ಮತವನ್ನು ತಿರಸ್ಕರಿಸುತ್ತಾರೆ. ಅದಕ್ಕಾಗಿ ಅದನ್ನು ಉಪನ್ಯಾಸಮಾಡುತ್ತಾರೆ.

**ಮೂ ॥ ಜ್ಞಾನಮೇವೈಕಮಖಿಲಜ್ಞೇಯಾಕಾರಂ ಪ್ರಭಾಸತೇ ॥ ೨೪೩ ॥**
**ತತ್ರ ಸಂತತಿಭೇದಶ್ಚ ಸ್ವಭೇದೋ ಭೇದ ಏವ ಚ ।**
**ಕಲ್ಪಿತಾಃ ಪ್ರತಿಭಾಸಂತೇ ನಾನಾಸಂವೃತಿಭೂಮಿಷು ॥ ೨೪೪ ॥**
**ಇತ್ಯೇತದಪಿ ನೋ ಯುಕ್ತಂ ನ ಹಿ ಜ್ಞಾನತಯಾ ಜಗತ್**
**ಭಾಸತೇಽನುಭವಸ್ಯೈವ ವಿರುದ್ಧತ್ವಾದಪೇಶಲಂ ।**
**ತನ್ಮತಂ [ಕ್ಷಣಿಕತ್ವಾಚ್ಚ ಜ್ಞಾನಸ್ಯ ಸ್ಥಿರರೂಪತಃ] ॥ ೨೪೫ ॥**

ಅ ॥ ಜ್ಞಾನಮೇವಃ=ವಿಜ್ಞಾನವೇ ತತ್ವವು, (ರೂಪವೊದಲಾದ ನಾಲ್ಕುಸ್ಕಂಧಗಳು ತತ್ವಗಳಲ್ಲ ಎಂದು ಯೋಗಾಚಾರರು ತಿಳಿಯುತ್ತಾರೆ.) (ವಿಜ್ಞಾನವನ್ನು ಅಂಗೀಕರಿಸಿದರೂ ವಿಶೇಷವನ್ನು ಹೇಳುತ್ತಾರೆ.) ಏಕಂ=ವಿಜ್ಞಾನ ತತ್ವವು ಅದ್ವಿತೀಯವಾದುದು ಅಂದರೆ ಎರಡನೇ ವಸ್ತುವು ಇಲ್ಲ. (ಹಾಗಾದರೆ ರೂಪ ವೊದಲಾದ ಜ್ಞೇಯವೂ ಕೂಡ ಪ್ರತ್ಯಕ್ಷಾದಿ ಸಿದ್ಧವಾಗಿದೆ. ಆದಕಾರಣ ಜ್ಞಾನವೇ ತತ್ವವೆನ್ನುವುದು ಹೇಗೆ ಎಂದಾಶಂಕಿಸಿದರೆ) ಅಖಿಲಜ್ಞೇಯಾಕಾರಂ= ಜ್ಞಾನವೇ ಜ್ಞೇಯಾಕಾರವು. (ಜ್ಞೇಯವೆನ್ನುವುದು ಜ್ಞಾನದಿಂದ ಭಿನ್ನವಾದುದು ಇಲ್ಲ) (ಜ್ಞೇಯಕ್ಕೆ ಜ್ಞಾನಾತ್ಮಕತ್ವವು ಯಾವಕಾರಣದಿಂದ ಎಂದಾಶಂಕಿಸಿದರೆ) ಪ್ರಭಾಸತೇ = ಜ್ಞಾನವು ಪ್ರಕಾಶಮಾನವಾಗುತ್ತದೆ. (ಅದರಿಂದ ಪ್ರಕಾಶಮಾನತ್ವಕ್ಕೆ ಜ್ಞಾನತ್ವದಿಂದ ವ್ಯಾಪ್ತಿಯು ಸಿದ್ಧವಾಗುವಾಗ ಪ್ರಕಾಶಮಾನಗಳಾದ ನೀಲಾದಿಗಳಿಗೂ ಜ್ಞಾನತ್ವವು ಸಿದ್ಧಿಸುತ್ತದೆ.) (ಅಥವಾ '**ಸಹೋಪಲಂಭನಿಯಮಾದಭೇದೋ ನೀಲತದ್ಧಿಯೋಃ**' ಎಂದು ಹೇಳಿದ ಪ್ರಕಾರ ನೀಲಾದಿಗಳಿಂದ ಕೂಡಿಕೊಂಡೇ ಪ್ರಕಾಶಿಸುತ್ತದೆ.) (ಹಾಗಾದರೆ ಭೇದವು ತೋರುವುದರಿಂದ ಜ್ಞಾನಜ್ಞೇಯಗಳಿಗೆ ಅಭೇದವು ಅಯುಕ್ತವು. ಮತ್ತು ವಿಜ್ಞಾನಸಂತತಿಗಳಿಗೆ ಭೇದವೂ ಒಂದೊಂದು ಸಂತತಿಯಲ್ಲಿಯೂ ವಿಜ್ಞಾನಭೇದವೂ ಇದ್ದಪ್ರಯುಕ್ತ 'ಏಕಂ' ಎನ್ನುವುದೂ ಅಯುಕ್ತವು. ಮತ್ತು ಅನ್ಯೋನ್ಯಭೇದವು ಇರಲಿ, ಭೇದಾಭಾವವನ್ನು ಅಂಗೀಕರಿಸುತ್ತೇವೆ. ಅದರಿಂದಲೇ ವಿಜ್ಞಾನಕ್ಕೆ ಸದ್ವಿತೀಯತ್ವವು ಪ್ರಾಪ್ತವಾಗುವುದರಿಂದ ಏಕತ್ವವು ಕೂಡುವುದಿಲ್ಲ ಎಂದಾಶಂಕಿಸಿದರೆ) ತತ್ರ = ಜ್ಞಾನ ಜ್ಞೇಯಗಳಿಗೆ, ಭೇದಃ = ಭೇದವು, ಸಂತತಿಭೇದಃ = ಸಂತತಿಗಳಿಗೆ ಪರಸ್ಪರಭೇದವು, ಸ್ವಭೇದಃ=ಒಂದೊಂದು ಸಂತತಿಯಲ್ಲಿಯೂ ಪೂರ್ವೋಕ್ತ ಜ್ಞಾನಭೇದವೂ, ಕಲ್ಪಿತಾಏವ=ಕಲ್ಪಿತಗಳಾಗಿಯೇ, ನಾನಾಸಂವೃತಿಭೂಮಿಷು=ಅನೇಕಾಜ್ಞಾನ ಸ್ಥಾನಗಳಾದ ಅಂತಃಕರಣಗಳಲ್ಲಿ, ಅಥವಾ ಅನೇಕ ಅಜ್ಞಾನವೇ ಕಾರಣವಾಗಿವುಳ್ಳ ಸಂಸ್ಕಾರ ನಿಮಿತ್ತಕವಾಗಿ, ಪ್ರತಿಭಾಸಂತೇ = ತೋರುತ್ತವೆ. (ಹೀಗೆ ಅನೂದಿತವಾದ ಯೋಗಾಚಾರರ ಮತವನ್ನು ತಿರಸ್ಕರಿಸುತ್ತಾರೆ ) ಇತ್ಯೇತದಪಿ = ಈ ಮತವೂ ಕೂಡ, ನೋ ಯುಕ್ತಂ= ಯುಕ್ತವಲ್ಲ. (ಏಕೆಯುಕ್ತವಲ್ಲವೆಂದರೆ ೧ ಜ್ಞೇಯವು ಸ್ವರೂಪದಿಂದ ಅಸತ್ತೇ ಆಗಿ ವಿಜ್ಞಾನದಲ್ಲಿ

ಸಮಾರೋಪಿತವಾದುದು ವಿಜ್ಞಾನಾತ್ಮಕವೆಂದು ಹೇಳಲ್ಪಡುತ್ತದೋ, ೨ ಅಥವಾ ಪಾರಮಾರ್ಥಿಕ ಸತ್ತೇ ಆದ ಜ್ಞೇಯುವಾದ ಜಗತ್ತಿಗೆ ವಿಜ್ಞಾನಾತ್ಮಕತ್ವವು, ಅವುಗಳಿಗೆ ಭೇದಮಾತ್ರವಾದರೂ ಅಸತ್ತಾಗಿದೆಯೆಂದೋ, ೧ನೇದ್ದು 'ನಚಾಭಾವ್ತೋ ವಿಶ್ವಂ ಸದಿತಿಗಮ್ಯತೇ' ಎಂದು ಹೇಳಿದ ಪ್ರಕಾರ ನಿರಸ್ತವಾಗಿದೆ. ೨ನೇದ್ದು ಕೂಡಲಾರದು. ಜಗತ್ತೂ ಜ್ಞಾನದಿಂದ ಅಭಿನ್ನವಾಗಿದೆ ಎನ್ನುವಲ್ಲಿ ಪ್ರಮಾಣವಿಲ್ಲ. (ಹೇಗೆಂದರೆ—ಅದರಲ್ಲಿ ಪ್ರತ್ಯಕ್ಷಪ್ರಮಾಣವಿಲ್ಲವೆನ್ನುತ್ತಾರೆ ) ಜಗತ್= ಪ್ರಪಂಚವು, ಜ್ಞಾನತಯಾ = ಜ್ಞಾನರೂಪದಿಂದ, ನ ಹಿ ಭಾಸತೇ=ತೋರುವುದಿಲ್ಲ. ಅನುಭವ ಸ್ಯೈವ ವಿರುದ್ಧತ್ವಾತ್ = ಅನುಭವ ವಿರೋಧವಿದ್ದುದರಿಂದಲೇ, ತನ್ಮತಂ = ಯೋಗಾಚಾರರಿಗೆ ಅಭಿಮತವಾದ (ಅನುಮಾನವು) ಅಥವಾ ಜ್ಞಾನಜ್ಞೇಯುಗಳಿಗೆ ಐಕ್ಯವು, ಅಪೇಶಲಂ = ಅಯುಕ್ತವು. (ಅಂತೂಜ್ಞಾನಜ್ಞೇಯುಗಳಿಗೆ ಸ್ಪಷ್ಟವಾಗಿ ಭೇದವೇ ಸಾಕ್ಷಿಸಿದ್ಧವಾಗಿರುವುದರಿಂದ ಅನುಮಾನವು ಬಾಧಿತವಾಯಿತು. ॥ ೨೪೩ ॥ ೨೪೪ ॥ ೨೪೫ ॥

ಹಾಗಾದರೆ ಭೇದಗ್ರಾಹಕವಾದ ಪ್ರತ್ಯಕ್ಷವು ಭ್ರಾಂತಿಯು ಎಂದರೆ ಹಾಗೆ ಹೇಳಕೂಡದು. ಬಾಧಕವಿಲ್ಲ. ಅನುಮಾನವು ಬಾಧಕವೆಂದು ಹೇಳಕೂಡದು. ಅನುಮಾನಕ್ಕಿಂತ ಪ್ರತ್ಯಕ್ಷವು ಪ್ರಬಲವಾಗಿದೆ. ಇಲ್ಲವಾದರೆ ಬಾಧವೆನ್ನುವ ದೋಷವೇ ಇಲ್ಲವೆಂದಾಗಬೇಕಾಗುವುದು. ಮತ್ತು ಪ್ರತ್ಯಕ್ಷವು ಭ್ರಾಂತಿಯಾದರೆ ಅನುಮಾನವು ಪ್ರಮಾಣವಾಗುವುದು. ಅನುಮಾನವು ಪ್ರಮಾಣ ವಾದರೆ ಪ್ರತ್ಯಕ್ಷವು ಭ್ರಾಂತಿಯಾಗುವುದು. ಹೀಗೆ ಅನ್ಯೋನ್ಯಾಶ್ರಯುವೂ ಇದೆ. ಅನುಮಾನಕ್ಕೆ ಅನುಮಾನವಿರೋಧವನ್ನೂಕೂಡ ಪ್ರತಿಪಾದಿಸುವುದಕ್ಕಾಗಿ ಸೂತ್ರವು.

"ಓಂ ಕ್ಷಣಿಕತ್ವಾಚ್ಚ ಓಂ" ॥ ಸೂ. ೩೧ ॥

ವಿಜ್ಞಾನವು ಕ್ಷಣಿಕವಾಗಿದೆ, ಜಗತ್ತು ಸ್ಥಾಯಿಯಾಗಿದೆ, ಆದಕಾರಣ ಜಗತ್ತು ಜ್ಞಾನ ರೂಪವಲ್ಲ.

ಈ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

**ಮೂ ॥ [ತನ್ಮತಂ] ಕ್ಷಣಿಕತ್ವಾಚ್ಚ ಜ್ಞಾನಸ್ಯ ಸ್ಥಿರರೂಪತಃ।**
**ಜ್ಞೇಯುಸ್ಯೋಕ್ತಪ್ರಕಾರೇಣ [ಸರ್ವಶ್ರುತಿವಿರೋಧತಃ] ॥ ೨೪೬ ॥**

**ಅ** ॥ ಜ್ಞಾನಸ್ಯ=ಜ್ಞಾನಕ್ಕೆ, ಕ್ಷಣಿಕತ್ವಾಚ್ಚ = ಆಶುತರ ವಿನಾಶಿತ್ವವಿದ್ದುದರಿಂದಲೂ, (ಅಬಾಧಿತ ಪ್ರತೀತಿಸಿದ್ಧವಾಗಿರುವುದರಿಂದ ಜ್ಞಾನಕ್ಕೆ ಕ್ಷಣಿಕತ್ವವು ಭ್ರಾಂತವಲ್ಲ.) ಜ್ಞೇಯುಸ್ಯ = ಜ್ಞೇಯುವಸ್ತುವಿಗೆ, ಉಕ್ತಪ್ರಕಾರೇಣ = ಅನುಸ್ಮೃತೇಶ್ಚ = ಇತ್ಯಾದಿಗಳಲ್ಲಿ ಹೇಳಿದಪ್ರಕಾರದಿಂದ, ಸ್ಥಿರರೂಪತಃ=ಆತುತರವಿನಾಶಿತ್ವವು ಇರುವುದರಿಂದ (ಯೋಗಾಚಾರರ ಮತವು ಅಯುಕ್ತವು ॥ ೨೪೬ ॥

ಹೀಗೆ ಪ್ರತ್ಯೇಕವಾಗಿ ನಿರಾಕೃತಗಳಾದ ಬೌದ್ಧಮತಗಳನ್ನು ಸಾಧಾರಣ ದೋಷದಿಂದ ದೂಷಿಸುವುದಕ್ಕಾಗಿ ಸೂತ್ರವು.

"ಓಂ ಸರ್ವಥಾಽನುಪಪತ್ತೇಶ್ಚ ಓಂ" ॥ ಸೂ. ೩೨ ॥

ಪ್ರತಿವಸ್ತುಗಳೂ ಕ್ಷಣಿಕಗಳೆಂದು ಕಲ್ಪಿಸುವುದರಲ್ಲಿಯೂ, ಪ್ರತಿಕ್ಷಣದಲ್ಲಿ ಉತ್ಪತ್ತಿ ವಿನಾಶಗಳನ್ನು ಕಲ್ಪಿಸುವುದರಲ್ಲಿಯೂ, ಶೂನ್ಯವು ಒಂದೇ ಎಂದು ಕಲ್ಪಿಸುವುದರಲ್ಲಿಯೂ

ವಿಜ್ಞಾನವು ಒಂದೇ ಎಂದು ಕಲ್ಪಿಸುವುದರಲ್ಲಿಯೂ ಪ್ರಕಟನದಲ್ಲಿಯೂ ಅಂದರೆ ಶೂನ್ಯವಿಜ್ಞಾನಾದ್ವೈತಾದಿ ಬೌದ್ಧರಿಗೆ ಅಭಿಮತಗಳಾದ ಶಬ್ದಗಳಿಂದ ಅದ್ವೈತಪಕ್ಷ ಪರಿಗ್ರಹಿಸುವುದರಲ್ಲಿಯೂ, ಪ್ರಚ್ಛಾದನದಲ್ಲಿಯೂ ಅಂದರೆ ಬೌದ್ಧಮತವನ್ನು ಪ್ರಕಟಿಸದೆ ಸದದ್ವೈತಾದಿ ಶಬ್ದಾಂತರಗಳಿಂದ ಅದ್ವೈತಪಕ್ಷವನ್ನು ಪರಿಗ್ರಹಿಸುವುದರಲ್ಲಿಯೂ, ಪ್ರಮಾಣವಿಲ್ಲದಿರುವುದರಿಂದಲೂ, ಸರ್ವಪ್ರಮಾಣವಿರೋಧವಿದ್ದುದರಿಂದಲೂ ಈ ವೇದದ್ವೇಷಪಕ್ಷಗಳನ್ನು ತೆಗೆದುಕೊಳ್ಳಬಾರದು. ಆದಕಾರಣ ಬೌದ್ಧಮತಗಳೆಲ್ಲವೂ ಅಯುಕ್ತವು.

ಈ ಸೂತ್ರವನ್ನು ವ್ಯಾಖ್ಯಾನಮಾಡುತಾರೆ.—

**ಮೂ ॥ [ಜ್ಞೇಯಸ್ಯೋಕ್ತಪ್ರಕಾರೇಣ] ಸರ್ವಶ್ರುತಿವಿರೋಧತಃ ।**
**ಅನುಭೂತಿವಿರುದ್ಧತ್ವಾದಪಿ ಪಕ್ಷಾ ಇಮೇಽಶಿವಾಃ ॥ ೨೪೭ ॥**

ಅ ॥ ಸರ್ವಶ್ರುತಿ ವಿರೋಧತಃ = ಸಮಸ್ತ ಶ್ರುತಿವಿರೋಧವಿದ್ದುದರಿಂದಲೂ, ಅನುಭೂತಿವಿರುದ್ಧತ್ವಾದಪಿ= ಅನುಭವವಿರೋಧವಿದ್ದುದರಿಂದಲೂ, ಇಮೇ ಪಕ್ಷಾಃ= ಈ ಎಲ್ಲಾ ಬೌದ್ಧಪಕ್ಷಗಳೂ, ಅಶಿವಾಃ = ಅಮಂಗಲಗಳು ॥ ೨೪೭ ॥ ಸೂ. ॥ ೩೦ ॥ ೩೧ ॥ ೩೨ ॥ ॥ ಅಧಿ. ೯ ॥

**ಅನುಪಲಬ್ಧ್ಯಧಿಕರಣವು ಸಮಾಪ್ತವಾಯಿತು.**

---

# ನೈಕಸ್ಮಿನ್ನಧಿಕರಣವು.

ಕ್ಷಪಣಕಮತವನ್ನು ನಿರಾಕರಿಸುತ್ತಾರೆ.

**"ಓಂ ನೈಕಸ್ಮಿನ್ನಸಂಭವಾತ್ ಓಂ"** ॥ ಸೂ. ॥ ೩೩ ॥

ಸತ್ವ, ಅಸತ್ವ, ಸದಸತ್ವ, ಸದಸದ್ವಿಲಕ್ಷಣತ್ವ, ಸತ್ವೇಸತಿ ಸದ್ವಿಲಕ್ಷಣತ್ವ, ಅಸತ್ವೇ ಸತಿ ಅಸದ್ವಿಲಕ್ಷಣತ್ವ, ಸದಸದಾತ್ಮಕತ್ವೇ ಸತಿ ಸದಸದ್ವಿಲಕ್ಷಣತ್ವ, ಹೀಗೆ ಅನಿಯತಗಳಾದ ಏಳು ಪ್ರಕಾರಗಳು ಒಂದು ವಸ್ತುವಿನಲ್ಲಿ ಯುಕ್ತಗಳಲ್ಲ., ಅಪ್ರಾಮಾಣಿಕವಾಗಿರುವುದರಿಂದ ಅಸಂಭಾವಿತವಾಗಿದೆ.

ನಿರಾಕಾರ್ಯಾಂಶವನ್ನು ತಿಳಿಸುವುದಕ್ಕಾಗಿ ಉಪನ್ಯಾಸ ಮಾಡುತ್ತಾರೆ—

**ಮೂ ॥ ಆಹಕ್ಷಪಣಕೋ ವಿಶ್ವಂ ಸದಸದ್ದ್ವಯಮದ್ವಯಂ ।**
**ದ್ವಯಾದ್ವಯ ಮತತ್ಸರ್ವಂ ಸಪ್ತಭಂಗಿಸದಾತನಂ ।**
**ನೈತತ್ಪದಾರ್ಥೇ ಏಕಸ್ಮಿನ್ ಯುಕ್ತಂ ದಷ್ಟಿವಿರೋಧತಃ ॥ ೨೪೮ ॥**

ಅ ॥ ಕ್ಷಪಣಕಃ=ಜೈನನು. ವಿಶ್ವಂ = ಜಗತ್ತನ್ನು, ಸತ್ = ಸದ್ರೂಪವಾದುದು, ಅಸತ್ = ಅಸದ್ರೂಪವಾದುದು, ದ್ವಯಂ= ಸದಸದಾತ್ಮಕವು, ಅದ್ವಯಂ= ಸದಸದ್ವಿಲಕ್ಷಣವು, ದ್ವಯಾದ್ವಯಂ= ಸತ್ವವಿದ್ದು ಸದ್ವಿಲಕ್ಷಣತ್ವವು, ಅಸತ್ವವಿದ್ದು ಅಸದ್ವಿಲಕ್ಷಣತ್ವವು, ಅತತ್ಸರ್ವಂ= ಸದಸದಾತ್ಮಕತ್ವವಿದ್ದು ಸದಸದ್ವಿಲಕ್ಷಣತ್ವವು, ಹೀಗೆ ಸದಾತನಂ = ಸರ್ವಕಾಲದಲ್ಲಿಯೂ ಇರತಕ, ಸಪ್ತಭಂಗಿ = ಏಳು ಪ್ರಕಾರಗಳುಳ್ಳದ್ದನ್ನಾಗಿ, ಆಹ= ಹೇಳುತ್ತಾನೆ. ಏತತ್= ಈ

ಏಳುಪ್ರಕಾರವಿರುವ ತನವು, ದೃಷ್ಟಿವಿರೋಧತಃ=ಪ್ರತ್ಯಕ್ಷ ವಿರೋಧವಿದ್ದುದರಿಂದ, ಏಕಸ್ಮಿನ್= ಪದಾರ್ಥೇ=ಒಂದು ಪದಾರ್ಥವಲ್ಲಿ, ನಯುಕ್ತಂ=ಯುಕ್ತವಲ್ಲ.

**ತಾ || ನ್ಯಾಯಸುಧಾ**— (1) ಜಗತ್ತು ಜೀವ, ಅಜೀವ ಎಂದು ಎರಡು ಪ್ರಕಾರವಾದುದು ನಿರೀಶ್ವರವಾದುದು. ಆ ಜಗತ್ತೇ ಪುನಃ ೧ಜೀವ, ೨ಧರ್ಮ, ೩ಅಧರ್ಮ, ೪ಪುದ್ಗಲ, ೫ಕಾಲ, ೬ಆಕಾಶ ಎಂದು ಷಡ್ದ್ರವ್ಯರೂಪವಾದುದು. ಅದರಲ್ಲಿ **ಜೀವರು,** ಬುದ್ಧರು, ಯೋಗಸಿದ್ಧರು ಮುಕ್ತರು ಎಂದು ಮೂರು ವಿಧರು. ೨ ಪ್ರವೃತ್ತಿಗೆ ಕಾರಣವಾದುದು ಜಗದ್ವ್ಯಾಪ್ತವಾದುದು **ಧರ್ಮವು.** ೩ ಸ್ಥಿತಿಗೆ ಕಾರಣವಾದುದು, ವ್ಯಾಪಕವಾದುದು **ಅಧರ್ಮವು.** ೪ ಪೃಥಿವಿ, ಜಲ, ತೇಜಸ್ಸು, ವಾಯುರೂಪವಾದ **ಭೂತಚತುಷ್ಟಯವು ಪುದ್ಗಲವು.** ಅದು ಪರಮಾಣುರೂಪ, ಸಂಘಾತರೂಪ ಎಂದು ಎರಡು ವಿಧವು. ೫ ಆಸೀತ್, ಅಸ್ತಿ, ಭವಿಷ್ಯತಿ=ಆಯಿತು, ಆಗುತ್ತದೆ, ಆಗುವುದು. ಎನ್ನುವ ವ್ಯವಹಾರಕ್ಕೆ ಕಾರಣವಾದುದು ಅಣುರೂಪವಾದುದು **ಕಾಲವು.** ೬ **ಆಕಾಶವು** ಒಂದೇ ಅನಂತಪ್ರದೇಶವುಳ್ಳದ್ದು. ಅದು ಲೋಕಾಕಾಶ, ಅಲೋಕಾಕಾಶ ಎಂದು ಎರಡು ವಿಧವು. ಈ ಆರು ದ್ರವ್ಯಗಳ ಮಧ್ಯದಲ್ಲಿ ಅಣುವ್ಯತಿರಿಕ್ತ ದ್ರವ್ಯಗಳು ಅಸ್ತಿಕಾಯ ಎನ್ನುವ ಶಬ್ದವಾಚ್ಯಗಳು. ಅವುಗಳು ೧ ಜೀವಾಸ್ತಿಕಾಯ, ೨ ಧರ್ಮಾಸ್ತಿಕಾಯ, ೩ ಅಧರ್ಮಾಸ್ತಿಕಾಯ, ೪ ಪುದ್ಗಲಾಸ್ತಿಕಾಯ, ೫ ಆಕಾಶಾಕಾಯ ಎಂದು ಐದು ವಿಧವು. ಇದರಲ್ಲಿ ೧ ಜೀವ, ೨ ಅಜೀವ, ೩ ಆಸ್ರವ, ೪ ಬಂಧ, ೫ ನಿರ್ಜರ, ೬ ಸಂವರ, ೭ ಮೋಕ್ಷ ಎಂದು ಏಳು ಪದಾರ್ಥಗಳು ಮೋಕ್ಷೋಪಯುಕ್ತಗಳು. ೧ **ಜೀವನು** ಜ್ಞಾನದರ್ಶನಸುಖವೀರ್ಯ ಎನ್ನುವ ಗುಣಗಳುಳ್ಳವನು. ೨ **ಅಜೀವವು** ಜೀವೋಪಭೋಗ್ಯವಾದ ವಸ್ತುಗಳ ಸಮುದಾಯವು. ೩ **ಆಸ್ರವವು** ವಸ್ತುಗಳ ಭೋಗಕ್ಕೆ ಉಪಕರಣವಾದ ಇಂದ್ರಿಯಾದಿಗಳು. ೪ (೧) ಘಾತಕ, (೨) ಚತುಷ್ಟಯ ಎನ್ನುವ ಭೇದದ್ದೆಶೆಯಿಂದ ಬಂಧವು ಎರಡು ವಿಧವು. ಇದರಲ್ಲಿ (೧) **ಘಾತಕವು** ಜೀವಗುಣಗಳಾದ ಜ್ಞಾನಾನಂದಾದಿಗಳಿಗೆ ಪ್ರತಿಬಂಧಕವು. (೨ನೇ) ಚತುಷ್ಟಯವು ಶರೀರ ಸಂಸ್ಥಾನ, ಅದರ ಅಭಿಮಾನ, ಶರೀರಸ್ಥಿತಿ, ತತ್ಸ್ವಯುಕ್ತವಾದ ಸುಖದುಃಖ ಇವುಗಳಿಗೆ ಕಾರಣವಾದುದು. ೫ **ನಿರ್ಜರವು** ಮೋಕ್ಷಸಾಧನವಾದ ತಪಸ್ಸು. ೬ **ಸಂವರವು** ಇಂದ್ರಿಯನಿರೋಧವು. ೭ **ಮೋಕ್ಷವು** ಸ್ವಾಭಾವಿಕವಾದ ಆತ್ಮಸ್ವರೂಪದ ಆವಿರ್ಭಾವವು. ಮೋಕ್ಷಗ್ರಹಣದಿಂಲೇ ಮೋಕ್ಷಮಾರ್ಗವೂ ಸಂಗ್ರಹಿಸಲ್ಪಟ್ಟಿತು ಮೋಕ್ಷಮಾರ್ಗವು ಸಮ್ಯಕ್ ಜ್ಞಾನ, ಸಮ್ಯಗ್ದರ್ಶನ, ಸಮ್ಯಕ್ ಚಾರಿತ್ರ್ಯ ಎನ್ನುವ ಮೂರು ರತ್ನಗಳ ಸ್ವರೂಪವಾದುದು. ಇಂತಹ ಜಗತ್ತನ್ನು ಪ್ರತ್ಯೇಕವಾಗಿ ಸಪ್ತಪ್ರಕಾರಗಳುಳ್ಳದ್ದನ್ನಾಗಿ ಜೈನನು ಹೇಳುತ್ತಾನೆ. (2) ಜಗತ್ತಿಗೆ ಸಪ್ತಪ್ರಕಾರತ್ವವು ಸರ್ವಥಾ ಕೂಡುವುದಿಲ್ಲ. ಏಕೆಂದರೆ— ಪ್ರತ್ಯಕ್ಷ ವಿರೋಧವಿದೆ. ಸರ್ವವೂ ಸ್ವಾಶ್ರಯದಲ್ಲಿ ಸತ್ತಾಗಿದೆ. ಪರಾಶ್ರಯದಲ್ಲಿ ಅಸತ್ತಾಗಿದೆ. ಸ್ವರೂಪದಿಂದ ಭಾವವು, ಅನ್ಯಸ್ವರೂಪದಿಂದ ಅಭಾವವು, ವಿಶೇಷ್ಯರೂಪದಿಂದ ನಿತ್ಯವಾಗಿದೆ, ಕಾರ್ಯರೂಪದಿಂದ ಅನಿತ್ಯವು. ಸ್ವರೂಪಾದಿಗಳಿಂದ ಅಭಿನ್ನವು ತನ್ನ ಗುಣಾದಿಗಳಿಂದ ಭಿನ್ನಾಭಿನ್ನವೆಂದೇ ತೋರುತ್ತದೆ. ಬೇರೆ ಪ್ರಕಾರದಿಂದ ಅಲ್ಲ. ಆದ ಕಾರಣ ಅವ್ಯವಸ್ಥೆಯಿಂದ ನಿಯಮಗ್ರಾಹಕ ಪ್ರತ್ಯಕ್ಷಾದಿಗಳ ವಿರೋಧವಿದ್ದುದರಿಂದ, ಕೂಡದಿರುವುದರಿಂದ ಅನೇಕಾಂತಮತವು, (ಸತ್ವ ಮೊದಲಾದ ಅನೇಕ ಧರ್ಮವಿದೆ ಎನ್ನುವ ಮತವು) ಅಯುಕ್ತವೇ. || ೨೪೯ ||

ಹಾಗಾದರೆ ಒಂದೊಂದು ಧರ್ಮವನ್ನು ವಿಷಯೀಕರಿಸತಕ್ಕ ದೃಷ್ಟಿಯು ಮಿಥ್ಯಾದೃಷ್ಟಿಯಾಗಿರುವುದರಿಂದ ಅದರ ವಿರೋಧವು ಹಿಂದೆ ಹೇಳಿದ ಏಳು ಪ್ರಕಾರಗಳಿಗೆ ಅಸಂಭವವನ್ನು ಹೊಂದಿಸಿಕೊಡಲಾರದು ಎಂದಾಶಂಕಿಸಿದರೆ—

ಮೂ || ಭಾವಾಭಾವತಯಾ ವಿಶ್ವಂ ಯೇನ ರೂಪೇಣ ವಿಾಯತೇ ।
ತದ್ರೂಪಮೇವ ತದಿತಿ ನಿಯಮಃ ಕೇನ ವಾರ್ಯತೇ || ೨೪೯ ||
ತತ್ತದ್ದೋಷನಿವೃತ್ಯರ್ಥಂ ಸ್ವೀಕೃತಾ ತತ್ತದಾತ್ಮತಾ ।
ಯದಿ ತೈರಖಿಲೈರ್ದೋಷೈರ್ಲಿಪ್ಯತೇ ಚಲದರ್ಶನಃ || ೨೫೦ ||

ಅ || ಯೇನರೂಪೇಣ = ಯಾವರೂಪದಿಂದ, ಭಾವಾಭಾವತಯಾ = ಭಾವತ್ವ ಅಭಾವತ್ವ ರೂಪದಿಂದ, ವ್ಯವಸ್ಥಿತವಾದ ಸತ್ವ ಅಸತ್ವ ಮೊದಲಾದವುಗಳಿಂದ, ಅಥವಾ ಭಾವಾಭಾವತಯಾ = ಭಾವತ್ವ ಅಭಾವತ್ವಗಳಿಂದ, ಯೇನ ರೂಪೇಣ = ಯಾವಸತ್ವಾದಿರೂಪದಿಂದ, ಅಥವಾ ಯೇನ = ಯಾವ, ಭಾವಾಭಾವತಯಾ ರೂಪೇಣ = ಭಾವತ್ವ ಅಭಾವತ್ವರೂಪದಿಂದ, ವಿಶ್ವಂ = ಜಗತ್ತು, ಮಿಾಯತೇ ತಿಳಿಯಲ್ಪಡುತ್ತದೋ, ತತ್ = ಜಗತ್ತು, ತದ್ರೂಪಮೇವ = ಭಾವಾಭಾವಸ್ವರೂಪವೇ, ಇತಿ = ಎನ್ನುವ, ನಿಯಮಃ = ನಿಯಮವು, ಕೇನ = ಯಾವ ಪ್ರಮಾಣದಿಂದ, ವಾರ್ಯತೇ = ತಡೆಯಲ್ಪಡುತ್ತದೆ. (ಈ ನಿಯಮದರ್ಶನಕ್ಕೆ ಮಿಥ್ಯಾದೃಷ್ಟಿತ್ವವು ಬರಬಹುದಿತ್ತು, ದೃಷ್ಟವಾದ ನಿಯಮಕ್ಕೆ ನಿವಾರಕವಾದುದು, ಅನೇಕಾಂತ ಸಾಧಕವಾದುದು ಪ್ರಬಲಪ್ರಮಾಣವು ಇದ್ದರೆ ಆಗುತ್ತಿತ್ತು. ಇದೇ ಇಲ್ಲ, ಬಾಧಕವಿಲ್ಲದೆ ಜ್ಞಾನಗಳಿಗೆ ಭ್ರಾಂತಿತ್ವವನ್ನು ಕಲ್ಪಿಸುವುದು ಯುಕ್ತವಲ್ಲ.) (ನಿಯಮಕ್ಕೆ ಬಾಧಕವನ್ನು ಆಶಂಕಿಸುತ್ತಾರೆ.) (ಸದ್ವಾದಿಗಳು ಜಗತ್ತಿಗೆ ಸತ್ವವನ್ನು ಪ್ರಮಾಣಗಳಿಂದ ಸ್ಥಾಪಿಸಿದರು. ಅದನ್ನು ಅಂಗೀಕರಿಸದಿದ್ದರೆ ದೂಷಣಗಳನ್ನು ನಿರೂಪಿಸಿದರು. ಹೀಗೆಯೇ ಅಸದ್ವಾದಿಗಳೂ ಅಸತ್ವವನ್ನು ಸ್ಥಾಪಿಸಿರುವರು. ಅದನ್ನು ಅಂಗೀಕರಿಸದೆ ಇದ್ದರೆ ದೂಷಣವನ್ನು ವ್ಯುತ್ಪಾದಿಸಿರುವರು. ಹಾಗೆಯೇ ಇತರರೂ ಕೂಡ ಸ್ವಪಕ್ಷಸಾಧನವನ್ನು ಅದನ್ನು ಅಂಗೀಕರಿಸದೆ ಇದ್ದರೆ ಬಾಧಕವನ್ನು ಕೂಡ ಹೇಳಿರುವರು. ತಥಾಚ ಸತ್ವವನ್ನು ಅಂಗೀಕರಿಸದೆ ಇದ್ದರೆ ಅವರು ಹೇಳಿದ ಪ್ರಮಾಣವಿರೋಧವೂ ಬರುವುದು. ಅವರುಹೇಳಿದ ದೂಷಣವೂ ಬರುವುದು. ಹೀಗೆಯೇ ಅಸತ್ವಾದಿಗಳನ್ನು ಅಂಗೀಕರಿಸದೆ ಇದ್ದರೂ ಇಟ್ಟುಕೊಳ್ಳಬೇಕು. ಆದುದರಿಂದ) ತತ್ತದ್ದೋಷನಿವೃತ್ಯರ್ಥಂ = ಆಯಾಯದೋಷಗಳನ್ನು ಪರಿಹರಿಸುವುದಕ್ಕಾಗಿಯೂ ಆಯಾಯ ಪ್ರಮಾಣಗಳನ್ನು ಅನುಸರಿಸುವುದಕ್ಕಾಗಿಯೂ, ತತ್ತದಾತ್ಮತಾ = ಆಯಾಯ ಸ್ವರೂಪವುಳ್ಳತನವು, ಸ್ವೀಕೃತಾ ಯದಿ = ಜಗತ್ತಿಗೆ ನಿನ್ನಿಂದ ಸ್ವೀಕರಿಸಲ್ಪಟ್ಟದೆ ಎಂದಾದರೆ (ತಥಾಚ ಅನೇಕಾಂತದಲ್ಲಿ ಪ್ರಬಲಪ್ರಮಾಣಗಳು ಇದ್ದ ಪ್ರಯುಕ್ತ ನಿಯಮದಲ್ಲಿ ಬಾಧಕವು ಇಲ್ಲದಿರುವುದು ಹೇಗೆ?) (ಪರಿಹರಿಸುತ್ತಾರೆ.) (ತರ್ಹಿ = ಹಾಗಾದರೆ, ಸದ್ವಾದಿ ಮತಾನುಸರಣ ಸಮಯದಲ್ಲಿ ಅಸತ್ವಾದಿಪ್ರಕಾರಗಳನ್ನು ಅಂಗೀಕರಿಸುತ್ತಿಯೋ ಇಲ್ಲವೋ? ಹೀಗೆಯೇ ಅಸದ್ವಾದಿ ಚರಣ ಶರಣಪ್ರವೇಶಕಾಲದಲ್ಲಿ ಸತ್ವಾದಿಪ್ರಕಾರಗಳನ್ನು ಅಂಗೀಕರಿಸುತ್ತಿಯೋ ಇಲ್ಲವೋ? ಹೀಗೆಯೇ ಇತರ ಪಕ್ಷಗಳಲ್ಲಿಯೂ ವಿಕಲ್ಪವನ್ನು ಇಟ್ಟುಕೊಳ್ಳಬೇಕು.) (೧ನೇ ಪಕ್ಷವನ್ನು ಇಟ್ಟುಕೊಳ್ಳುವುದಾದರೆ ಆಗ ಇವನು) ಚಲದರ್ಶನಃ = ಯಾವಾಗಲೂ ಸಕಲ ಪಕ್ಷಗಳ ಅಂಗೀಕಾರವುಳ್ಳವನು, ತೈಃ ಅಖಿಲೈಃ ದೋಷೈಃ = ಆ ಎಲ್ಲಾ ದೋಷಗಳಿಂದಲೂ, ಲಿಪ್ಯತೇ = ಸಂಬದ್ಧನಾಗುತ್ತಾನೆ.

**ತಾ ||** ಕೇವಲವಾಗಿ ಸದ್ವಾದಿಗಳು ಸತ್ವದಲ್ಲಿ ಪ್ರಮಾಣವನ್ನು ಅದನ್ನು ಅಂಗೀಕರಿಸದೆ ಇದ್ದರೆ ದೂಷಣವನ್ನು ವ್ಯುತ್ಪಾದಿಸಿ ನಿವೃತ್ತರಾಗಲಿಲ್ಲ. ಮತ್ತೆ ಅಸತ್ವಾದಿ ಪಕ್ಷಗಳಲ್ಲಿ ದೋಷಗಳನ್ನೂ ಕೂಡ ವ್ಯುತ್ಪಾದಿಸಿರುವರು. ಹೀಗೆಯೇ ಅಸದ್ವಾದಿಗಳೂ ಕೂಡ ಅಸತ್ವದಲ್ಲಿ ಪ್ರಮಾಣವನ್ನು ಅದನ್ನು ಅಂಗೀಕರಿಸದೆ ಇದ್ದರೆ ಬಾಧಕವನ್ನು ಕೂಡ ಹೇಳಿಯೇ ಉಪರತರಾಗಲಿಲ್ಲ. ಮತ್ತೆ ಸತ್ವಾದಿ ಪಕ್ಷಗಳಲ್ಲಿ ದೋಷಗಳನ್ನು ಕೂಡ ಉಪಪಾದಿಸಿರುವರು. ತಥಾಚ ಎಲ್ಲಾ ಪಕ್ಷಗಳನ್ನು ಅಂಗೀಕರಿಸಿದರೆ ಆಯಾಯ ವಾದಿಗಳು ಹೇಳಿದ ಪಕ್ಷಾಂತರ ದೋಷಲೇಪವು ಹೇಗೆ ಬಾರದೆ ಹೋಗುವುದು || ೨೪೯ || ೨೫೦ ||

ಹಿಂದೆ ಹೇಳಿದಪ್ರಕಾರ ಸಪ್ತ ಪ್ರಕಾರಗಳನ್ನು ಅಂಗೀಕರಿಸುವುದು ಪ್ರಮಾಣವಿರುದ್ಧವೂ, ಅಪ್ರಾಮಾಣಿಕವೂ ಆಗಿದೆ ಎಂದುಕ್ತವಾಗಿದೆ 'ಅಖಿಲೈರ್ದೋಷೈಃ ಲಿಪ್ಯತೇ' ಎನ್ನುವುದರಿಂದ ಪರಸ್ಪರ ವ್ಯಾಹತಿಯೂ ಸೂಚಿತವಾಗಿದೆ. ಇಂತಹ ದೋಷದೂಷಿತಗಳಾದ ಏಳು ಪ್ರಕಾರಗಳಿವೆ, ಎನ್ನುವುದನ್ನು ಸ್ವೀಕರಿಸಿದರೆ ಅತಿಪ್ರಸಂಗವನ್ನೂ ಹೇಳುತ್ತಾರೆ.

**ಮೂ ||** **ಅತಿಹಾಯ ಪ್ರಮಾಣಾಪ್ತ ನಿಯಮಂ ಸದಸತ್ತಯಾ ।**
**ಅಶೇಷಮಾವಿರುದ್ಧಂ ಚ ನಿರ್ಮಾನಂ ವ್ಯಾಹತಂ ಸದಾ ॥ ೨೫೧ ॥**
**ಸರ್ವಪ್ರಕಾರಂ ವದತೋ ದೃಷ್ಟಹಾನಿರಮಗ್ರಹಃ ।**
**ಸ್ವವ್ಯಾಹತತ್ವಮಿತ್ಯಾದ್ಯಾಃ ದೋಷಾಃ ಸರ್ವೇ ಭವಂತಿ ಹಿ ॥ ೨೫೨ ॥**

**ಅ ||** ಸದಸತ್ತಯಾ = ವ್ಯವಸ್ಥಿತವಾದ ಸತ್ವಾಸತ್ವದಿಂದ, ಪ್ರಮಾಣಾಪ್ತನಿಯಮಂ= ಪ್ರಮಾಣಗಳಿಂದ ಸಿದ್ಧವಾದ ನಿಯಮವನ್ನು, ಅತಿಹಾಯ = ಬಿಟ್ಟು, ಅಶೇಷಂ = ಎಲ್ಲಾ, ಆವಿರುದ್ಧಂ= ಚೆನ್ನಾಗಿ ವಿರೋಧವುಳ್ಳ, ಸದಾ = ಯಾವಾಗಲೂ, ಸರ್ವಪ್ರಕಾರಂ = ಜಗತ್ತಿಗೆ ಸತ್ವಾದಿ ಸರ್ವಪ್ರಕಾರಗಳನ್ನು, ವದತಃ= ಹೇಳುವವನಿಗೆ, ದೃಷ್ಟಹಾನಿಃ= ಪ್ರತ್ಯಕ್ಷ ಸಿದ್ಧವಾದುದಕ್ಕೆ ಪರಿತ್ಯಾಗವು ಬರಬೇಕಾಗುವುದು. ನಿರ್ಮಾನಂ= ನಿಷ್ಪ್ರಮಾಣಕವಾದ, ಸದಾ = ಯಾವಾಗಲೂ, ಸರ್ವಪ್ರಕಾರಂ= ಸಮಸ್ತಪ್ರಕಾರಗಳನ್ನು, ವದತಃ= ಹೇಳುವವನಿಗೆ, ಅಮಗ್ರಹಃ= ಅಪ್ರಾಮಾಣಿಕ ಸ್ವೀಕಾರವು ಬರಬೇಕಾಗುವುದು. ವ್ಯಾಹತಂ= ವ್ಯಾಹತವಾದ, ಸದಾ= ಯಾವಾಗಲೂ, ಸರ್ವಪ್ರಕಾರಂ= ಸಮಸ್ತ ಪ್ರಕಾರಗಳನ್ನು, ವದತಃ= ಹೇಳುವವನಿಗೆ, ಸ್ವವ್ಯಾಹತತ್ವಂ= ತನ್ನ ಮಾತೇ ತನಗೆ ವಿರುದ್ಧವಾಗುವಿಕೆ ಎನ್ನುವ ದೋಷವು ಬರಬೇಕಾಗುವುದು. ಇತ್ಯಾದ್ಯಾಃ= ಇದುಮೊದಲಾದ, ಸರ್ವೇ= ಎಲ್ಲಾ, ದೋಷಾಃ= ದೃಷ್ಟಹಾನ್ಯಾದಿ ದೋಷಗಳು, ಭವಂತಿ ಹಿ = ಬರುತ್ತವಷ್ಟೆ.

**ತಾ ||** **ನ್ಯಾಯಸುಧಾ—** (1) ಪ್ರಮಾಣ ವಿರುದ್ಧವಾದಾಗ್ಯೂ ಸರ್ವಪ್ರಕಾರತ್ವವನ್ನು ಪ್ರಪಂಚಕ್ಕೆ ಸ್ವೀಕರಿಸುವುದಾದರೆ ಆಗ ಬೆಂಕಿಯು ತಣ್ಣಗಿದೆ ಎಂದೂ, ಗೋಹಿಂಸೆ, ಬ್ರಾಹ್ಮಣಹಿಂಸೆ, ಇತ್ಯಾದಿಗಳು ಧರ್ಮಸಾಧನಗಳೆಂದೂ ಅಂಗೀಕರಿಸಬೇಕಾಗುವವು. ಪ್ರಮಾಣವಿರೋಧದಿಂದ ಪ್ರತಿಪಕ್ಷ ನಿರಾಕರಣವೂ ಬಾರದೇಹೋಗಬೇಕಾಗುವುದು. ಮತ್ತೆ ಪ್ರತ್ಯಭಿಜ್ಞಾದಿಗಳಿಂದ, ವಿರುದ್ಧವಾದಾಗ್ಯೂ ವಿಶೇಷವಿಲ್ಲದಿರುವುದರಿಂದ ಕ್ಷಣಿಕತ್ವಾದಿಗಳನ್ನು ಅಂಗೀಕರಿಸಬೇಕಾಗುವುದು. (2)ಅಪ್ರಾಮಾಣಿಕವಾದಾಗ್ಯೂ ಸರ್ವ ಪ್ರಕಾರತ್ವವನ್ನು ಅಂಗೀಕರಿಸುವುದಾದರೆ ಆಗ ಕತ್ತೆಗೆ ಕೋಡು ಇದೆ ಎಂದೂ, ಗೋಮಾಂಸಾದಿ ಭಕ್ಷಣವು ಧರ್ಮಸಾಧನವೆಂದೂ ಅಂಗೀಕರಿಸಬೇಕಾಗುವುದು. ಪ್ರಮಾಣವಿಲ್ಲವೆನ್ನುವ ಹೇತುವಿನಿಂದ ಪರಮತ ನಿರಾಸವನ್ನು ಮಾಡದೇನೇ ಇರಬೇಕಾಗುವುದು. ಅಂದರೆ ಅದನ್ನು ಅಂಗೀಕರಿಸಲೇ ಬೇಕಾಗುವುದು. ತಥಾಚ ದೂಷ್ಯ

ಉಪಾದೇಯುಗಳಿಲ್ಲದಿರುವವನಿಗೆ ಶಾಸ್ತ್ರನಿರ್ಮಾಣವೂ ಕೂಡದೆಹೋಗಬೇಕಾಗುವುದು. (3) ಸರ್ವ ಪ್ರಕಾರತ್ವವು ವ್ಯಾಹತವಾದಾಗ್ಯೂ ಅದನ್ನು ಅಂಗೀಕರಿಸುವುದಾದರೆ ಆಗ ತಾಯಿಗೆ ವಂಧ್ಯಾತ್ವವನ್ನು ಪ್ರಮಾಣವೆಂದು ಅಂಗೀಕರಿಸಿದ ಜಿನೋಪದೇಶಕ್ಕೆ ಅಪ್ರಾಮಾಣ್ಯವನ್ನು ಬದ್ಧನಿಗೂ ಮುಕ್ತತ್ವವನ್ನೂ, ಮುಕ್ತನಿಗೂ ಬದ್ಧತ್ವವನ್ನೂ, ಯೋಗಿಗೂ ರಾಗಿತ್ವವನ್ನೂ, ಶ್ವಪಚನಿಗೂ ಯೋಗಿತ್ವವನ್ನೂ, ಇದುಮೊದಲಾದ ವ್ಯಾಹತಿ ಸಮೂಹವನ್ನೇ ಅಂಗೀಕರಿಸಬೇಕಾಗುವುದು. ಏವಂ ಚ ಶಾಸ್ತ್ರನಿರ್ಮಾಣಪ್ರಯಾಸವೇ ವ್ಯರ್ಥವಾಗಬೇಕಾಗುವುದು ॥ ೨೫೧ ॥ ೨೫೨ ॥

ಹೀಗೆ ಜಗತ್ತಿಗೆ ಜೈನನು ಹೇಳಿದ ಸರ್ವಪ್ರಕಾರತ್ವವನ್ನು ನಿರಾಕರಿಸಿ ಅವನು ಹೇಳಿದ ವಿಷಯಾಂತರವನ್ನು ನಿವಾರಿಸುವುದಕ್ಕಾಗಿ ಅನುವಾದಮಾಡುತ್ತಾರೆ.

**ಮೂ ॥ ವಕ್ತಿ ಸ್ವಪ್ರಭಮಾತ್ಮಾನಂ ದೇಹಮಾನಂ[ತದಪ್ಯಲಂ] ॥ ೨೫೩ ॥**

**ಅ** ॥ ಕ್ಷಪಣಕಃ = ಜೈನನು, ಆತ್ಮಾನಂ = ಜೀವನನ್ನು, ಸ್ವಪ್ರಭಂ = ಸ್ವಪ್ರಕಾಶನನ್ನಾಗಿಯೂ, ಅಥವಾ ಏನೂ ಪ್ರಮಾಣವಿಲ್ಲದೆ ತನ್ನ ಉತ್ಪ್ರೇಕ್ಷೆಯಿಂದಲೇ, ದೇಹಮಾನಂ = ಶರೀರದ ಪರಿಮಾಣದಂತೆ ಪರಿಮಾಣವುಳ್ಳವನನ್ನಾಗಿಯೂ, ವಕ್ತಿ = ಹೇಳುತ್ತಾನೆ.

**ಕಾ** ॥ (1) ಇಲ್ಲಿ ದೇಹಪರಿಮಾಣತ್ವವೇ ವಿವಾದ ವಿಷಯುವಾದ ಅರ್ಥವು. ಸ್ವಪ್ರಭತ್ವವಾದರೂ ನಮಗೆ ಸಮ್ಮತವೇ. (2) 'ದೇವದತ್ತಾತ್ಮಾ ತದ್ದೇಹ ಏವ ತತ್ರ ಸರ್ವತ್ರೈವ ಚ ವಿದ್ಯತೇ ತತ್ರೈವ ತತ್ರ ಸರ್ವತ್ರೈವ ಚ ಸ್ವಾಸಾಧಾರಣ ಗುಣಾಧಾರತಯೋಪಲಂಭಾತ್ ಯೋ ಯತ್ರೈವ ಯತ್ರ ಸರ್ವತ್ರೈವ ಸ್ವಾಸಾಧಾರಣಗುಣಾಧಾರತಯೋಪಲಭ್ಯತೇ ಸ ತತ್ರೈವ ತತ್ರ ಸರ್ವತ್ರ ಚ ವಿದ್ಯತೇ ಯಥಾ ದೇವದತ್ತಗೃಹ ಏವ ತತ್ರ ಸರ್ವತ್ರೈವ ಚ ಉಪಲಭ್ಯಮಾನಸ್ವಾಸಾಧಾರಣ ಭಾಸ್ವರತ್ವಾದಿಗುಣಃ ಪ್ರದೀಪಃ, ತಥಾಚಾಯಂ ತಸ್ಮಾತ್ತಥಾ' ದೇವದತ್ತನ ಆತ್ಮನು ದೇವದತ್ತನ ಶರೀರದಲ್ಲಿಯೇ ಅಲ್ಲಿಎಲ್ಲಾ ಕಡೆಗಳಲ್ಲಿಯೂ ಇರುತ್ತಾನೆ. ಅದರಲ್ಲಿಯೇ ಅಲ್ಲಿಎಲ್ಲಾ ಕಡೆಗಳಲ್ಲಿಯೇ ತನ್ನ ಅಸಾಧಾರಣವಾದ ಗುಣಕ್ಕೆ (ಸುಖಕ್ಕೆ ಆಗಲೀ ಸುಖಾನುಭವಕ್ಕಾಗಲೀ) ಆಧಾರವಾಗಿ ತೋರಿರುವುದರಿಂದ, ಯಾವುದು ಎಲ್ಲಿಯೇ ಎಲ್ಲಿಸರ್ವಕಡೆಗಳಲ್ಲಿಯೇ ತನ್ನ ಅಸಾಧಾರಣ ಗುಣಕ್ಕೆ ಆಧಾರವಾಗಿ ಉಪಲಬ್ಧವಾಗುತ್ತದೋ, ಅದು ಅಲ್ಲಿಯೇ ಅಲ್ಲಿಎಲ್ಲಾ ಕಡೆಗಳಲ್ಲಿಯೂ ಇರುತ್ತದೆ. ಹೇಗೆಂದರೆ— ದೇವದತ್ತನ ಮನೆಯಲ್ಲಿಯೇ ಅಲ್ಲಿಎಲ್ಲಾ ಕಡೆಗಳಲ್ಲಿಯೇ ತೋರತಕ್ಕ ತನ್ನ ಅಸಾಧಾರಣವಾದ ಭಾಸ್ವರತ್ವಾದಿಗುಣಗಳುಳ್ಳ ಪ್ರದೀಪವು, ತಥಾಚ ಹೇತುವು ಇದ್ದ ಪ್ರಯುಕ್ತ ಪಕ್ಷವು ಸಾಧ್ಯವುಳ್ಳದ್ದೇ ಸರಿ. ಸರ್ವದೇಹವ್ಯಾಪಿತ್ವವಿಲ್ಲವಾದರೆ ಸುಂದರಿಯಾದ ಸೌಭಾಗ್ಯವತಿಯನ್ನು ಆಲಿಂಗನಮಾಡಿದರೂ ಸರ್ವದೇಹದಲ್ಲಿಯೂ ಆಹ್ಲಾದವನ್ನುಂಟುಮಾಡತಕ್ಕ ಸುಖವು ತನಗೆ ಅನುಭೂತವಾಗದೆ ಹೋಗಬೇಕಾಗುವುದು. ತಥಾ ಚ ಸರ್ವಾಂಗದಲ್ಲಿ ರೋಮಾಂಚವೂ ಹುಟ್ಟದೆ ಹೋಗಬೇಕಾಗುವುದು ॥ ೨೫೩ ॥

ಆತ್ಮನಿಗೆ ಕಾಯಪರಿಮಾಣತ್ವವನ್ನು ನಿರಾಕರಿಸುವುದಕ್ಕಾಗಿ ಸೂತ್ರವು.

**"ಓಂ ಏವಂ ಚಾತ್ಮಾಕಾರ್ತ್ಸ್ನ್ಯಂ ಓಂ"** ॥ ಸೂ. ೩೪ ॥

ಆತ್ಮನಿಗೆ ದೇಹಪರಿಮಾಣತ್ವವಿದ್ದರೆ ಪಿಪೀಲಿಕಾ ಮಶಕಾದಿ ದೇಹದಲ್ಲಿದ್ದ ಆತ್ಮನಿಗೆ ಕರ್ಮಾದಿಗಳ ವಶದಿಂದ ಗಜಾದಿದೇಹವು ಪ್ರಾಪ್ತವಾಗುವಾಗ ಸರ್ವದೇಹದಲ್ಲಿ ವ್ಯಾಪಿತ್ವವು ಇಲ್ಲದೆ ಹೋಗಬೇಕಾಗುವುದು. ಅಂತೂ ಸರ್ವದೇಹದಲ್ಲಿ ಚೇಷ್ಟೆಯು ಇಲ್ಲದೆ ಹೋಗಬೇಕಾಗುವುದು.

ಮತ್ತು ಗಜಾದಿದೇಹದಲ್ಲಿರತಕ್ಕ ಗಜಾದಿದೇಹಪರಿಮಾಣ ಸಮಾನಪರಿಮಾಣವುಳ್ಳ ಆತ್ಮನಿಗೆ ಪಿಪೀಲಿಕಾದಿ ದೇಹವು ಬಂದಾಗ ಅತಿರೇಕವು ಬರುವುದು. ಅಂದರೆ— ಆ ದೇಹದಲ್ಲಿಯೂ ಆ ದೇಹದ ಹೊರಗೂ ಆತ್ಮನಿಗೆ ಅವಸ್ಥಿತಿಯು ಇರಬೇಕಾಗುವುದು.

ಈ ಸೂತ್ರದ ತಾತ್ಪರ್ಯವನ್ನು ಹೇಳುತ್ತಾರೆ—

**ಮೂ ॥ [ವಕ್ತಿ ಸ್ವಪ್ರಭವಮಾತ್ಮಾನಂ ದೇಹಮಾನಂ] ತದಪ್ಯಲಂ ।**
**(ದು)ದೃಷ್ಟಂ ನಾನಾಶರೀರೇಷು ಪ್ರವೇಶಾದನ್ಯಥಾ ಭವಾತ್ ॥೨೫೪॥**

ಅ ॥ ತದಪಿ=ಆ ಮತವೂ ಕೂಡ, ಅಲಂ ದುಷ್ಟಂ=ಅತ್ಯಯುಕ್ತವು. ಏಕೆಂದರೆ— ನಾನಾಶರೀರೇಷು=ಅನೇಕ ಶರೀರಗಳಲ್ಲಿ, ಪ್ರವೇಶಾತ್=ಪ್ರವೇಶದಿಂದ, ಅನ್ಯಥಾ ಭವಾತ್= ಕಾಯಪರಿಮಾಣತ್ವಾಭಾವವು ಬರಬೇಕಾಗಿರುವುದರಿಂದ.

ತಾ ॥ ಪಿಪೀಲಿಕಾದಿ ದೇಹಗಳಲ್ಲಿರತಕ್ಕ ಪಿಪೀಲಿಕಾದಿಪರಿಮಾಣವುಳ್ಳ ಆತ್ಮನಿಗೆ ಕರ್ಮ ವಶದಿಂದ ಗಜಗವಯಾದಿ ದೇಹಗಳು ಪ್ರಾಪ್ತಗಳಾಗುವಾಗ ಅಲ್ಲಿ ಅಪೂರ್ಣತ್ವವು ಬರಬೇಕಾಗುವುದು. ಅಂದರೆ ಸರ್ವದೇಹವ್ಯಾಪ್ತಿಯು ಇಲ್ಲದೆ ಹೋಗಬೇಕಾಗುವುದು. ಗಜಾದಿದೇಹಗಳಲ್ಲಿರತಕ್ಕ ಗಜಾದಿಪರಿಮಾಣಗಳುಳ್ಳ ಆತ್ಮನಿಗೆ ಪಿಪೀಲಿಕಾದಿ ದೇಹವು ಬರುವಾಗ ಅತಿರೇಕವು ಬರಬೇಕಾಗುವುದು. (ಶರೀರವನ್ನು ಬಿಟ್ಟೂ ಅವಸ್ಥಿತಿಯು ಇರಬೇಕಾಗುವುದು.) ಅಂತೂ ಎರಡು ಪಕ್ಷದಲ್ಲಿಯೂ ಕಾಯಪರಿಮಾಣತ್ವವು ಕೂಡುವುದೇ ಇಲ್ಲ. ॥ ೨೫೪ ॥

ಆತ್ಮನು ಯಾವ ಯಾವ ಶರೀರವನ್ನು ಹೊಂದುತ್ತಾನೋ ಆಯಾಯ ಪರಿಮಾಣವುಳ್ಳವನಾಗುತ್ತಾನೆ. ಆದಕಾರಣ ಹಿಂದೆ ಹೇಳಿದ ದೋಷವಿಲ್ಲ ಎನ್ನುವ ಆಶಂಕೆಯನ್ನು ನಿರಾಕರಿಸುವುದಕ್ಕಾಗಿ ಸೂತ್ರವು.

**"ಓಂ ನ ಚ ಪರ್ಯಾಯಾದಪ್ಯವಿರೋಧೋ ವಿಕಾರಾದಿಭ್ಯಃ ಓಂ"**
**॥ ಸೂ. ೩೫ ॥**

ಆವಾವ ದೇಹಪರಿಮಾಣವುಳ್ಳವನೆಂದಂಗೀಕರಿಸಿರುವುದರಿಂದಲೂ ಅವಿರೋಧವು ಇಲ್ಲ. (ವಿರೋಧವೇ ಇದೆ.) ವಿಕಾರಿತ್ವಾದಿಗಳು ಬರಬೇಕಾಗಿರುವುದರಿಂದ, ಅಂತೂ ಅವುಗಳಿಂದ ಅನಿತ್ಯತ್ವ, ಅನಿರ್ಮೋಕ್ಷತ್ವ, ಶಾಸ್ತ್ರವೈಯರ್ಥ್ಯಗಳು ಬರುವವು.

ಈ ಸೂತ್ರದ ತಾತ್ಪರ್ಯವನ್ನು ಹೇಳುತ್ತಾರೆ—

**ಮೂ ॥ ತದಪ್ಯಲಂ । ದೃಷ್ಟಂ ನಾನಾಶರೀರೇಷು**
**ಪ್ರವೇಶಾದನ್ಯಥಾ ಭವಾತ್ ॥ ೨೫೪ ॥**

ಅ ॥ ತದಪಿ=ಆವಾವ ದೇಹಬಂದಾಗ ಆವಾವ ಪರಿಮಾಣವು ಬರುತ್ತದೆ ಎನ್ನುವುದೂ ಕೂಡ, ನಾನಾಶರೀರೇಷು = ಅನೇಕ ಶರೀರಗಳಲ್ಲಿ, ಅಂದರೆ ಸ್ಥೂಲಸೂಕ್ಷ್ಮ ಶರೀರಗಳಲ್ಲಿ, ಪ್ರವೇಶಾತ್ = ಪ್ರವೇಶದಿಂದ, (ಸ್ಥೂಲಸೂಕ್ಷ್ಮ ಪರಿಮಾಣವು ಹುಟ್ಟುವಾಗ ಪರಿಮಾಣಕ್ಕೂ ಪರಿಮಾಣವುಳ್ಳದ್ದಕ್ಕೂ ಅತ್ಯಂತ ಭೇದವನ್ನು ಅಂಗೀಕರಿಸವೆ ಇರುವುದರಿಂದ ಆತ್ಮನಿಗೇನೇ) ಅನ್ಯಥಾ ಭವಾತ್=ಅನ್ಯಥಾಭಾವವು(ವಿಕಾರವು)ಬರಬೇಕಾಗಿರುವುದರಿಂದ, ಅಲಂ ದೃ(ದು)ಷ್ಟಂ= ಈ ಪಕ್ಷವೂ ಅತ್ಯಯುಕ್ತವು. ॥ ೨೫೪ ॥

ಆತ್ಮನಿಗೇನೇ ಅನ್ಯಥಾಭಾವವಿರಲಿ. ಅದರಿಂದ ಯಾವ ದೋಷವು ಎಂದಾಶಂಕಿಸಿದರೆ—

**ಮೂ ॥ ಅನ್ಯಥಾಭಾವಿಯದ್ವಸ್ತು ತದನಿತ್ಯಮಿತಿ ಸ್ಥಿತಿಃ ।**
**ತನ್ಮತೇ ತದನಿತ್ಯತ್ವಂ ಪುದ್ಗಲಸ್ಯಾನಿವಾರಿತಂ ॥ ೨೫೫ ॥**

ಅ ॥ ಯತ್ ವಸ್ತು=ಯಾವ ವಸ್ತುವು, ಬೇರೆ ರೀತಿಯಾಗಿ ಇರತಕ್ಕದ್ದೋ, ತತ್=ಅದು, ಅನಿತ್ಯಂ=ಅನಿತ್ಯವು, ಇತಿ=ಹೀಗೆ, ಸ್ಥಿತಿಃ=ವ್ಯಾಪ್ತಿಯು, ತನ್ಮತೇ=ಜೈನಮತದಲ್ಲಿ, (ಅಂಗೀಕರಿಸಲ್ಪಟ್ಟದೆ.) ತತ್=(ಯಾವಕಾರಣದ್ದೆಶೆಯಿಂದ ಹೀಗೆ ವ್ಯಾಪ್ತಿ ಇದೆಯೋ, ಯಾವ ಕಾರಣದ್ದೆಶೆಯಿಂದ ಅನ್ಯಥಾಭಾವಿತ್ವವು ಅಂಗೀಕೃತವಾಗಿದೆಯೋ) ಆದುದರಿಂದ, ತದನಿತ್ಯತ್ವಂ=ಆತ್ಮನಿಗೆ ಅನಿತ್ಯತ್ವವು ಪ್ರಾಪ್ತವಾಗುತ್ತದೆ. ಪುದ್ಗಲಸ್ಯ ಇವ=ದೇಹಕ್ಕೆ ಇದ್ದಂತೆಯೇ ಅಂದರೆ ಹೇಗೆ ಶರೀರಕ್ಕೆ ಶರೀರಾಕಾರನಾಮುಗಳ ಪರಿತ್ಯಾಗದಿಂದ ಭಸ್ಮೀಭಾವರೂಪವಾದ ಅನಿತ್ಯತ್ವವೋ,ಅಂತಹ ಅನಿತ್ಯತ್ವವೇ ಆತ್ಮನಿಗೂ ಪ್ರಾಪ್ತವಾಗುತ್ತದೆ.) ಅನಿವಾರಿತಂ=ಅನಿತ್ಯತ್ವವು ನಿವಾರಿಸಲ್ಪಡುವುದಿಲ್ಲ. (ಅಂದರೆ ಪರಿಮಾಣವ್ಯತ್ಯಯರೂಪವಾದ ಅನ್ಯಥಾಭಾವವು ಇಂತಹ ಅನಿತ್ಯತ್ವದಿಂದ ವ್ಯಾಪ್ತವಾಗಿದೆ ಎಂದು ದೇಹಾದಿಗಳಲ್ಲಿ ದೃಷ್ಟವಾಗಿರುವುದರಿಂದ ಅಂತಹ ಪರಿಮಾಣವ್ಯತ್ಯಯವುಳ್ಳ ಆತ್ಮನಿಗೂ ಅಂತಹ ಅನಿತ್ಯತ್ವವನ್ನು ನಿವಾರಿಸುವುದು ಅಶಕ್ಯವು ॥ ೨೫೫ ॥

ಹಾಗಾದರೆ ನಮ್ಮ ಮತದಂತೆ ನಿಮ್ಮ ಮತದಲ್ಲಿಯೂ ಆತ್ಮನಿಗೆ ಸುಖದುಃಖಗಳಿಂದ ಉಚ್ಚ ನೀಚತ್ವವನ್ನು ಅಂಗೀಕರಿಸಿರುವುದರಿಂದ ಅನ್ಯಥಾಭಾವವು ಇದ್ದೇ ಇದೆ. ಅನ್ಯಥಾಭಾವಿಯಾದ ದೇಹಾದಿಗಳಿಗೆ ಅನಿತ್ಯತ್ವವು ಉಪಲಬ್ಧವಾಗಿರುವುದರಿಂದ ನಿಮ್ಮ ಮತದಲ್ಲಿಯೂ ಆತ್ಮನಿಗೆ ಅನಿತ್ಯತ್ವವನ್ನು ನಿವಾರಿಸಲು ಸಾಧ್ಯವಿಲ್ಲ ಎಂದಾಶಂಕಿಸಿದರೆ—

**ಮೂ ॥ ನಾನಿತ್ಯತಾಸ್ಮತ್ಪಕ್ಷೇ ತು ಚೈತನ್ಯಾದೇರ್ವಿಶೇಷಿಣಃ ।**
**ಲಕ್ಷಣಸ್ಯ ನಿವೃತ್ತೌ ತು ಸ್ಯಾನ್ನ ತಚ್ಚೇತನೇಕ್ವಚಿತ್ ॥ ೨೫೬ ॥**
**ಓತಪ್ರೋತಾತ್ಮಕತ್ವಂ ತು ಪಟೇ ದೇಹೇಽಂಗಸಂಸ್ಥಿತಿಃ ।**
**ಇತ್ಯಾದಿ ಲಕ್ಷಣಸ್ಯೈವ ನಿವೃತ್ತೌ ಸ್ಯಾದನಿತ್ಯತಾ ॥ ೨೫೭ ॥**

ಅ ॥ ಅಸ್ಮತ್ಪಕ್ಷೇ ತು= ನಮ್ಮ ಪಕ್ಷದಲ್ಲಿ ಆದರೂ (ಅನ್ಯಥಾಭಾವವುಳ್ಳವನಾದಾಗ್ಯೂ ಆತ್ಮನಿಗೆ) ಅನಿತ್ಯತಾ = ಅನಿತ್ಯತ್ವವು, ನ ಪ್ರಸಜ್ಜತೇ = ಪ್ರಸಕ್ತವಾಗುವುದಿಲ್ಲ. (ಅದು ಹೇಗೆಂದರೆ) (ಅಸ್ಮನ್ಮತೇ = ನಮ್ಮ ಮತದಲ್ಲಿ,) ಚೈತನ್ಯಾದೇಃ = ಚೇತನತ್ವ ಮೊದಲಾದ ಲಕ್ಷಣಸ್ಯ=ಲಕ್ಷಣಕ್ಕೆ, ನಿವೃತ್ತೌ ತು=ನಿವೃತ್ತಿಯಾದರೇನೇ, ವಿಶೇಷಿಣಃ=ಲಕ್ಷಣವುಳ್ಳ ಅರ್ಥಕ್ಕೆ, ಅನಿತ್ಯತಾ=ಅನಿತ್ಯತ್ವವು ಸ್ಯಾತ್=ಬರುವುದು. (ಜೈನರಂತೆ ಅನ್ಯಥಾಭಾವಮಾತ್ರದಿಂದ ಅನಿತ್ಯತ್ವವು ಬರುವುದಿಲ್ಲ. ಅಂದರೆ ಯಾವ ವಸ್ತುವಿಗೆ ಯಾವುದು ಲಕ್ಷಣವೋ ಆ ಲಕ್ಷಣನಿವೃತ್ತಿರೂಪವಾದ ಅನ್ಯಥಾಭಾವವೇ ಆ ವಸ್ತುವಿನ ಅನಿತ್ಯತ್ವಕ್ಕೆ ನಿಯಾಮಕವು. ಯತ್ಕಿಂಚಿತ್ ಅನ್ಯಥಾಭಾವ ಮಾತ್ರವಲ್ಲ.) ಹೀಗಾದರೆ ಗಗನಾದಿಗಳಿಗೆ ಶಬ್ದ ಮೊದಲಾದ ಲಕ್ಷಣಗಳು ಇಲ್ಲದಿರುವುದರಿಂದ ಮಹಾಪ್ರಲಯದಲ್ಲಿ ವಿನಾಶವು ಬರಬೇಕಾಗುವುದು. ಚೇಷ್ಟಾಶ್ರಯತ್ವ ರೂಪ ಲಕ್ಷಣವಿಲ್ಲದಿರುವುದರಿಂದ ಶರೀರಕ್ಕೆ ಸುಪ್ತ್ಯಾದಿಕಾಲದಲ್ಲಿ ನಾಶವು ಬರಬೇಕಾಗುವುದೆಂದರೆ ವಿಶೇಷವುಳ್ಳ ಲಕ್ಷಣಕ್ಕೆ ನಿವೃತ್ತಿಯಾದರೇನೇ ಲಕ್ಷಣವುಳ್ಳದ್ದಕ್ಕೆ ನಿವೃತ್ತಿಯು. ಲಕ್ಷಣಮಾತ್ರದ ನಿವೃತ್ತಿಯಿಂದ ಅಲ್ಲ. ಇದರಿಂದ ಪ್ರಕೃತವೇನಾಯಿತೆಂದರೆ) ತತ್=ಅನಿತ್ಯತ್ವ

ವ್ಯಾಪ್ತವಾಗಿ ಹೇಳಲ್ಪಟ್ಟ ವಿಶೇಷಲಕ್ಷಣದ ನಿವೃತ್ತಿಯು, ಚೇತನೇ = ಚೇತನದಲ್ಲಿ, ಕ್ವಚಿತ್= ಎಲ್ಲಿಯೂ, ನ ಸ್ಯಾತ್=ಆಗಲಾರದು. (ಆದಕಾರಣ ಅದಕ್ಕೆ ಅನಿತ್ಯತ್ವವೂ ಕೂಡ ಬರಲಾರದು.) ಅಥವಾ, ತತ್=ಆ ಲಕ್ಷಣವು, ಚೇತನೇ=ಚೇತನದಲ್ಲಿರತಕ್ಕದು, ಕ್ವಚಿತ್=ಎಲ್ಲಿಯೂ, ನ ನಿವರ್ತತೇ=ಹೊರಟುಹೋಗುವುದಿಲ್ಲ. (ವಿಶೇಷಲಕ್ಷಣಕ್ಕೆ ನಿವೃತ್ತಿಯಾದರೆ ಲಕ್ಷ್ಯಕ್ಕೆ ಅನಿತ್ಯತ್ವವು ಬರುವುದೆಂದು ಹೇಳಿದ್ದನ್ನು ವಿಶದೀಕರಿಸುತ್ತಾರೆ.) ಓತಪ್ರೋತಾತ್ಮಕತ್ವಂ ತು=ತಂತುಗಳ ಪರಸ್ಪರ ಸಂಯೋಗವಿಶೇಷವು, ಪಟೇ=ಪಟದಲ್ಲಿ, (ಲಕ್ಷಣಂ=ವಿಶೇಷಲಕ್ಷಣವು.) ದೇಹೇ= ಶರೀರದಲ್ಲಿ, ಅಂಗಸಂಸ್ಥಿತಿಃ=ಕರಚರಣಾದ್ಯಂಗಗಳ ಸನ್ನಿವೇಶವಿಶೇಷವು. (ವಿಶೇಷಲಕ್ಷಣವು) ಇತ್ಯಾದಿಲಕ್ಷಣಸ್ಯೈವ=ಇದುಮೊದಲಾದ ವಿಶೇಷಲಕ್ಷಣಕ್ಕೇನೇ, ನಿವೃತ್ತೌ=ನಿವೃತ್ತಿಯಾದರೆ, ಅನಿತ್ಯತಾ ಸ್ಯಾತ್=ಲಕ್ಷ್ಯಕ್ಕೆ ಅನಿತ್ಯತ್ವವು ಬರುವುದು. (ಅಂದರೆ ಲಕ್ಷ್ಯವಿರುವ ತನಕ ಇರತಕ್ಕ ಲಕ್ಷಣಗಳು ಯಾವುವೋ ಅವುಗಳ ನಿವೃತ್ತಿಯೇ ಲಕ್ಷ್ಯದ ಅನಿತ್ಯತ್ವಕ್ಕೆ ನಿಮಿತ್ತವು. ಆತ್ಮನಲ್ಲಿರತಕ್ಕ ಚೇತನತ್ವಾದಿ ಲಕ್ಷಣವೂ ಲಕ್ಷ್ಯವಿರುವ ತನಕ ಇರತಕ್ಕದ್ದೇ. ಅಂತಹ ಆ ಲಕ್ಷಣವಾದರೂ ಯಾವಾಗಲೂ ನಿವೃತ್ತವಾಗುವುದಿಲ್ಲ. ಆದಕಾರಣ ಅಂತಹ ವಿಶೇಷಲಕ್ಷಣನಿವೃತ್ತಿಯೇ ಇಲ್ಲದಿರುವುದರಿಂದ ಆತ್ಮನಿಗೆ ವಿನಾಶವು ಹೇಗೆ ಬಂದೀತು?) ॥ ೨೫೬ ॥ ೨೫೭ ॥

(1)ಆತ್ಮನು ಸ್ವಪ್ರಕಾಶನೆಂದು ಯಾವುದು ಹೇಳಲ್ಪಟ್ಟದ್ದೋ ಅದೂ ಅಯುಕ್ತವು. ಪ್ರಕಾಶವುಳ್ಳ ಪ್ರದೀಪಾದಿಗಳಂತೆಯೇ ರೂಪಸ್ಪರ್ಶವು ಬರಬೇಕಾಗುವುದು. ರೂಪಾದಿಗಳು ಇದ್ದ ಪ್ರಯುಕ್ತ ವಿನಾಶಿತ್ವವೂ ಬರಬೇಕಾಗುವುದು. 'ಯತ್ ರೂಪಾದಿಮತ್ ತತ್ ಅನಿತ್ಯಂ' ಎಂದು ಪರರೇ ವ್ಯಾಪ್ತಿಯನ್ನು ಅಂಗೀಕರಿಸಿರುವರು. (2) ಹಾಗಾದರೆ ಸಿದ್ಧಾಂತದಲ್ಲಿಯೂ ಆತ್ಮನಿಗೆ ರೂಪಾದಿಗಳನ್ನು ಅಂಗೀಕರಿಸಿರುವರು. 'ರೂಪಾದಿಮತೋಽನಿತ್ಯತ್ವಂ' ಎಂದು ವ್ಯಾಪ್ತಿಯೂ ಕೂಡ ಅಂಗೀಕೃತವಾಗಿದೆ. 'ರೂಪಾದಿಮತ್ವಾಚ್ಚ ವಿಪರ್ಯಯೋ ದರ್ಶನಾತ್' ಎಂದೂ ಸೂತ್ರಕಾರರೂ ಹೇಳಿರುತ್ತಾರೆ. ಆದಕಾರಣ ಸಿದ್ಧಾಂತಿಗಳ ಮತದಲ್ಲಿ ಆತ್ಮನಿಗೆ ಅನಿತ್ಯತ್ವಪರಿಹಾರವು ಹೇಗೆ ಎಂದಾಶಂಕಿಸಿದರೆ—

**ಮೂ ॥ ಭೌತಿಕಂ ತ್ವೇವ ರೂಪಾದಿ ವ್ಯಾಪ್ತಂ ನಾಶೇನ ನೋ ಮತೇ ।**
**ನೈವಂ ತಸ್ಯಾನ್ಯಥಾ ಭಾವೋ ಯಸ್ಯಾನಿತ್ಯತ್ವಮೀರಿತಂ ॥ ೨೫೮ ॥**
**ರೂಪಾದಿಯುಕ್ತಸ್ಯ ತಥಾ ಜಗನ್ನಾಶಿತ್ವಸಿದ್ಧಯೇ ।**
**ವ್ಯಾಪ್ತ್ಯೈತಯಾನ್ಯಥಾ ಭಾವಾದಾತ್ಮನೋ ನಿತ್ಯತಾ ಭವೇತ್ ॥೨೫೯॥**

**ಅ** ॥ ಭೌತಿಕಂತ್ವೇವ ರೂಪಾದಿ=ಭೌತಿಕವಾದರೂಪಮೊದಲಾದುದೇ, (ಕೇವಲರೂಪಾದಿಗಳಲ್ಲ) ನಃ=ನಮ್ಮ, ಮತೇ=ಮತದಲ್ಲಿ, ನಾಶೇನ=ನಾಶದಿಂದ, ವ್ಯಾಪ್ತಂ=ವ್ಯಾಪ್ತವಾಗಿದೆ. (ಅಂದರೆ ಭೌತಿಕವಾದ ರೂಪಾದಿಗಳು ಆತ್ಮನಲ್ಲಿಲ್ಲ. ಆದಕಾರಣ ಆತ್ಮನಿಗೆ ಅನಿತ್ಯತ್ವವು ಪ್ರಸಕ್ತವಾಗುವುದಿಲ್ಲ. ಹೇಗೆ ನೀವು ಲಕ್ಷಣದಲ್ಲಿ ಯಾವಲಕ್ಷ್ಯಭಾವಿತ್ವರೂಪವಾದ ವಿಶೇಷಣವನ್ನೂ ರೂಪಾದಿಮತ್ವದಲ್ಲಿ ಭೌತಿಕತ್ವರೂಪವಾದ ವಿಶೇಷಣವನ್ನೂಕೊಡುತ್ತಿರೋ ಹಾಗೆಯೇ ನಮ್ಮ ಮತದಲ್ಲಿಯೂ ವಿಶೇಷಣವನ್ನುಕೊಟ್ಟರೆ ಹಿಂದೆ ಹೇಳಿದ ದೋಷವಿಲ್ಲವೆಂದಾಶಂಕಿಸಿದರೆ) ತಸ್ಯ = ಕ್ಷಪಣಕನ ಮತದಲ್ಲಿ, ಏವಂ = ಹೀಗೆ, ಅನ್ಯಥಾಭಾವಃ = ಅನ್ಯಥಾಭಾವವು, ರೂಪಾದಿಮತ್ವವೂಕೂಡ, ನ=ಅಲ್ಲ. ಅಂದರೆ ಅನ್ಯಥಾಭಾವದಲ್ಲಿಯೂ ರೂಪಾದಿಮತ್ವದಲ್ಲಿಯೂ ವಿಶೇಷಣವನ್ನೂ ಕೊಡಲಿಲ್ಲ. (ಮತ್ತೆ ಕೇವಲ ಅನ್ಯಥಾಭಾವ ರೂಪಾದಿಮತ್ವವೇ ಅನಿತ್ಯತ್ವದಿಂದ

ವ್ಯಾಪ್ತವಾಗಿದೆ ಎಂದು ಅಂಗೀಕರಿಸಲ್ಪಟ್ಟಿದೆ. ಆದಕಾರಣ ಹಿಂದೆಹೇಳಿದ ಆತ್ಮಾನಿತ್ಯತ್ವ ಪ್ರಸಂಗರೂಪದೋಷ ಪರಿಹಾರವಾಗುವುದಿಲ್ಲ. ಅದು ಹೇಗೆಂದರೆ) ಜಗನ್ನಾಶಿತ್ವಸಿದ್ಧಯೇ = ಭೂ ಭೂಧರಮೊದಲಾದ ಜಗತ್ತಿಗೆ ನಾಶವು ಸಿದ್ಧಿಯಾಗುವುದಕ್ಕಾಗಿ, ಯಸ್ಯ = ಯಾವವಸ್ತುವಿಗೆ, ಅನ್ಯಥಾಭಾವಃ = ವಿಕಾರವ್ಹೋ, (ತಸ್ಯ =ಅದಕ್ಕೆ) ಅನಿತ್ಯತ್ವಂ=ಅನಿತ್ಯತ್ವವು, ಈರಿತಂ= ಕ್ಷಪಣಕನಿಂದಹೇಳಲ್ಪಟ್ಟಿದೆ. ರೂಪಾದಿಯುಕ್ತಸ್ಯ ತಥಾ = ರೂಪಾದಿಗಳಿಂದ ಕೂಡಿಕೊಂಡು ಇದ್ದುದಕ್ಕೂ, ಅನಿತ್ಯತ್ವಂ = ಅನಿತ್ಯತ್ವವು, ಈರಿತಂ = ಜೈನನಿಂದ ಹೇಳಲ್ಪಟ್ಟಿದೆ. ಅಥವಾ, ಯತ್ = ಯಾವುದು, ರೂಪಾದಿಯುಕ್ = ರೂಪಾದಿಗಳಿಂದ ಕೂಡಿಕೊಂಡಿದೆಯೋ, ತತ್= ಅದು, ತಥಾ = ಹಾಗೆಯೇ, ಅಂದರೆ ಅನಿತ್ಯಂ ಈರಿತಂ = ಅನಿತ್ಯವೆಂದುಹೇಳಲ್ಪಟ್ಟಿದೆ. ತಯಾ ವ್ಯಾಪ್ತ್ಯಾ=ಯಾವುದು ಅನ್ಯಥಾಭಾವಿಯೋ ಅದು ಅನಿತ್ಯವು, ಯಾವುದು ರೂಪಾದಿಗಳುಳ್ಳದ್ದೋ ಅದು ಅನಿತ್ಯವು, ಎನ್ನುವ ವ್ಯಾಪ್ತಿಯಿಂದ, ಅನ್ಯಥಾಭಾವಾತ್ ವಿಕಾರವಿದ್ದುದರಿಂದ, ರೂಪಾದಿಗಳು ಇದ್ದಪ್ರಯುಕ್ತವೂಕೂಡ ಆತ್ಮನಃ = ಆತ್ಮನಿಗೆ, ಅನಿತ್ಯತಾ = ಅನಿತ್ಯತ್ವವು, ಭವೇತ್= ಬರಬೇಕಾಗುವುದು.

ತಾ || ನಮ್ಮಮತದಲ್ಲಿ ಅನ್ಯಥಾಭಾವದಲ್ಲಿಯೂ, ರೂಪಾದಿಮತ್ವದಲ್ಲಿಯೂ ಹಿಂದೆ ಹೇಳಿದಪ್ರಕಾರ ವಿಶೇಷಣವನ್ನು ಕೊಟ್ಟಂತೆಯೇ ಜೈನನು ಈ ಎರಡರಲ್ಲಿಯೂ ವಿಶೇಷಣವನ್ನು ಕೊಡದಿರುವುದರಿಂದ ಕೇವಲ ಇವುಗಳಾದರೂ ಆತ್ಮನಲ್ಲಿಯೂ ಇರುವುದರಿಂದ ಆತ್ಮಾನಿತ್ಯತ್ವ ಪ್ರಸಂಗವು ಅಪರಿಹಾರ್ಯವೇ ಅವನಮತದಲ್ಲಿ ಆಗುವುದು. || ೨೫೮ || ೨೫೯ ||

ಕ್ಷಪಣಕನು ಹೇಳಿದ ವಿಷಯಾಂತರವನ್ನು ನಿರಾಕರಿಸುವುದಕ್ಕಾಗಿ ಸೂತ್ರವು.

" ಓಂ ಅಂತ್ಯಾವಸ್ಥಿತೇ ಶ್ಚೋಭಯನಿತ್ಯತ್ವಾದವಿಶೇಷಾತ್ ಓಂ "

|| ಸೂ. ೩೬ ||

ಮುಕ್ತಿಯಲ್ಲಿರತಕ್ಕ ಆತ್ಮ ಪರಿಮಾಣವು ಉಳಿಯುವುದರಿಂದ ಅದಕ್ಕಾಗಿ ನಿತ್ಯ ದೇಹವೂ ಆವಶ್ಯಕವಾಗಿರುವುದರಿಂದ ಮುಕ್ತಿಯಲ್ಲಿ ಆತ್ಮ, ಆತನ ಶರೀರ ಇವು ಎರಡೂ ನಿತ್ಯಗಳಾಗಿರುವುದರಿಂದ ಅದ್ಯತನ ಶರೀರಗಳಿಗೂ ದೇಹತ್ವವು ಸಮಾನವಾಗಿರುವುದರಿಂದ ನಿತ್ಯತ್ವವು ಬರಬೇಕಾಗುವುದು.

ಅದರಲ್ಲಿ ' ಅಂತ್ಯಾವಸ್ಥಿತೇಶ್ಚ ' ಎನ್ನುವುದನ್ನು ವ್ಯಾಖ್ಯಾನಮಾಡುತ್ತಾರೆ.

ಮೂ || ನಿತ್ಯೋರ್ಧ್ವಗತಿರಪ್ಯೇಷಾ ಯಾ ಮುಕ್ತಿರಿತಿ ಕಥ್ಯತೇ |
ಅಲೋಕಾಕಾಶಮಾಪ್ತಸ್ಯ ಕಥಂ ನ ವಿಕೃತಿಶ್ಚ ಸಾ || ೨೬೦ ||
ಕೀದೃಶಶ್ಚಾನ್ಯಥಾಭಾವೋ ನಾಶಹೇತುತಯೇಷ್ಯತೇ |
ಸಂಸ್ಥಾನಾಪಗಮಶ್ಚೇತ್ಸ ನ ಹಿ ಭೂಸಾಗರಾದಿಷು ||
ಯಃ ಕಶ್ಚಿದನ್ಯಥಾಭಾವೋ ಯದಿ ಮುಕ್ತಿಶ್ಚ ತಾದೃಶೀ || ೨೬೧ ||

ಅ || ಯಾ ಏಷಾ ನಿತ್ಯೋರ್ಧ್ವಗತಿಃ=ಯಾವ ಈ ನಿತ್ಯದಲ್ಲಿಯೂ ಊರ್ಧ್ವಗತಿಯು, ಮುಕ್ತಿರಿತಿ = ಮುಕ್ತಿಯೆಂದು, ಕಥ್ಯತೇ = ಜೈನರಿಂದ ಹೇಳಲ್ಪಡುತ್ತದೋ, ಸಾ ಚ = ಅದಾದರೂ, ಅಲೋಕಾಕಾಶಂ=ಅಲೋಕಾಕಾಶವನ್ನು, ಆಪ್ತಸ್ಯ=ಹೊಂದಿದ, ಆತ್ಮನಃ = ಆತ್ಮನಿಗೆ, ಕಥಂ=ಹೇಗೆ, ವಿಕೃತಿಃ=ವಿಕಾರವು, ನ ಭವೇತ್=ಆಗಲಾರದು. ಆಗಿಯೇ

ಆಗುವುದು. (ಅಂತೂ ಮೊದಲು ಲೋಕಾಕಾಶದಲ್ಲಿರತಕ್ಕ ಈ ಆತ್ಮನು ಅವಿಚ್ಛಿನ್ನವಾದ ಊರ್ಧ್ವಗತಿಯಿಂದ ಅಲೋಕಾಕಾಶವನ್ನು ಹೊಂದುತ್ತಾನೆ. ತಥಾ ಚ=ಇಂತಹ ವಿಕಾರವಿರುವುದರಿಂದ ಆತ್ಮನಿಗೆ ಅನಿತ್ಯತ್ವವು ಬರಬೇಕಾಗುವುದು. ಇದರಿಂದ ಅಂತ್ಯವಾದ ಸಂತತ ಊರ್ಧಗತಿರೂಪವಾದ ಅವಸ್ಥಿತಿಯು. ಅದರಿಂದ ಆತ್ಮನಿಗೆ ಅನಿತ್ಯತ್ವವು ಬರಬೇಕಾಗುವುದು. ಎಂದು ಸೂತ್ರ ಖಂಡಕ್ಕೆ ಅರ್ಥವು ಹೇಳಲ್ಪಟ್ಟಿತು.) (ಹಾಗಾದರೆ ಅನ್ಯಥಾ ಭಾವಮಾತ್ರವು ಅನಿತ್ಯತ್ವಕ್ಕೆ ಪ್ರಯೋಜಕವೆನ್ನುವುದು ಸಿದ್ಧಾಂತಿಗಳಾದ ನಿಮ್ಮ ಪಕ್ಷವಲ್ಲವೆಂದು ಹಿಂದೆಯೇ ಹೇಳಿರುತ್ತೀರಿ. ಅದು ನಮಗೂ ಸಮ್ಮತವೇ. ನಾವೂ ಕೂಡ ವಿಶೇಷಣ ಯುಕ್ತವಾದ ಅನ್ಯಥಾ ಭಾವವೇ ಅನಿತ್ಯತ್ವಕ್ಕೆ ನಿಯಾಮಕವೆಂದು ಹೇಳುತ್ತೇವೆ. ಆದುದರಿಂದ ಪ್ರದೇಶ ವಿಶೇಷ ಸಂಯೋಗ ಮಾತ್ರ ರೂಪವಾದ ಕೇವಲ ಅನ್ಯಥಾತ್ವದಿಂದ ಮುಕ್ತಾತ್ಮನಿಗೆ ಹೇಗೆ ತಾನೇ ಅನಿತ್ಯತ್ವ ಪ್ರಸಕ್ತಿಯು ಎಂದರೆ— ಕೇವಲ ಅನ್ಯಥಾ ಭಾವವೇ ಅನಿತ್ಯತ್ವ ಪ್ರಯೋಜಕವೆನ್ನುವುದೇ ಜೈನಪಕ್ಷವೆಂದು ಸಮರ್ಥಿಸುವುದಕ್ಕಾಗಿ ಅವರನ್ನು ಕುರಿತು ಪ್ರಶ್ನಿಸುತ್ತಾರೆ.) ಕೀದೃಶಶ್ಚ ಅನ್ಯಥಾಭಾವಃ=(ಭೂಮಿ ಮೊದಲಾದ ಎಲ್ಲಾದಕ್ಕೂ ನಿತ್ಯತ್ವಾದ್ಯನೇಕ ಪ್ರಕಾರವನ್ನು ಸಮರ್ಥಿಸತಕ್ಕ ಕ್ಷಪಣಕನಿಂದ ದ್ರವ್ಯಪರ್ಯಾಯಗಳಿಂದ ನಿತ್ಯತ್ವವೂ, ಅನಿತ್ಯತ್ವವೂ ಎಂದು ಹೇಳಲ್ಪಟ್ಟದೆ. ದ್ರವ್ಯಾಕಾರಕ್ಕೆ ಯಾವಾಗಲೂ ನಾಶವಿಲ್ಲದಿರುವುದರಿಂದ ನಿತ್ಯತ್ವವು. ಪರ್ಯಾಯ (ಅನ್ಯಥಾ ಭಾವ)ದಿಂದ ಅನಿತ್ಯತ್ವವು ಎಂದು ಹೇಳಲ್ಪಟ್ಟದೆ. ಅಲ್ಲಿ ಇಷ್ಟು ಕೇಳಬೇಕು. ಇಲ್ಲಿ) ಎಂತಹ ಅನ್ಯಥಾ ಭಾವವು, ನಾಶಹೇತುತಯಾ=ನಾಶಕ್ಕೆ ಕಾರಣವೆಂದು, ಇಷ್ಯತೇ = ಅಂಗೀಕರಿಸಲ್ಪಡುತ್ತದೆ. (೧)ಸಂಸ್ಥಾನಾದಿ ಲಕ್ಷಣದ ಅಪಗಮರೂಪವಾದುದೋ ೨ ಸಾಧಾರಣವಾದುದೋ, (ಅವಿವಕ್ಷಿತ ವಿಶೇಷವುಳ್ಳದ್ದೋ) ಇವುಗಳಲ್ಲಿ ೧ನೇದ್ದನ್ನು ಶಂಕಿಸುತ್ತಾರೆ.) ಸಂಸ್ಥಾನಾಪಗಮಶ್ಚೇತ್ = ಸಂಸ್ಥಾನಾಪಗಮವು ನಾಶಹೇತುವೆಂದು ಅಂಗೀಕರಿಸಲ್ಪಡುವುದಾದರೆ, ಸಃ=ಅದು, ನ ಹಿ= ಹೇಳಲಿಕ್ಕೆ ಶಕ್ಯವಾಗುವುದಿಲ್ಲ. (ಏಕೆಂದರೆ) ಸಃ=ಯಾವಲ್ಲಕ್ಷ್ಯಭಾವಿ ಲಕ್ಷಣಾಪಗಮ ರೂಪವಾದ ಅನ್ಯಥಾ ಭಾವವು, ಭೂ ಸಾಗರಾದಿಷು=ಭೂಮಿ ಸಮುದ್ರ ಮೊದಲಾದ ಪಕ್ಷೈಕ ದೇಶ ಭೂತಗಳಲ್ಲಿ, ನ ಹಿ=ಈಗ ಪ್ರಮಿತವಾಗಲಿಲ್ಲ. (ಆದಕಾರಣ ಹೇತುವಿಗೆ ಸಂದಿಗ್ಧಾಸಿದ್ಧತ್ವವು ಬರುವುದು.) (ಪ್ರಮಿತವಾಗಿದ್ದರೆ ಅದಕ್ಕೆ ಅನಿತ್ಯತ್ವವಿಷಯದಲ್ಲಿಯೂ ಸಂಶಯವು ಇಲ್ಲದಿರುವುದರಿಂದ ಅನುಮಾನವು ವ್ಯರ್ಥವಾಗುತ್ತದೆ. ಹಾಗಾದರೆ ೨ನೇದ್ದು ಆಗಲಿ ಎಂದು ಶಂಕಿಸುತ್ತಾರೆ.) ಯದಿ=ಯಾವ ಪಕ್ಷದಲ್ಲಿ, ಯಃ ಕಶ್ಚಿದನ್ಯಥಾ ಭಾವಃ=ಅವಿವಕ್ಷಿತವಿಶೇಷವುಳ್ಳ ಯಾವುದಾದರೊಂದು ಅನ್ಯಥಾಭಾವವು (ನಾಶಕಾರಣವೆಂದು ಅಂಗೀಕರಿಸಲ್ಪಡುವುದಾದರೆ ಮುಕ್ತಾತ್ಮನಿಗೂ ಕೂಡ, ಅನಿತ್ಯತ್ವವೇ ಬರಬೇಕಾಗುವುದು ಎನ್ನುತ್ತಾರೆ.) ತರ್ಹಿ=ಹಾಗಾದರೆ ಮುಕ್ತಿಶ್ಚ=ಮುಕ್ತಿಯೂ ಕೂಡ, ತಾದೃಶೀ=ಅನ್ಯಥಾಭಾವಸ್ವರೂಪಭೂತವಾದುದೇ, ಇಂತಹ ಅನ್ಯಥಾಭಾವವಿದ್ದರೂ ಆತ್ಮನಿಗೆ ನಿತ್ಯತ್ವವಿದ್ದರೆ ಭೂಭೂಧರಾದಿಗಳಿಗೂ ನಿತ್ಯತ್ವವು ಬರಬೇಕಾಗುವುದು. ॥ ೨೬೦ ॥ ೨೬೧ ॥

ಕ್ಷಪಣಕನು ಹೇಳಿದ ವಿಷಯಾಂತರವನ್ನು ದೂಷಿಸುವುದಕ್ಕಾಗಿ ಅನುವಾದ ಮಾಡುತ್ತಾರೆ.

**ಮೂ ॥ ದೇಹಮಾನೇ ವಿಕಾರಃ ಸ್ಯಾದಿತಿ ಸ್ಥಾಸ್ನೂನನಾತ್ಮನಃ ॥ ೨೬೨ ॥**

**ಆಹ ಹಸ್ತ್ಯಾದಿದೇಹೇಷು ಹ್ಯಪಿ ಸ್ಯಾದನ್ಯಥಾಭವಃ ।**

**ಅಣುದೇಹಸ್ಯ ಜೀವಸ್ಯ ಗಜತ್ವೇ ವಿಕೃತಿರ್ಹಿ ಯಾ ॥ ೨೬೩ ॥**

**ದೇಹವ್ಯಾಪ್ತೌ (ಪ್ತ್ಯಾ) ವಿಶೇಷಃ ಕಃ ತಸ್ಯಾಃ ಸ್ಥಾಸ್ನುತನೌ ಚ ನುಃ ।**
**ಗೀತಾತ್ಪುಷ್ಪಫಲಾವಾಪ್ತಿಃ ಸ್ಪರ್ಶಾತ್ಕಾರ್ಶ್ಯಂ ರಸಾತ್ಸ್ಥಿತಿಃ ॥ ೨೬೪ ॥**
**ಅಪಿ ವೃಕ್ಷಸ್ಯ ದೃಶ್ಯಂತೇ ಇತಿ ನಾನಾತ್ಮತಾ ಭವೇತ್ ।**
**ಏವಂ ಚಾತ್ಮಾಕಾರ್ತ್ಸ್ನ್ಯಮಿತಿ ತತ ಏವಾಹ ವೇದವಿತ್ ॥ ೨೬೫ ॥**

ಅ ॥ ದೇಹಮಾನೇ = ದೇಹಪರಿಮಾಣತ್ವವು ಪ್ರಮಿತವಾಗುತ್ತಿರಲು, (ಸ್ಥಾವರಗಳಿಗೆ ಸಾತ್ಮಕತ್ವವನ್ನು ಅಂಗೀಕರಿಸಿದರೆ ಆತ್ಮನಿಗೆ) ವಿಕಾರಃ = ವಿಕಾರವು, ಸ್ಯಾತ್ = ಬರಬೇಕಾಗುವುದು. ಇತಿ = ಹೀಗೆ, ಅದು ಆಗಬಾರದು ಎನ್ನುವುದಕ್ಕಾಗಿ, ಸ್ಥಾಸ್ನೂನ್ = ವೃಕ್ಷಾದಿಗಳನ್ನು, ಅನಾತ್ಮನಃ=ಆತ್ಮನಿಂದ ಅನಧಿಷ್ಠಿತಗಳನ್ನಾಗಿ, ಆಹ=ಕ್ಷಪಣಕನು ಹೇಳುತ್ತಾನೆ. (ವಿಕಾರಿತ್ವವು ಬರಬೇಕಾದೀತು ಎನ್ನುವ ಹೆದರಿಕೆಯಿಂದ ಸ್ಥಾವರಗಳಿಗೆ ಅನಾತ್ಮತ್ವವನ್ನು ಅಂಗೀಕರಿಸಿದ್ದು ಅಯುಕ್ತವು. ಹಾಗೆ ಇದ್ದರೆ ಹಸ್ತ್ಯಾದಿ ಶರೀರಗಳಿಗೂ ಕೂಡ ಅನಾತ್ಮತ್ವವನ್ನು ಅಂಗೀಕರಿಸಬೇಕಾದೀತು. ಅದು ಹೇಗೆಂದರೆ) ಹಸ್ತ್ಯಾದಿ ದೇಹೇಷು = (ಪಿಪೀಲಿಕಾದಿ ದೇಹಗಳಲ್ಲಿರತಕ್ಕ ಪಿಪೀಲಿಕಾದಿ ಪರಿಮಾಣವುಳ್ಳ ಆತ್ಮನಿಗೆ) ಹಸ್ತ್ಯಾದಿಶರೀರಗಳು ಪ್ರಾಪ್ತಗಳಾಗುವಾಗ, ಅನ್ಯಥಾ ಭವಃ=ಅನ್ಯಥಾ ಭಾವವು, ಸ್ಯಾದ್ಧಿ = ಆಗಬಹುದಷ್ಟೆ. ಅಥವಾ ಉತ್ಪತ್ತಿಸಮಯದಲ್ಲಿ ಹಸ್ತ ವಿತಸ್ತಿ ಮಾತ್ರ ಪರಿಮಾಣವಿದ್ದಪ್ರಯುಕ್ತ ಯೌವನದಲ್ಲಿ ಆದರೂ, ದೊಡ್ಡ ಪರಿಮಾಣವಿದ್ದಪ್ರಯುಕ್ತ ಹಸ್ತ್ಯಾದಿ ಸರ್ವ ದೇಹಗಳಲ್ಲಿಯೂ ಆತ್ಮನಿಗೆ ಅನ್ಯಥಾ ಭಾವವು ಬರಬೇಕಾದೀತು. ಇದರಿಂದ ಅವಿಶೇಷಾತ್ ಎಂದು ಸೂತ್ರಖಂಡದ ಅರ್ಥವು ಹೇಳಲ್ಪಟ್ಟಿತು.)(ಹಾಗಾದರೆ ಈ ಉಪನ್ಯಾಸವು ವಿಷಮವಾದುದು. ಹಸ್ತ್ಯಾದಿ ಶರೀರಗಳಲ್ಲಿ ಆತ್ಮನವಿಕಾರವು ಅಲ್ಪವಾದುದೇ. ಅತಿ ದೊಡ್ಡದಾಗಿ ಬೆಳೆಯುವುದರಿಂದ ವೃಕ್ಷಾದಿಗಳಲ್ಲಿ ಆದರೂ ಮಹತ್ತಾದ ವಿಕಾರವು. ಆದಕಾರಣ ವೃಕ್ಷಾದಿಗಳಿಗೆ ಅನಾತ್ಮತ್ವವಿದ್ದರೆ ಅಲ್ಪವಿಕಾರವುಳ್ಳ ಹಸ್ತ್ಯಾದಿಗಳಿಗೂ ಕೂಡ ಅನಾತ್ಮತ್ವವನ್ನುಪಪಾದಿಸಿದ್ದು ಅನುಚಿತವು ಎಂದಾಶಂಕಿಸಿದರೆ) ಅಣುದೇಹಸ್ಯ ಜೀವಸ್ಯ= ಪಿಪೀಲಿಕಾದಿ ಶರೀರವುಳ್ಳ ಜೀವನಿಗೆ, ಗಜತ್ವೇ=ಗಜತ್ವವು ಪ್ರಾಪ್ತವಾಗುವಾಗ, ಅಥವಾ ಉತ್ಪತ್ತಿಸಮಯದಲ್ಲಿ ಅಣುಶರೀರವುಳ್ಳ ಹಸ್ತ ವಿತಸ್ತ್ಯಾದಿ ಪರಿಮಿತವಾದ ಶರೀರವುಳ್ಳ ಆತ್ಮನಿಗೆ ಮಹಾಗಜತ್ವವು ಪ್ರಾಪ್ತವಾಗುವಾಗ, ದೇಹವ್ಯಾಪ್ತೌ=ದೇಹವ್ಯಾಪ್ತಿಯಾಗುವಾಗ, ಯಾ ವಿಕೃತಿಃ= ಯಾವುದು ವಿಕೃತಿಯೋ, ಸ್ಥಾಸ್ನುತನೌ ಚ=ಸ್ಥಾವರ ಶರೀರದಲ್ಲಿಯೂ, ನುಃ=ಪುರುಷನಿಗೆ, ಯಾ ವಿಕೃತಿಃ=ಯಾವುದು ವಿಕೃತಿಯೋ, ತಸ್ಯಾಶ್ಚ=ಆವಾವ ವಿಕಾರಕ್ಕೆ, ಕಃ ವಿಶೇಷಃ=ಪರಸ್ಪರವಾಗಿ ಯಾವ ವಿಶೇಷವು? ಯಾವ ವಿಶೇಷವೂ ಇಲ್ಲ. (ನಾವು ವಿಕಾರಿತ್ವವು ಬರಬೇಕಾದೀತು ಎನ್ನುವ ಭಯದಿಂದ ವೃಕ್ಷಾದಿಗಳಿಗೆ ಅನಾತ್ಮಕತ್ವವನ್ನು ಹೇಳುವುದಿಲ್ಲ. ಮತ್ತೆ ಸಾತ್ಮಕತ್ವದಲ್ಲಿ ಪ್ರಮಾಣವಿಲ್ಲ, ಬಾಧಕಪ್ರಮಾಣವೂ ಇದೆ. ಮತ್ತು ವೃಕ್ಷಾದಿಗಳಿಗೆ ಶರೀರವಿದ್ದರೆ ಶರೀರವ್ಯಾಪಕವಾದ ಇಂದ್ರಿಯವತ್ವವು ಬರಬೇಕಾದೀತು. ಇಂದ್ರಿಯಕಾರ್ಯವಾದ ಶ್ರವಣಾದಿಗಳು ಇಲ್ಲದಿರುವುದರಿಂದ ಅವುಗಳಿಗೆ ಇಂದ್ರಿಯಗಳೂ ಇಲ್ಲ. ಶ್ರವಣಾದಿಗಳನ್ನು ತಿಳಿಸಿಕೊಡತಕ್ಕುದು ಇಲ್ಲದಿರುವುದರಿಂದ ಶ್ರವಣಾದಿಯೂ ಇಲ್ಲ. ಶರೀರವಿಲ್ಲವಾದರೆ ಶಿಲೆಯಂತೆ ಸಾತ್ಮಕತ್ವವೂ ಇಲ್ಲ ಎಂದಾಶಂಕಿಸಿದರೆ) ಗೀತಾತ್=ಗಾನದ್ವೆಶೆಯಿಂದ, ಪುಷ್ಪಫಲಾವಾಪ್ತಿಃ=[ವೃಕ್ಷಕ್ಕೂ] ಪುಷ್ಪಫಲಗಳಪ್ರಾಪ್ತಿಯು, ದೃಶ್ಯತೇ=ಕಾಣಲ್ಪಡುತ್ತದೆ. (ಅದರಿಂದ ಶ್ರವಣವು ಅನುಮಿತವಾಗುತ್ತದೆ. ವಿಮತಃ ಶ್ರವಣವಾನ್ ಗೀತಸಾನ್ನಿಧ್ಯೇ ಸತಿಲಬ್ಧವಿಕಾಸತ್ವಾತ್ ರಾಜಾದಿವತ್=ವಿವಾದವಿಷಯೀಭೂತವಾದ ವೃಕ್ಷವು ಗಾನಶ್ರವಣವುಳ್ಳದ್ದು ಗಾನಸಾನ್ನಿಧ್ಯವಿರುತ್ತಿರಲು ವಿಕಾಸವನ್ನು

ಹೊಂದಿರುವುದರಿಂದ ರಾಜಾದಿಗಳಂತೆಯೇ ಶ್ರವಣದಿಂದ ಶ್ರೋತ್ರವಿದೆ. ಎಂದನುಮಿತ ವಾಗುತ್ತದೆ.) ಸ್ಪರ್ಶಾತ್=ಶೀತೋಷ್ಣ ಸ್ಪರ್ಶ ವಿಶೇಷದ್ದೆಶೆಯಿಂದ, ಕಾರ್ಶ್ಯಂ=ಕೃಶತ್ವವು, ದೃಶ್ಯತೇ ಕಾಣಲ್ಪಡುತ್ತದೆ. (ಅದರಿಂದ ಕೋಮಲವಾದ ಶರೀರದಂತೆ ಸ್ಪರ್ಶಜ್ಞಾನವು ಅನುಮಿತವಾಗುತ್ತದೆ. ಅದರಿಂದ ತ್ವಗಿಂದ್ರಿಯುವಿದೆ ಎಂದು ತಿಳಿಯುತ್ತದೆ.) ರಸಾತ್=ಉದಕಾದಿ ರಸದ್ದೆಶೆಯಿಂದ, ಸ್ಥಿತಿಃ=ಅವಸ್ಥಿತಿಯು (ಒಣಗದೆ ಇರುವಿಕೆಯು) ದೃಶ್ಯತೇ=ಕಾಣಲ್ಪಡುತ್ತದೆ. ಅದರಿಂದ ಸಮ್ಮತ ದೇಹದಂತೆ ರಸಜ್ಞಾನವು. ಅದರಿಂದ ರಸನೇಂದ್ರಿಯುವಿದೆ ಎಂದು ಅನುಮಿತವಾಗುತ್ತದೆ.) ವೃಕ್ಷಸ್ಯ=ತಿಲಕವೃಕ್ಷಕ್ಕೆ ಕಮನೀಯ ಸ್ತ್ರೀಯನ್ನು ನೋಡಿರುವುದರಿಂದ ಉತ್ಕೋರಕತ್ವವು, ದೃಶ್ಯತೇ=ಕಾಣಲ್ಪಡುತ್ತದೆ. (ಅದರಿಂದ ದರ್ಶನ ಕಾಮುಗಳು, ಅದರಿಂದ ನಯನ ಮನಸ್ಸುಗಳು ಸಿದ್ಧಿಸುತ್ತವೆ.) ಅಪಿದೃಶ್ಯಂತೇ=ಮತ್ತು ಧೂಪೋಪಯೋಗದಿಂದ ಅತಿಶಯವಾಗಿ ಕಂಡದ್ರಿಂದ ಘ್ರಾಣಸಿದ್ಧಿಯು ಇತ್ಯಾದಿಗಳು ಕಾಣಲ್ಪಡುತ್ತವೆ. ಹೀಗೆ ಪ್ರಸಿದ್ಧವಾದ ನಮ್ಮಗಳ ಶರೀರದಿಂದ ಇಂದ್ರಿಯಾದಿ ಮತ್ವವಿಷಯದಲ್ಲಿ ವಿಶೇಷವು ಕಾಣದಿರುವುದರಿಂದ ಸ್ಥಾವರಗಳಾದ ವೃಕ್ಷಾದಿಗಳಿಗೆ ಅನಾತ್ಮತಾ=ಅನಾತ್ಮತ್ವವು, ನ ಭವೇತ್=ಸಿದ್ಧಿಸಲಾರದು. ('ವಕ್ತಿಸ್ವಪ್ರಭವಮಾತ್ಮಾನಂ' ಇತ್ಯಾದಿಗಳಲ್ಲಿ ಹೇಳಿದ ಪ್ರಮೇಯವು ಸೂತ್ರದಲ್ಲಿ ಹೇಳಲ್ಪಡದೆ ಇದ್ದದ್ದು ಏಕೆ ಹೇಳಲ್ಪಟ್ಟದೆ ಎನ್ನುವ ಮಂದಾಶಂಕೆಯನ್ನು ನಿವಾರಿಸುವುದಕ್ಕಾಗಿ ಈ ಸೂತ್ರದಲ್ಲಿ ಹೇಳಿದ್ದೇ ಎಂದು ತೋರಿಸುತ್ತಾರೆ.) ಏವಂಚ=ಅಂತೂ, ಆತ್ಮಾಕಾತ್ಸ್ನ್ಯಂ ಇತಿ=ಆತ್ಮಾಕಾತ್ಸ್ನ್ಯ ಇದೇ ಮೊದಲಾದ ಮೂರು ಸೂತ್ರಗಳನ್ನು, ತತಏವ=ಹೇಳಿದ ಅರ್ಥವನ್ನು ಪ್ರತಿಪಾದಿಸುವುದಕ್ಕಾಗಿಯೇ, ವೇದವಿತ್=ವೇದವ್ಯಾಸರು, ಆಹ=ಹೇಳಿದರು ॥ ೨೬೨ ॥ ೨೬೩ ॥ ೨೬೪ ॥ ॥ ೨೬೫ ॥ ಸೂ ॥ ೩೩ ॥ ೩೪ ॥ ೩೫ ॥ ೩೬ ॥ ಅಧಿ ॥ ೧೦ ॥

**ನೈಕಸ್ಮಿನ್ನಧಿಕರಣವು ಸಮಾಪ್ತವಾಯಿತು.**



# ಪಶುಪತ್ಯಧಿಕರಣವು

## "ಓಂ ಪತ್ಯುರಸಾಮಂಜಸ್ಯಾತ್ ಓಂ" ॥ ಸೂ, ೩೭ ॥

ಪಶುಪತಿಗೆ ಜಗತ್ಕಾರಣತ್ವವು ಯುಕ್ತವಲ್ಲ. ಪಾರತಂತ್ರ್ಯ, ಜನನ, ಮರಣ ಮೊದಲಾದ ದೋಷಗಳು ಇದ್ದಪ್ರಯುಕ್ತ, ಆ ದೋಷಗಳಾದರೂ ಪಶುಪತಿಗೆ ಶ್ರುತ್ಯಾದಿ ಸಿದ್ಧವಾಗಿವೆ. ಮಹಾದೇವನಿಗೆ ಸರ್ವೋತ್ತಮತ್ವವನ್ನು ಹೇಳುವವರ ಮತವನ್ನು ತಿರಸ್ಕರಿಸುತ್ತಾರೆ. ಅವರು ೧ ಶೈವರು, ೨ ಪಾಶುಪತರು, ೩ ಕಾಲಾಮುಖರು, ೪ ಮಹಾವ್ರತರು ಎಂದು ನಾಲ್ಕು ವಿಧದಿಯವರು. ಅವರಲ್ಲಿ ಅವಾಂತರ ಭೇದವಿದ್ದರೂ, ಆ ಎಲ್ಲಾ ಮತವೂ, ವೇದವಾದಕ್ಕೆ ಅತಿ ವಿರುದ್ಧವಾಗಿರುವುದರಿಂದ ಸಾಧಾರಣ ಪ್ರಮೇಯವನ್ನೇ ತಿರಸ್ಕರಿಸುವುದಕ್ಕಾಗಿ ಅನುವಾದ ಮಾಡುತ್ತಾರೆ—

**ಮೂ ॥ ಸರ್ವಜ್ಞತ್ವಾದಿಕೈಸ್ಸರ್ವೈರ್ಗುಣೈರ್ಯುಕ್ತಂ ಸದಾಶಿವಂ ।**
**ಜಗದ್ವಿಚಿತ್ರರಚನಾಕರ್ತಾರಂ ದೋಷವರ್ಜಿತಂ ॥ ೨೬೬ ॥**

**ಆಹುಃ ಪಾಶುಪತಾಸ್ತಚ್ಚ ಬಹುಶ್ರುತಿ ವಿರೋಧತಃ ।**
**ನೋಪಾದೇಯಂ ಮತಂ ಹ್ಯಸ್ಯ ದೇವಸ್ಯಸ್ತುಹಿಗರ್ತಗಂ ॥ ೨೬೭ ॥**
**ಉತ್ಸಿಷೇಷ ಶಿರಸ್ತಸ್ಯ ಗೃಣೀಷೇ ಸತ್ಪತಿಂ ಪದಂ ।**
**ಯದ್ವಿಷ್ಣೋರುಪಮಂ ಹಂತುಂ ರುದ್ರವಾಕ್ಯಸ್ಯತೇ ಮಯಾ ॥ ೨೬೮ ॥**
**ಧನುರ್ಯಗಂ ಕಾಮಯೇ ತಂತಮುಗ್ರಂ ಮಾ ಶಿಶ್ನದೇವತಾಃ ।**
**ಘ್ನಂಛಿಶ್ನ ದೇವಾನೇಕೋಸಾವಾಸೀನ್ನಾರಾಯಣಃ ಪರಃ ॥ ೨೬೯ ॥**
**ತಸ್ಮಾದ್ರುದ್ರಃ ಸಂಪ್ರಸಾದಶ್ಚಾಭೂತಾಂ ವೈಷ್ಣವಂ ಮುಖಂ ।**
**ಯಜ್ಞೇನ ಯಜ್ಞಮಯಜಂತಾಬಧ್ನನ್ಪುರುಷಂ ಪಶುಂ ॥ ೨೭೦ ॥**
**ಯೋ ಭೂತಾನಾಮಧಿಪತೀರುದ್ರಸ್ತಂತಿಚರೋ ವೃಷಾ ।**
**ಇತ್ಯಾದಿ ಶ್ರುತಿಸಾಮರ್ಥ್ಯಾತ್ಪಾರತಂತ್ರ್ಯಂ ಜನಿರ್ಮೃತಿಃ ॥ ೨೭೧ ॥**
**ಪರಾಧೀನಪದಪ್ರಾಪ್ತಿರಜ್ಞತ್ವಂ ಪ್ರಲಯೋಽಭವಃ ।**
**ಪ್ರತೀಯಂತೇ ಸದೋಷತ್ವಾನ್ನೇಶಃ ಪಶುಪತಿಸ್ತತಃ ॥ ೨೭೨ ॥**

**ಅ ॥** ಪಾಶುಪತಾಃ=ಪಶುಪತಿಗೆ ಸರ್ವೋತ್ತಮತ್ವವನ್ನು ಹೇಳುವ ನಾಲ್ಕು ಮಂದಿಯೂ ಕೂಡ, ಸದಾಶಿವಂ=ರುದ್ರನನ್ನು, ಸರ್ವಜ್ಞತ್ವಾದಿಕೈಃ=ಸರ್ವಜ್ಞತ್ವ ಮೊದಲಾದ, ಸರ್ವೈಃ= ಎಲ್ಲಾ, ಗುಣೈಃ=ಗುಣಗಳಿಂದ, ಯುಕ್ತಂ=ಕೂಡಿದವನನ್ನಾಗಿಯೂ, ಜಗದ್ವಿಚಿತ್ರರಚನಾ ಕರ್ತಾರಂ=ಪ್ರಪಂಚದ ವಿಚಿತ್ರವಾದ ನಿರ್ಮಾಣವನ್ನು ಮಾಡತಕ್ಕವನನ್ನಾಗಿಯೂ, ದೋಷ ವರ್ಜಿತಂ=ಅಜ್ಞಾನ ಮೊದಲಾದ ದೋಷಗಳಿಂದ ವಿರಹಿತನನ್ನಾಗಿಯೂ, ಆಹುಃ=ಹೇಳು ತ್ತಾರೆ. (ಈ ಮತವನ್ನು ದೂಷಿಸುವುದಕ್ಕಾಗಿ '**ಪತ್ಯುರಸಾಮಂಜಸ್ಯಾತ್**' ಎನ್ನುವ ಸೂತ್ರದ ತಾತ್ಪರ್ಯವನ್ನು ಹೇಳುತ್ತಾರೆ.) ತಚ್ಚ ಮತಂ=ಪಶುಪತಿಗೆ ಸರ್ವ ಜಗತ್ಕಾರಣತ್ವಾದಿ ಗಳನ್ನು ಪ್ರತಿಪಾದಿಸತಕ್ಕ ಮತವು, ಬಹುಶ್ರುತಿವಿರೋಧತಃ=ಅನೇಕ ಶ್ರುತಿಗಳ ವಿರೋಧವಿದ್ದು ದರಿಂದ, ಹಿ=ನಿಶ್ಚಯವಾಗಿಯೂ, ನೋಪಾದೇಯಂ=ಸ್ವೀಕರಿಸಕೂಡದು. (ಆ ವಿರೋಧಿ ಶ್ರುತಿಗಳು ಯಾವವು ಎಂದರೆ ಅವುಗಳನ್ನುದಾಹರಿಸುತ್ತಾರೆ.) (೧) ಅಸ್ಯ ದೇವಸ್ಯ=ಈ ವಿಷ್ಣುವಿನ, (ಇದರಿಂದ ಈ ಶ್ರುತಿಯು ಸಂಗೃಹೀತವಾಯಿತು. '**ಅಸ್ಯ ದೇವಸ್ಯ ಮೀಳ್ಹುಷೋ ವಯಾ ವಿಷ್ಣೋರೇಷಸ್ಯ ಪ್ರಭೃಥೇ ಹವಿರ್ಭಿಃ । ವಿದೇಹಿ ರುದ್ರೋ ರುದ್ರಿಯಂ ಮಹಿತ್ವಂ ಯಾಸಿಷ್ಟಂ ವರ್ತಿರಶ್ವಿನಾವಿರಾವತ್** = (ಋಗ್ವೇದ ಅಷ್ಟಕ ೫. ಅಧ್ಯಾ. ೪. ವರ್ಗ ೭) ಅಭೀಷ್ಟಸೇಚಕನಾದ, ಸ್ವೇಚ್ಛಾರೂಪನಾದ ಶ್ರೀ ವಿಷ್ಣುವಿನ ಪೂಜೆಯು ರುದ್ರನಿಂದ ಹವಿಸ್ಸುಗಳಿಂದ ಮಾಡಲ್ಪಡುತ್ತಿರಲು ಬಂಧಕನಾದ ರುದ್ರನು ಹೇಗೆ ರುದ್ರ ಪದವಿಯನ್ನು ಹೊಂದಿರುವನೋ, ಹಾಗೆಯೇ ಅಶ್ವಿನೀ ದೇವತೆಗಳಿರಾ ನೀವೂ ಕೂಡ ಪ್ರಶಸ್ತಾನ್ನವುಳ್ಳ ವರ್ತನ ವನ್ನು ಹೊಂದುವಿರಿ. ಅಂತೂ ಇದರಿಂದ ರುದ್ರನಿಗೆ ಪರಾಧೀನವಾದ ಪದಪ್ರಾಪ್ತಿಯೆಂದು ಪ್ರತೀತ ವಾಗುತ್ತದೆ.) (೨) ಸ್ತುಹಿಗರ್ತಗಂ । ಗರ್ತಗಂ = ಹೃದಯಗುಹೆಯಲ್ಲಿರತಕ್ಕವನನ್ನೂ, ಸ್ತುಹಿ=ಸ್ತೋತ್ರಮಾಡು, (ಎನ್ನುವುದರಿಂದ '**ಸ್ತುಹಿ ಶ್ರುತಂ ಗರ್ತಸದಂ ಯುವಾನಂ ಮೃಗಂ ನ ಭೀಮಮುಪಹತ್ನುಮುಗ್ರಂ। ಮೃಳಾಜರಿತ್ರೇ ರುದ್ರಸ್ತವಾನೋಽನ್ಯಂ ತೇ ಅಸ್ಮನ್ನಿವಪಂತು ಸೇನಾಃ ॥** (ಋಗ್ವೇದ ಅಷ್ಟಕ ೨. ಅಧ್ಯಾ. ೭. ವರ್ಗ ೧೮) ಎಲೋ ರುದ್ರನೇ ನೀನು ಪ್ರಸಿದ್ಧನೂ, ಹೃದಯಗುಹೆಯಲ್ಲಿ ಆವಾಸಮಾಡಿಕೊಂಡು ಇರುವವನೂ, ತರುಣನೂ, ಸಿಂಹದಂತೆ ಭಯಂಕರನೂ, ಕ್ರೂರರಾದ ದೈತ್ಯರನ್ನು ಸಂಹರಿಸುವವನೂ,

ಇಂತಹ ನರಸಿಂಹನನ್ನು ಸ್ತೋತ್ರಮಾಡು. ಹೀಗೆ ಸ್ತೋತ್ರಮಾಡತಕ್ಕ ನೀನು ನಿನ್ನನ್ನು ಸ್ತೋತ್ರ ಮಾಡತಕ್ಕ ನನ್ನನ್ನು ಸುಖಪಡಿಸು. ನಿನ್ನ ಸೈನ್ಯಗಳು ನನ್ನಿಂದ ಭಿನ್ನರಾದವರನ್ನೇ ಸಂಹರಿಸಲಿ. ಇದರಿಂದ ಸ್ತೋತ್ರಮಾಡತಕ್ಕವನಾದುದರಿಂದ ರುದ್ರನಿಗೆ ಪಾರತಂತ್ರ್ಯವು ಪ್ರತೀತವಾಗುತ್ತದೆ.) (೩) 'ಉತ್ಪಿಪೇಷಶಿರಸ್ತಸ್ಯ' ತಸ್ಯ=ರುದ್ರನ, ಶಿರಃ = ಶಿರಸ್ಸನ್ನು, ಉತ್ಪಿಪೇಷ=ಛೇದಿಸಿದನು, (ಇದರಿಂದ, **'ದಿವ್ಯಸ್ಯೈಕಾಧನುರಾರ್ತ್ನಿಃ ಪೃಥಿವ್ಯಾಮುಪರಾಶ್ರಿತಾ । ತಸ್ಯೇಂದ್ರೋ ವಮ್ರಿರೂಪೇಣ ಧನುರ್ಜ್ಯಾಮಚ್ಛಿನತ್ಸ್ವಯಂ । ರುದ್ರಸ್ಯತ್ವೇವ ಧನುರಾರ್ತ್ನಿಃ ಶಿರಃ ಉತ್ಪಿಪೇಷ'** ॥ ಗಲವನ್ನು ಆಶ್ರಯಿಸಿ ಇರತಕ್ಕ ಧನುಸ್ಸುಳ್ಳ ರುದ್ರನ ಶಿರಸ್ಸನ್ನು, ತನ್ನ ಧನುಷ್ಕೋಟಿಯೇ ಛೇದಿಸಿತು. ಆ ರುದ್ರನ ಧನುಸ್ಸಿನ ಹಗ್ಗವನ್ನು ಇಂದ್ರನು ವಮ್ರಿ (ಕೀಟವಿಶೇಷ) ರೂಪದಿಂದ ಛೇದಿಸಿದನು. ಇದರಿಂದ ರುದ್ರನಿಗೆ ಅಜ್ಞತ್ವವೂ ಪಾರತಂತ್ರ್ಯವೂ ಮರಣವೂ ಕೂಡ ಹೇಳಲ್ಪಟ್ಟಿತು.)(೪)'ಗೃಣೀಷೇ,ಸತ್ಪತಿಂ' ಸತ್ಪತಿಂ=ಸಜ್ಜನರಿಗೆ ಸ್ವಾಮಿಯಾದ ಶ್ರೀ ಹರಿಯನ್ನು, ಗೃಣೀಷೇ=ಸ್ತೋತ್ರಮಾಡುತ್ತಿ, (ಇದರಿಂದ **'ಕುಮಾರಶ್ಚಿತ್ಪಿತರಂ ವಂದಮಾನಂ ವಂದಮಾನಂ ಪ್ರತಿನಾನಾಮರುದ್ರೋಪಯಂತಂ । ಭೂರೇರ್ದಾತಾರಂ ಸತ್ಪತಿಂ ಗೃಣೀಷೇ ಸ್ತುತಸ್ತ್ವಂ ಭೇಷಜಾರಾಸ್ಯಸ್ಮೇ'** ॥ (ಋಗ್ವೇದ ಅಷ್ಟಕ ೨ ಅಧ್ಯಾ. ೭ ವರ್ಗ ೧೮) ಎಲೋ ರುದ್ರನೇ ಪುತ್ರನಾದ ನೀನು ಜಗತ್ತನ್ನು ಮೋಹಿಸುವುದಕ್ಕಾಗಿ ಕೈಲಾಸವನ್ನು ಕುರಿತು ಹೋದ ನಿನ್ನನ್ನು ನಮಸ್ಕರಿಸತಕ್ಕ ತಂದೆಯಾದ ಕೃಷ್ಣನನ್ನು ನಮಸ್ಕರಿಸಿರುತ್ತಿ. ಕೃಷ್ಣನಿಂದ ಸ್ತೋತ್ರಮಾಡಲ್ಪಟ್ಟ ನೀನು ಪುರುಷಾರ್ಥವನ್ನು ಕೊಡತಕ್ಕ ಸತ್ಪತಿಯನ್ನು ಸ್ತೋತ್ರಮಾಡುತ್ತಿ. ಇಂತಹ ನೀನು ನಮ್ಮಿಂದ ಸ್ತುತಿಸಲ್ಪಟ್ಟವನಾಗಿ ನಮಗೋಸ್ಕರ ಸಂಸಾರವ್ಯಾಧಿಗಳನ್ನು ನಿರಾಕರಿಸತಕ್ಕ ಜ್ಞಾನಗಳನ್ನು ಕೊಡು. ಇದರಿಂದಲೂ ಪಾರತಂತ್ರ್ಯವೂ ಜನನವೂ ಹೇಳಲ್ಪಟ್ಟಿತು.) (೫) 'ಪದಂ ಯದ್ವಿಷ್ಣೋರುಪಮಂ' ಉಪಮಂ=ವಿಷ್ಣುವಿನ ಸಮೀಪದಲ್ಲಿ ಪಾದಸಂವಹನವನ್ನು ಮಾಡಿಕೊಂಡು ಇರತಕ್ಕ ಲಕ್ಷ್ಮಿಯುಳ್ಳ, ವಿಷ್ಣೋಃ=ಶ್ರೀ ಹರಿಯ, ಯತ್=ಯಾವ, ಪದಂ= ಪಾದಕಮಲವನ್ನು (ಚತುರ್ಮುಖ ಬ್ರಹ್ಮರು ತೊಳೆದುಕೊಂಡು ಇರುತ್ತಾರೆ,) ಇದರಿಂದ **'ತವಶ್ರಿಯೇ ಮರುತೋಮರ್ಜಯಂತ ರುದ್ರಯತ್ತೇ ಜನಿಮ ಚಾರುಚಿತ್ರಂ । ಪದಂ ಯದ್ವಿಷ್ಣೋರುಪಮಂ ನಿಧಾಯಿ ತೇನ ಪಾಸಿ ಗುಹ್ಯಂ ನಾಮಗೋನಾಂ'** ॥ (ಋಗ್ವೇದ ಅಷ್ಟಕ ೩ ಅಧ್ಯಾ. ೮ ವರ್ಗ ೧೬) ಎಲೋ ರುದ್ರನೇ ಯಾವ ಚತರ್ಮುಖಬ್ರಹ್ಮರ ದ್ವೇಶಿಯಿಂದ ನಿನಗೆ ಉತ್ಪತ್ತಿಯಾಗಿಯದೋ, ಅಂತಹ ಭೂತ, ವರ್ತಮಾನ, ಚತುರ್ಮುಖ ಬ್ರಹ್ಮರು ನಿನ್ನ ಸಂಪತ್ತಿಗಾಗಿ ಅತಿಸುಂದರವೂ ಆಶ್ಚರ್ಯಕರವೂ, ಸಮೀಪದಲ್ಲಿ ಲಕ್ಷ್ಮೀಸಮೇತನಾದ ಶ್ರೀ ವಿಷ್ಣುವಿನ ಯಾವ ಪಾದಕಮಲವನ್ನು ಪ್ರಕ್ಷಾಳನಮಾಡುತ್ತಾ ಇರುತ್ತಾರೋ ಅಂತಹ ಪಾದಕಮಲವು ನಿನ್ನಿಂದ ಹೃದಯದಲ್ಲಿ ಸ್ಥಾಪಿಸಲ್ಪಟ್ಟಿತು. ಆ ಕಾರಣದಿಂದ ನೀನು ವಚನಗಳ ಮಧ್ಯದಲ್ಲಿ ನಾರಾಯಣನೆನ್ನುವ ಗೋಪ್ಯನಾಮಧೇಯವನ್ನು ಜಪೋಪದೇಶಾದಿಗಳಿಂದ ರಕ್ಷಿಸುತ್ತಿ. ಇದರಿಂದ ಪರಾಧೀನಪದಪ್ರಾಪ್ತಿಯೂ ಜನನವೂ ಪಾರತಂತ್ರ್ಯವೂ ಉಕ್ತವಾಯಿತು.) (೬) 'ಹಂತುಂ ರುದ್ರಮಾಕೃಷ್ಯತೇ ಮಯಾ ಧನುಃ । ರುದ್ರಂ=ರುದ್ರನನ್ನು, ಹಂತುಂ= ಕೊಲ್ಲುವುದಕ್ಕಾಗಿ, ಮಯಾ=ನನ್ನಿಂದ, ಧನುಃ = ಧನುಸ್ಸು, ಆಕೃಷ್ಯತೇ=ಸೆಳೆಯಲ್ಪಡುತ್ತದೆ. (ಇದರಿಂದ **'ಅಹಂ ರುದ್ರಾಯ ಧನುರಾತನೋಮಿ ಬ್ರಹ್ಮದ್ವಿಷೇ ಶರವೇ ಹಂತವಾ ಉ'** (ಋಗ್ವೇದ ಅಷ್ಟಕ ೮. ಅಧ್ಯಾ. ೭. ವರ್ಗ. ೧೨.) ನಾನು ಬ್ರಹ್ಮದ್ವೇಷಿಗಳಾದ ದೈತ್ಯರನ್ನು ಸಂಹರಿಸತಕ್ಕ ರುದ್ರನನ್ನು ಕೊಲ್ಲುವುದಕ್ಕಾಗಿಯೇ ಪ್ರಲಯಕಾಲದಲ್ಲಿ ಧನುಸ್ಸನ್ನು ವಿಸ್ತರಿಸುವೆನು. ಇದರಿಂದಲೂ ರುದ್ರನಿಗೆ ಮರಣವು ಹೇಳಲ್ಪಟ್ಟಿತು. (೭) ಯಂ ಕಾಮಯೇ

ತಂತಮುಗ್ರಂ=ಯಾರು ಯಾರನ್ನು ಉಗ್ರನನ್ನಾಗಿ ಮಾಡಲಿಚ್ಛಿಸುವನೋ ಅವರವರನ್ನು ಉಗ್ರನನ್ನಾಗಿ ಮಾಡುವೆನು, (ಇದರಿಂದ **ಯಂ ಕಾಮಯೇ ತಂತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಂ |** (ಋಗ್ವೇದ ಅಷ್ಟಕ ೮, ಅಧ್ಯಾ. ೭, ವ. ೧೨.) ಯಾರು ಯಾರನ್ನ ಉಗ್ರನನ್ನಾಗಿ ಮಾಡಲಿಕ್ಕೆ ಇಚ್ಛಿಸುವೆನೋ ಆತನನ್ನು ಉಗ್ರನನ್ನಾಗಿ ಮಾಡುತ್ತೇನೆ. ಯಾರನ್ನು ಬ್ರಹ್ಮನನ್ನು ಮಾಡಲಿಚ್ಛಿಸುತ್ತೇನೋ ಆತನನ್ನು ಬ್ರಹ್ಮನನ್ನು ಮಾಡುವೆನು, ಹೀಗೆಯೇ ಋಷಿಯನ್ನಾಗಿಯೂ ಮಾಡುವೆನು, ಒಳ್ಳೇ ಜ್ಞಾನಿಯನ್ನಾಗಿಯೂ ಮಾಡುವೆನು, ಇದರಿಂದ ರುದ್ರಾದಿ ಪದಪ್ರಾಪ್ತಿಯು ಪರಾಧೀನವಾದುದು ಎಂದುಕ್ತವಾಯಿತು.) (೮) ಶಿಶ್ನದೇವತಾಃ=ಗುಹ್ಯಾಭಿಮಾನಿಗಳಾದ ದೇವತೆಗಳು, ಮಾ=ತಿಳಿಯಲಿಲ್ಲ, (ಇದರಿಂದ **'ಮಾಶಿಶ್ನದೇವಾ ಅಪಿ ಗುಃ ಋತಂ ನಃ'** (ಋ. ಅಷ್ಟ. ೫. ಅಧ್ಯಾ. ೩ ವ. ೩.) ಭೂತಭವಿಷ್ಯದ್ವರ್ತಮಾನರಾದ ಗುಹ್ಯಾಭಿಮಾನಿಗಳಾದ ರುದ್ರರೂ ಕೂಡ ನಮ್ಮಿಂದ ಉಪಾಸ್ಯನಾದ ಜ್ಞಾನರೂಪನಾದ ಬ್ರಹ್ಮನನ್ನು, ತಿಳಿಯಲಿಲ್ಲ. ಇದರಿಂದ ಗುಹ್ಯಾಭಿಮಾನಿಗಳಾದ ರುದ್ರರಿಗೆ ಅಜ್ಞತ್ವವು ಹೇಳಲ್ಪಟ್ಟಿತು. ಸ್ಕಾಂದದಲ್ಲಿಯೂ ಹೇಳಲ್ಪಟ್ಟದೆ. **'ನ ತ್ವಂ ವೇತ್ಸಿನವೇತ್ತೀಂದ್ರೋ ನಾಹಂ ವೇದ್ಮಿ ನ ಶಂಕರಃ | ವೇತ್ತಿ ಪಾರಂ ಮಹತ್ವಸ್ಯ ಹರೇರದ್ಭುತಕರ್ಮಣಃ |** ಎಂದು) (೯) 'ಘ್ನನ್ ಶಿಶ್ನದೇವಾನ್' ಶಿಶ್ನದೇವಾನ್=ಗುಹ್ಯಾಭಿಮಾನಿಗಳಾದ ದೇವತೆಗಳನ್ನೂ, ಘ್ನನ್=ಸಂಹರಿಸುತ್ತಾ, (ಇದರಿಂದ **'ಘ್ನನ್ ಶಿಶ್ನದೇವಾನಭಿವರ್ಪಸಾಭೂತ್'** ಗುಹ್ಯಾಭಿಮಾನಿಗಳಾದ ದೇವತೆಗಳನ್ನು ಸಂಹರಿಸತಕ್ಕ ಶ್ರೀಹರಿಯು ಬಲದಿಂದ ಎಲ್ಲಾದನ್ನು ತಿರಸ್ಕರಿಸಿದನು. ಇದರಿಂದ ರುದ್ರರಿಗೆ ಮರಣವುಹೇಳಲ್ಪಟ್ಟಿತು.) (೧೦) ಏಕೋಽಸಾವಾಸೀನ್ನಾರಾಯಣಃ ಪರಃ, ಪರಃ=ಸರ್ವೋತ್ತಮನಾದ, ಅಸೌ ನಾರಾಯಣಃ=ಈ ನಾರಾಯಣನು, ಏಕಃ=ಒಬ್ಬನೇ, ಆಸೀತ್=ಇದ್ದನು. (ಇದರಿಂದ **'ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ'** ನಾರಾಯಣನೊಬ್ಬನೇ ಇರುತ್ತಿದ್ದನು, ಬ್ರಹ್ಮನೂ ಇರಲಿಲ್ಲ. ರುದ್ರನೂ ಇರಲಿಲ್ಲ. ಇದರಿಂದ ರುದ್ರಾದಿಗಳು ಪ್ರಲಯಕಾಲದಲ್ಲಿ ಇರಲಿಲ್ಲವೆಂದೂ ಅವರಿಗೆ ಉತ್ಪತ್ತಿಯೂ ಹೇಳಲ್ಪಟ್ಟಿತು.) (೧೧) 'ತಸ್ಮಾದ್ರುದ್ರಃ ಸಂಪ್ರಸಾದಶ್ಚಾಭೂತಾಂ' ತಸ್ಮಾತ್=ಶ್ರೀ ಹರಿಯಿಂದ, ರುದ್ರಃ=ಶಿವನು, ಸಂಪ್ರಸಾದಶ್ಚ=ಚತುರ್ಮುಖನೂ ಕೂಡ, ಅಭೂತಾಂ=ಆದರು. (ಇದರಿಂದ **'ಸ ರುಷ್ಟಃ ಸ ಪ್ರಸನ್ನೋಽಯದ್ರುಷ್ಟೋ ಯತ್ಪ್ರಸನ್ನಸ್ತಸ್ಮಾದ್ರುದ್ರಸಂಪ್ರಸಾದಾವಭೂತಾಂ ನ ಹ್ಯಗ್ರ ಏತಾ ಭೂತಾನಿ'** ಯಾವನು ರೋಷವುಳ್ಳವನೋ ಯಾವನು ಪ್ರಸನ್ನನೋ ಆ ಹರಿಯು ರೋಷವುಳ್ಳವನು, ಆತನು ಪ್ರಸಾದವುಳ್ಳವನು, ಆ ಹರಿಯಿಂದ ರುದ್ರ ಚತುರ್ಮುಖರು ಹುಟ್ಟಿದರು. ಪ್ರಲಯ ಕಾಲದಲ್ಲಿ ಈ ಭೂತಗಳು ಇರಲಿಲ್ಲ. ಇದರಿಂದ,ಶ್ರೀಹರಿಯು ಕೋಪದಿಂದ ರುದ್ರನಿಗೆ ಉತ್ಪತ್ತಿಯೂ, ಪ್ರಸಾದದಿಂದ ಚತುರ್ಮುಖನಿಗೆ ಉತ್ಪತ್ತಿಯು ಉಕ್ತವಾಯಿತು. ಭಾರತದಲ್ಲಿ ಶಾಂತಿ ಪರ್ವದಲ್ಲಿ, **'ನಮೋಽಸ್ತು ಶಯಸೇ ತಸ್ಮೈ ದೇಹಿನಾಂ ಪರಮಾತ್ಮನೇ | ನಾರಾಯಣಾಯ ವಿಶ್ವಾಯ ನಿರ್ಗುಣಾಯ ಗುಣಾತ್ಮನೇ | ಯಸ್ಯ ಪ್ರಸಾದಜೋ ಬ್ರಹ್ಮಾ ರುದ್ರಶ್ಚ ಕ್ರೋಧಸಂಭವಃ | ಏತೌ ದ್ವೌ ವಿಬುಧಶ್ರೇಷ್ಠೌ ಪ್ರಸಾದಕ್ರೋಧಜೌ ಸ್ಮೃತೌ | ತದಾದೇಶಿತಪಂಥಾನೌ ಸೃಷ್ಟಿ ಸಂಹಾರಕಾರಣೌ,** ಹೀಗೆ) (೧೨) ವೈಷ್ಣವಂ ಮುಖಂ=ವೈಷ್ಣವ ಮುಖಶಬ್ದವಾಚ್ಯನಾದ ರುದ್ರನನ್ನು ಅಥವಾ ವಿಷ್ಣೂದ್ದೇಶ್ಯಕವಾದ ಯಾಗದಲ್ಲಿ ಪಶುವಾಗಿ ನಿಯುಕ್ತನಾದ ರುದ್ರನನ್ನು (ಯಶಸ್ಸು ಹೊಂದಿತು) (ಇದರಿಂದ **'ದೇವಾ ವೈ ಸತ್ರಮಾಸತ ಋದ್ಧಿ ಪರಿಮಿತಂ ಯಶಸ್ಕಾಮಾಃ ತೇಷಾಂ ವೈಷ್ಣವಂ ಮುಖಂ ಯಶ ಆಚ್ಛರ್ತ್'** ಯಶಸ್ಕಾಮುಕರಾದ ದೇವತೆಗಳು ಯಾಗವನ್ನು ಮಾಡಿದರು. ದೇವತೆಗಳ ಯಶಸ್ಸು ವಿಷ್ಣುಮುಖದಲ್ಲಿ ಪಶುವಾಗಿ

ನಿಯುಕ್ತನಾದ ರುದ್ರನನ್ನು ಹೊಂದಿತು. ಇದರಿಂದ ರುದ್ರಾದಿಗಳಿಗೆ ಪಾರತಂತ್ರ್ಯವು. (೧೩) ಯಜ್ಞೇನ ಯಜ್ಞಮಯಜಂತ = ದೇವತೆಗಳು ವೈಷ್ಣವ ಮುಖಶಬ್ದವಾಚ್ಯನಾದ ರುದ್ರಾಖ್ಯ ಪಶುವಿನಿಂದ ವಿಷ್ಣುವನ್ನು ಯಾಗಮಾಡಿದರು. (ಇದರಿಂದ '**ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್** I (ಋ. ಅಷ್ಟಕ ೮. ಅಧ್ಯಾ ೪. ವರ್ಗ ೧೮) ಎನ್ನುವ ಶ್ರುತಿಯು ಉಕ್ತವಾಯಿತು. (೧೪) ಅಬಧ್ನನ್ ಪುರುಷಂ ಪಶುಂ = ದೇವತೆಗಳು ಪುರುಷಮಯವಾದ ಯಾಗವನ್ನು ಮಾಡುವವರಾಗಿ ರುದ್ರಾಖ್ಯಪುರುಷಪಶುವನ್ನು ಬಂಧಿಸಿಸಿದರು. (ಇದರಿಂದ '**ದೇವಾ ಯದ್ಯಜ್ಞಂ ತನ್ವಾನಾ ಅಬಧ್ನನ್ ಪುರುಷಂ ಪಶುಂ**' (ಋ. ಅಷ್ಟಕ ೮ ಅಧ್ಯಾ. ೪ ವರ್ಗ ೧೯) ಎಂದುಕ್ತವಾಯಿತು.) (೧೫) ಯಃ ರುದ್ರಃ = ಯಾವ ರುದ್ರನು, ಭೂತಾನಾಂ = ಭೂತಗಳಿಗೆ, ಅಧಿಪತಿಃ = ಅಧಿಪತಿಯೋ, ಸಃ = ಆ ರುದ್ರನು, (ವೃಷಭವು ಪ್ರಸಿದ್ಧತಂತಿಯಲ್ಲಿ ಸಂಚರಿಸುವಂತೆ,) ತಂತಿಚರಃ = ವಿಷ್ಣುವಿನ ಆಜ್ಞಾರೂಪವಾದ ತಂತಿಯಲ್ಲಿ ಸಂಚರಿಸುವವನು. ವೃಷಾ = ಶ್ರೇಷ್ಠನು ಇತ್ಯಾದಿ ಶ್ರುತಿ ಸಾಮರ್ಥ್ಯಾತ್ = ಇದು ಮೊದಲಾದ ಶ್ರುತಿಗಳ ಸಾಮರ್ಥ್ಯದಿಂದ, ಪಾರತಂತ್ರ್ಯಂ = ಪರಾಧೀನತ್ವವೂ, ಜನಿಃ = ಉತ್ಪತ್ತಿಯೂ, ಮೃತಿಃ = ಮರಣವು, ಪರಾಧೀನಪದ ಪ್ರಾಪ್ತಿಃ = ಪರಾಧೀನವಾದ ಪದಪ್ರಾಪ್ತಿಯು, ಅಜ್ಞತ್ವಂ = ಅಜ್ಞಾನಿತ್ವವು, ಪ್ರಲಯೇ ಪ್ರಲಯಕಾಲದಲ್ಲಿ, ಅಭವಃ = ಇಲ್ಲದಿರುವಿಕೆಯು, ಪ್ರತೀಯಂತೇ = (ರುದ್ರಾದಿಗಳಿಗೆ) ತೋರುತ್ತವೆ. ತತಃ = ಶ್ರುತಿಬಲದಿಂದ, ಸದೋಷತ್ವಾತ್ = ದೋಷಗಳಿಂದೊಡಗೂಡಿಕೊಂಡು ಇದ್ದುದರಿಂದ, ಪಶುಪತಿಃ = ರುದ್ರನು, ಈಶಃ = ಸರ್ವಜಗತ್ಕರ್ತನು, ನ = ಆಗುವುದಿಲ್ಲ. (ದೋಷವುಳ್ಳ ಯಜ್ಞದತ್ತನಂತೆ ಜಗತ್ಕರ್ತೃತ್ವವು ಕೂಡುವುದಿಲ್ಲ.) ॥ ೨೬೬ ॥ ೨೬೭ ॥ ೨೬೮ ॥ ॥ ೨೬೯ ॥ ೨೭೦ ॥ ೨೭೧ ॥ ೨೭೨ ॥

ಯುಕ್ತ್ಯಂತರದಿಂದ ರುದ್ರನಿಗೆ ಜಗತ್ಕರ್ತೃತ್ವವನ್ನು ತಿರಸ್ಕರಿಸುವುದಕ್ಕಾಗಿ ಸೂತ್ರವು.

## "ಓಂ ಸಂಬಂಧಾನುಪಪತ್ತೇಶ್ಚ ಓಂ" ॥ ಸೂ. ೩೮ ॥

ಪಶುಪತಿಗೆ ಶರೀರವಿಲ್ಲದಿರುವಪ್ರಯುಕ್ತ ಜಗತ್ತಿನಿಂದ ಕಾರ್ಯಕರ್ತೃಭಾವರೂಪವಾದ ಸಂಬಂಧವು ಕೂಡದಿರುವುದರಿಂದ ಪಶುಪತಿಗೆ ಕರ್ತೃತ್ವವು ಕೂಡುವುದಿಲ್ಲ.

ಈ ಸೂತ್ರದ ಅರ್ಥವನ್ನು ಹೇಳುತ್ತಾರೆ.

**ಮೂ ॥ ಅಶರೀರತ್ವತಸ್ತಸ್ಯ ಸಂಬಂಧೋ ಜಗತಾ ಕ್ವಚಿತ್ ।**
**ಕರ್ತೃತ್ವೇನ ನ ಯುಜ್ಯೇತ ದೇಹಿನೋ ಜ್ಞಾನದೃಷ್ಟಿತಃ ॥ ೨೭೩ ॥**

**ಅ** ॥ ತಸ್ಯ = ಶಿವನಿಗೆ, ಅಶರೀರತ್ವತಃ = ಶರೀರವಿಲ್ಲದಿರುವುದರಿಂದ, ಕ್ವಚಿತ್ = ಯಾವಕಾರ್ಯದಲ್ಲಿಯೂ, ಕರ್ತೃತ್ವೇನ = ಕರ್ತೃತ್ವದಿಂದ, ಜಗತಾ = ಜಗತ್ತಿನಿಂದ, ಸಂಬಂಧಃ = ಕಾರ್ಯಕರ್ತೃತ್ವರೂಪವಾದ ಸಂಬಂಧವು, ನ ಯುಜ್ಯೇತ = ಕೂಡಲಾರದು. (ಹಾಗಾದರೆ ಶರೀರವಿಲ್ಲದವನಿಗೂ ಕರ್ತೃತ್ವವನ್ನು ಒಪ್ಪಿದರೆ ಬಾಧಕವಿಲ್ಲದಿರುವುದರಿಂದ ಶರೀರವಿಲ್ಲದವನಿಗೆ ಕರ್ತೃತ್ವವೇ ಕೂಡಲಿಕ್ಕಿಲ್ಲ ಎನ್ನುವ ಈ ಪ್ರಸಂಗಕ್ಕೆ ವ್ಯಾಪ್ತಿಯಿಲ್ಲ. ಕಾರಕಪ್ರಯೋಕ್ತೃತ್ವವೇ ಕರ್ತೃತ್ವವು, ಶರೀರಿತ್ವವಲ್ಲ ಎಂದಾಶಂಕಿಸಿದರೆ) ದೇಹಿನಃ = ಶರೀರಿಗೇನೇ, ಜ್ಞಾನದೃಷ್ಟಿತಃ = ಜ್ಞಾನದರ್ಶನವಿದ್ದುದರಿಂದ,

ಶಾ || ನ್ಯಾಯಸುಧಾ— (1) ಶಿವೋ ನ ಕರ್ತಾ ಅಶರೀರವತ್ವಾತ್ ಸುಪ್ತಪ್ರಲೀನವತ್ = ಶಿವನು ಕರ್ತನಲ್ಲ ಶರೀರವಿಲ್ಲದಿರುವುದರಿಂದ, ಸುಪ್ತನಂತೆ ಪ್ರಲೀನನಂತೆ. (2)ಹಾಗಾದರೆ ಶಿವನು ೧ ಸಿದ್ಧನಾಗಿದ್ದಾನೋ ೨ ಇಲ್ಲವೋ. ೨ ಸಿದ್ಧನಾಗದಿದ್ದರೆ ಆಶ್ರಯಾಸಿದ್ಧಿಯು. ೧ ಸಿದ್ಧನಾಗಿದ್ದರೆ ಕರ್ತನೆಂದೇ ಸಿದ್ಧನಾಗಿರುವುದರಿಂದ ಧರ್ಮಿಗ್ರಾಹಕ ಪ್ರಮಾಣವಿರೋಧವು. (3) ಹಾಗಾದರೆ ನಿಮ್ಮ ಮತದಲ್ಲಿಯೂ ಶಿವನಿಗೆ ಕರ್ತೃತ್ವವನ್ನೂ ಶರೀರಿತ್ವವನ್ನೂ ಅಂಗೀಕರಿಸುತ್ತೀರಿ, ತಥಾಚ ಅಪಸಿದ್ಧಾಂತ ಅನ್ಯತರಾಸಿದ್ಧಿಗಳು ಬರುವವು ಎಂದರೆ— ಪಾಶುಪತಾದಿ ಶಾಸ್ತ್ರಗಳಿಂದಲಾಗಲೀ ಕೇವಲ ಅನುಮಾನದಿಂದಲಾಗಲೀ ಶಿವನಿಗೆ ಜಗತ್ಕಾರಣತ್ವಾದಿಗಳನ್ನು ಹೇಳುವ ಪರರನ್ನುಕುರಿತು ಅವನು ಅಂಗೀಕರಿಸಿದ ಅಶರೀರತ್ವವನ್ನು ಇಟ್ಟುಕೊಂಡು ಹಿಂದೆ ಹೇಳಿದ ಅತಿಪ್ರಸಂಗಾದಿಗಳನ್ನು ಹೇಳಿದ್ದು. ನಾವು ಶಿವನು ಶ್ರುತ್ಯಾದಿಗಳಿಂದ ಸಿದ್ಧನಾಗಿದ್ದಾನೆಂದಂಗೀಕರಿಸಿರುವುದರಿಂದ ಆಶ್ರಯಾಸಿದ್ಧ್ಯಾದಿಗಳು ಬರುವುದಿಲ್ಲ.ಪರಸಿದ್ಧವಾದ ಅಶರೀರತ್ವದಿಂದ ಕರ್ತೃತ್ವವಿಲ್ಲವೆಂದಾಪಾದಿಸಿರುವುದರಿಂದ ಧರ್ಮಿಗ್ರಾಹಕ ವಿರೋಧಾದಿಗಳು ಇಲ್ಲ. (4) ಹಾಗಾದರೆ ಅಶರೀರನಿಗೂ ಕರ್ತೃತ್ವದಲ್ಲಿ ಬಾಧಕವಿಲ್ಲದಿರುವುದರಿಂದ ಈ ತರ್ಕಕ್ಕೆ ವ್ಯಾಪ್ತಿಯಿಲ್ಲ. ಕಾರಕಪ್ರಯೋಕ್ತೃತ್ವವೇ ಕರ್ತೃತ್ವವು, ಶರೀರಿತ್ವವಲ್ಲ ಎಂದಾಶಂಕಿಸಿದರೆ — ಕಾರಕಪ್ರಯೋಕ್ತೃತ್ವವೇ ಕರ್ತೃತ್ವವು, ಶರೀರಿತ್ವವಲ್ಲವೆನ್ನುವುದು ಸತ್ಯವೇ. ಆಕಾರಕ ಪ್ರಯೋಕ್ತೃತ್ವವು ಪ್ರಯತ್ನವಿಲ್ಲದೆಕೂಡಲಾರದು. ಪ್ರಯತ್ನವು ಇಚ್ಛೆಇಲ್ಲದೆ ಕೂಡಲಾರದು. ಇಚ್ಛೆಯು ಜ್ಞಾನವಿಲ್ಲದೆ ಕೂಡಲಾರದು. ಜ್ಞಾನವು ಶರೀರವಿಲ್ಲದೆ ಕೂಡಲಾರದು. ಶರೀರಿಗಳಿಗೇನೇ ಜಾಗ್ರದ್ದೆಶೆಯಲ್ಲಿ ಜ್ಞಾನವು ಕಂಡದೆ. ಶರೀರಾಭಿಮಾನವಿಲ್ಲದಿರುವುದರಿಂದ ಶರೀರವಿಲ್ಲದಿರುವವರೆಂದು ಅನ್ನಿಸಿಕೊಂಡ ಸುಪ್ತರಿಗೂ ಮತ್ತು ಪ್ರಲೀನರಿಗೂ ಜ್ಞಾನವು ಕಂಡಿಲ್ಲ. ಆದಕಾರಣ ಕರ್ತೃತ್ವಕ್ಕೆವ್ಯಾಪಕವಾದ ಶರೀರವು ಶಿವನಿಂದ ವ್ಯಾವೃತ್ತವಾದುದಾಗಿ ಕರ್ತೃತ್ವವನ್ನು ಹೋಗಲಾಡಿಸುತ್ತದೆ. || ೨೭೩ ||

## "ಓಂ ಅಧಿಷ್ಠಾನಾನುಪಪತ್ತೇಶ್ಚ ಓಂ" || ಸೂ, || ೩೯ ||

ಪೃಥಿವಿ ಮೊದಲಾದ ಅಧಿಷ್ಠಾನವು ಕೂಡದಿರುವುದರಿಂದಲೂ ಪಶುಪತಿಗೆ ಕಾರಣತ್ವವಿಲ್ಲ. ಭೂತಗಳು ನಷ್ಟಗಳಾಗಿರುವುದರಿಂದ ಸೃಷ್ಟ್ಯಾದಿಕಾಲದಲ್ಲಿ ಅವುಗಳು ಇರುವುದಿಲ್ಲ.

ಹಾಗಾದರೆ ಜ್ಞಾನವು ಹುಟುವುದರಲ್ಲಿಯೇ ಶರೀರಕ್ಕೆ ಉಪಯೋಗವು. ಜ್ಞಾನವು ಇಂದ್ರಿಯಗಳಿಂದ ಹುಟ್ಟತಕ್ಕದು. ಇಂದ್ರಿಯಗಳು ಶರೀರಸಂಯೋಗ ನಿಯತವಾದುದು. ಪೂಜ್ಯನಾದ ಶಿವನು ನಿತ್ಯಜ್ಞಾನವುಳ್ಳವನು, ಆತನಿಗೆ ಶರೀರದಿಂದ ಏನುಪ್ರಯೋಜನವು. ಎಂದರೆ, ಹೀಗಾದರೆ ಪ್ರಯತ್ನವು ಹುಟ್ಟುವುದರಲ್ಲಿಯೇ ಇಚ್ಛೆಯು ಉಪಯುಕ್ತವಾಗುವುಗರಿಂದ ನಿತ್ಯಪ್ರಯತ್ನವುಳ್ಳವನಿಗೆ ಇಚ್ಛೆಯೂ ಬಾರದೆಹೋಗಬೇಕಾಗುವುದು. ಹಾಗೆಯೇ ಇಚ್ಛೆಯು ಹುಟ್ಟುವುದರಲ್ಲಿಯೇ ಜ್ಞಾನವು ಉಪಯುಕ್ತವಾಗುವುದರಿಂದ ನಿತ್ಯೇಚ್ಛನಿಗೆ ಜ್ಞಾನವೂ ಬಾರದೆ ಹೋಗಬೇಕಾಗುವುದು. ಮತ್ತು ಈ ಈಶನಿಗೆ ನಿತ್ಯಜ್ಞಾನತ್ವವು ಯಾವುದರಿಂದ ಸಿದ್ಧಿಸುವುದು? ಆಗಮದಿಂದ ಎಂದರೆ ಹಾಗೆ ಹೇಳಕೂಡದು. ಆಗಮಕ್ಕೆ ಪ್ರಾಮಾಣ್ಯವು ಸಿದ್ಧವಾದರೆ ನಿತ್ಯಜ್ಞಾನವುಳ್ಳ ಈಶ್ವರನ ಸಿದ್ಧಿಯಾಗುತ್ತದೆ. ಅಂತಹ ಈಶ್ವರನ ಸಿದ್ಧಿಯಾದರೆ ಆಗಮವು ಈಶ್ವರಪ್ರಣೀತವಾಗಿರುವುದರಿಂದ ಅದಕ್ಕೆ ಪ್ರಾಮಾಣ್ಯವು ಸಿದ್ಧಿಸುವುದು, ಎಂದು ಅನ್ಯೋನ್ಯಾಶ್ರಯ ದೋಷವು ಬರುವುದು. ಈ ದೋಷ ಪರಿಹಾರವನ್ನಾಶಂಕಿಸಿ ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವು.

**"ಓಂ ಕರಣವಚ್ಚೇನ್ನ ಭೋಗಾದಿಭ್ಯಃ ಓಂ"** ॥ ಸೂ, ॥ ೪೦ ॥

ಅಸ್ಮದಾದಿಗಳ ಶರೀರದಂತೆ ಈ ಕಾರಕಗಳ ಸಮುದಾಯವು ಸಾಕ್ಷಾತ್ಪ್ರಯತ್ನಾಧಿಷ್ಠೇಯವಾಗಿರುವುದರಿಂದ ಪಶುಪತಿಗೆ ಶರೀರರೂಪವು ಅಧಿಷ್ಠಾನರೂಪವೂ ಆಗಿದೆ. ಆದಕಾರಣ ಸಂಬಂಧಾನುಪಪತ್ತ್ಯಾದಿಗಳು ಇಲ್ಲ. ಎಂದರೆ ಹೀಗೆಹೇಳಕೂಡದು. ಏಕೆಂದರೆ—ಕಾರಕಗಳ ಸಮುದಾಯದಲ್ಲಿದ್ದ ಉತ್ಪತ್ತಿವಿನಾಶಪ್ರಯುಕ್ತ ಈಶನಿಗೆ ಸುಖ ದುಃಖಾನುಭವ ರೂಪವಾದ ಭೋಗ, ಉತ್ಪತ್ತಿ, ಮರಣಾಖ್ಯದೋಷಗಳು ಬರಬೇಕಾಗುವವು.

**"ಓಂ ಅಂತವತ್ತ್ವಮಸರ್ವಜ್ಞತಾ ವಾ ಓಂ"** ॥ ಸೂ, ॥ ೪೧ ॥

ರುದ್ರನಿಗೆ ಶರೀರವು ಇದೆಯೋ ಇಲ್ಲವೋ, ಇದ್ದರೆ ರುದ್ರನಿಗೆ ನಾಶವು ಬರಬೇಕಾಗುವುದು. ಇಲ್ಲವಾದರೆ ಶರೀರವಿಲ್ಲದಿರುವವನಿಗೆ ಜ್ಞಾನವೇ ಇಲ್ಲದಿರುವುದರಿಂದ ಸಾರ್ವಜ್ಞ್ಯವು ಬಾರದೇಹೋಗಬೇಕಾಗುವುದು.

**'ಕರಣವಚ್ಚೇನ್ನ ಭೋಗಾದಿಭ್ಯಃ'** ಎನ್ನುವುದನ್ನು ವ್ಯಾಖ್ಯಾನಮಾಡುತ್ತಾರೆ.

**ಮೂ ॥ ನ ಚ ದೇಹಾದಿವದ್ವಿಶ್ವಮಸ್ಯ ಸ್ಯಾದ್ಭೋಗಸಂಭವಾತ್** ॥ ೨೭೪ ॥

**ಅ** ॥ ಅಸ್ಯ=ಶಿವನಿಗೆ, ವಿಶ್ವಂ=ಜಗತ್ತು, ದೇಹಾದಿವತ್ = ಶರೀರ ಇಂದ್ರಿಯಾದಿಗಳಂತೆ, ನ ಸ್ಯಾತ್=ಆಗಲಾರದು. ಭೋಗಸಂಭವಾತ್=ಭೋಗವು ಬರಬೇಕಾಗಿರುವುದರಿಂದ.

**ತಾ** ॥ ಶರೀರವಿಲ್ಲದಿರುವುದರಿಂದ ರುದ್ರನಿಗೆ ಕರ್ತೃತ್ವವು ಕೂಡುವುದಿಲ್ಲವೆಂದು ಯಾವುದು ಹೇಳಲ್ಪಟ್ಟದೋ ಅದು ಅಯುಕ್ತವು. ಕುಲಾಲ ಮೊದಲಾದ ಕರ್ತೃಗಳು ದಂಡಾದಿಗಳನ್ನು ಸಾಕ್ಷಾತ್ತಾಗಿ ಪ್ರಯತ್ನದಿಂದ ಹಿಡಿಯಲಿಕ್ಕೆ ಅಸಮರ್ಥರಾಗಿ ಅದರ ಅಧಿಷ್ಠಾನಕ್ಕಾಗಿ ಸಾಕ್ಷಾತ್ಪ್ರಯತ್ನಾಧಿಷ್ಠೇಯವಾದ ಶರೀರವನ್ನು ಅಪೇಕ್ಷಿಸುತ್ತಾರೆ. ಈ ಶಿವನಿಗೆ ಆದರೂ ಜಗತ್ತೇ (ಕಾರಕಸಮುದಾಯವೇ) ಶರೀರದಂತೆ ಆಗುವುದು. ಅಂದರೆ ಸಾಕ್ಷಾತ್ಪ್ರಯತ್ನಾಧಿಷ್ಠೇಯವಾಗುವುದು. ಮತ್ತೊಂದು ಶರೀರವು ಏತಕ್ಕೆ? ಆದುದರಿಂದಲೇ ಶಿವನು ವಿಶ್ವಮೂರ್ತಿಯೆಂದು ಹೇಳಲ್ಪಡುತ್ತಾನೆ. ಆದಿಸೃಷ್ಟಿಯಲ್ಲಿ ಕಾರಕಗಳು ಇಲ್ಲವೆಂದೂ ಹೇಳಕೂಡದು. ಅನಾದಿಯಾದ ಮಾಯಾದಿಗಳು ಇವೆ. ಇಲ್ಲವಾದರೆ ಸೃಷ್ಟಿಯು ಕೂಡಲಾರದು. ಎಂದರೆ— ಹೀಗೆ ಹೇಳಕೂಡದು. ಶಿವನಿಗೆ ಇಂದ್ರಿಯಸಮೂಹವು ಸಾಕ್ಷಾತ್ಪ್ರಯತ್ನಾಧಿಷ್ಠೇಯವಾಗಿದ್ದರೆ ಆಗ ಶಿವನಿಗೆ ಸುಖದುಃಖಾನುಭವರೂಪವಾದ ಭೋಗಕ್ಕೆ ಹೇತುವಾಗಬೇಕಾಗುವುದು. ಸಾಕ್ಷಾತ್ಪ್ರಯತ್ನಾಧಿಷ್ಠೇಯವಾದ ಅಸ್ಮದಾದಿಗಳ ಶರೀರದಲ್ಲಿ ಹಾಗೆ ಕಂಡದೆ. ಭೋಗಾದಿಗಳು ಇದ್ದವನಿಗೆ ಈಶ್ವರತ್ವವೇ ಇಲ್ಲ. ಆದುದರಿಂದ ಶಿವನಿಗೆ ಭೋಗಾದಿಗಳು ಬರಬೇಕಾಗಿರುವುದರಿಂದ ಈ ಕಲ್ಪನೆಯು ಯುಕ್ತವಲ್ಲ ॥ ೨೭೪ ॥

ಹೇತ್ವಂತರದಿಂದ ರುದ್ರನಿಗೆ ವಿಶ್ವಕರ್ತೃತ್ವವನ್ನು ನಿರಾಕರಿಸತಕ್ಕ **'ಅಧಿಷ್ಠಾನಾನುಪಪತ್ತೇಶ್ಚ'** ಎನ್ನುವ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ.

**ಮೂ ॥ ಅಧಿಷ್ಠಾನೇ ಸ್ಥಿತಃ ಕರ್ತಾ ಕಾರ್ಯಂ ಕುರ್ವನ್ ಪ್ರತೀಯತೇ ।**
**ನಾಸ್ಯಾಧಿಷ್ಠಾನಯೋಗೋಽಸ್ತಿ ಭೂತಾನಾಂ ಪ್ರಲಯೇ ತದಾ ॥**
॥ ೨೭೫ ॥

**ಅ** ॥ **ಕರ್ತಾ**=ಕುಲಾಲ ಮೊದಲಾದ ಕರ್ತನು, **ಅಧಿಷ್ಠಾನೇ**=ಪೃಥಿವಿ ಮೊದಲಾದ ಅಧಿಷ್ಠಾನದಲ್ಲಿ, **ಸ್ಥಿತಃ**=ಇದ್ದವನಾಗಿಯೇ, **ಕಾರ್ಯಂ**=ಕಾರ್ಯವನ್ನು, **ಕುರ್ವನ್**=ಮಾಡುವವನಾಗಿ, **ಪ್ರತೀಯತೇ**=ತೋರುತ್ತಾನೆ. (ನಿರಧಿಷ್ಠಾನನು ಯಾರೊಬ್ಬನೂ ಯಾವುದನ್ನೂ ಮಾಡತಕ್ಕವನು ತೋರುವುದಿಲ್ಲ.) (ಅದರಿಂದ ಪ್ರಕೃತವೇನಾಯಿತೆಂದರೆ-) **ಅಸ್ಯ**=ಈ ಶಿವನಿಗೆ, **ಭೂತಾನಾಂ**=ಮೊದಲು ಹುಟ್ಟಿದ ಪೃಥಿವಿ ಮೊದಲಾದ ಮಹಾಭೂತಗಳಿಗೆ, **ಪ್ರಲಯೇ**=ನಾಶವಾಗುತ್ತಿರಲು, **ತದಾ**=ಆದಿಸೃಷ್ಟಿ ಸಮಯದಲ್ಲಿ, **ಅಧಿಷ್ಠಾನಯೋಗಃ**=ಅಧಿಷ್ಠಾನಸಂಬಂಧವು, **ನಾಸ್ತಿ**=ಇಲ್ಲ. (ಆದುದರಿಂದ ಕರ್ತೃತ್ವವೂ ಕೂಡ ಶಿವನಿಗೆ ತೋರುವುದಿಲ್ಲ.)

**ತಾ** ॥ (1) ಹಾಗಾದರೆ ೧ 'ಸಂಬಂಧಾನುಪಪತ್ತೇಶ್ಚ' ೨ 'ಅಧಿಷ್ಠಾನಾನುಪಪತ್ತೇಶ್ಚ' ೩ 'ಕರಣವಚ್ಚೇನ್ನ ಭೋಗಾದಿಭ್ಯಃ' ಎಂದು ಸೂತ್ರಕ್ರಮವಿದ್ದರೂ ಇದನ್ನು ಬಿಟ್ಟು ಮಧ್ಯದಲ್ಲಿ 'ಕರಣವಚ್ಚೇನ್ನ ಭೋಗಾದಿಭ್ಯಃ' ಎನ್ನುವುದನ್ನು ವ್ಯಾಖ್ಯಾನಮಾಡಲಿಕ್ಕೆ ಏನು ಕಾರಣವು ಎಂದರೆ-ಸಂಬಂಧಾನುಪಪತ್ತಿ, ಅಧಿಷ್ಠಾನಾನುಪಪತ್ತಿ ಇವು ಎರಡರ ಪರಿಹಾರವು 'ಕರಣವಚ್ಚೇತ್' ಎನ್ನುವುದರಿಂದ ನಿರಾಕರಿಸಲ್ಪಡುವುದು ಎಂದು ತಿಳಿಸುವುದಕ್ಕಾಗಿ (2) ಯಥಾಕ್ರಮದಲ್ಲಿಯೇ ವ್ಯಾಖ್ಯಾನಮಾಡಿದರೆ ಸನ್ನಿಹಿತವಾದ ಅಧಿಷ್ಠಾನಾನುಪಪತ್ತಿಪರಿಹಾರನಿರಾಸಕವೇ ಇದು ಎಂದು ತಿಳಿಯಲ್ಪಡುವುದು.ವ್ಯುತ್ಕ್ರಮದಿಂದ ಎರಡರ ಮಧ್ಯದಲ್ಲಿ ವ್ಯಾಖ್ಯಾನಮಾಡಿದರೆ ಉಭಯಸಂಬಂಧಿಯೆಂದು ತಿಳಿಯಲ್ಪಡುವುದು.ಆ ದಪ್ರಯುಕ್ತವೇ ಭಾಷ್ಯದಲ್ಲಿ '**ಅಧಿಷ್ಠಾನಾದಿರೂಪಂ**' ಎಂದು ಹೇಳಲ್ಪಟ್ಟದೆ.ಇಲ್ಲಿಯಾದರೂ "**ದೇಹಾದಿವತ್**" ಎಂದು ಉಕ್ತವಾಗಿದೆ ॥ ೨೭ ॥

ಹಾಗಾದರೆ ಕುಲಾಲನಿಗೆ ಶರೀರವಿದ್ದುದರಿಂದ ಅಧಿಷ್ಠಾನ ಸಾಪೇಕ್ಷತ್ವವು ಯುಕ್ತವೇ. ಶರೀರವು ಭಾರವುಳ್ಳದ್ದಾಗಿರುವುದರಿಂದ ಅದಕ್ಕೆ ಪತನ ಪ್ರಸಕ್ತಿಯಿದ್ದುದರಿಂದ ಆ ಪತನವನ್ನು ಪ್ರತಿಬಂಧಿಸುವುದಕ್ಕಾಗಿ ಸ್ಪರ್ಶವುಳ್ಳ ಅಧಿಷ್ಠಾನವನ್ನು ಅಪೇಕ್ಷಿಸುತ್ತದೆ. ಶರೀರವಿಲ್ಲದವನಿಗೆ ಕರ್ತೃತ್ವವು ಕೂಡಲಾರದು. ಈಶ್ವರನಿಗಾದರೂ ಶರೀರವೇ ಇಲ್ಲದಿರುವುದರಿಂದ ಅಧಿಷ್ಠಾನವು ಏತಕ್ಕೆ. ಇಹ ಇದಂ ಜಾತಂ ಇತ್ಯಾದಿ ವ್ಯವಹಾರವಾದರೂ ಗಗನಾದಿಗಳನ್ನು ಆಶ್ರಯಿಸಿ ಉಪಪನ್ನವಾಗುತ್ತದೆ. ಎಂದಾಶಂಕಿಸಿದರೆ—

**ಮೂ ॥ ಅದೇಹಶ್ಚೇದಸರ್ವಜ್ಞಃ (ದಸಾವಜ್ಞಃ) ಶಿಲಾಕಾಷ್ಠಾದಿವತ್ಸದಾ ।**
**ದೇಹೀ ಚೇದಂತವಾನೇವ ಯಜ್ಞದತ್ತನಿದರ್ಶನಾತ್ ॥ ೨೮ ॥**

**ಅ** ॥ ಅದೇಹಶ್ಚೇತ್=ಶರೀರವಿಲ್ಲದವನಾದರೆ, **ಶಿಲಾಕಾಷ್ಠಾದಿವತ್** = ಕಲ್ಲು ಕಟ್ಟಿಗೆ ಮೊದಲಾದವುಗಳಂತೆಯೇ, ಸದಾ=ಯಾವಾಗಲೂ, ಅಸರ್ವಜ್ಞಃ=ಸರ್ವವನ್ನು ತಿಳಿದವನಲ್ಲ. (ಅಸೌ=ಈ ಶಿವನು, ಅಜ್ಞಃ=ಏನೂ ತಿಳಿಯದವನು. ಆದುದರಿಂದ ಅವನಿಗೆ ಸಾರ್ವಜ್ಞ್ಯವು ಹೇಗೆ ಸಿದ್ಧಿಸುವುದು ಮತ್ತು ಸರ್ವ ಕರ್ತೃತ್ವವೂ ಹೇಗೆ ತಾನೇ ಸಿದ್ಧಿಸುವುದು?) (ಸರ್ವಥಾ ಸದಾಶಿವನಿಗೆ ಶರೀರವು ಇಲ್ಲವೆಂದಲ್ಲ ಮತ್ತೆ ಕ್ರೀಡಾರ್ಥವಾಗಿ ಶರೀರಗಳನ್ನು ತೆಗೆದುಕೊಳ್ಳುತ್ತಾನೆ. ಆದಕಾರಣ ಈ ಹಿಂದೆಹೇಳಿದ ದೋಷವಿಲ್ಲ. ಲೀಲಾರ್ಥವಾಗಿ ಸ್ವೀಕರಿಸಿದ ಶರೀರವು ಭೋಗಾದಿಗಳ ಪ್ರಾಪ್ತಿಗೆ ಕಾರಣವಾಗದಿರುವುದರಿಂದ ಭೋಗಾದಿ ಪ್ರಾಪ್ತಿಯೂ ಆಗುವುದಿಲ್ಲ; ಎಂದಾಶಂಕಿಸಿದರೆ) **ದೇಹೀ ಚೇತ್** = ಶರೀರವುಳ್ಳವನಾದರೆ, **ಯಜ್ಞದತ್ತನಿದರ್ಶನಾತ್** = ಯಜ್ಞದತ್ತನ ದೃಷ್ಟಾಂತದಿಂದ, ಅಂತವಾನೇವ = ಮರಣವುಳ್ಳವನೂ, ದುಃಖವುಳ್ಳವನೂ, ಆಗುವನು. (ಇದರಿಂದ 'ಓಂ ಅಂತವತ್ವಮಸರ್ವಜ್ಞತಾ ವಾ ಓಂ' ಎನ್ನುವ ಸೂತ್ರವು ವ್ಯಾಖ್ಯಾತವಾಯಿತು.) ॥ ೨೮ ॥

ಹಾಗಾದರೆ ಹೀಗೆ ಶಿವನಿಗೆ ಜಗತ್ಕಾರಣತ್ವವನ್ನು ತಿರಸ್ಕರಿಸುವವರ ಅಭಿಪ್ರಾಯವು ಯಾವುದು? ೧ ಜಗತ್ತಿಗೆ ಕರ್ತನೇ ಇಲ್ಲವೆಂದೋ, ೨ ಅಥವಾ ಶ್ರೀಹರಿಯೇ ಕರ್ತನೆಂದೋ ೧ನೇದ್ದು ಕೂಡಲಾರದು. ಕಾರ್ಯವು ಅಕರ್ತೃಕವು ಎನ್ನುವುದು ವಿರುದ್ಧವು. ಮತ್ತು ಅಪಸಿದ್ಧಾಂತವೂ ಬರುವುದು. ೨ನೇದ್ದು ಕೂಡಲಾರದು. ವಿಷ್ಣುವಿಗೆ ಕರ್ತೃತ್ವವನ್ನು ಅಂಗೀಕರಿಸಿದರೂ ಈ ದೋಷಗಳು ಸಮಾನಗಳಾಗಿರುವುದರಿಂದ ಸ್ವವ್ಯಾಹತಿಯು. ಹೇಗೆಂದರೆ— ಶಿವನಿಗೆ ಜನ್ಮಾದಿ ದೋಷವತ್ವರೂಪವಾದ ಅಸಾಮಂಜಸ್ಯವು ಯಾವುದು ಹೇಳಲ್ಪಟ್ಟದೋ ಅದು ವಿಷ್ಣುವಿನಲ್ಲಿಯೂ '**ಜನಿತೋತವಿಷ್ಣೋಃ**' ಇತ್ಯಾದಿ ಶ್ರುತಿಗಳಲ್ಲಿ ಜನ್ಮಾದಿದೋಷಗಳು ಶ್ರುತಗಳಾಗಿರುವುದರಿಂದ ಸಮಾನವೇ. ಸಂಬಂಧಾನುಪಪತ್ತ್ಯಾದಿಗಳಾದರೂ ಸ್ಪಷ್ಟವೇ ಎಂದಾಶಂಕಿಸಿದರೆ—

**ಮೂ ॥ ನ ಚೈತದಖಿಲಂ ವಿಷ್ಣೌ ಶ್ರುತಿಪ್ರಾಮಾಣ್ಯಗೌರವಾತ್ ।**
**ಮನೋಬುದ್ಧ್ಯಂಗಿತಾಂ ವಿಷ್ಣೋರ್ಲಕ್ಷಯಾಮೋ ಯ ಏವ ಸಃ ।**
**ಸ ಏವ ದೇಹೋ ವಿಜ್ಞಾನಮೈಶ್ವರ್ಯಂ ಶಕ್ತಿರೂರ್ಜಿತಾ ॥ ೨೭೭ ॥**
**ದೇಹೋ ವಿಷ್ಣೋರ್ನತೇ ವಿಷ್ಣೋ ವಾಸುದೇವೋಽಗ್ರತೋಽಭವತ್ ।**
**ಏಕೋ ನಾರಾಯಣಃ ಆಸೀನ್ನ ಬ್ರಹ್ಮಾ ನ ಚ ಶಂಕರಃ ॥ ೨೭೮ ॥**
**ಅಜಸ್ಯ ನಾಭಾವಧ್ಯೇಕಮರ್ಪಿತಂ ಮಾತ್ರಯಾ ಪರಃ ।**
**ಸದ್ದೇಹಃ ಸುಖಗಂಧಶ್ಚ ಜ್ಞಾನಭಾಃ ಸತ್ಪರಾಕ್ರಮಃ ॥ ೨೭೯ ॥**
**ಜ್ಞಾನಜ್ಞಾನಃ ಸುಖಸುಖಃ ಸ ವಿಷ್ಣುಃ ಪರಮೋಽಕ್ಷರಃ ।**
**ಆನಂದ ಏಕ ಏವಾಗ್ರ ಆಸೀನ್ನಾರಾಯಣಃ ಪ್ರಭುಃ ॥ ೨೮೦ ॥**
**ಪ್ರಿಯಂ ತಸ್ಯ ಶಿರೋ ಮೋದಪ್ರಮೋದೌ ಚ ಭುಜೌ ಹರೇಃ ।**
**ಆನಂದೋ ಮಧ್ಯತೋ ಬ್ರಹ್ಮಪುಚ್ಛಂ ನಾನ್ಯದಭೂತ್ಕ್ವಚಿತ್ ॥ ೨೮೧ ॥**
**ಮನಸೋಽಸ್ಯಾಭವದ್ಬ್ರಹ್ಮಾ ಲಲಾಟಾದಪಿ ಶಂಕರಃ ।**
**ಪಕ್ಷಯೋರ್ಗರುಡಃ ಶೇಷೋ ಮುಖಾದಾಸೀತ್ಸ(ಸಸ)ರಸ್ವತೀ ॥ ೨೮೨ ॥**
**ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।**
**ಇತ್ಯಾದಿ ಶ್ರುತಿಸಂದರ್ಭಬಲಾನ್ನಿತ್ಯಗುಣಾತ್ಮನಃ ।**
**ವಿಷ್ಣೋರ್ದೇಹಾಜ್ಜಗತ್ಸರ್ವಮಾವಿರಾಸೀದಿತೀಯತೇ ॥ ೨೮೩ ॥**

ಅ ॥ ಏತತ್ ಅಖಿಲಂ = ಈ ದೋಷಗಳ ಸಮುದಾಯವು, ವಿಷ್ಣೌ = ಶ್ರೀಹರಿಯು ಜಗತ್ತಿಗೆ ಕರ್ತನೆಂದು ಅಂಗೀಕರಿಸಿದರೂ, ನ ಚ = ಸಮಾನವೆಂದು ಹೇಳಕೂಡದು. (ಏಕೆಂದರೆ ಶ್ರುತಿಯಿಂದಲೇ ನಿಖಿಲದೋಷಗಳನ್ನು ಪರಿಹರಿಸಿ ವಿಷ್ಣುವಿಗೆ ಜಗತ್ಕಾರಣತ್ವವು ಪ್ರತಿಪಾದಿತವಾಗಿದೆ.) (ಹಾಗಾದರೆ ಪಶುಪತಿಗೂ ಕೂಡ ಹೀಗೆ ಆಗಮಗಳಿಂದಲೂ ಅನುಮಾನಗಳಿಂದಲೂ ಜಗತ್ಕಾರಣತ್ವವು ಪ್ರತಿಪಾದಿತವೇ ಆಗಿದೆ. ಆದುದರಿಂದ ಏನು ವಿಶೇಷವೆಂದರೆ) ಶ್ರುತಿಪ್ರಾಮಾಣ್ಯಗೌರವಾತ್ = ಪಾಶುಪತಾದ್ಯಾಗಮಗಳಿಂದಲೂ ಶ್ರುತಿಗಳ ಪ್ರಾಮಾಣ್ಯಕ್ಕೆ ಗುರುತ್ವ (ಶ್ರೇಷ್ಠತ್ವ) ಇದ್ದಪ್ರಯುಕ್ತ, (ಶ್ರುತಿಗಳು ಯಾವುವೆಂದರೆ ಅವುಗಳನ್ನುದಾಹರಿಸುತ್ತಾರೆ.) (೧) ವಿಷ್ಣೋಃ = ಶ್ರೀಹರಿಗೆ, ಮನೋಬುದ್ಧ್ಯಂಗಿತಾಂ = ಮನಸ್ಸು-ಬುದ್ಧಿ-ಅಂಗ (ದೇಹ) ಇವುಗಳುಳ್ಳತನವನ್ನು, ಲಕ್ಷಯಾಮಃ = ತಿಳಿಸಿಕೊಡುತ್ತೇವೆ.) ಇದರಿಂದ '**ಬುದ್ಧಿಮನೋಽಂಗಪ್ರತ್ಯಂಗವತ್ತಾಂ ಭಗವತೋ ಲಕ್ಷಯಾಮಹೇ ಬುದ್ಧಿಮಾನ್ ಮನೋವಾನಂಗವಾನ್ ಪ್ರತ್ಯಂಗವಾನ್**'

ಎನ್ನುವ ಶ್ರುತಿಯು.) (೨) ಸಃ=ಪರಬ್ರಹ್ಮನು, ಯ ಏವ=ಯದ್ರೂಪನೇ ಆಗಿರುವನೋ, ದೇಹಃ=ಶರೀರವೂ, ಸ ಏವ=ತದ್ರೂಪವೇ ಆಗಿದೆ. ವಿಜ್ಞಾನಂ=ವಿಜ್ಞಾನಾತ್ಮಕವು, ಐಶ್ವರ್ಯಂ=ಐಶ್ವರ್ಯಸ್ವರೂಪವು, ಊರ್ಜಿತಾ=ಬಲವುಳ್ಳ, ಸರ್ವತ್ರ ಅಪ್ರತಿಬದ್ಧವಾದ, ಶಕ್ತಿಃ=ಶಕ್ತ್ಯಾತ್ಮಕವು, ವಿಷ್ಣೋಃ=ಶ್ರೀ ಹರಿಯ, ದೇಹಃ = ಶರೀರವು, (ಇದರಿಂದ **'ಯದಾತ್ಮಕೋ ಭಗವಾನ್ ತದಾತ್ಮಿಕಾವ್ಯಕ್ತಿಃ ಕಿಮಾತ್ಮಕೋ ಭಗವಾನ್ ಜ್ಞಾನಾತ್ಮಕಃ ಐಶ್ವರ್ಯಾತ್ಮಕಃ ಶಕ್ತ್ಯಾತ್ಮಕಃ'** ಅಂದರೆ ಶ್ರೀ ಹರಿಯು ಜ್ಞಾನಾನಂದಾತ್ಮಕನು ಆಗಿರುವುದರಿಂದ ಅವನ ದೇಹವೂ ಜ್ಞಾನಾನಂದಾದ್ಯಾತ್ಮಕವೇ.) (೩) ವಿಷ್ಣೋ=ಎಲೋ ಶ್ರೀ ಹರಿಯೇ, ತೇ=ನಿನ್ನ, (ಮಹಿಮೆಯ ಅಂತವನ್ನು ಹುಟ್ಟಿದವನಾಗಲೀ ಹುಟ್ಟುವವನಾಗಲೀ) ನ=ಹೊಂದುವುದಿಲ್ಲ. (ಇದರಿಂದ **'ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರ ಮಂತಮಾಪ'** ಎನ್ನುವ ಶ್ರುತಿಯು (ಋ.ಅಷ್ಟಕ ೫ ಅಧ್ಯಾ. ೬ ವರ್ಗ ೨೪)(೪) ವಾಸುದೇವಃ=ವಾಸುದೇವನು, ಅಗ್ರತಃ = ಪ್ರಲಯಕಾಲದಲ್ಲಿ, ಅಭವತ್ = ಇರುತ್ತಿದ್ದನು. (ಇದರಿಂದ **'ವಾಸುದೇವೋ ವಾ ಇದಮಗ್ರ ಆಸೀನ್ನ ಬ್ರಹ್ಮಾ ನ ಚ ಶಂಕರಃ'** ಎನ್ನುವ ಶ್ರುತಿಯು). (೫) ಏಕೋ ನಾರಾಯಣಃ=ನಾರಾಯಣನು ಒಬ್ಬನೇ, ಆಸೀತ್=ಇರುತ್ತಿದ್ದನು, ಬ್ರಹ್ಮಾ=ಚತುರ್ಮುಖನು, ನ=ಇರಲಿಲ್ಲ. ಶಂಕರಃ=ರುದ್ರನೂ, ನ ಚ=ಇರಲಿಲ್ಲ. (೬) ಅಜಸ್ಯ=ಶ್ರೀ ಹರಿಯ, ನಾಭೌ=ನಾಭಿಯಲ್ಲಿ, ಅಧಿ ಏಕಂ ಅರ್ಪಿತಂ=ಶ್ರೇಷ್ಠವಾದ ಒಂದು ಕಮಲವು ಸಮರ್ಪಿತವಾಗಿದೆ. ಇದರಿಂದ **'ಅಜಸ್ಯ ನಾಭಾವಧ್ಯೇಕಮರ್ಪಿತಂ ಯಸ್ಮಿನ್ ವಿಶ್ವಾ ಭುವನಾನಿ ತಸ್ಥುಃ'** ಎನ್ನುವ ಶ್ರುತಿಯು. (೭) ಮಾತ್ರಯಾ=ಮಿತಿಯಿಂದ, ಪರಃ=ದಾಟದವನು, (ಇದರಿಂದ **'ಪರೋ ಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮನ್ವಶ್ನುವಂತಿ'** (ಋ. ಅಷ್ಟಕ ೫ ಅಧ್ಯಾ. ೬ ವರ್ಗ ೨೪) (೮) ಸದ್ದೇಹಃ = ನಿರ್ದುಷ್ಟವಾದ (ಜನ್ಮಾದಿ ದೋಷರಹಿತವಾದ) ಶರೀರವಿರುವವನು, ಸುಖಗಂಧಶ್ಚ = ಸುಗಂಧಸ್ವರೂಪನು, ಜ್ಞಾನಭಾಃ=ಜ್ಞಾನಾತ್ಮಕ ಪ್ರಕಾಶವುಳ್ಳವನು, ಸತ್ಪರಾಕ್ರಮಃ = ನಿರ್ದುಷ್ಟವಾದ ಪರಾಕ್ರಮವುಳ್ಳವನು, ಜ್ಞಾನಜ್ಞಾನಃ=ಅತಿಶಯಿತ ಜ್ಞಾನಸ್ವರೂಪನು, ಸುಖಸುಖಃ=ಅತಿಶಯಿತ ಸುಖಸ್ವರೂಪನು, ಅಂದರೆ ಅಜ್ಞಾನಮಿಶ್ರ ಜ್ಞಾನವುಳ್ಳವನಲ್ಲ. ದುಃಖಮಿಶ್ರ ಸುಖವುಳ್ಳವನೂ ಅಲ್ಲ. ಸಃ ವಿಷ್ಣುಃ=ಆ ಶ್ರೀಹರಿಯು, ಪರಮಃ = ಸರ್ವೋತ್ತಮನು, ಅಕ್ಷರಃ=ನಾಶವಿಲ್ಲದವನು, (೯) ಪ್ರಭುಃ= ಸರ್ವಸಮರ್ಥನಾದ, ಆನಂದಃ=ಆನಂದರೂಪನಾದ, ಏಕ ಏವ ನಾರಾಯಣಃ=ನಾರಾಯಣನೊಬ್ಬನೇ, ಅಗ್ರೇ=ಪ್ರಲಯಕಾಲದಲ್ಲಿ, ಆಸೀತ್=ಇರುತ್ತಿದ್ದನು. ತಸ್ಯ=ನಾರಾಯಣನ, ಶಿರಃ=ಶಿರಸ್ಸು, ಪ್ರಿಯಂ=ಪ್ರಿಯನಾಮಕವಾದ ಸುಖವಿಶೇಷರೂಪವು, (ಶ್ರವಣದಿಂದುಂಟಾದ ಸುಖವು ಪ್ರಿಯವೆನ್ನಿಸುತ್ತದೆ.) ಹರೇಃ=ಶ್ರೀಹರಿಯ, ಭುಜೌ ಚ=ಭುಜಗಳಾದರೂ, ಮೋದ-ಪ್ರಮೋದೌ=ಮೋದ ಪ್ರಮೋದಗಳೆನ್ನಿಸುತ್ತವೆ. (ದರ್ಶನದಿಂದುಂಟಾದ ಆನಂದವು **ಮೋದವು.** ಭೋಗದಿಂದುಂಟಾದ ಆನಂದವು **ಪ್ರಮೋದವು.**) ಮಧ್ಯತಃ=ಮಧ್ಯದೇಹವು, ಆನಂದಃ=ಆನಂದರೂಪವೂ, ಅಂದರೆ ಸ್ವರೂಪಭೂತವಾದುದು ಆನಂದವು. (ಆವಾಪ ವಸ್ತುಗಳನ್ನು ಪ್ರವರ್ತಿಸಿಕೊಡುವುದರಿಂದ ಆವಾಪವ್ಯಪದೇಶವು.) (ತೈತ್ತಿ. ಉಪ. ಅಧ್ಯಾ. ೨ ಮಂ. ೧೨. ಪು. ೧೨೯.) ಬ್ರಹ್ಮ=ಬ್ರಹ್ಮನು, ಪುಚ್ಛಂ=ಪಾದವು. ಕ್ವಚಿತ್=ಎಲ್ಲಿಯೂ, ಅನ್ಯತ್=ಇತರವಾದುದು ಪ್ರಾಕೃತಸುಖಾದಿಗಳು, ನಾಭೂತ್=ಇರಲಿಲ್ಲ. (೧೦) ಅಸ್ಯ = ಪರಬ್ರಹ್ಮನ, ಮನಸಃ = ಮನಸ್ಸಿನದ್ದೆಶೆಯಿಂದ, ಬ್ರಹ್ಮಾ=ಚತುರ್ಮುಖನು, ಅಭವತ್=ಆದನು. ಲಲಾಟಾದಪಿ=ಲಲಾಟದಿಂದಲೂಕೂಡ, ಶಂಕರಃ = ರುದ್ರನು, (ಆದನು.) ಪಕ್ಷಯೋಃ = ಭುಜಗಳದ್ದೆಶೆಯಿಂದ,

ಗರುಡಃ=ಗರುಡನು, ಶೇಷಃ=ಶೇಷನೂಕೂಡ, (ಆದನು.) ಮುಖಾತ್ = ಮುಖದ್ದೆಸೆಯಿಂದ, ಸರಸ್ವತೀ=ಸರಸ್ವತಿಯು, ಆಸೀತ್= (ಆಸ) ಆದಳು. (೧೧) ಸಹಸ್ರಶೀರ್ಷಾ=ಅನಂತಾನಂತ ಶಿರಸ್ಸುಗಳುಳ್ಳವನು, ಪುರುಷಃ=ಪೂರ್ಣ ಷಡ್ಗುಣಗಳುಳ್ಳವನು, ಸಹಸ್ರಾಕ್ಷಃ = ಅನಂತ ಕಣ್ಣು ಗಳುಳ್ಳವನು, ಸಹಸ್ರಪಾತ್ = ಅನಂತಪಾದಗಳುಳ್ಳವನು, (ಋ. ಅಷ್ಟ. ೮. ಅಧ್ಯಾ. ೪. ವರ್ಗ ೧೭.) ಇತ್ಯಾದಿ ಶ್ರುತಿಸಂದರ್ಭ ಬಲಾತ್ = ಇದು ಮೊದಲಾದ ಶ್ರುತಿಗಳ ಸಂದರ್ಭದ ಸಾಮರ್ಥ್ಯದ್ದೆಸೆಯಿಂದ, ನಿತ್ಯಗುಣಾತ್ಮನಃ=ಸದಾ ಗುಣಸ್ವರೂಪನಾದ, ವಿಷ್ಣೋಃ=ಶ್ರೀಹರಿಯ, ದೇಹಾತ್=ಶರೀರದ್ದೆಸೆಯಿಂದ, ಸರ್ವಂ ಜಗತ್=ಎಲ್ಲಾ ಜಗತ್ತು, ಆವಿರಾಸೀತ್ = ಆವಿರ್ಭೂತ ವಾಯಿತು. ಇತಿ=ಹೀಗೆ, ಈಯತೇ=ತಿಳಿಯಲ್ಪಡುತ್ತದೆ.

ತಾ || ನ್ಯಾಯಸುಧಾ — (1) ರುದ್ರನು ಜಗತ್ಕರ್ತನು ಎಂದು ಸಿದ್ಧವಾದ ಮೇಲೆ ಪಾಶುಪತಾದ್ಯಾಗಮವನ್ನು ರುದ್ರನು ಮಾಡಿರುವುದರಿಂದ ಅದು ಪ್ರಮಾಣವೆಂದು ನಿಶ್ಚಿತವಾಗು ವುದು. ಪಾಶುಪತಾದ್ಯಾಗಮವು ಪ್ರಮಾಣವೆಂದು ನಿಶ್ಚಿತವಾದ ಮೇಲೆ ಅದರಿಂದ ರುದ್ರನು ಸರ್ವಜ್ಞನೆಂದೂ, ಜಗತ್ಕರ್ತನೆಂದೂ ಸಿದ್ಧಿಸುವುದು. ಹೀಗೆ ಅನ್ಯೋನ್ಯಾಶ್ರಯದೋಷವು ಬರು ವುದರಿಂದ ಪ್ರಾಮಾಣ್ಯ ನಿಶ್ಚಯವಾಗಲಾರದು. ಬೇರೆ ಯಾವುದೂ ಪಾಶುಪತಾದ್ಯಾಗಮ ಪ್ರಾಮಾಣ್ಯ ಸಾಧಕವಾದ ಪ್ರಮಾಣವಿರುವುದಿಲ್ಲ. ವೇದಕ್ಕಾದರೂ ಅಪೌರುಷೇಯತ್ವವಿದ್ದುದರಿಂದ ಪುರುಷದೋಷನಿಬಂಧನದೋಷವೇ ಇಲ್ಲದಿರುವುದರಿಂದಲೂ, ಬಾಧಕ ಪ್ರತ್ಯಯವಿಲ್ಲದಿರುವುದ ರಿಂದಲೂ ನಿಶ್ಶಂಕವಾಗಿ ಸ್ವತಃ ಪ್ರಾಮಾಣ್ಯವು ನಿಶ್ಚಿತವಾಗುತ್ತದೆ. ಆದಕಾರಣ ನಿಶ್ಚಿತ ಪ್ರಾಮಾಣ್ಯವುಳ್ಳ ಶ್ರುತಿಯಿಂದ ಶ್ರೀ ವಿಷ್ಣುವಿಗೆ ದೋಷಲೇಶರಹಿತವಾದ ಜಗತ್ಕಾರಣತ್ವವು ಸಿದ್ಧಿ ಸುವುದು. (2) ಉದಾಹೃತ ಶ್ರುತಿಗಳ ಮಧ್ಯದಲ್ಲಿ ೧ 'ಬುಧ್ನಿ' ಎನ್ನುವ ಶ್ರುತಿಯಿಂದ ವಿಷ್ಣು ವಿಗೆ ದೇಹವಿದೆ ಎಂದವಗತವಾಗುತ್ತದೆ ೨ 'ಯದಾತ್ಮಕಃ' ಎನ್ನುವ ಶ್ರುತಿಯಿಂದ ಶ್ರೀ ಹರಿಯ ದೇಹವು ಜ್ಞಾನಾದಿ ಗುಣಾತ್ಮಕವೆಂದು ಸಿದ್ಧವಾಗುತ್ತದೆ. ೩ 'ನ ತೇ ವಿಷ್ಣೋ' ಎನ್ನುವ ಶ್ರುತಿ ಯಿಂದ ಶ್ರೀ ಹರಿಯ ದೇಹವು ಅನಾದಿ ನಿತ್ಯವೆಂದವಗತವಾಗುತ್ತದೆ. ೪. ೫. 'ವಾಸುದೇವಃ' ಇತ್ಯಾದಿ ಎರಡು ಶ್ರುತಿಗಳಿಂದ ಅನಾದಿನಿತ್ಯ ಶರೀರವತ್ವವೂ, ೬ 'ಅಜಸ್ಯ' ಎನ್ನುವುದರಿಂದ ದೇಹವತ್ವವೂ, ಶ್ರೀ ಹರಿಗೆ ಉತ್ಪತ್ತ್ಯಭಾವವೂ, ೭ 'ಪರೋಮಾತ್ರಯಾ' ಎನ್ನುವುದರಿಂದ ದೇಶ- ಕಾಲ- ಗುಣಗಳಿಂದ ಅಪರಿಚ್ಛಿನ್ನ (ಅವಧಿಯಿಲ್ಲದಿರುವ) ಶರೀರವತ್ವವೂ, ೮. ೯ 'ಸದ್ದೇಹಃ' ಇತ್ಯಾದಿ ಎರಡು ಶ್ರುತಿಗಳಿಂದ ಜನ್ಮಾದಿ ದೋಶಗಳಿಂದ ವಿರಹಿತವಾದ ಗುಣಾತ್ಮಕ ಶರೀರವತ್ವವೂ ೧೦. ೧೧. 'ಮನಸಃ' ಇತ್ಯಾದಿ ಎರಡು ಶ್ರುತಿಗಳಿಂದ ಶರೀರವತ್ವವೂ, ಶ್ರೀ ಹರಿಯಿಂದಲೇ ಜಗತ್ತಿಗೆ ಉತ್ಪತ್ತಿಯೂ ಅವಗತವಾಗುತ್ತದೆ. (3) ಇಲ್ಲಿ ಸಕಲ ಜಗತ್ಕಾರಣತ್ವವೇ ಶ್ರುತಿಸಿದ್ಧ ವಾಗುವಾಗ ಸರ್ವದೋಷ ಪರಿಹಾರವೂ ಸಿದ್ಧವೇ ಆಗುತ್ತದೆ. ದೋಷಗಳು ಇದ್ದರೆ ಸಕಲ ಜಗತ್ಕಾರಣತ್ವವು ಕೂಡಲಾರದು ಆದಾಗ್ಯೂ ದೋಷಾಭಾವವೂ ಕೂಡ ಶ್ರುತಿಸಿದ್ಧವಾಗಿದೆ. ಉಪಪತ್ತಿಯನ್ನು ಹುಡುಕುವುದರಿಂದ ಏನು ಪ್ರಯೋಜನವು ಎನ್ನುವ ಅಭಿಪ್ರಾಯದಿಂದ ದೋಷಾ ಭಾವವನ್ನು ತೋರಿಸಿದರು. ಅದರಲ್ಲಿ ಶರೀರವಿದ್ದುದರಿಂದ ದೇಹಾಭಾವಪ್ರಯುಕ್ತಗಳಾದ ದೂಷಣಗಳೂ ತಿರಸ್ಕೃತಗಳಾದುವು. ಆ ಶರೀರವು ಜ್ಞಾನಾನಂದಾದಿ ಗುಣಸ್ವರೂಪವಾಗಿರು ವುದರಿಂದ ಜನನಾದಿ ದೋಷಪರಿಹಾರವೂ ಸಿದ್ಧವಾಯಿತು. 'ಜನಿತೋತ ವಿಷ್ಣೋಃ' ಇತ್ಯಾದಿ ವಾಕ್ಯವಾದರೂ ಅನೇಕ ನಿರವಕಾಶಗಳಾದ ದೇಹಾಭಾವವನ್ನು ಪ್ರತಿಪಾದಿಸತಕ್ಕ ಶ್ರುತಿಗಳಿಂದ ವಿರುದ್ಧವಾಗಿರುವುದರಿಂದ ಆ ವಾಕ್ಯದಲ್ಲಿರುವ ವಿಷ್ಣು ಶಬ್ದವು ಯಜ್ಞ ವಾ ಯಜಮಾನ ಪರವೆಂದು ತಿಳಿಯತಕ್ಕದ್ದು ॥ ೨೭೭ ॥ ೨೭೮ ॥ ೨೭೯ ॥ ೨೮೦ ॥ ೨೮೧ ॥ ೨೮೨ ॥ ೨೮೩ ॥

ದೇಹವು ಜ್ಞಾನಾನಂದಾದಿ ಗುಣಸ್ವರೂಪವೂ, ಅನಾದಿ ನಿತ್ಯವೂ ಆಗಿದೆ ಎನ್ನುವುದು 'ಶಶೋ ವಿಷಾಣವಾನ್' ಎನ್ನುವುದರಂತೆ ವಿರುದ್ಧವಾಯಿತು. 'ಯೋ ದೇಹಃ ಸಃ ಭೌತಿಕಃ ಜನ್ಮಾದಿಮಾನ್'=ಯಾವುದು ದೇಹವ್ರೋ ಅದು ಭೌತಿಕವು ಜನ್ಮಾದಿಗಳುಳ್ಳದ್ದು ಎಂದು ನಿಯಮವು ಕಂಡದೆ. ಆದಕಾರಣ ವಿಷ್ಣುವಿಗೆ ಶರೀರವನ್ನು ಅಂಗೀಕರಿಸಿ ಅದಕ್ಕೆ ಅಭೌತಿಕತ್ವಾದಿಗಳನ್ನು ಅಂಗೀಕರಿಸಿದರೆ ಶಶಕ್ಕೂ ಕೂಡ ವಿಷಾಣವನ್ನು ಅಂಗೀಕರಿಸಬೇಕಾಗುವುದು, ಆದುದರಿಂದ ದೇಹಕ್ಕೆ ಅಭೌತಿಕತ್ವಾದಿಗಳಿಂದ ವಿರೋಧವನ್ನು ತಿರಸ್ಕರಿಸುತ್ತಾರೆ—

**ಮೂ || ಮಾನವತ್ವಾದ್ವಿರೋಧಃ ಕೋನಾಮಾನಂ ಕ್ವಚಿದಿಷ್ಯತೇ || ೨೮೪ ||**
**ಅವಿರೋಧೋ ವಿರೋಧಶ್ಚ ಮಾನೇನೈವ ಹಿ ಗಮ್ಯತೇ |**
**ಅತ ಉಕ್ತಂ ಸಮಸ್ತಂ ಚ ವಾಸುದೇವಸ್ಯ ಯುಜ್ಯತೇ || ೨೮೫ ||**

ಅ || ಮಾನವತ್ವಾತ್=ಪ್ರಮಾಣವಿದ್ದುದರಿಂದ, ಕಃ=ಯಾವ, ವಿರೋಧಃ=ವಿರೋಧವು.! (ವಿರೋಧವು ಇಲ್ಲ.) ಅಮಾನಂ=ಪ್ರಮಾಣವಿಲ್ಲದಿರುವುದು, ಕ್ವಚಿತ್=ಎಲ್ಲಿಯೂ, ನ ಇಷ್ಯತೇ=ಅಂಗೀಕರಿಸಲ್ಪಡುವುದಿಲ್ಲ. (ಶ್ರೀ ಹರಿಯ ವಿಗ್ರಹಕ್ಕೆ ಆನಂದಾದ್ಯಾತ್ಮಕತ್ವ ವಿಷಯದಲ್ಲಿ ಪ್ರಮಾಣವಿದ್ದಂತೆಯೇ ಶಶವಿಷಾಣವೂ ಪ್ರಾಮಾಣಿಕವಾಗಿದ್ದರೆ ಶಶವಿಷಾಣವನ್ನೂ ಅಂಗೀಕರಿಸುತ್ತಿದ್ದೆವು, ಶಶವಿಷಾಣವು ಪ್ರಾಮಾಣಿಕವಲ್ಲ. ಅಪ್ರಾಮಾಣಿಕವನ್ನು ಯಾರೊಬ್ಬನೂ ಯಾವಾಗಲೂ ಎಲ್ಲಿಯೂ ಅಂಗೀಕರಿಸಲಿಕ್ಕೆ ಶಕ್ಯವಲ್ಲ.) (ಪ್ರಾಮಾಣಿಕವಾದಾಗ್ಯೂ ವಿರೋಧವಿಲ್ಲದಿರುವುದು ಹೇಗೆಂದರೆ-) ಅವಿರೋಧಃ=ಯಾವವುಗಳಿಗೆ ಕೆಲವು ಕಡೆ ಸಹದರ್ಶನವಿದೆಯೋ ಅವುಗಳಿಗೆ ವಿರೋಧಾಭಾವವು, ವಿರೋಧಶ್ಚ=ಯಾವವುಗಳಿಗೆ ನಿಯಮದಿಂದ ವ್ಯಧಿಕರಣವಾಗಿಯೇ ದರ್ಶನವಿದೆಯೋ ಅವುಗಳಿಗೆ ವಿರೋಧವೂ ಕೂಡ, ಮಾನೇನೈವ=ಪ್ರಮಾಣದಿಂದಲೇ, ಗಮ್ಯತೇ=ತಿಳಿಯಲ್ಪಡುತ್ತದೆ. (ಸಹದರ್ಶನ, ಅಸಹದರ್ಶನ ರೂಪವಾದ ಪ್ರಮಾಣದಿಂದ ವಸ್ತುಗಳಿಗೆ ಅವಿರೋಧ ವಿರೋಧಗಳನ್ನು ತಿಳಿಯಬೇಕು. ನಿಯಾಮಕವಾದುದು ಬೇರೆಯಾವುದೂ ಇಲ್ಲ. ಆದುದರಿಂದ ಕೂಡಿಕೊಂಡು ಇವೆ ಎಂದು ಪ್ರಮಾಣದಿಂದಲೇ ದೃಷ್ಟವಾದ ಅರ್ಥದಲ್ಲಿ ವಿರೋಧವು ಹೇಗೆತಾನೇ ಬಂದೀತು?) ಅತಃ=ಕೂಡಿಕೊಂಡು ಇವೆ ಎಂದು ಪ್ರಮಾಣಗಳಿಂದ ದೃಷ್ಟವಾದ ಅರ್ಥದಲ್ಲಿ ವಿರೋಧವನ್ನು ಶಂಕಿಸಲಿಕ್ಕೇನೇ ಬಾರದಿರುವುದರಿಂದ, ಉಕ್ತಂ=ಉದಾಹೃತ ಶ್ರುತಿಗಳಿಂದ ಹೇಳಲ್ಪಟ್ಟ, ಸಮಸ್ತಂ ಚ = ಚಿದಾನಂದಾತ್ಮಕವಾದ ದೋಷಲೇಶ ರಹಿತವಾದ ಶರೀರದಿಂದ ಜಗತ್ಕಾರಣತ್ವ ಮೊದಲಾದುದೆಲ್ಲವೂ, ವಾಸುದೇವಸ್ಯ=ಶ್ರೀ ಹರಿಗೆ, ಯುಜ್ಯತೇ=ಕೂಡುತ್ತದೆ. || ೨೮೪ || ೨೮೫ ||

ಹಾಗಾದರೆ ಇದು ನಮಗೂ ಸಮಾನವೇ. ಹೇಗೆಂದರೆ— ಯದ್ಯಪಿ ಪಾಶುಪತಾದ್ಯಾಗಮದ ಪ್ರಾಮಾಣ್ಯವನ್ನು ನಿಶ್ಚಯಿಸಲಿಕ್ಕೆ ಶಕ್ಯವಲ್ಲ. ಆದಾಗ್ಯೂ '**ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ ಏಕೋ ರುದ್ರೋ ನ ದ್ವಿತೀಯಾಯ ತಸ್ಥೇ ಸ ಇಮಾನ್ ಲೋಕಾನೀಶತ ಈಶನೀಭಿಃ**' ಇದುಮೊದಲಾದ ಶ್ರುತಿಗಳಾದರೂ ಶಿವಾದಿ ನಾಮಗಳಿಂದ ಕೂಡಿರುವಪ್ರಯುಕ್ತ ಶಿವನಿಗೆ ಜಗಜ್ಜನ್ಮಾದಿಕಾರಣತ್ವವನ್ನು ಹೇಳುತ್ತವೆ. ಅಂತಹನಿಗೆ ಅಸಾಮಂಜಸ್ಯವು ಕೂಡಲಾರದು. ಆದಕಾರಣ ಉದಾಹೃತ ಶ್ರುತಿಗಳಿಗೆ ಇದಕ್ಕೆ ಅವಿರುದ್ಧವಾಗಿ ಅರ್ಥವನ್ನು ಹೇಳಬೇಕು. ಸಂಬಂಧಾನುಪಪತ್ಯಾದಿಗಳನ್ನು ಶ್ರುತಿಯೇ ಆಭಾಸೀಕರಿಸುವುದು ಎಂದಾಶಂಕಿಸಿದರೆ—

**ಮೂ|| ಶಿವಾದಿನಾಮಯುಕ್ತಾಶ್ಚ ಶ್ರುತಯೋ ವಿಷ್ಣುವಾಚಕಾಃ |**
**ನಾಮಾನಿ ಸರ್ವಾಣಿ ಚ ಯಮೇಕೋ ಯೋ ದೇವನಾಮಧಾಃ ||೨೮೬||**

**ವಿಷ್ಣುನಾಮಾನಿ ನಾನ್ಯಸ್ಯ ಸರ್ವನಾಮಾ ಹರಿಃ ಸ್ವಯಂ ।**
**ನ ನಾರಾಯಣ ನಾಮಾನಿ ತದನ್ಯೇಷ್ವಪರೇ ಹರೌ ॥**
**ಇತ್ಯಾದಿ ಶ್ರುತಯಸ್ತತ್ರ ಮಾನಂ ಚೋಕ್ತಃ ಸಮನ್ವಯಃ ॥ ೨೮೭ ॥**

ಅ ॥ (ಈ ಶ್ರುತಿಗಳು ಶಿವಪರಗಳಾಗಿದ್ದರೆ ಹೀಗೆ ಆಗುತ್ತಿತ್ತು. ಹೀಗೆ ಅಲ್ಲ. ಅಂದರೆ, ಶಿವಪರಗಳೇ ಅಲ್ಲ. ಮತ್ತೆ) ಶಿವಾದಿನಾಮಯುಕ್ತಾಶ್ಚ ಶ್ರುತಯಃ=ಶಿವಮೊದಲಾದ ನಾಮಗಳಿಂದ ಕೂಡಿದ ಶ್ರುತಿಗಳೂ ಕೂಡ, ವಿಷ್ಣುವಾಚಕಾಃ = ವಿಷ್ಣುವಿಷಯಕಗಳೇ. (ಹಾಗಾದರೆ ಇದು ಯಾವುದರಿಂದ ಸಿದ್ಧಿಸುವುದು. ಏಕಂದರೆ— ಹೀಗಾದರೆ ನಮಗೂ ಕೂಡ ' **ಏಕೋ ನಾರಾಯಣಃ ಆಸೀತ್** ' ಇದು ಮೊದಲಾದ ಶ್ರುತಿಗಳೂ ಶಿವಪರಗಳೆಂದು ಹೇಳಲಿಕ್ಕೆ ಬರುತ್ತವೆ. ಎಂದರೆ ಹೀಗೆ ಹೇಳಕೂಡದು. ಶಿವಾದಿ ನಾಮಗಳಿಗೆ ವಿಷ್ಣುವಿನಲ್ಲಿ ಶಕ್ತಿಯಿದೆ. ನಾರಾಯಣಾದಿ ನಾಮಗಳಿಗೆ **ಶಿವ**ನಲ್ಲಿ ಶಕ್ತಿಯಿಲ್ಲ.) ಈ ವಿಷಯದಲ್ಲಿಯೂ ಏನು ಪ್ರಮಾಣವೆಂದರೆ-(೧)ಸರ್ವಾಣಿ ನಾಮಾನಿ ಚ = ಎಲ್ಲಾ ನಾಮಧೆಯಗಳೂ, ಯಂ=ಯಾರನ್ನು, ಹೇಳುತ್ತವೋ ಇದರಿಂದ ೧ "**ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ**" ೨ "**ನಾಮಾನಿ ವಿಶ್ವಾಭಿ ನ ಸಂತಿ ಲೋಕೇ**" ಇತ್ಯಾದಿ ಶ್ರುತಿಗಳು) (೨) ಯ ಏಕಃ=ಯಾರೊಬ್ಬನೇ, ದೇವನಾಮಧಾಃ=ದೇವತೆಗಳ ಸರ್ವ ನಾಮಗಳನ್ನು ಧರಿಸುವವನೋ, (ಇದರಿಂದ "**ಯೋ ದೇವಾನಾಂ ನಾಮಧಾ ಏಕ ಏವ ತಂ ಸಂಪ್ರಶ್ನಂ ಭುವನಾಯಂತ್ಯನ್ಯೇ**" ಎನ್ನುವ ಶ್ರುತಿಯೂ, ಸಂಗೃಹೀತವಾಯಿತು.) ವಿಷ್ಣು ನಾಮಾನಿ=ಶ್ರೀ ಹರಿಯ ನಾಮಧೇಯಗಳು, ಅನ್ಯಸ್ಯ=ಇತರರನ್ನು, ನ=ಹೇಳುವುದಿಲ್ಲ. ಹರಿಃ=ಶ್ರೀ ಪರಮಾತ್ಮನೇ, ಸ್ವಯಂ=ತಾನೇ, ಸರ್ವನಾಮಾ=ಎಲ್ಲಾ ನಾಮಧೇಯಗಳುಳ್ಳವನು. ನಾರಾಯಣ ನಾಮಾನಿ=ನಾರಾಯಣ ನಾಮಧೇಯಗಳು, ತದನ್ಯೇಷು=ನಾರಾಯಣನಿಂದ ಇತರರಾದವರಲ್ಲಿ, ನ=ಇರುವುದಿಲ್ಲ. ಅಪರೇ = **ಶಿ**ವಾದಿ ಶಬ್ದಗಳು, ಹರೌ=ಶ್ರೀ ಹರಿಯಲ್ಲಿರುತ್ತವೆ. ಇತ್ಯಾದಿ ಶ್ರುತಯಃ = ಇದು ಮೊದಲಾದ ಶ್ರುತಿಗಳು, ತತ್ರ=ಆ ವಿಷಯದಲ್ಲಿ, ಮಾನಂ=ಪ್ರಮಾಣವು, ಉಕ್ತಃ ಸಮನ್ವಯಶ್ಚ=ಹಿಂದೆ ಹೇಳಿದ ಸಮನ್ವಯವೂ ಕೂಡ, ತತ್ರ ಮಾನಂ=ಆ ವಿಷಯದಲ್ಲಿ ಪ್ರಮಾಣವು. (ಈ ಶ್ರುತಿಗಳನ್ನು ಶಿವಾದಿ ಪರಗಳನ್ನಾಗಿ ವ್ಯಾಖ್ಯಾನಮಾಡುವೆನು, ಎಂದು ಹೇಳಕೂಡದು. ಉಪಕ್ರಮಾದಿಗಳಿಂದಲೂ ನಿರವಕಾಶಗಳಾದ ವಿಷ್ಣುಲಿಂಗಾದಿಗಳಿಂದಲೂ ಭಗವತ್ಪರಗಳೆಂದು ನಿಶ್ಚಿತಗಳಾಗಿವೆ ॥ ೨೮೬ ॥ ೨೮೭ ॥

ಶ್ರುತಿಗಳಿಂದ ಶಿವನಿಗೆ ಜಗತ್ಕಾರಣತ್ವನಿಶ್ಚಯವು ಆಗುವುದು ಬೇಡ. ಶೈವಪುರಾಣಗಳಿಂದ ಆಗುವುದು. ಅವುಗಳೂ ವಿಷ್ಣುಪರಗಳೆಂದು ಹೇಳಕೂಡದು. ಉಪಕ್ರಮಾದಿಗಳ ಬಲದಿಂದ ಶಿವವಿಷಯಕವೆಂದು ನಿಶ್ಚಿತವಾಗಿವೆ; ಎಂದಾಶಂಕಿಸಿದರೆ—

ಮೂ ॥ **ಪುರಾಣಾನಿ ಪುರಾಣಾದ್ಯೈರ್ವಿರುದ್ಧತ್ವಾನ್ನ ತತ್ಪ್ರಮಾ ॥ ೨೮೮ ॥**
**ತದ್ವಿರುದ್ಧೇಷು ನೋ ಮಾನಂ ಪೂರ್ವಾಪರವಿರೋಧತಃ ।**
**ಸಮಬ್ರಹ್ಮವಿರೋಧಾಚ್ಚ ನಿಯಮಾದ್ವೈಷ್ಣವೇಷ್ವಪಿ ॥ ೨೮೯ ॥**
**ಮೋಹಾರ್ಥಮುಕ್ತಿತಶ್ಚೈವ ವಿಷ್ಣೋರೇಕೋ ಗುಣಾರ್ಣವಃ ।**
**ಸ್ಕಂದಸೂರ್ಯಗಣೇಶಾದಿ ಮತಾನಿ ನ್ಯಾಯತೋಽಮುತಃ ।**
**ನಿರಾಕೃತಾನ್ಯಶೇಷೇಣ ಸಿದ್ಧಾಂತಸ್ಯಾವಿಶೇಷತಃ ॥ ೨೯೦ ॥**

ಅ || ಪುರಾಣಾನಿ=ಶೈವಪುರಾಣಗಳು, ಪುರಾಣಾದ್ಯೈಃ=ವೈಷ್ಣವಪುರಾಣಾದಿಗಳಿಂದ, ವಿರುದ್ಧತ್ವಾತ್=ವಿರುದ್ಧವಾಗಿರುವುದರಿಂದಲೂ, (ಪ್ರಾಬಲ್ಯವಿಚಾರದಿಂದ ಮೊದಲು ಸತ್ಪ್ರತಿಪಕ್ಷಿತವಾಗಿರುವುದರಿಂದಲೂ, ಪ್ರಾಬಲ್ಯನಿಶ್ಚಿತವಾದ ಮೇಲೆ ಬಾಧಿತವಾಗಿರುವುದರಿಂದಲೂ) ತತ್=ಶಿವನಿಗೆ ಜಗತ್ಕಾರಣತ್ವವಿಷಯದಲ್ಲಿ, ಪ್ರಮಾ=ಪ್ರಮಾಣವು, ನ=ಆಗುವುದಿಲ್ಲ. (ಕೇವಲವಾಗಿ ವೈಷ್ಣವಪುರಾಣಾದಿಗಳಿಂದ ವಿರುದ್ಧವಾಗಿರುವುದರಿಂದ ಶೈವಪುರಾಣವು ಅಪ್ರಮಾಣವಾಗುವುದು ಅಲ್ಲ. ಮತ್ತೆ ಶೈವಪುರಾಣದಿಂದ ವಿರುದ್ಧವೂ ಆಗಿದೆ, ಎನ್ನುತ್ತಾರೆ.) ತದ್ವಿರುದ್ಧೇಷು=ಶೈವಪುರಾಣಾದಿಗಳಿಂದ ವಿರುದ್ಧಗಳಾದ ಶಿವಜಗತ್ಕಾರಣತ್ವಾದಿಗಳಲ್ಲಿ, ನೋ ಮಾನಂ = ಶೈವಪುರಾಣವು ಪ್ರಮಾಣವಲ್ಲ. (ಶೈವಪುರಾಣಕ್ಕೆ ಶೈವಪುರಾಣದಿಂದ ವಿರೋಧವು ಹೇಗೆಂದರೆ) ಪೂರ್ವಾಪರವಿರೋಧತಃ=ಪೂರ್ವಾಪರವಿರೋಧವಿದ್ದುದರಿಂದ, (ಶೈವಪುರಾಣಕ್ಕೆ ಶೈವಪುರಾಣದಿಂದ ವಿರೋಧವು.) ಸಮಬ್ರಾಹ್ಮವಿರೋಧಾಚ್ಚ=ಶೈವ-ವೈಷ್ಣವ ಪಕ್ಷಪಾತಶೂನ್ಯವಾದ ಬ್ರಾಹ್ಮಪುರಾಣದಿಂದ ವಿರೋಧವಿದ್ದಪ್ರಯುಕ್ತವೂ (ಶೈವಪುರಾಣವು ಪ್ರಮಾಣವಲ್ಲ.) (ಹೀಗಾದರೆ ವೈಷ್ಣವ ಪುರಾಣಾದಿಗಳಿಗೂ ಅಪ್ರಾಮಾಣ್ಯವು ಬರಬೇಕಾಗುವುದು. ಅವುಗಳಿಗೂ ಶೈವ-ಬ್ರಾಹ್ಮ ಪುರಾಣಗಳಿಂದ ವಿರೋಧವೂ ಪೂರ್ವಾಪರವಿರೋಧವೂ ಅದೆ ಎಂದಾಶಂಕಿಸಿದರೆ) ವೈಷ್ಣವೇಷು=ವೈಷ್ಣವಪುರಾಣಗಳಲ್ಲಿ, ನಿಯಮಾತ್=ಏಕಪ್ರಕಾರತ್ವವಿದ್ದುದರಿಂದ, (ಪೂರ್ವಾಪರವಿರೋಧವಿಲ್ಲದಿರುವುದರಿಂದ) ಅಪಿ=ಶೈವಾದಿಪುರಾಣಗಳಿಗೆ ವೈಷ್ಣವಪುರಾಣಾದಿಗಳ ಪ್ರತಿಬಂಧಕತ್ವಾದಿಗಳಲ್ಲಿ ಸಾಮರ್ಥ್ಯವಿಲ್ಲದಿರುವುದರಿಂದಲೂ (ವೈಷ್ಣವಪುರಾಣಗಳಿಗೆ ಅಪ್ರಾಮಾಣ್ಯವಿಲ್ಲ.) (ಹಾಗಾದರೆ ವೈಷ್ಣವಪುರಾಣಾದಿಗಳಲ್ಲಿಯೂ ಶಿವಾದಿಗಳಿಗೆ ಜಗತ್ಕಾರಣತ್ವಾದಿಗಳೂ ಶ್ರೀಹರಿಯು ರುದ್ರಾದಿಗಳ ಸ್ತೋತ್ರಾದಿಗಳನ್ನು ಮಾಡಿದ್ದಾನೆಂದೂ ತೋರುತ್ತದೆ. ಆದಕಾರಣ ನಿಯಮವು ಹೇಗೆ ಹೇಳಲ್ಪಡುವುದು? ಎಂದರೆ) ಮೋಹಾರ್ಥಮೇವ = ಅಯೋಗ್ಯ ಜನರನ್ನು ಮೋಹಪಡಿಸುವುದಕ್ಕಾಗಿಯೇ, ಶಿವಾದಿಗಳಿಗೆ ಜಗತ್ಕಾರಣತ್ವಾದಿಗಳನ್ನು, ಉಕ್ತಿತಃ ಚ=ಹೇಳಿರುವುದರಿಂದಲೂ, ವಿಷ್ಣುವಿನಿಂದ ಮೋಹಾರ್ಥವಾಗಿ ಮಾಡಲ್ಪಟ್ಟ ಶಿವಸ್ತುತ್ಯಾದಿಗಳನ್ನು ಅನುವಾದಮಾಡಿರುವುದರಿಂದಲೂ (ನಿಯಮವು ವಿರುದ್ಧವಲ್ಲ.) (ಶೈವಪುರಾಣಾದಿಗಳಿಗೆ ವೈಷ್ಣವಪುರಾಣಾದಿಗಳ ಪ್ರತಿರೋಧಕತ್ವಾದಿಗಳಲ್ಲಿ ಅಸಾಮರ್ಥ್ಯವು ಹೇಗೆಂದರೆ) ಮೋಹಾರ್ಥಮೇವ ಉಕ್ತಿತಃ ಚ = ಶೈವಪುರಾಣಾದಿಗಳನ್ನು ಮೋಹಾರ್ಥವಾಗಿಯೇ (ಮಿಥ್ಯಾಜ್ಞಾನ ಬರುವುದಕ್ಕಾಗಿಯೇ) ಮಾಡಿರುವುದರಿಂದಲೂ ವೈಷ್ಣವಪುರಾಣಾದಿಗಳನ್ನು ತತ್ವಜ್ಞಾನ ಹುಟ್ಟುವುದಕ್ಕಾಗಿಯೇ ಮಾಡಿರುವುದರಿಂದಲೂ (ಶೈವಪುರಾಣಾದಿಗಳಿಗೆ ವೈಷ್ಣವ ಪುರಾಣಾದಿಗಳ ಪ್ರತಿರೋಧಕತ್ವಾದಿಗಳಲ್ಲಿ ಸಾಮರ್ಥ್ಯವಿಲ್ಲ.) (ತಸ್ಮಾತ್=ಆದುದರಿಂದ) ವಿಷ್ಣುಃ ಏಕಃ=ಶ್ರೀಹರಿಯೊಬ್ಬನೇ, ಗುಣಾರ್ಣವಃ = ಗುಣಗಳಿಂದ ಸಮುದ್ರದಂತಿರುವವನು. (ಎಂದು ಸಿದ್ಧವಾಯಿತು.) (ಹಾಗಾದರೆ ಸ್ಕಂದಾದಿ ಮತಗಳೂಕೂಡ ಉಕ್ತಾರ್ಥಕ್ಕೆ ವಿರೋಧಿಗಳಾಗಿ ಇರುತ್ತವೆ. ಅವುಗಳನ್ನು ಇಲ್ಲಿ ಏಕೆ ನಿರಾಕರಿಸುವುದಿಲ್ಲ ಎಂದರೆ) ಸ್ಕಂದಸೂರ್ಯ ಗಣೇಶಾದಿ ಮತಾನಿ=ಸ್ಕಂದ ಸೂರ್ಯ ಗಣೇಶ ಮೊದಲಾದವರಿಗೆ ಸರ್ವೋತ್ತಮತ್ವಾದಿಗಳನ್ನು ಹೇಳತಕ್ಕ ಸ್ಕಾಂದ- ಸೌರ- ಗಾಣಪತ್ಯ ಮೊದಲಾದ ಮತಗಳು, ಅಮುತಃ ನ್ಯಾಯತಃ=ಪಾಶುಮತ ನಿರಾಕರಣನ್ಯಾಯದಿಂದ ಪಾಶುಪತಾಗಮಕ್ಕೆ ಅಪ್ರಾಮಾಣ್ಯವನ್ನು ಸಾಧಿಸಿಕೊಡುವ ನ್ಯಾಯದಿಂದಲೇ, ಅಶೇಷೇಣ=ಸಂಪೂರ್ಣವಾಗಿ, ಸಿದ್ಧಾಂತಸ್ಯ=ಸ್ಕಂದಾದಿಗಳ ಸಿದ್ಧಾಂತಗಳಿಗೂ ಪಾಶುಪತ ಸಿದ್ಧಾಂತಕ್ಕೂ, ಅವಿಶೇಷತಃ = ವಿಶೇಷವಿಲ್ಲದಿರುವುದರಿಂದ, ನಿರಾಕೃತಾನಿ=ನಿರಾಕರಿಸಲ್ಪಟ್ಟಪ್ರಾಯಗಳೇ, ಆದುದರಿಂದ ಪ್ರತ್ಯೇಕವಾಗಿ ನಿರಾಕರಿಸಲ್ಪಡುವುದಿಲ್ಲ. ಅಂತೂ ಕೇವಲವಾಗಿ ಪಶುಪತಿ, ಸ್ಕಂದ, ಮೊದಲಾದ ದೇವತಾಂತರವನ್ನು

ಪರಿಗ್ರಹಿಸಿರುವುದರಿಂದಲೇ ಪಾಶುಪತ ಸ್ಕಾಂದ ಗಾಣಪತ್ಯಾದಿ ಮತಭೇದವು. ಪ್ರಕ್ರಿಯೆಯು ಎಲ್ಲಾ ಕಡೆಗಳಲ್ಲಿಯೂ ಸಮಾನವೇ. ಆದುದರಿಂದ ಪೂರ್ವನಿರಾಕರಣ ನ್ಯಾಯದಿಂದಲೇ ಸ್ಕಂದಾದಿಗಳ ಮತ ನಿರಾಕರಣವು ಯುಕ್ತವೇ. ॥ ೨೮೮ ॥ ೨೮೯ ॥ ೨೯೦ ॥ ಸೂ. ೩೭ ॥ ೩೮ ॥ ೩೯ ॥ ೪೦ ॥ ೪೧ ॥ ಅಧಿ. ೧೧ ॥

**ಪಶುಪತ್ಯಧಿಕರಣವು ಸಮಾಪ್ತವಾಯಿತು.**



# ಉತ್ಪತ್ತ್ಯಧಿಕರಣವು.

ಶಕ್ತಿಯೇ ಜಗತ್ಕಾರಣವು ಎಂದು ಪ್ರತಿಪಾದಿಸತಕ್ಕ ಮಹಾವಾಮ, ಮಧ್ಯಮವಾಮ, ಅಣುವಾಮ ಎನ್ನುವ ಶಾಕ್ತರ ಮತವನ್ನು ತಿರಸ್ಕರಿಸುತ್ತಾರೆ. ಅದರಲ್ಲಿ ಮಹಾವಾಮ ಮತವನ್ನು ನಿರಾಸಮಾಡತಕ್ಕ ಸೂತ್ರವು.

**"ಓಂ ಉತ್ಪತ್ತ್ಯಸಂಭವಾತ್ ಓಂ"** ॥ ಸೂ. ೪೨ ॥

ಕೇವಲ ಶಕ್ತಿದೇವತೆಯು ಜಗತ್ಕಾರಣವಲ್ಲ, ಶಕ್ತಿಯು ಸಕಾಶದ್ದೆಸೆಯಿಂದ ಜಗತ್ತಿಗೆ ಉತ್ಪತ್ತಿಯು ಕೂಡದಿರುವುದರಿಂದ, ಏಕೆಂದರೆ— ಪುರುಷಾನನುಗ್ರಹೀತ ಸ್ತ್ರೀಮಾತ್ರದಿಂದ ಅಪತ್ಯೋತ್ಪತ್ತಿಯು ಎಲ್ಲಿಯೂ ತೋರುವುದಿಲ್ಲ.

ಸ್ಕಾಂದಾದಿಮತದಂತೆ ಈ ಶಾಕ್ತಮತವೂ ಪೂರ್ವನ್ಯಾಯದಿಂದಲೇ ನಿರಸ್ತವಾಗಿರುವುದರಿಂದ ಈ ಶಾಕ್ತಮತವನ್ನು ನಿರಾಕರಿಸಬೇಕಾಗಿಯೇ ಇಲ್ಲ. 'ಪತ್ಯುರಸಾಮಂಜಸ್ಯಾತ್' ಎನ್ನುವಸೂತ್ರದಲ್ಲಿ ಪತ್ಯುಃ ಎನ್ನುವುದರ ಸ್ಥಾನದಲ್ಲಿ ಸ್ಕಂದಸ್ಯ ಇತ್ಯಾದಿಗಳನ್ನು ಪಠನಮಾಡಿ ಅವನಿಗೆ ಅಸಾಮಂಜಸ್ಯವಿಷಯದಲ್ಲಿ ಅದನ್ನು ಪ್ರತಿಪಾದಿಸತಕ್ಕ ಶ್ರುತಿಗಳು ಹೇಳಲ್ಪಡುತ್ತವೋ, ಸಂಬಂಧಾನುಪಪತ್ತ್ಯಾದಿಗಳು ಸ್ಕಂದವಿಷಯಕಗಳೆಂದು ಕೂಡಿಸಲ್ಪಡುತ್ತವೋ, ಹಾಗೆಯೇ ಶಕ್ತಿದೇವತೆಯಲ್ಲಿಯೂ ಹೇಳಲಿಕ್ಕೆ ಶಕ್ಯವಾಗುತ್ತದೆ. ಇಲ್ಲವಾದರೆ ಸ್ಕಂದಾದಿಗಳ ಶಾಸ್ತ್ರವನ್ನೂ ಕೂಡ ಪ್ರತ್ಯೇಕವಾಗಿ ತಿರಸ್ಕಾರಮಾಡಬೇಕಾದೀತು. (2) ಹಾಗಾದರೆ ಶಾಕ್ತಮತದಲ್ಲಿ ಪಾಶುಪತರ ಮತಕ್ಕಿಂತ ಆಚಾರ ಭೇದಾದಿಗಳು ಇದ್ದ ಪ್ರಯುಕ್ತ ಪಾಶುಪತಮತದ್ದೆಸೆಯಿಂದ ಶಾಕ್ತಮತಕ್ಕೆ ಸಾಮ್ಯವಿಲ್ಲ. ಎಂದರೆ— ಹಾಗೆ ಹೇಳಕೂಡದು. ಸೌರಾದಿ ಮತಗಳಲ್ಲಿಯೂ ಕೂಡ ಆಚಾರಭೇದಾದಿಗಳು ಇವೆಯಷ್ಟೆ? (3) ಹಾಗಾದರೆ ಆಚಾರಭೇದಾದಿಗಳಿಂದ ಏನು ಪ್ರಯೋಜನವು. ಸ್ಕಂದ, ಗಣಪತಿ ಮೊದಲಾದ ದೇವತಾವಿಶೇಷವನ್ನು ಹೊರತು ಉಕ್ತಾರ್ಥವಿರುದ್ಧವಾದ, ದೂಷ್ಯವಾದ ಅರ್ಥವು ಸರ್ವತ್ರ ಸಮಾನವೇ ಎಂದು ಹೇಳುವುದಾದರೆ ಅದು ಶಾಕ್ತಮತದಲ್ಲಿಯೂ ಸಮಾನವು. ಆದಕಾರಣ ಇದನ್ನೂ ಕೂಡ ಪ್ರತ್ಯೇಕವಾಗಿ ತಿರಸ್ಕಾರಮಾಡಬೇಕಾಗಿಲ್ಲ. ಎಂದಾಶಂಕಿಸಿದರೆ—

**ಮೂ ॥ ನಿರಾಕೃತೌ ವಿಶೇಷಸ್ಯ ಭಾವಾಚ್ಛಕ್ತಿಮತಂ ಪೃಥಕ್ ॥ ೨೯೧ ॥**

**ದೂಷ್ಯತೇ ಮಹತೀ ದೇವೀ ಹ್ರೀಂಕಾರೀ ಸರ್ವಕಾರಣಂ ।**

**ತ್ರಿಪುರಾ ಭೈರವೀತ್ಯಾದಿ ನಾಮಭಿಃ ಸಾಽಭಿಧೀಯತೇ ॥ ೨೯೨ ॥**

ಅ || (ಸ್ಕಾಂದಾದಿ ಮತದಂತೆ ಶಾಕ್ತಮತಕ್ಕೂ ಕೂಡ ಪಾಶುಪತಮತದ್ವೆಶೆಯಿಂದ ವಿಶೇಷವಿಲ್ಲವೆನ್ನುವುದು ಸತ್ಯವೇ. ಆದಾಗ್ಯೂ) ನಿರಾಕೃತೌ = ಶಾಕ್ತಮತವನ್ನು ನಿರಾಕರಿಸುವ ವಿಷಯದಲ್ಲಿ, ವಿಶೇಷಸ್ಯ ಭಾವಾತ್=ಅಸಾಧಾರಣ ದೂಷಣವಿದ್ದ ಪ್ರಯುಕ್ತ, ಅದನ್ನು ವಿವಕ್ಷಾ ಮಾಡಿಕೊಂಡು, ಶಕ್ತಿಮತಂ=ಶಕ್ತಿಮತವು, ಪೃಥಕ್=ಪ್ರತ್ಯೇಕವಾಗಿ, ದೂಷ್ಯತೇ=ಸೂತ್ರ ಕಾರರಿಂದ ದೂಷಿಸಲ್ಪಡುತ್ತದೆ. (ಉತ್ಪತ್ತ್ಯಸಂಭವವು ಶಾಕ್ತಮತದ್ದೇ ಅಸಾಧಾರಣ ದೋಷವು. ಸ್ಕಾಂದಾದಿ ಮತಗಳ ಅಸಾಧಾರಣ ದೋಷವಲ್ಲ.) (ಹೀಗೆ ಅಧಿಕರಣಾರಂಭವನ್ನು ಉಪಪಾದಿಸಿ ಈಗ ಶಾಕ್ತಮತ ಸ್ಥಿತಿಯನ್ನು ಉಪನ್ಯಾಸ ಮಾಡುತ್ತಾರೆ.) ದೇವೀ=ದೇವಿಯು, ಸರ್ವಕಾರಣಂ= ಸಕಲ ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣಳಾಗಿರುವುದರಿಂದ ಸಾರ್ವಜ್ಞ್ಯ ಮೊದಲಾದ ಸರ್ವ ಗುಣಗಳುಳ್ಳವಳು, ಸಮಸ್ತ ದೋಷವಿದೂರಳು. ಆದಕಾರಣ, ಮಹತೀ=ಸರ್ವೋತ್ಕೃಷ್ಟಳು (ಹೀಗೆ ಶಕ್ತಿಮತವು) (ಹಾಗಾದರೆ ಈ ಶಾಸ್ತ್ರವು ಪರಸ್ಪರ ವ್ಯಾಹತವಾಗಿರುವುದರಿಂದ ಹೇಗೆತಾನೇ ಪ್ರಮಾಣವಾದೀತು? ಹೇಗೆಂದರೆ ಭುವನೇಶ್ವರೀ ತಂತ್ರದಲ್ಲಿ ಭುವನೇಶ್ವರಿಯೇ ಸರ್ವಜಗತ್ಕಾರಣಳು, ಸರ್ವೋತ್ಕೃಷ್ಟಳು ಎಂದೂ, ತ್ರಿಪುರಾತಂತ್ರದಲ್ಲಿ ತ್ರಿಪುರಾದೇವಿಯೇ ಎಂದೂ, ಹಾಗೆಯೇ ಭೈರವೀ ತಂತ್ರದಲ್ಲಿ ಭೈರವೀ ಎಂದೂ, ಹೀಗೆಯೇ ಕುಬ್ಜಿಕಾದಿ ತಂತ್ರಗಳಲ್ಲಿ ಕುಬ್ಜಿಕಾದಿ ಬೇರೆ ಬೇರೆ ದೇವತೆಗಳೇ ಸರ್ವೋತ್ತಮಗಳೆಂದು ಹೇಳಲ್ಪಡುತ್ತವೆ. ಅನೇಕರಿಗೆ ಸರ್ವೋತ್ತಮತ್ವವು ಕೂಡಲಾರದು. ಎಂದರೆ)— ಹ್ರೀಂಕಾರೀ = ಹ್ರೀಂಕಾರಿಯು, ತ್ರಿಪುರಾ= ತ್ರಿಪುರಾದೇವಿಯು, ಭೈರವೀ=ಭೈರವಿಯು, ಇತ್ಯಾದಿನಾಮಭಿಃ=ಇವು ಮೊದಲಾದ ನಾಮ ಗಳಿಂದ, ಸಾ = ಭಗವತಿಯೊಬ್ಬಳೇ, ಅಭಿಧೀಯತೇ = ಹೇಳಿಸಿಕೊಳ್ಳಲ್ಪಡುತ್ತಾಳೆ. (ಆದುದ ರಿಂದ ಅನ್ಯೋನ್ಯ ವ್ಯಾಹತಿಯಿಲ್ಲ.) || ೨೯೧ || ೨೯೨ ||

೧ ಮಹಾವಾಮ, ೨ ಮಧ್ಯವಾಮ, ೩ ಅಣುವಾಮ, ಎಂದು ಶಾಕ್ತರು ಮೂರುವಿಧರು. ಇವರೇ ಕೆಲವುಕಡೆ ಶಾಕ್ತರು, ಶಾಂಭವರು, ಆಣವರು, ಎನ್ನಿಸಿಕೊಳ್ಳುತ್ತಾರೆ. ಅದರಲ್ಲಿ ೧ ಮಹಾವಾಮರ ಮತವಿಶೇಷವನ್ನು ತೋರಿಸುತ್ತಾರೆ.

**ಮೂ || ತಸ್ಯಾಃ ಸದಾಶಿವಾದ್ಯಾಶ್ಚ ಜಾಯಂತೇ ದೇವಮಾನವಾಃ (ನುಷಾಃ)**
**ಭೂತಭೌತಿಕಮಪ್ಯೇತದಿತಿ ತನ್ನೋಪಪದ್ಯತೇ || ೨೯೩ ||**
**ದೃಷ್ಟಾ ಪುಂಭ್ಯಃ ಸದಾ ಸೃಷ್ಟಿಃ ಸ್ತ್ರೀಪುಂಭ್ಯೋ ವಾ ವಿಶೇಷತಃ ।**
**ಕೇವಲಾಭ್ಯೋ ನ ಹಿ ಸ್ತ್ರೀಭ್ಯಸ್ತತ ಉತ್ಪತ್ತ್ಯಸಂಭವಾತ್ ||**
**ನಾಚರ್ಯಂ ಮಹಾವಾಮಮತಂ [ನಾನ್ಯೈರನ್ಯದುದೀರ್ಯತೇ] ||೨೯೪||**

ಅ || ತಸ್ಯಾಃ = ಕೇವಲಶಕ್ತಿಯಿಂದಲೇ, ಸದಾಶಿವಾದ್ಯಾಶ್ಚ = ಸದಾಶಿವನೇ ಮೊದ ಲಾದವರು, ದೇವಮಾನವಾಃ = ದೇವತೆಗಳು, ಮನುಷ್ಯರು, ಭೂತಭೌತಿಕಮಪಿ = ಪಂಚ ಭೂತಗಳು, ಭೌತಿಕಗಳೂಕೂಡ, ಜಾಯಂತೇ=ಹುಟ್ಟುತ್ತವೆ. ಇತಿ=ಹೀಗೆ, (ಮಹಾವಾಮರು ಹೇಳುತ್ತಾರೆ.) ತತ್=ಈಗಉಪನ್ಯಾಸ ಮಾಡಿರುವ ಮಹಾವಾಮಮತವು, ನೋಪಪದ್ಯತೇ= ಕೂಡುವುದಿಲ್ಲ. ಪುಂಭ್ಯಃ=ಕೇವಲ ಪುರುಷರದ್ವೆಶೆಯಿಂದ, ಸೃಷ್ಟಿಃ=ಸೃಷ್ಟಿಯು, (ಅಪತ್ಯೋ ತ್ಪತ್ತಿಯು) ದೃಷ್ಟಾ=ಕಾಣಲ್ಪಟ್ಟದೆ. (ದ್ರೋಣಾದಿಗಳ ಸೃಷ್ಟಿಯು ಕೇವಲ ಪುರುಷರಿಂದಲೇ ದೃಷ್ಟವಾಗಿದೆ.) ವಿಶೇಷತಃ=ಪ್ರಚುರವಾಗಿ, ಸ್ತ್ರೀಪುಂಭ್ಯೋವಾ = ಸ್ತ್ರೀಪುರುಷರಿಂದಲಾದರೂ, ಸದಾ = ಯಾವಾಗಲೂ, ದೃಷ್ಟಾ = (ಅಪತ್ಯೋತ್ಪತ್ತಿಯು) ಕಾಣಲ್ಪಟ್ಟದೆ. ಕೇವಲಾಭ್ಯಃ

ಸ್ತ್ರೀಭ್ಯಃ=ಕೇವಲ (ಪುರುಷಾನನುಗ್ರಹೀತರಾದ) ಸ್ತ್ರೀಯರಿಂದ, ನ ಹಿ ದೃಷ್ಟಾ=ಕಾಣಲ್ಪಡಲಿಲ್ಲ ವಷ್ಟೆ. ತತಃ=ಯಾವಕಾರಣದ್ದೆಶೆಯಿಂದ ಹೀಗೆ ವ್ಯಾಪ್ತಿಯುದೆಯೋ, ಯಾವುದರಿಂದ ಜಗತ್ಕರ್ತ್ರ ಳೆಂದು ಶಾಕ್ತರಿಗೆ ಅಭಿಮತಳಾದ ಶಕ್ತಿದೇವತೆಯು ಪುರುಷಾನನುಗ್ರಹೀತಳೋ ಆದಕಾರಣ ಶಿವಾದಿಗಳಿಗೆ ಶಕ್ತಿದೇವತೆಯಿಂದಲೇ ಉತ್ಪತ್ತಿಯನ್ನು ಅಂಗೀಕರಿಸಿರುವುದರಿಂದ, ತತಃ = ಆಕಾರಣದ್ದೆಶೆಯಿಂದ, ತತಃ= ಶಕ್ತಿದೇವತೆಯುದ್ದೆಶೆಯಿಂದ, ಉತ್ಪತ್ತ್ಯಸಂಭವಾತ್=ಅಪತ್ಯೋತ್ಪತ್ತಿಯು ಕೂಡದಿರುವುದರಿಂದ, ಮಹಾವಾಮ ಮತಂ=ಮಹಾವಾಮರ ಮತವು, ನಾರ್ಹ್ಯಂ= ಅಂಗೀಕರಿಸಕೂಡದು.

**ತಾ ||** **ನ್ಯಾಯಸುಧಾ**— (1)ಆದಿಕಾಲೀನಾಪತ್ಯೋತ್ಪತ್ತಿಃ ನ ಕೇವಲ ಸ್ತ್ರೀಕರ್ತೃಕಾ ಅಪತ್ಯೋತ್ಪತ್ತಿತ್ವಾತ್ ಯಾ ಅಪತ್ಯೋತ್ಪತ್ತಿಃ ಸಾ ನ ಕೇವಲ ಸ್ತ್ರೀಕರ್ತೃಕಾ ಯಥಾ ಸಂಪ್ರತಿಪನ್ನಾ = ಆದಿಕಾಲದಲ್ಲಿರತಕ್ಕ ಅಪತ್ಯೋತ್ಪತ್ತಿಯು ಕೇವಲ ಸ್ತ್ರೀಕರ್ತೃಕವಲ್ಲ. ಅಪತ್ಯೋತ್ಪತ್ತಿಯಾಗಿರುವುದರಿಂದ ಯಾವುದು ಅಪತ್ಯೋತ್ಪತ್ತಿಯೋ ಅದು ಕೇವಲ ಸ್ತ್ರೀಕರ್ತೃಕ ವಲ್ಲ. ನಿಶ್ಚಿತವಾದುದರಂತೆ. (2)ಕೆಲವು ಅಪತ್ಯೋತ್ಪತ್ತಿಯು ಕೇವಲ ಪುರುಷರಿಂದ ದೃಷ್ಟವಾಗಿದೆ, ಕೆಲವು ಅಪತ್ಯೋತ್ಪತ್ತಿಯು ಪುರುಷರಿಂದ ಅನುಗ್ರಹೀತರಾದ ಸ್ತ್ರೀಯರಿಂದ(ಸ್ತ್ರೀಪುರುಷರ ಸಂಯೋಗವಿಶೇಷದಿಂದ) ದೃಷ್ಟವಾಗಿದೆ. ಎಲ್ಲಿಯೂ ಪುರುಷಸಂಪರ್ಕವಿಲ್ಲದೆ ಕೇವಲ ಸ್ತ್ರೀಯರಿಂದ ದೃಷ್ಟ ವಾಗಲೇ ಇಲ್ಲ. ಅಥವಾ ಶಕ್ತಿಃ ನಾಪತ್ಯಪ್ರಸವಿತ್ರೀ ಕೇವಲ ಸ್ತ್ರೀತ್ವಾತ್ ಸಂಪ್ರತಿಪನ್ನ ಕೇವಲ ಸ್ತ್ರೀವತ್=ಶಕ್ತಿಯು ಮಕ್ಕಳನ್ನು ಹಡಿಯತಕ್ಕದು ಅಲ್ಲ, ಪುರುಷಾನನುಗ್ರಹೀತ ಸ್ತ್ರೀಯಾಗಿರುವುದರಿಂದ ಸಂಪ್ರತಿಪನ್ನ ಕೇವಲ ಸ್ತ್ರೀಯಂತೆ. (3) 'ನಿರಾಕೃತೇ ವಿಶೇಷಸ್ಯ ಭಾವಾತ್'' ಎನ್ನುವುದರಿಂದ ಈ ದೋಷವು ಅಸಾಧಾರಣವೆಂದು ಯಾವುದು ಹೇಳಲ್ಪಟ್ಟದೋ ಅದನ್ನು ಉಪಪಾದಿಸುವುದಕ್ಕಾಗಿ 'ದೃಷ್ಟಾಪುಂಭ್ಯಃ' ಇತ್ಯಾದ್ಯುಪನ್ಯಾಸವು. ॥ ೨೯೩ ॥ ೨೯೪ ॥

ಈಗ ಅಧಿಕಾಶಂಕೆಯಿಂದ ಮತಾಂತರವನ್ನು (ಮಧ್ಯವಾಮಮತವನ್ನು) ಉಪನ್ಯಾಸ ಮಾಡುತ್ತಾರೆ—

**ಮೂ ॥ [ನಾರ್ಹ್ಯಂ ಮಹಾವಾಮಮತಂ] ವಾಮೈರನ್ಯದುದೀರ್ಯತೇ ।**
**ಶಿವೋಪಸರ್ಜನಾ ಶಕ್ತಿಃ ಸಸರ್ಜೇದಂ ಸಮಂತತಃ ।**
**ಇತಿ ತಚ್ಚೋಪಪನ್ನಂ ನ [ಶಿವಸ್ಯಾಕರಣತ್ವತಃ] ॥ ೨೯೫ ॥**

**ಅ ||** ವಾಮೈಃ = ಮಧ್ಯವಾಮರಿಂದ, ಅನ್ಯತ್ = ಮಹಾವಾಮಸಿದ್ಧಾಂತದ್ದೆಶೆಯಿಂದ ಇತರವಾದುದು, ಉದೀರ್ಯತೇ=ಹೇಳಲ್ಪಡುತ್ತದೆ. (ಅದು ಯಾವುದೆಂದರೆ) ಶಿವೋಪಸರ್ಜನಾ= ಶಿವನೇ ಅಪ್ರಧಾನನಾಗಿ ಉಳ್ಳ, ಶಕ್ತಿಃ=ಶಕ್ತಿದೇವತೆಯು, ಇದಂ ಸಮಂತತಃ = ಸರ್ವದೇಶಕಾಲ ಗಳಲ್ಲಿರತಕ್ಕ ಕಾರ್ಯವನ್ನು, ಸಸರ್ಜ=ಸೃಷ್ಟಿಮಾಡಿತು. (ಅಂದರೆ ನಾವು ಶಿವನಿಂದ ಕೂಡಿದ ಶಕ್ತಿದೇವತಯೇ ಜಗತ್ಕಾರಣವೆಂದಂಗೀಕರಿಸಿರುವುದರಿಂದ ನಮ್ಮ ಮತದಲ್ಲಿ ಉತ್ಪತ್ತ್ಯಸಂಭವವು ಇರುವುದಿಲ್ಲ. ಇದರಲ್ಲಿ ಶಿವನಿಗೆ ಶಕ್ತಿಗಿಂತ ಅಪ್ರಾಧಾನ್ಯವನ್ನು ಅಂಗೀಕರಿಸಿರುವುದರಿಂದ ಇವ ರಿಬ್ಬರಿಗೆ ಸರ್ವೋತ್ಕೃಷ್ಟತ್ವವು ವಿರುದ್ಧವಾದುದು ಪ್ರಾಪ್ತವಾಗುತ್ತದೆಂದೂ ಇಲ್ಲ.) ಇತಿ=ಹೀಗೆ, (ಮಧ್ಯವಾಮರು ಹೇಳುತ್ತಾರೆ. ಅದನ್ನು ನಿರಾಕರಿಸುತ್ತಾರೆ.) ತಚ್ಚ=ಆದಾದರೂ, ಉಪ ಪನ್ನಂ=ಯುಕ್ತವಾದುದು, ನ=ಅಲ್ಲ. (ಇಲ್ಲಿಯೂ ಉತ್ಪತ್ತ್ಯಸಂಭವರೂಪದೋಷವು ಪರಿ ಹೃತವಾಗುವುದೇ ಇಲ್ಲ.) ॥ ೨೯೫ ॥

ಶಿವಾನುಗೃಹೀತವಾದ ಶಕ್ತಿದೇವತೆಯು ಜಗತ್ಕಾರಣವು ಎನ್ನುವ ಮಧ್ಯಮವಾಮ ಮತವನ್ನು ನಿರಾಕರಿಸುತ್ತಾರೆ.—

"ಓಂ ನ ಚ ಕರ್ತುಃ ಕರಣಂ ಓಂ" ॥ ಸೂ. ೪೩ ॥

ಅನುಗ್ರಾಹಕನಾದ ಶಿವನಿಗೆ ಜ್ಞಾನ ಮೊದಲಾದ ಸಾಧನವು ಇರುವುದಿಲ್ಲ.

ಇದನ್ನು ವ್ಯಾಖ್ಯಾನ ಮಾಡುತ್ತಾರೆ—

**ಮೂ ॥ [ಇತಿ ತಚ್ಚೋಽಪಪನ್ನಂ ನ] ಶಿವಸ್ಯಾಕರಣತ್ವತಃ ।**
**ಅದೇಹತ್ವಾದಪಿ [ಹ್ಯನ್ಯೇಬ್ರೂಯುಃ ಸರ್ವಜ್ಞಮೀಶ್ವರಂ॥] ॥೨೯೬ ॥**

**ಅ ॥** ಶಿವಸ್ಯ=ರುದ್ರನಿಗೆ, ಅಕರಣತ್ವತಃ = ಕರಣಗಳು ಇಲ್ಲದಿರುವುದರಿಂದ, ಅಂದರೆ ಅದೇಹತ್ವಾತ್ = ಶರೀರವಿಲ್ಲದಿರುವುದರಿಂದ, ಅಥವಾ ಅದೇಹತ್ವಾತ್ = ಶರೀರವಿಲ್ಲದಿರುವುದರಿಂದ, ಅಕರಣತ್ವತಃ ಅಪಿ=ಇಂದ್ರಿಯವಿಲ್ಲದಿರುವ ಪ್ರಯುಕ್ತ, ಜ್ಞಾನಾದಿಕರಣಗಳು ಇಲ್ಲದಿರುವುದರಿಂದ (ಮಧ್ಯವಾಮರ ಮತವೂ ಅಯುಕ್ತವು.)

**ತಾ ॥ ನ್ಯಾಯಸುಧಾ—** (1) ಸಶರೀರನಾದ ಶಿವನೇ ಅಪತ್ಯೋತ್ಪತ್ತಿಯಲ್ಲಿ ಶಕ್ತಿಗೆ ಸಹಕಾರಿತ್ವವನ್ನು ಮಾಡಬೇಕು. ವಿದೇಹನಾಗಿ ಅಲ್ಲ. ವಿದೇಹನಿಗೆ ಪ್ರಲೀನನಂತೆ ಇಂದ್ರಿಯ ವಿಜ್ಞಾನಾದಿಗಳು ಇಲ್ಲದಿರುವುದರಿಂದ ಅದು ಕೂಡಲಾರದು. ಶಿವದೇಹೋತ್ಪತ್ತಿಯಲ್ಲಿ ಪುರುಷಾನನುಗೃಹೀತ ಶಕ್ತಿಗೆ ಸಾಮರ್ಥ್ಯವಿಲ್ಲ. ಕೇವಲ ಸ್ತ್ರೀಯರಿಂದ ಶರೀರೋತ್ಪತ್ತಿಯು ಕೂಡಲಾರದು ಎಂದು ಹಿಂದೆ ಹೇಳಿದ ದೋಷವೇ ಬರುವುದು. ಇಲ್ಲವಾದರೆ ಎಲ್ಲಾ ಕಡೆಗಳಲ್ಲಿಯೂ ಕೇವಲ ಸ್ತ್ರೀಯರಿಂದಲೇ ಶರೀರೋತ್ಪತ್ತಿಯು ಉಪಪನ್ನವಾಗುತ್ತಿರಲು ಶಿವನನ್ನು ಅಂಗೀಕರಿಸುವುದೇ ವ್ಯರ್ಥವಾಗಬೇಕಾಗುವುದು. ಶಿವನಿಂದ ಕೂಡಿದ ಶಕ್ತಿದೇವತೆಗೂ ಶಕ್ತಿಯಿಲ್ಲ. ವಿದೇಹನಿಗೆ ಸಾಹಾಯ್ಯಕರಣವೇ ಕೂಡಲಾರದು. ಆದಕಾರಣ ಶಿವನನ್ನು ಅಂಗೀಕರಿಸಿದರೂ ಅಜಾಗಲಸ್ತನಾಯಿತನಾದ ಪ್ರಯುಕ್ತ ಇಲ್ಲಿಯೂ ಉತ್ಪತ್ತ್ಯಸಂಭವವೇ. ॥ ೨೯೬ ॥

ಅಣುವಾಮ ಮತವನ್ನು ಉಪನ್ಯಾಸ ಮಾಡುತ್ತಾರೆ—

**ಮೂ ॥ [ಅದೇಹತ್ವಾದಪಿ] ಹ್ಯನ್ಯೇ ಬ್ರೂಯುಃ ಸರ್ವಜ್ಞಮೀಶ್ವರಂ ।**
**ಅಣುವಾಮಾ ನ ತದ್ಯುಕ್ತಂ [ಈಶವಾದ ಪ್ರವೇಶನಾತ್] ॥ ೨೯೭ ॥**

**ಅ ॥** ಅನ್ಯೇಽಪಿ = ಇತರರಾದ, ಅಣುವಾಮಾಃ=ಅಣುವಾಮರು, ಈಶ್ವರಂ = ಈಶ್ವರನನ್ನು, ಸರ್ವಜ್ಞಂ=ಸರ್ವಜ್ಞನನ್ನಾಗಿಯೂ, ಜಗತ್ಸೃಷ್ಟ್ಯಾದಿಗಳಿಗೆ ಉಪಯುಕ್ತಗಳಾದ ಸಕಲ ಕರಣಗಳಿಂದಲೂ ಕೂಡಿದವನನ್ನಾಗಿಯೂ, ಬ್ರೂಯುಃ = ಹೇಳುತ್ತಾರೆ. (ಅಂದರೆ ಶಿವನಿಂದ ಕೂಡಿಕೊಂಡು ಇರತಕ್ಕ ಶಕ್ತಿದೇವತೆಯು ಜಗಜ್ಜನನಿಯು ಎಂದಂಗೀಕರಿಸತಕ್ಕ ನಮಗೆ (ಅಣುವಾಮರಿಗೆ) ಹಿಂದೆ ಹೇಳಿದ ದೋಷವಿಲ್ಲ. ಶಿವನು ಸ್ವಾಭಾವಿಕವಾಗಿಯೇ ಸಾರ್ವಜ್ಞ್ಯಾದಿ ಗುಣಗಳುಳ್ಳವನಾದ ಪ್ರಯುಕ್ತ ದೇಹಇಂದ್ರಿಯಾದಿಗಳ ಅಪೇಕ್ಷೆಯಿಲ್ಲ. ಲೀಲೆಯಿಂದ ಶರೀರವನ್ನು ಪರಿಗ್ರಹಿಸಿರುವುದರಿಂದ ಶಕ್ತಿಗೆ ಸಾಹಾಯ್ಯವನ್ನು ಮಾಡುತ್ತಾನೆನ್ನುವುದೂ ಉಪಪನ್ನವಾಗುತ್ತದೆ. ಎಂದು ಅಣುವಾಮರು ಹೇಳುತ್ತಾರೆ.) ತತ್=ಅದು, ನ ಯುಕ್ತಂ = ಯುಕ್ತವಲ್ಲ. ॥ ೨೯೭ ॥

ಶಿವನು ಜ್ಞಾನದೇಹಾದಿ ಕಾರಣಗಳುಳ್ಳವನಾಗಿ ಅನುಗ್ರಾಹಕನಾಗಿರುತ್ತಾನೆ ಎನ್ನುವ ಅಣುವಾಮರ ಮತವನ್ನು ನಿರಾಕರಿಸುತ್ತಾರೆ.

## "ಓಂ ವಿಜ್ಞಾನಾದಿಭಾವೇವಾ ತದಪ್ರತಿಷೇಧಃ ಓಂ" ॥ ಸೂ. ೪೪ ॥

ವಿಜ್ಞಾನಾದಿಗಳಿವೆ ಎಂದಂಗೀಕರಿಸಿದರೂ ಪ್ರಕೃತ ಶೈವಮತಕ್ಕೆ ಪ್ರತಿಷೇಧವು ಮಾಡಲ್ಪಡ ಲಿಲ್ಲ. ಅನುಮತಿಯೇ ಆಗುವುದು. ಅಂದರೆ ಅಂತಹ (ಸಾರ್ವಜ್ಞಾದಿ ಗುಣಗಳುಳ್ಳ) ಶಿವ ನಿಂದಲೇ ಸರ್ವಕಾರ್ಯಗಳ ಉತ್ಪತ್ತಿಯಾಗುವಾಗ ಪ್ರತ್ಯೇಕವಾಗಿ ಶಕ್ತಿದೇವತೆಗೆ ಕರ್ತೃತ್ವ ವನ್ನು ಅಂಗೀಕರಿಸಿದ್ದು ವ್ಯರ್ಥವು. ಹಾಗಾದರೆ ಶಿವನಿಗೇನೇ ಜಗತ್ಕರ್ತೃತ್ವವನ್ನು ಅಂಗೀಕರಿ ಸುತ್ತೇನೆಂದರೆ ಶಿವಕರ್ತೃತ್ವವಾದವಾದರೂ ಮೊದಲೇ ನಿರಸ್ತವಾಗಿದೆ.

ಹಾಗಾದರೆ ಈ ಅಣುವಾಮುಮತವು (೧) ಅನುಮತವಾಗಿದೆಯೋ, (೨) ಇಲ್ಲವೋ, ೧ ಅನುಮತವೆಂದು ಹೇಳಕೂಡದು. ಹಿಂದೆ ಹೇಳಿದ ಅರ್ಥದಿಂದ ವಿರುದ್ಧವಾಗಿದೆ. 'ನ ತದ್ಯುಕ್ತಂ' ಎನ್ನುವುದೂ ಕೂಡುವುದಿಲ್ಲ. ೨ನೇ ಕಲ್ಪದಲ್ಲಿ ತದಪ್ರತಿಸೇಧಃ ಎಂದು ಹೇಳಿದ್ದು, ಹೇಗೆ ಕೂಡುತ್ತದೆ ಮತ್ತು 'ನ ತದ್ಯುಕ್ತಂ' ಎನ್ನುವಲ್ಲಿ ಇದಕ್ಕ ಹೇತುತ್ವವೂ ಹೇಗೆ ಕೂಡುತ್ತದೆ. ಎಂದರೆ— 'ತದಪ್ರತಿಷೇಧಃ' ಎನ್ನುವುದನ್ನು ಕೂಡಿಸುವುದಕ್ಕಾಗಿ ಉತ್ಸೂತ್ರವಾದ ಹೇತುವನ್ನು ಹೇಳುತ್ತಾರೆ.—

**ಮೂ ॥ [ಅಣುವಾಮೂ ನ ತದ್ಯುಕ್ತಂ] ಈಶವಾದ ಪ್ರವೇಶನಾತ್ ।**
**ಸಾರ್ವಜ್ಞಾದಿ ಗುಣೈರ್ಯುಕ್ತಂ ಗುರುಕಲ್ಪನಯಾ ದ್ವಯಂ ।**
**ನ ಯುಜ್ಯತೇ ತ(ಹ್ಯ)ತಸ್ತ್ವೀಶ ಏಕ ಏವ ಪ್ರಯೋಜಕಃ ।**
**ಉಕ್ತದೋಷಪುಷ್ಟ ತತ್ಪಕ್ಷ ಇತಿ ನೈವಾತ್ರ ದೂಷ್ಯತೇ ॥ ೨೯೮ ॥**

**ಅ** ॥ ಈಶವಾದ ಪ್ರವೇಶನಾತ್ = ಶೈವಮತಪ್ರವೇಶವು ಬರಬೇಕಾಗಿರುವುದರಿಂದ (ಹಾಗಾದರೆ ಶೈವರು ಸಾರ್ವಜ್ಞಾದಿ ಗುಣಗಳಿಂದ ಕೂಡಿದ ಶಿವನೊಬ್ಬನನ್ನೇ ಅಂಗೀಕರಿಸುತ್ತಾರೆ. ಶಾಕ್ತರಾದರೂ ಶಿವನನ್ನೂ ಶಕ್ತಿಯನ್ನೂ ಅಂಗೀಕರಿಸುತ್ತಾರೆ ಹೀಗೆ ಸಿದ್ಧಾಂತದಲ್ಲಿ ಮಹ ತ್ತಾದ ಭೇದವು ಇದೆ. ಆದಕಾರಣ ಶಾಕ್ತರಿಗೆ ಶೈವಮತ ಪ್ರವೇಶವು ಹೇಗೆ? ಎಂದರೆ ಈ ದೋಷವು ಆಪಾದಿತವೇ ಆಗಿದೆ ಎನ್ನುತ್ತಾರೆ.) ಸಾರ್ವಜ್ಞಾದಿ ಗುಣೈಃ = ಸರ್ವಜ್ಞತ್ವ ಮೊದ ಲಾದ ಗುಣಗಳಿಂದ, ಯುಕ್ತಂ = ಕೂಡಿದ, ದ್ವಯಂ = ಶಿವ ಶಕ್ತ್ಯಾಖ್ಯ ಎರಡು ವಸ್ತುವು, ಗುರು ಕಲ್ಪನಯಾ = ಕಲ್ಪನಾ ಗೌರವದಿಂದ, ನ ಯುಜ್ಯತೇ = ಕೂಡುವುದಿಲ್ಲ. ತತಃ = ಆದಕಾರಣ, ಏಕ ಏವ ಈಶಃ = ಈಶನೊಬ್ಬನೇ, ಪ್ರಯೋಜಕಃ = ಪ್ರಯೋಜಕನೆಂದು (ಶಾಕ್ತರು ಅಂಗೀಕರಿಸ ಬೇಕು.) ತತ್ಪಕ್ಷಃ = ಶೈವಪಕ್ಷವು, ಉಕ್ತದೋಷಪುಷ್ಟ = ಹಿಂದೆ ಹೇಳಲ್ಪಟ್ಟ ದೋಷವುಳ್ಳದ್ದೇ. ಇತಿ = ಆದಕಾರಣ, ಅತ್ರ = ಇಲ್ಲಿ, ನೈವ ದೂಷ್ಯತೇ = ದೂಷಿಸಲ್ಪಡುವುದಿಲ್ಲ.

**ಟಾ** ॥ **ನ್ಯಾಯಸುಧಾ**— (1) ಶಾಕ್ತರು ಸಾರ್ವಜ್ಞಾದಿ ಗುಣಗಳಿಂದ ಕೂಡಿದ ಶಿವ ಶಕ್ತಿ ಎನ್ನುವ ಎರಡು ವಸ್ತುಗಳನ್ನು ಅಂಗೀಕರಿಸಿರುವರು ಎನ್ನುವುದು ಸತ್ಯವೇ. ಆದಾ ದರೂ ಕಲ್ಪನಾ ಗೌರವ ಬರುವುದರಿಂದ ಕೂಡುವುದಿಲ್ಲ. ಹೇಗೆಂದರೆ— ಸಾರ್ವಜ್ಞ್ಯಾದಿಗಳಿಂದ ಕೂಡಿದ್ದು ಪ್ರತ್ಯಕ್ಷಸಿದ್ಧವಾಗಲಾರದು. ಒಬ್ಬನ ಮನಸ್ಸಿನಲ್ಲಿದ್ದುದು ಮತ್ತೊಬ್ಬನಿಗೆ ತೋರ ಲಾರದು. ಶಾಕ್ತಾಗಮಕ್ಕೆ ಪ್ರಾಮಾಣ್ಯವೇ ಸಂದಿಗ್ಧವಾಗಿರುವುದರಿಂದ ಆಗಮದಿಂದಲೂ ಸಿದ್ಧವಾಗಲಾರದು. ಪರರು ಅಪೌರುಷೇಯಾಗಮಕ್ಕೆ ಪ್ರಾಮಾಣ್ಯವನ್ನೇ ಅಂಗೀಕರಿಸುವುದಿಲ್ಲ.

ಅಂಗೀಕರಿಸಿದರೆ ಅದರಿಂದಲೇ ಸ್ವಮತಕ್ಕೆ ಹಾನಿಯು ಬರುವುದು. ಆದುದರಿಂದ ಪ್ರಪಂಚರಚನಾನುಪಪತ್ತಿಯಿಂದಲೇ ಅಂತಹ ವಸ್ತುವನ್ನು ಕಲ್ಪಿಸಬೇಕು. ಸಾರ್ವಜ್ಞಾದಿಗಳುಳ್ಳ ಒಬ್ಬನಿಂದಲೇ ಸರ್ವವೂ ನಿರ್ವಾಹವಾಗುತ್ತದೆ. ತಥಾ ಚ ವ್ಯರ್ಥವಾಗಿ ಸಾರ್ವಜ್ಞಾದಿಗಳುಳ್ಳ ಎರಡು ವಸ್ತುಗಳನ್ನು ಕಲ್ಪಿಸಿದರೆ ಕಲ್ಪನಾ ಗೌರವವೇ. ಆದಕಾರಣ ಸಾರ್ವಜ್ಞಾದಿಗಳುಳ್ಳ ಒಂದೇ ವಸ್ತುವನ್ನು ಅಂಗೀಕರಿಸಬೇಕು. (2) ಅದರಿಂದ ಏನಾಯಿತೆಂದರೆ— ಹಿಂದೆ ಹೇಳಿದ ಹೇತುವಿನಿಂದ ಸಾರ್ವಜ್ಞಾದಿಗಳುಳ್ಳವನೊಬ್ಬನನ್ನೇ ಅಂಗೀಕರಿಸಬೇಕಾಗುತ್ತಿರಲು ಕೇವಲ ಶಕ್ತಿಯನ್ನು ಅಂಗೀಕರಿಸಿದರೆ ಉತ್ಪತ್ತ್ಯಸಂಭವವು ಪ್ರಸಕ್ತವಾಗುವುದರಿಂದ ಸಾರ್ವಜ್ಞಾದಿಗಳಿಂದೊಡಗೂಡಿದ ಈಶನೇ ಪ್ರಪಂಚನಿರ್ಮಾಣಕ್ಕೆ ಪ್ರಯೋಜಕನೆಂದು ಶಾಕ್ತರು ಅಂಗೀಕರಿಸಬೇಕಾಗುವುದು. ಏವಂಚ ಶಾಕ್ತಮತಕ್ಕೆ ಶೈವಮತಪ್ರವೇಶವು ಹೇಗೆ ಬಾರದೆ ಹೋಗುವುದು? (3) ಹೀಗಾದರೆ ಇದರಿಂದ ಏನಾಯಿತೆಂದರೆ— ಶಾಕ್ತಮತಕ್ಕೆ ಅಪಸಿದ್ಧಾಂತದಿಂದ ಪರಾಜಯವು ಬರುವುದು ಎಂದರೆ— ಸತ್ಯವೇ. ಅಷ್ಟರಿಂದಲೂ ಸೂತ್ರಕಾರರ ಸಿದ್ಧಾಂತ ವಿರುದ್ಧವೇ. ಶೈವಮತವೂ ನಿಮ್ಮ ಸಿದ್ಧಾಂತವಿರುದ್ಧವಾಗಿರುವುದರಿಂದ ನಿರಾಕರಿಸಲಿಕ್ಕೆ ಅರ್ಹವೇ ಆಗಿದೆ, ಎಂದರೆ— ತದಪ್ರತಿಷೇಧಃ ಎನ್ನುವ ಸೂತ್ರಾಂಶವನ್ನು ಸೋಪಪತ್ತಿಕವಾಗಿ ಹೇಳಿದರು. ಯಾವ ಕಾರಣದಿಂದ ಶೈವ ಪಕ್ಷಕ್ಕೆ ಅವ್ಯವಹಿತವಾದ ಅತೀತಾಧಿಕರಣದಲ್ಲಿಯೇ ದೋಷವನ್ನು ಹೇಳಿರುವರೋ, ಆದಕಾರಣ ಪುನರುಕ್ತಿದೋಷ ಭಯದಿಂದ ಪುನಃ ಶೈವ ಮತವನ್ನು ಇಲ್ಲಿ ದೂಷಿಸಲಿಲ್ಲ ॥ ೨೯೮ ॥

ಮಹಾವಾಮ, ಮಧ್ಯಮವಾಮ, ಅಣುವಾಮ ಎನ್ನುವ ಶಾಕ್ತರ ಮತಗಳನ್ನ ಪ್ರತ್ಯೇಕ ಹೇತುಗಳಿಂದ ಕ್ರಮವಾಗಿ ನಿರಾಕರಿಸಿ ಈಗ ಸಾಮಾನ್ಯವಾಗಿಯೂ ನಿರಾಕರಿಸುತ್ತಾರೆ.—

**"ಓಂ ವಿಪ್ರತಿಷೇಧಾಚ್ಚ ಓಂ"** ॥ ಸೂ. ॥ ೪೫ ॥

ಸಕಲ ಶ್ರುತಿಸ್ಮೃತಿಯುಕ್ತಿಗಳಿಂದ ವಿರುದ್ಧವಾಗಿರುವುದರಿಂದಲೂ ಶಾಕ್ತೇಯಮತವು ಅಯುಕ್ತವು.

ಈ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ.—

**ಮೂ ॥ ಶ್ರುತಿಸ್ಮೃತೀತಿಹಾಸಾನಾಂ ಸಾಮಸ್ತ್ಯೇನ ವಿರೋಧತಃ ।**
**ಸತಾಂ ಜುಗುಪ್ಸಿತತ್ವಾಚ್ಚ ನಾಂಗೀಕಾರ್ಯಂ ಹಿ ತನ್ಮತಂ ॥ ೨೯೯ ॥**

ಅ ॥ ಸಾಮಸ್ತ್ಯೇನ = ಸಂಪೂರ್ಣವಾಗಿ, ಶ್ರುತಿಸ್ಮೃತೀತಿಹಾಸಾನಾಂ = ಶ್ರುತಿಗಳು-ಸ್ಮೃತಿಗಳು- ಇತಿಹಾಸಗಳೂ ಇವುಗಳ, ವಿರೋಧತಃ = ವಿರೋಧವಿದ್ದುದರಿಂದಲೂ, ಸತಾಂ = ಸಜ್ಜನರಮಧ್ಯದಲ್ಲಿ, ಜುಗುಪ್ಸಿತತ್ವಾಚ್ಚ = ಅಪ್ರಕಾಶ್ಯವಾಗಿರುವುದರಿಂದಲೂ, ಅಥವಾ ಸಜ್ಜನರಿಂದ ನಿಂದಿಸಲ್ಪಟ್ಟಪ್ರಯುಕ್ತವೂ, ತನ್ಮತಂ = ಶಕ್ತಿಮತವು, ನಾಂಗೀಕಾರ್ಯಂ = ಅಂಗೀಕರಿಸಕೂಡದು. ಹಿ = ಶ್ರುತ್ಯಾದಿ ಪ್ರಸಿದ್ಧವು. ॥ ೨೯೯ ॥

(1) ಮಾಯಾವಾದಿಗಳು ಈ ನಾಲ್ಕು ಸೂತ್ರಗಳು ಭಾಗವತ ಮತ ನಿರಾಕರಣಪರವೆಂದು ವ್ಯಾಖ್ಯಾನಮಾಡುತ್ತಾರೆ. ಆ ಭಾಗವತ ಮತವು ಯಾವುದು? ಆ ಮತ ನಿರಾಸಕವಾಗಿ ಸೂತ್ರಗಳನ್ನು ಹೇಗೆ ವ್ಯಾಖ್ಯಾನಮಾಡುವುದೆಂದರೆ— ಪಾಂಚರಾತ್ರಿಕರು ವಾಸುದೇವನದ್ದೆಶೆಯಿಂದ ಸಂಕರ್ಷಣನಾಮಕನಾದ ಜೀವನು ಹುಟ್ಟುತ್ತಾನೆ. ಸಂಕರ್ಷಣನದ್ದೆಶೆಯಿಂದ ಪ್ರದ್ಯುಮ್ನಸಂಜ್ಞಕವಾದ ಮನಸ್ಸು ಹುಟ್ಟುತ್ತದೆ. ಪ್ರದ್ಯುಮ್ನನದ್ದೆಶೆಯಿಂದ ಅನಿರುದ್ಧ ಸಂಜ್ಞಕವಾದ

ಅಹಂಕಾರವು ಹುಟ್ಟುತ್ತದೆಂದು ಪ್ರಕ್ರಿಯೆಯನ್ನು ಹೇಳುತ್ತಾರೆ. ಆ ವಿಷಯದಲ್ಲಿ (೧) **'ಉತ್ಪತ್ತ್ಯಸಂಭವಾತ್'** ಎನ್ನುವ ಸೂತ್ರವು. ವಾಸುದೇವನದ್ದೆಶೆಯಿಂದ ಸಂಕರ್ಷಣನಾಮಕನಾದ ಜೀವನು ಹುಟ್ಟುತ್ತಾನೆನ್ನುವುದು ಅಯುಕ್ತವು. ಜೀವನಿಗೆ ಉತ್ಪತ್ತಿಯು ಕೂಡಲಾರದು. ಉತ್ಪತ್ತಿಯುಳ್ಳಜೀವನಿಗೆ ಅನಿತ್ಯತ್ವಾದಿದೋಷಗಳು ಪ್ರಸಕ್ತಗಳಾಗುವವು. ಅಂತೂ ಜೀವನಿಗೆ ಭಗವತ್ಪ್ರಾಪ್ತಿರೂಪವಾದ ಮೋಕ್ಷವು ಬಾರದೆ ಹೋಗಬೇಕಾಗುವುದು. **'ನ ಜಾಯತೇ ಮ್ರಿಯತೇ ವಾ'** ಇತ್ಯಾದಿಶ್ರುತಿಸ್ಮೃತಿಗಳಿಂದ ವಿರುದ್ಧವೂ ಆಗಿದೆ. (೨) **'ನಚ ಕರ್ತುಃ ಕರಣಂ'** ಸಂಕರ್ಷಣನಾಮಕನಾದ ಜೀವನದ್ದೆಶೆಯಿಂದ ಪ್ರದ್ಯುಮ್ನನಾಮಕವಾದ ಮನಸ್ಸಿಗೆ ಉತ್ಪತ್ತಿಯು ಎನ್ನುವುದೂ ಪಂಚರಾತ್ರದಲ್ಲಿ ಹೇಳಿದ್ದು ಕೂಡುವುದಿಲ್ಲ. ಲೋಕದಲ್ಲಿ ಕರ್ತೃಗಳಾದ ದೇವದತ್ತಾದಿಗಳದ್ದೆಶೆಯಿಂದ ಪರಶು ಮೊದಲಾದ ಕರಣವು ಹುಟ್ಟತಕ್ಕುದು ಕಾಣಲ್ಪಡುವುದಿಲ್ಲ. ಹುಟ್ಟುವುದಾದರೆ ಆಗ ಅದು ಕರ್ಮವೇ, ಕರಣವಲ್ಲ. ಜೀವನು ಕರ್ತನು, ಮನಸ್ಸು ಕರಣವು, ಆದಕಾರಣ ಮನಸ್ಸು ಜೀವನದ್ದೆಶೆಯಿಂದ ಹುಟ್ಟಲಿಕ್ಕೆ ಯೋಗ್ಯವಾಗುವುದಿಲ್ಲ. **'ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ'** ಹೀಗೇ ಈಶ್ವರನಿಂದಲೇ ಮನಸ್ಸಿಗೆ ಉತ್ಪತ್ತಿಯು ಶ್ರುತನಾಗಿದೆ. (2) 'ನ ಚ ಕರ್ತುಃಕರಣಂ' ಎಂದು ಹೇಳಿದುದರಿಂದ ಪ್ರದ್ಯುಮ್ನನಿಂದ ಅನಿರುದ್ಧಸಂಜ್ಞಕವಾದ ಅಹಂಕಾರವು ಹುಟ್ಟುತ್ತದೆ ಎನ್ನುವುದೂ ತಿರಸ್ಕರಿಸಲ್ಪಟ್ಟಿತು. ಹೇಗೆಂದರೆ— ಪ್ರದ್ಯುಮ್ನನೂ ಕೂಡ ಜೀವನಾಗಿರುವುದರಿಂದ ಕರ್ತನಾಗಿದ್ದಾನೆ. ಅಹಂಕಾರವೂ ಕೂಡ ಕರಣವಾಗಿದೆ. (3) ಈ ಸಂಕರ್ಷಣಾದಿಗಳು ಜೀವಾದಿಗಳೆಂದು ಅಭಿಪ್ರೇತರಾಗಲಿಲ್ಲ. ಮತ್ತೆ ಈಶ್ವರರೇ ಆದ ಇವರೆಲ್ಲರೂ ಜ್ಞಾನ, ಐಶ್ವರ್ಯ, ಶಕ್ತಿ, ಬಲ, ವೀರ್ಯ, ತೇಜೋರೂಪಗಳಾದ ಈಶ್ವರಸಂಬಂಧಿಗಳಾದ ಧರ್ಮಗಳಿಂದ ಅನ್ವಿತರೆಂದು ಅಂಗೀಕರಿಸಲ್ಪಡುತ್ತಾರೆ. ಆದಕಾರಣದೋಷಬರುವುದಿಲ್ಲ ಎಂದರೆ ಈ ವಿಷಯದಲ್ಲಿ ಪರಿಹಾರವನ್ನು ಹೇಳುತ್ತಾರೆ. **'ವಿಜ್ಞಾನಾದಿಭಾವೇ ವಾ ತದಪ್ರತಿಷೇಧಃ'** ಪರಮ ಆತ್ಮನಾದ ವಾಸುದೇವನಂತೆ ಸಂಕರ್ಷಣಾದಿಗಳಿಗೂ ವಿಜ್ಞಾನಮೊದಲಾದ ಷಾಡ್ಗುಣ್ಯವಿದ್ದರೆ ಅದರಿಂದಲೇ ಈಶ್ವರತ್ವವನ್ನು ಅಂಗೀಕರಿಸಿದರೂ ಉತ್ಪತ್ತ್ಯಸಂಭವದೋಷಕ್ಕೆ ಪ್ರತಿಷೇಧಮಾಡಲಿಲ್ಲ. ಆದರೆ ಈ ಉತ್ಪತ್ತ್ಯಸಂಭವ ದೋಷವು ಪ್ರಕಾರಾಂತರದಿಂದ ಪ್ರಾಪ್ತವೇ ಆಗುತ್ತದೆ. ಹೇಗೆಂದರೆ, ಈ ನಾಲ್ವರು (ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರು) ಪರಸ್ಪರ ಭಿನ್ನರಲ್ಲ. ಅನೇಕ ಈಶ್ವರರನ್ನು ಕಲ್ಪಿಸಿದರೆ ಗೌರವಾದಿ ದೋಷವು ಬರುವುದು. ಅಭೇದವಿದ್ದರೆ ಪೂರ್ವಾಪರಭಾವಾದಿರೂಪವಾದ ಅತಿಶಯವಿಲ್ಲದಿರುವುದರಿಂದ ತನ್ನಿಂದಲೇ ತನಗೆ ಉತ್ಪತ್ತಿಯು ಹೇಗೆ ಕೂಡುತ್ತದೆ? ಮತ್ತು ಭಗವದ್ವ್ಯೂಹಗಳು ಅನಂತಗಳೆಂದಂಗೀಕರಿಸಿರುವುದರಿಂದ ನಾಲ್ಕೇ ಎಂದು ಹೇಳಲಿಕ್ಕೆ ಬರುವುದಿಲ್ಲ. ನಿಷಿದ್ಧವೂ ಆಗಿದೆ. (4) ಮತ್ತು ಕೆಲವುಕಡೆ ಜ್ಞಾನ, ಐಶ್ವರ್ಯ, ಬಲ, ವೀರ್ಯ, ಶಕ್ತಿ, ತೇಜಸ್ಸುಗಳು ಶ್ರೀಭಗವಂತನ ಗುಣಗಳೆಂದು ಹೇಳಲ್ಪಡುತ್ತವೆ. ಕೆಲವುಕಡೆ ಅವುಗಳೇ ಭಗವತ್ಸ್ವರೂಪಗಳೆಂದೂ ಹೇಳಲ್ಪಡುತ್ತವೆ, ಇತ್ಯಾದಿಗಳನ್ನು ಪಂಚರಾತ್ರದಲ್ಲಿ ಹೇಳಿರುವುದರಿಂದ ಪರಸ್ಪರ ವಿರೋಧವೂ ಬರುತ್ತದೆ. (5) ಮತ್ತು ಈ ಪಂಚರಾತ್ರದಲ್ಲಿ ವೇದನಿರಾಕರಣವೂ ಇದೆ. ಹೇಗೆಂದರೆ— **'ಭಗವಾನ್ ಶಾಂಡಿಲ್ಯಃ ಷಡಂಗಂ ವೇದಮಧೀತ್ಯ ತಸ್ಮಿನ್ ಮಹತ್ಯಾಮ್ನಾಯೇ ನಿಷ್ಠಾಮನಧಿಗಚ್ಛನ್ನಯಃ ಸರ್ವಪರೋ ಧರ್ಮೋ ಯಸ್ಮಾನ್ನ ಭೂಯೋಽಸ್ತಿ ಕಥಂ ತಂ ವಿದ್ಯಾಮಿತ್ಯೇವಂ ಬಲವದ್ನಿರ್ವೇಕವಮಾತಿಷ್ಠಮಾನೋ ಬಭೂವ । ತತ್ರ ಭಗವತೇ ಶಾಂಡಿಲ್ಯಾಯ ಭಗವತಾ ಸಂಕರ್ಷಣೇನ ವ್ಯಕ್ತೇನ ಶಬ್ದವಚ್ಛಾಸ್ತ್ರಂ ಪ್ರೋಕ್ತಂ'** ॥ ಪೂಜ್ಯನಾದ ಶಾಂಡಿಲ್ಯನು ಷಡಂಗವೇದಾಧ್ಯಯನವನ್ನು ಮಾಡಿ ಆ ಶ್ರೇಷ್ಠವಾದ ಆಮ್ನಾಯ

(ವೇದ) ದಲ್ಲಿ ನಿರ್ಣಯವನ್ನು ಹೊಂದದಿರುವವನಾಗಿ ಯಾವುದು ಧರ್ಮವು ಸರ್ವಕ್ಕಿಂತ ಶ್ರೇಷ್ಠ ವಾದುದೋ, ಯಾವುದಕ್ಕಿಂತ ಮತ್ತೊಂದು ಶ್ರೇಷ್ಠವಾದುದು ಇಲ್ಲವೋ, ಹೇಗೆ ತಾನೇ ಅದನ್ನು ತಿಳಿದೇನು? ಹೀಗೆ ಮಹತ್ತಾದ ವಿಚಾರವನ್ನು ಹೊಂದುವವನಾದನು. ಆಗ ಪೂಜ್ಯನಾದ ಶಾಂಡಿಲ್ಯ ನಿಗೆ ಪೂಜ್ಯನಾದ ಸಂಕರ್ಷಣನು ವ್ಯಕ್ತನಾಗಿ ವಿಸ್ಪಷ್ಟವಾಗಿ ಅರ್ಥವನ್ನು ಪ್ರತಿಪಾದಿಸುವ ಶಬ್ದ ದಿಂದ ಕೂಡಿದ ಪಂಚರಾತ್ರವನ್ನು ಹೇಳಿದನು, ಹೀಗೆ ವೇದಗಳ ನಿಂದೆಯು ಕಂಡದೆ. ಹಾಗೆಯೇ ಪಂಚರಾತ್ರದಲ್ಲಿ ಸ್ಥಲಾಂತರದಲ್ಲಿಯೂ ಇದೆ. **'ಅಧೀತಾ ಭಗವನ್ ವೇದಾಃ ಸಾಂಗೋ ಪಾಂಗಾಃ ಸವಿಸ್ತರಾಃ । ಶ್ರುತಾನಿ ಚ ಮಯಾಂಗಾನಿ ವಾಕೋವಾಕ್ಯಯುತಾನಿ ಚ । ನ ಚೈತೇಷು ಸಮಸ್ತೇಷು ಸಂಶಯೇನ ವಿನಾ ಕ್ವಚಿತ್ । ಶ್ರೇಯೋ ಮಾರ್ಗಂ ಪ್ರಪಶ್ಯಾಮಿ ಯೇನ ಸಿದ್ಧಿರ್ಭವಿಷ್ಯತಿ'** ॥ ಎಲೋ ಪೂಜ್ಯರೇ ಷಡಂಗ ಪ್ರತ್ಯಂಗಗಳಿಂದ ಕೂಡಿದ ಸವಿಸ್ತರಗಳಾದ ವೇದಗಳು ಅಧ್ಯಯನಮಾಡಲ್ಪಟ್ಟವು. ಉಕ್ತಿ, ಪ್ರತ್ಯುಕ್ತಿಗಳಿಂದೊಡ ಗೂಡಿದ ಅಂಗಗಳೂ ಶ್ರುತಗಳಾಗಿವೆ. ಇವುಗಳನ್ನೆಲ್ಲಾ ಅಧ್ಯಯನಮಾಡಿದರೂ ಮತ್ತು ಮತ್ತೂ ಸಂಶಯವೇ ಹುಟ್ಟಿತು ಹೊರತು ಸಂಶಯಪರಿಹಾರವಾಗಿ ಶ್ರೇಯೋಮಾರ್ಗವನ್ನು ತಿಳಿಯಲೇ ಇಲ್ಲ. ಇನ್ನು ಯಾವುದರಿಂದ ಶ್ರೇಯೋಮಾರ್ಗ ಸಿದ್ಧಿಯಾಗುವುದು? ಆದುದರಿಂದ ವೇದಾದಿಗ ಳನ್ನು ನಿಷೇಧಮಾಡಿರುವುದರಿಂದ ಪಂಚರಾತ್ರಶಾಸ್ತ್ರವು ಅಯುಕ್ತವು ಎಂದು ಮಾಯಾವಾದಿಗಳು ಹೇಳುತ್ತಾರೆ.

ಈ ಅಪವ್ಯಾಖ್ಯಾನವನ್ನು ತಿರಸ್ಕರಿಸುತ್ತಾರೆ—

**ಮೂ ॥ ಪಂಚರಾತ್ರನಿಷೇಧಾರ್ಥಮೇತಾನ್ಯಾಚಕ್ಷತೇ ಯದಿ ।**
**ಸೂತ್ರಾಣ್ಯತಿವಿರುದ್ಧಂ ತದ್ಯತ ಆಹ ಸ ಭಾರತೇ ॥ ೩೦೦ ॥**
**ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಂ ।**
**ಜ್ಞಾನೇಷ್ವೇತೇಷು ರಾಜೇಂದ್ರ ಸರ್ವೇಷ್ವೇತದ್ವಿಶಿಷ್ಯತೇ ॥ ೩೦೧ ॥**
**ಪಂಚರಾತ್ರವಿದೋ ಯೇ ತು ಯಥಾಕ್ರಮಪರಾ ನೃಪ ।**
**ಏಕಾಂತಭಾವೋಪಗತಾ ವಾಸುದೇವಂ ವಿಶಂತಿ ತೇ ॥**
**ಇತಿ ಗೀತಾ ಚ ತಚ್ಛಾಸ್ತ್ರ ಸಂಕ್ಷೇಪ ಇತಿ ಹೀರಿತಂ ॥ ೩೦೨ ॥**

ಅ ॥ ಪಂಚರಾತ್ರನಿಷೇಧಾರ್ಥಂ=ಪಂಚರಾತ್ರಾಗಮಕ್ಕೆ ಅಪ್ರಾಮಾಣ್ಯವನ್ನು ಹೇಳುವು ದಕ್ಕಾಗಿ, ಏತಾನಿ ಸೂತ್ರಾಣಿ = ಈ ಸೂತ್ರಗಳನ್ನು, ಆಚಕ್ಷತೇ ಯದಿ = ಸೂತ್ರಕಾರರು ಹೇಳುತ್ತಾರೆ ಎಂದು ಆದರೆ, ತತ್=ಆ ಸೂತ್ರಕಾರರು ಪಂಚರಾತ್ರಕ್ಕೆ ಅಪ್ರಾಮಾಣ್ಯವನ್ನು ಹೇಳುವುದಕ್ಕಾಗಿ ಈ ಸೂತ್ರಗಳನ್ನು ಮಾಡಿರುತ್ತಾರೆನ್ನುವ ವ್ಯಾಖ್ಯಾನವು, ಅತಿವಿರುದ್ಧಂ= ಅತಿಶಯವಾಗಿ ವಿರುದ್ಧವಾಗಿದೆ, ಸ್ವವ್ಯಾಹತವೂ ಆಗಿದೆ, ಪ್ರಮಾಣಾಂತರದಿಂದ ಬಾಧಿತವೂ ಆಗಿದೆ. (ಅದು ಹೇಗೆಂದರೆ— ಸ್ವವ್ಯಾಹತಿಯನ್ನುಪಪಾದಿಸುತ್ತಾರೆ.) ಯತಃ=ಯಾವ ಕಾರಣ ದ್ದೆಶೆಯಿಂದ, ಸಃ = ಸೂತ್ರಕಾರರೇ, ಭಾರತೇ = ಭಾರತದಲ್ಲಿ, ಆಹ = ಪಂಚರಾತ್ರಕ್ಕೆ ಪ್ರಾಮಾಣ್ಯವನ್ನು ಹೇಳಿರುವರು. (ಆದ ಕಾರಣ ಇಲ್ಲಿ ಪಂಚರಾತ್ರವನ್ನು ನಿರಾಕರಿಸಿದರೆ ಸೂತ್ರಕಾರರಿಗೆ ಸ್ವವಚನ ವ್ಯಾಹತಿಯು ಬರುವುದು.) (ಆ ಭಾರತವಚನವನ್ನುದಾಹರಿಸುತ್ತಾರೆ.) **('ಸಾಂಖ್ಯಂ ಯೋಗಃ ಪಾಶುಪತಂ ವೇದಾರಣ್ಯಕಮೇವ ಚ । ಜ್ಞಾನಾನ್ಯೇತಾನಿ ಭಿನ್ನಾನಿ ಉತಾಹೋ ನೇತಿ ಚೋಚ್ಯತಾಂ'** ॥ ಜ್ಞಾನಕರಣಗಳಾಗಿರುವುದರಿಂದ ಜ್ಞಾನ ಶಬ್ದವಾಚ್ಯಗಳಾದ ಸಾಂಖ್ಯಾದಿ ಶಾಸ್ತ್ರಗಳು ೧ ಪರಸ್ಪರ ವಿರುದ್ಧಗಳೋ, ೨ ಅವಿರುದ್ಧಗಳೋ

ಎನ್ನುವ ಪ್ರಶ್ನೆಗೆ, '**ಸಾಂಖ್ಯಂ ಯೋಗಃ ಪಾಶುಪತಂ ವೇದಾರಣ್ಯಕಮೇವ ಚ । ಜ್ಞಾನಾನ್ಯೇತಾನಿ ಭಿನ್ನಾನಿ ನಾತ್ರ ಕಾರ್ಯಾ ವಿಚಾರಣಾ**'॥ ಸಾಂಖ್ಯ ಯೋಗ, ಪಾಶುಪತ, ಪಂಚರಾತ್ರ ಇವುಗಳು ಭಿನ್ನಗಳೇ. ಈ ವಿಷಯದಲ್ಲಿ ವಿಚಾರವಿಲ್ಲ, ಎಂದು ಪರಿಹಾರವು ಹೇಳಲ್ಪಟ್ಟದೆ. ಆ ಮೇಲೆ ವಿರುದ್ಧ ಅನೇಕ ಸಾಂಖ್ಯಾದಿ ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ವಸ್ತುಗಳಿಗೆ ಏಕಪ್ರಕಾರತ್ವ ಕೂಡದಿರುವುದರಿಂದ ಪರಸ್ಪರ ವಿರುದ್ಧಗಳಾದ ಸರ್ವಶಾಸ್ತ್ರಗಳಿಗೆ ಪ್ರಾಮಾಣ್ಯವು ಕೂಡದಿರುವುದರಿಂದ ಇವುಗಳಲ್ಲಿ ಯಾವುದು ಪ್ರಮಾಣವು ಎಂದು ವಿಚಾರವು ಬಂದರೆ— '**ಸಾಂಖ್ಯಸ್ಯ ವಕ್ತಾ ಕಪಿಲಃ ಪರಮರ್ಷಿಃ ಸ ಉಚ್ಯತೇ । ಪ್ರಾಚೀನಗರ್ಭಂ ತಮೃಷಿಂ ಪ್ರವದಂತೀಹ ಕೇಚನ । ಹಿರಣ್ಯಗರ್ಭೋ ಯೋಗಸ್ಯ ವಕ್ತಾ ಚೈವ ಚತುರ್ಮುಖಃ । ಉಮಾಪತಿಃ ಭೂತಪತಿಃ ಶ್ರೀಕಂಠೋ ಬ್ರಹ್ಮಣಃ ಸುತಃ । ಉಕ್ತವಾನಿದಮವ್ಯಗ್ರಂ ಜ್ಞಾನಂ ಪಾಶುಪತಂ ಶಿವಂ**'॥ ಇತ್ಯಾದಿಗಳಿಂದ ಸಾಂಖ್ಯಾದಿ ಶಾಸ್ತ್ರಗಳು ಅನಾಪ್ತಪ್ರಣೀತಗಳೆಂದು ಹೇಳಿ ಮೊದಲು ವೇದಾರಣ್ಯಕ ಪದದಿಂದ ಉಪಲಕ್ಷಿತವಾದ ಪಂಚರಾತ್ರವನ್ನು ಪರಮಾಪ್ತತಮನಾದ ನಾರಾಯಣನು ಮಾಡಿರುವುದರಿಂದ ಪ್ರಮಾಣವೇ ಎಂದು ಈ ಮೇಲಿನ ವಾಕ್ಯದಿಂದ ಹೇಳಲ್ಪಡುತ್ತದೆ.) ಪಂಚರಾತ್ರಸ್ಯ ಕೃತ್ಸ್ನಸ್ಯ = ನಿಖಿಲ ಪಂಚರಾತ್ರಾಗಮವನ್ನು, ವಕ್ತಾ = ಹೇಳಿದವನು, ಸ್ವಯಂ ನಾರಾಯಣಃ = ಸಾಕ್ಷಾನ್ನಾರಾಯಣನೇ. ರಾಜೇಂದ್ರ=ರಾಜಶ್ರೇಷ್ಠನೇ, ಏತೇಷು ಸರ್ವೇಷು ಜ್ಞಾನೇಷು=ಈ ಎಲ್ಲಾ ಜ್ಞಾನಸಾಧನಗ್ರಂಥಗಳಲ್ಲಿ, ಏತತ್=ಈ ಪಂಚರಾತ್ರವು, ವಿಶಿಷ್ಯತೇ=ಶ್ರೇಷ್ಠವಾಗಿದೆ. (ವೇದಗಳಾದರೂ ಅಪೌರುಷೇಯಗಳಾಗಿರುವುದರಿಂದ ಅವುಗಳಿಗೆ ಪ್ರಾಮಾಣ್ಯವು ಸ್ವತಏವ ಸಿದ್ಧವಾಗಿದೆ.) ನೃಪ=ರಾಜನೇ, ಯೇ ತು=ಯಾರು, ಪಾಂಚರಾತ್ರವಿದಃ=ಪಂಚರಾತ್ರಾಗಮವನ್ನು ತಿಳಿದಿರುವರೋ, ಯಥಾಕ್ರಮಪರಾಃ=ದೇವತಾ ತಾರತಮ್ಯವನ್ನು ತಿಳಿದಿರುವ, ಏಕಾಂತಭಾವೋಪಗತಾಃ=ಪರಮಭಕ್ತಿಯನ್ನು ಹೊಂದಿರುವ, ತೇ=ಅವರು, ವಾಸುದೇವಂ = ವಾಸುದೇವನನ್ನು, ವಿಶಂತಿ=ಪ್ರವೇಶಿಸುತ್ತಾರೆ. (ಇದರಿಂದ ಸಫಲಪ್ರವೃತ್ತಿಯನ್ನು ಹುಟ್ಟಿಸುವುದರಿಂದಲೂ ಪಂಚರಾತ್ರಕ್ಕೆ ಪ್ರಾಮಾಣ್ಯವೆಂದು ಸಿದ್ಧವಾಯಿತು.) (ಪ್ರಕಾರಾಂತರದಿಂದ ಸ್ವವ್ಯಾಹತಿಯನ್ನು ಹೇಳುತ್ತಾರೆ.) ಇತಿ = ಹೀಗೆಯೇ, ಗೀತಾ ಚ=ಭಗವದ್ಗೀತೆಯೂ ಕೂಡ, ತಚ್ಛಾಸ್ತ್ರಸಂಕ್ಷೇಪಃ = ಪಂಚರಾತ್ರ ಸಂಕ್ಷೇಪವು, ಇತಿ ಹಿ = ಹೀಗೆಯೇ, ಈರಿತಂ = ಹೇಳಲ್ಪಟ್ಟದೆ. (ಅಂದರೆ, '**ಬ್ರಹ್ಮರುದ್ರೇಂದ್ರ ಸೂರ್ಯಾಣಾಂ ಯದ್ವೃತ್ತಂ ವಿಷ್ಣುನಾ ಪುರಾ । ಪಂಚರಾತ್ರಾತ್ಮಕಂ ಜ್ಞಾನಂ ವ್ಯಾಸೋಽದಾತ್ಪಾಂಡವೇಷು ತತ್ । ತೇಷಾಮೇವಾವತಾರೇಷು ಸೇನಾಮಧ್ಯೇಽರ್ಜುನಾಯ ಚ । ಪ್ರಾದಾದ್ಗೀತೇತಿ ನಿರ್ದಿಷ್ಟಂ ಸಂಕ್ಷೇಪೇಣಾಯುಯುತ್ಸವೇ**'॥ ಇತ್ಯಾದಿ ಪುರಾಣವಾಕ್ಯದಿಂದ ಹೇಳಲ್ಪಟ್ಟದೆ. ಆದುದರಿಂದ ಪ್ರಮಾಣವಾದ ಪಂಚರಾತ್ರಾಗಮದ ಸಂಕ್ಷೇಪರೂಪವಾದ ಗೀತೆಯನ್ನು ನಿರ್ಮಿಸಿರುವ ವೇದವ್ಯಾಸರಿಗೆ ಪಂಚರಾತ್ರಪ್ರಾಮಾಣ್ಯವು ಅನುಮತವೇ ಆಗಿದೆ. ಪುನಃ ಅದನ್ನು ಇಲ್ಲಿ ನಿರಾಕರಿಸಿದರೆ ಸ್ವವ್ಯಾಹತಿಯು ಹೇಗೆತಾನೇ ಬಾರದೆ ಹೋಗುವುದು? ॥ ೨೦೦ ॥ ೨೦೧ ॥ ೨೦೨ ॥

ಸ್ವವ್ಯಾಹತಿಯನ್ನು ಪ್ರಕಾರಾಂತರದಿಂದಲೂ ತೋರಿಸುತ್ತಾರೆ—

**ಮೂ ॥ ವೇದೇನ ಪಂಚರಾತ್ರೇಣ ಭಕ್ತ್ಯಾ ಯಜ್ಞೇನ ಚೈವ ಹಿ ॥ ೨೦೩ ॥**

**ದೃಶ್ಯೋಽಹಂ ನಾನ್ಯಥಾ ದೃಶ್ಯೋ ವರ್ಷಕೋಟಿಶತೈರಪಿ ।**

**ಇತಿ ನಾರಾಯಣವಚನಂ ಶ್ಲೋಕಾ ಇತಿ ವಚಃ ಶ್ರುತೌ ॥ ೨೦೪ ॥**

ಅ ॥ ವೇದೇನ=ವೇದದಿಂದ, ಪಂಚರಾತ್ರೇಣ=ಪಂಚರಾತ್ರಾಗಮದಿಂದ, ಭಕ್ತ್ಯಾ = ಭಕ್ತಿಯಿಂದ, ಯಜ್ಞೇನ ಚೈವ=ಯಜ್ಞದಿಂದಲೇ, ಅಹಂ=ನಾನು, ದೃಶ್ಯಃ=ಕಾಣಿಸಿಕೊಳ್ಳಲ್ಪಡ ತಕ್ಕವನು, ಅನ್ಯಥಾ=ಇಲ್ಲವಾದರೆ, ವರ್ಷಕೋಟಿಶತೈರಪಿ=ನೂರುಕೋಟಿ ವರ್ಷಗಳಿಂದಲೂ, ನ ದೃಶ್ಯಃ=ಕಾಣಿಸಿಕೊಳ್ಳಲ್ಪಡತಕ್ಕವನಲ್ಲ. ಇತಿ=ಹೀಗೆ, ವಾರಾಹವಚನಂ=ವರಾಹಪುರಾಣದ ವಚನವು. (ಹೀಗೆ ವರಾಹಪುರಾಣದಲ್ಲಿ ಭಗವದ್ದರ್ಶನಕ್ಕೆ ಸಾಧನವಾಗಿ ವೇದದಂತೆ ಪಂಚರಾತ್ರಕ್ಕೆ [ಹೀಗೆ ಪ್ರಾಮಾಣ್ಯವನ್ನು ಅಂಗೀಕರಿಸಿ, ಇಲ್ಲಿ ಪುನಃ ಅದನ್ನು ನಿರಾಕರಿಸಿದರೆ ವ್ಯಾಹತಿಯೇ ಬರುವುದು.] ಸ್ವವ್ಯಾಹತಿಯನ್ನು ಪ್ರತಿಪಾದಿಸಿ, ಪ್ರಮಾಣಾಂತರವಿರೋಧವನ್ನೂ ತೋರಿಸುತ್ತಾರೆ.) ಶ್ರುತೌ=ಶ್ರುತಿಯಲ್ಲಿ, ಶ್ಲೋಕಾಃ ಇತಿ ವಚಃ=ಶ್ಲೋಕಾಃ ಎನ್ನುವ ವಚನವು, ಅಸ್ತಿ=ಇದೆ.

ತಾ ॥ ನ್ಯಾಯಸುಧಾ— (1) **'ಋಗ್ವೇದೋ ಯಜುರ್ವೇದಃ ಸಾಮವೇದೋ ಥರ್ವಾಂಗೀರಸಃ ಇತಿಹಾಸಃ ಪುರಾಣಂ ವಿದ್ಯಾಃ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಾನಿ ವ್ಯಾಖ್ಯಾನಾನಿ'** ಎನ್ನುವ ಶ್ರುತಿಯಲ್ಲಿ ಋಗ್ವೇದ ಮೊದಲಾದ ಪ್ರಮಾಣೋದ್ದೇಶಪ್ರಸಂಗದಲ್ಲಿ 'ಶ್ಲೋಕಾಃ' ಎನ್ನುವುದರಿಂದ ಪಂಚರಾತ್ರವು ಉಪಾತ್ತವಾಗಿದೆ. 'ಪಂಚರಾತ್ರವಿದೋ ಮುಖ್ಯಾಃ' ಎಂದು ಪ್ರಕೃತ ಪಂಚರಾತ್ರವಿಷಯವಾಗಿ **'ಋಷೀನುವಾಚ ತಾನ್ ಸರ್ವಾನದೃಶ್ಯಃ ಪುರುಷೋತ್ತಮಃ । ಕೃತಂ ಶತಸಹಸ್ರಂ ಹಿ ಶ್ಲೋಕಾನಾಂ ಹಿತಮುತ್ತಮಂ'** ॥ ಎಂದು ಶ್ಲೋಕಶಬ್ದವು ಭಾರತದಲ್ಲಿ ಪ್ರಯುಕ್ತವಾಗಿದೆ. (2) ಛಂದೋಗ ಶ್ರುತಿಯಲ್ಲಿ **'ಋಗ್ವೇದೋ ಯಜುರ್ವೇದಃ'** ಎಂದಾರಂಭಿಸಿ, **'ಏಕಾಯನಂ'** ಎನ್ನುವುದರಿಂದ ಪಂಚರಾತ್ರವು ಹೇಳಲ್ಪಡುತ್ತದೆ. ಅದರ ಸಮಾಖ್ಯೆಯಿಂದ ಶ್ಲೋಕಶಬ್ದವು ಪಂಚರಾತ್ರ ವಿಷಯಕವೆಂದು ತಿಳಿಯಲ್ಪಡುತ್ತದೆ. ಆದ ಕಾರಣ ಶ್ರುತಿಯಿಂದ ಪಂಚರಾತ್ರಪ್ರಾಮಾಣ್ಯವು ಸಿದ್ಧವಾಯಿತು. ಆದಕಾರಣ ಪಂಚರಾತ್ರವು ಅಪ್ರಮಾಣವು ಎನ್ನುವ ವಾದವು ಶ್ರುತಿ ವಿರುದ್ಧವು. ॥ ೩೦೩ ॥ ೩೦೪ ॥

ಸ್ಪಷ್ಟ ಶ್ರುತಿವಿರೋಧವನ್ನೂ ತೋರಿಸುತ್ತಾರೆ—

**ಮೂ ॥ ವೇದೈಶ್ಚ ಪಂಚರಾತ್ರೈಶ್ಚ ಧ್ಯೇಯೋ ನಾರಾಯಣಃ ಪರಃ ।**
**ಪಂಚರಾತ್ರಂ ಚ ವೇದಾಶ್ಚ ವಿದ್ಯೈಕೈವ ದ್ವಿಧೇಯತೇ ॥ ೩೦೫ ॥**
**ಇತ್ಯಾದಿ ವೇದವಚನೈಃ ಪಂಚರಾತ್ರಮುಪೋದ್ಯತೇ ।**
**ಕಥಮೇವಾತ್ರ ದೋಷಃ ಕಃ ಉತ್ಪತ್ತಿಶ್ಲೋಕ ಇತ್ಯಪಿ ।**
**ಇತ್ಯೇವೋಕ್ತ್ವಾ ನ ಚಾಭೂತಭಾವಸ್ತತ್ರಾಪಿ ಕಥ್ಯತೇ ॥ ೩೦೬ ॥**

ಅ ॥ ವೇದೈಶ್ಚ ಪಂಚರಾತ್ರೈಶ್ಚ = ವೇದಗಳಿಂದಲೂ, ಪಂಚರಾತ್ರಗಳಿಂದಲೂ, ಅಂದರೆ ವೇದಪಂಚರಾತ್ರಗಳಲ್ಲಿ ಹೇಳಲ್ಪಟ್ಟ ಪ್ರಕಾರದಿಂದ, ಪರಃ = ಸರ್ವೋತ್ತಮನಾದ, **ನಾರಾಯಣಃ** = ಶ್ರೀ ನಾರಾಯಣನು, ಧ್ಯೇಯಃ = ಧ್ಯಾನಮಾಡಿಸಿಕೊಳ್ಳಲಿಕ್ಕೆ ಯೋಗ್ಯನು. (ಪರಸ್ಪರ ವಿರುದ್ಧಗಳಾದ ಎರಡು ಶಾಸ್ತ್ರಗಳನ್ನು ಅನುಸರಿಸಿ ಧ್ಯಾನವು ಹೇಗೆಂದರೆ) ಏಕೈವ ವಿದ್ಯಾ=ಒಂದೇ ವಿದ್ಯೆಯು, ಪಂಚರಾತ್ರಂ ಚ = ಪಂಚರಾತ್ರವೆಂದೂ, ವೇದಾಶ್ಚ = ವೇದಗಳೆಂದೂ, ದ್ವಿಧಾ=ಎರಡು ಪ್ರಕಾರ, ಈಯತೇ=ಹೇಳಲ್ಪಡುತ್ತದೆ, ಇತ್ಯಾದಿವೇದವಚನೈಃ=ಇದು ಮೊದಲಾದ ವೇದವಚನಗಳಿಂದಲೂ, (ಪಂಚರಾತ್ರಕ್ಕೆ ಅಪ್ರಾಮಾಣ್ಯ ಕಥನವು ವಿರುದ್ಧವು.)

(ಅದರಿಂದ ಏನಾಯಿತೆಂದರೆ) (ಯಾವ ಕಾರಣದಿಂದ ಹೀಗೆ ಪಂಚರಾತ್ರನಿರಾಕರಣವು ಸ್ವವ್ಯಾಹತವೂ ಪ್ರಮಾಣಾಂತರವ್ಯಾಹತವೂ ಆಗಿದೆಯೋ ಆದಕಾರಣ ಇಲ್ಲಿ ಸೂತ್ರಕಾರದಿಂದ) ಪಂಚರಾತ್ರಂ=ಪಂಚರಾತ್ರಾಗಮವು, ಅಪೋದ್ಯತೇ=ದೂಷಿಸಿಕೊಳ್ಳಲ್ಪಡುತ್ತದೆ. ಇತಿ=ಹೀಗೆ, ಕಥಮೇವ=ಹೇಗೆತಾನೇ ಹೇಳಲಿಕ್ಕೆ ಶಕ್ಯವಾಗುತ್ತದೆ? (ವೇದವ್ಯಾಸರು ವ್ಯಾಹತಭಾಷಿಗಳಲ್ಲವಷ್ಟೆ) (ಕಾರಣಾಂತರದಿಂದಲೂ ಪಂಚರಾತ್ರದೂಷಣವು ಯುಕ್ತವಲ್ಲವೆನ್ನುತ್ತಾರೆ.) ಅತ್ರ = ಪಂಚರಾತ್ರದಲ್ಲಿ, ಕಃ=ಯಾವ, ದೋಷಃ=ಅಪ್ರಾಮಾಣ್ಯಕಾರಣವಾದ ದೋಷವು, (ಇರುತ್ತದೆ ಎನ್ನುವ ಕಾರಣದಿಂದ ಅದನ್ನು ನಿರಾಕರಿಸತಕ್ಕುದು ಯಾವುದೂ ಇಲ್ಲ.) (ಹಾಗಾದರೆ ಜೀವೋತ್ಪತ್ತಿಯು ಅಸಂಭಾವಿತವಾಗಿರುವುದರಿಂದ ಅದನ್ನು ಪಂಚರಾತ್ರದಲ್ಲಿ ಹೇಳಿರುವುದರಿಂದ ಹೇಗೆ ತಾನೇ ದೋಷವಿಲ್ಲದಿರುವುದು ಎಂದರೆ ಅಂಗೀಕರಿಸಿಕೊಂಡು ಹೇಳುತ್ತಾರೆ.) ಉತ್ಪತ್ತಿಃ=(೧ ಜೀವೋತ್ಪತ್ತ್ಯಭಿಧಾನಮಾತ್ರವು ಪಂಚರಾತ್ರದ ಅಪ್ರಾಮಾಣ್ಯಹೇತುವೆಂದು ಅಂಗೀಕರಿಸಲ್ಪಡುತ್ತದೋ, ೨ ಅಥವಾಅಭೂತಭವನರೂಪಜೀವೋತ್ಪತ್ತ್ಯಭಿಧಾನವೋ,ಅಂದರೆದೇಹಾದಿಜಡಸಾಧಾರಣವಾದಉತ್ಪತ್ತಿಯೋ ೧ನೇ ಕಲ್ಪದಲ್ಲಿ) ಉತ್ಪತ್ತಿಮಾತ್ರವು, ಇಹೈವ=ಪ್ರಮಾಣವೆಂದಂಗೀಕರಿಸಿದ ಮೀಮಾಂಸಾ ಶಾಸ್ತ್ರದಲ್ಲಿಯೇ 'ಜ್ಞೋತಃ' ಇತಿ='**ಜ್ಞೋತ ಏವ**' ಎನ್ನುವ ಸೂತ್ರದಿಂದ, ಉಕ್ತಾ=ಹೇಳಲ್ಪಟ್ಟದೆ. ಅಪಿ='**ಸರ್ವ ಏವೈತೇ ಆತ್ಮಾನೋ ವ್ಯುಚ್ಚರಂತಿ**' ಎನ್ನುವ ಶ್ರುತಿಯಲ್ಲಿಯೂ, ಉಕ್ತಾ=ಹೇಳಲ್ಪಟ್ಟದೆ. (ಆದಕಾರಣ ವೇದ ಮೀಮಾಂಸಾ ಶಾಸ್ತ್ರಗಳಿಗೂ ಅಪ್ರಾಮಾಣ್ಯವು ಬರಬೇಕಾಗುವುದು. ಇಲ್ಲವಾದರೆ 'ಪಂಚರಾತ್ರಮಪ್ರಮಾಣಂ ಜೀವೋತ್ಪತ್ತಿಸಾಮಾನ್ಯ ಕಥಕತ್ವಾತ್ ತಾದೃಶ ಲೌಕಿಕವಾಕ್ಯವತ್' ಎಂದಭಿಮತವಾದ ಹೇತುವಿಗೆ ವ್ಯಭಿಚಾರವು ಬರಬೇಕಾಗುವುದು. ಜ್ಞೋತ ಏವ ಎನ್ನುವ ಸೂತ್ರಾರ್ಥದಲ್ಲಿ ಏಪ್ರತಿವನ್ನನನ್ನು ಕುರಿತು ಶ್ರುತಿಯನ್ನೇ ಉದಾಹರಿಸಬೇಕು.) (ಇದೆಲ್ಲಾ ಆಗಬಹುದು. ಆದರೆ ಅಭೂತಭವನರೂಪ ಜೀವೋತ್ಪತ್ತಿಬೋಧಕತ್ವಾತ್ ಎನ್ನುವ ೨ನೇ ಹೇತುವನ್ನೇ ತೆಗೆದುಕೊಳ್ಳುತ್ತೇನೆ. ಈ ಹೇತುವು ಶ್ರುತಿಸೂತ್ರಗಳಲ್ಲಿ ಇರುವುದಿಲ್ಲ. ಅವುಗಳಲ್ಲಿ ಆದರೂ ಮೊದಲು ಇದ್ದ ಜೀವನಿಗೆ ದೇಹಮೊದಲಾದ ಉಪಾಧಿಗಳ ಅಪೇಕ್ಷೆಯಿಂದಲೇ ಉತ್ಪತ್ತಿಯು ಹೇಳಲ್ಪಡುತ್ತದೆ. ಅಭೂತಭವನರೂಪವಾದ ಉತ್ಪತ್ತಿಯು ಹೇಳಲ್ಪಡುವುದಿಲ್ಲ, ಎಂದಾಶಂಕಿಸಿದರೆ—) ತತ್ರಾಪಿ=ಪಂಚರಾತ್ರದಲ್ಲಿಯೂ ಕೂಡ, ಅಭೂತಭಾವಃ=ಮೊದಲು ಇಲ್ಲದಿದ್ದಕ್ಕೆ ಉತ್ಪತ್ತಿಯು, ನ ಚ ಕಥ್ಯತೇ=ಹೇಳಲ್ಪಡುವುದಿಲ್ಲ.

(ಅಂದರೆ ಹೇಗೆ ಶ್ರುತಿಸೂತ್ರಗಳಲ್ಲಿ ಜೀವೋತ್ಪತ್ತಿಯು ಪ್ರತೀತವಾದಾಗ್ಯೂ, ಅಭೂತಭವನವನ್ನು ಬಿಟ್ಟು ಉಪಾಧಿವಿಷಯಕವೆಂದು ವ್ಯಾಖ್ಯಾನಮಾಡಲ್ಪಡುತ್ತದೋ, ಹಾಗೆಯೇ ಪಂಚರಾತ್ರದಲ್ಲಿ ಹೇಳಿದ್ದನ್ನು ವ್ಯಾಖ್ಯಾನ ಮಾಡಲಿ. ಅಂತೂ ಹೇತುವಿಗೆ ಸ್ವರೂಪಾಸಿದ್ಧಿಯು. ಆದುದರಿಂದ ಅಭೂತ್ವಾಭವನ ರೂಪವಾದ ಜೀವೋತ್ಪತ್ತಿಯು ಪಂಚರಾತ್ರಾಗಮದಲ್ಲಿ ಹೇಳದೆ ಇರುವುದರಿಂದ ಪಂಚರಾತ್ರಾಗಮಕ್ಕೆ ಅಪ್ರಾಮಾಣ್ಯ ಹೇಳುವುದರಲ್ಲಿ ಯಾವ ಕಾರಣವೂ ಇಲ್ಲ.

**ಟೀ || ನ್ಯಾಯಸುಧಾ**— (1) ಈ ವ್ಯಾಪೃತಿಯೇ ಇಲ್ಲ. ಯಾವ ನಾರಾಯಣನು ಅವ್ಯಕ್ತದಿಂದುತ್ತಮನೋ ಅಂತಹ ಪ್ರಸಿದ್ಧನಾದ ಪರಮಾತ್ಮನು ತನ್ನಿಂದ ತನ್ನನ್ನು ಅನೇಕ ಪ್ರಕಾರವಾಗಿ ಮಾಡಿಕೊಂಡು ಇದ್ದಾನೆ. ಇಂತಹ ಷಡ್ಗುಣಾತ್ಮಕ ಶರೀರವುಳ್ಳ ಶ್ರೀ ಹರಿಯನ್ನು ಪಂಚಕಾಲವೆಂದು ಹೆಸರುಳ್ಳ ಅಭಿಗಮನ (ಪೂಜೆಗೋಸ್ಕರ ಭಗವನ್ಮಂದಿರಕ್ಕೆ ಹೋಗುವಿಕೆ) ಉಪಾದಾನ (ಪೂಜಾಸಾಧನವನ್ನು ತೆಗೆದುಕೊಳ್ಳುವಿಕೆ) ಇಜ್ಯಾ, ಸ್ವಾಧ್ಯಾಯ, ಯೋಗಗಳಿಂದ ಅನೇಕಕಾಲದಲ್ಲಿ ಯಾಗಮಾಡಿ ದುಃಖವನ್ನು ಬಿಟ್ಟು ಶ್ರೀ ಹರಿಯನ್ನೇ ಹೊಂದುತ್ತಾನೆ, ಇತ್ಯಾದಿಗಳಿಂದ ಪಂಚರಾತ್ರದಲ್ಲಿ ಹೇಳಲ್ಪಟ್ಟ ಅರ್ಥವು ಸ್ವೀಕೃತವಾಗಿದೆ. ಭಾರತಾದಿ ವಾಕ್ಯಗಳೂ

ತತ್ಪರಗಳೇ ಆಗುತ್ತವೆ, ಎಂದರೆ— ಹೀಗೆ ಹೇಳಕೂಡದು. ಹೀಗಾದರೆ ಸಾಂಖ್ಯಾದಿ ಶಾಸ್ತ್ರಗಳಲ್ಲಿಯೂ ಉಪಾದೇಯವಾದ ಅಂಶವು ಇದ್ದಪ್ರಯುಕ್ತ ವಿಶೇಷವಾಗಿ ಪಂಚರಾತ್ರಕ್ಕೆ ಪ್ರಾಮಾಣ್ಯ ಹೇಳಿದ್ದು ಕೂಡದೆ ಹೋಗಬೇಕಾಗುವುದು. ಕೃತ್ಸ್ನಸ್ಯ ಎನ್ನುವ ವಿಶೇಷಣವೂ ಕೂಡದೆ ಹೋಗಬೇಕಾಗುವುದು. (2) '**ಋಗಾದ್ಯಾ ಭಾರತಂಚೈವ ಪಂಚರಾತ್ರಮಥಾಖಿಲಂ । ವೇದಾರ್ಥ ಪೂರಕಂಜ್ಞೇಯಂ ಪಂಚರಾತ್ರಂಯತೋಽಖಿಲಂ**' ॥ ಎಂದು ಅಖಿಲಶಬ್ದ ವಿರೋಧವು, ಇತ್ಯಾದ್ಯರ್ಥವನ್ನು ಇಟ್ಟುಕೊಳ್ಳಬೇಕು. ॥ ೩೦೫ ॥ ೩೦೬ ॥

ಹಾಗಾದರೆ ಈ ಶ್ರುತಿಸೂತ್ರಗಳಲ್ಲಿ '**ಅನಾದಿ ಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ' ನಕರ್ಮಾವಿಭಾಗಾದಿತಿ ಚೇನ್ನಾನಾದಿತ್ವಾತ್**' ಇತ್ಯಾದಿಗಳಿಂದ ಅನಾದಿ ಕರ್ಮಾದಿ ಸಂಬಂಧವು ಹೇಳಲ್ಪಡುತ್ತದೆ. ಮೊದಲು ಇಲ್ಲದಿದ್ದ ಜೀವನಿಗೆ ಅನಾದಿಕರ್ಮಸಂಬಂಧವು ಕೂಡಲಾರದು. ಸಂಸಾರಾನಾದಿತ್ವವನ್ನು ಶ್ರುತಿಸೂತ್ರಗಳಲ್ಲಿ ಹೇಳಿರುವುದರಿಂದ ಅದನ್ನು ಅನುಸರಿಸಿ ಅಲ್ಲಿ ಜೀವೋತ್ಪತ್ತಿಯು ಪ್ರತೀತವಾದಾಗ್ಯೂ ಅದು ಉಪಾಧಿವಿಷಯಕವೆಂದೇ ವ್ಯಾಖ್ಯಾನಮಾಡಬೇಕು. ಅಂತಹ ಸಂಸಾರಾನಾದಿತ್ವಪ್ರತಿಪಾದನರೂಪವಾದ ಬಾಧಕವೂ ಪಂಚರಾತ್ರಾಗಮದಲ್ಲಿ ಇಲ್ಲ. ಆದುದರಿಂದ ಅಭೂತ್ವಾಭವನರೂಪವಾದ ಮುಖ್ಯಾರ್ಥವನ್ನು ಬಿಟ್ಟು ಹಿಂದೆ ಹೇಳಿದ ಅಮುಖ್ಯಾರ್ಥವನ್ನು ಹೇಗೆ ಇಟ್ಟುಕೊಳ್ಳುವುದು? ಆದಕಾರಣ ಮುಖ್ಯಾರ್ಥವನ್ನು ಇಟ್ಟುಕೊಂಡರೆ ಹೇತುವಿಗೆ ಅಸಿದ್ಧಿಯಿಲ್ಲ. ಎಂದಾಶಂಕಿಸಿದರೆ—

**ಮೂ ॥ ಅನಾದಿಕರ್ಮಣಾ ಬದ್ಧೋ ಜೀವಃ ಸಂಸಾರಮಂಡಲೇ ॥ ೩೦೭ ॥**
**ವಾಸುದೇವೇಚ್ಛಯಾ ನಿತ್ಯಂ ಭ್ರಮತೀತಿ ಹಿ ತದ್ವಚಃ ।**
**ನ ಹಿ ಸಂಸಾರ ಸಾದಿತ್ವಂ ಪಂಚರಾತ್ರೋದಿತಂ ಕ್ವಚಿತ್ ॥ ೩೦೮ ॥**

**ಅ** ॥ ಅನಾದಿಕರ್ಮಣಾ = ಅನಾದಿಯಾದ ಕರ್ಮದಿಂದ, ಬದ್ಧಃ = ಸಂಬದ್ಧನಾದ, ಜೀವಃ = ಜೀವನು, ಸಂಸಾರಮಂಡಲೇ = ಸಂಸಾರಸಮೂಹದಲ್ಲಿ, ವಾಸುದೇವೇಚ್ಛಯಾ = ವಾಸುದೇವನ ಇಚ್ಛೆಯಿಂದ, ನಿತ್ಯಂ = ನಿರಂತರದಲ್ಲಿಯೂ, ಭ್ರಮತಿ = ತಿರುಗಾಡಿಕೊಂಡಿರುತ್ತಾನೆ. ಇತಿ = ಹೀಗೆ, ತದ್ವಚಃ = ಪಂಚರಾತ್ರವಾಕ್ಯವು. (ಅಂತೂ ಶ್ರುತಿಸೂತ್ರಗಳಂತೆಯೇ ಪಂಚರಾತ್ರದಲ್ಲಿಯೂ ಕೂಡ ಜೀವನಿಗೆ ಅನಾದಿಕರ್ಮ ಸಂಬಂಧವನ್ನು ಹೇಳಿರುವುದರಿಂದ ಅದನ್ನು ಅನುಸರಿಸಿ ಅಲ್ಲಿ ಹೇಳಿದ ಜೀವೋತ್ಪತ್ತಿಯನ್ನೂಕೂಡ ದೇಹೋತ್ಪತ್ತಿರೂಪವೆಂದು ವ್ಯಾಖ್ಯಾನ ಮಾಡತಕ್ಕದ್ದೇ. ಅನ್ಯತರಪಕ್ಷಪಾತದಲ್ಲಿ ಕಾರಣವೇ ಇಲ್ಲ. ಅಂತೂ ಹೇತುವಿಗೆ ಅಸಿದ್ಧಿಯು, ತಪ್ಪಿದ್ದಲ್ಲ.) (ಆದಾಗ್ಯೂ ಆಗುವುದು. ಎಲ್ಲಿಯೂ ವೇದಾದಿಗಳಲ್ಲಿ ಸಂಸಾರಸಾದಿತ್ವಾದಿಗಳು ಜೀವರಿಗೆ ಅಭೂತ್ವಾಭವನ ರೂಪವಾದ ಉತ್ಪತ್ತಿಜ್ಞಾಪಕವಾದುದು ಸ್ಪಷ್ಟವಾಗಿ ಹೇಳಲ್ಪಡಲಿಲ್ಲ. ಆದಕಾರಣ ಅಲ್ಲಿರುವ ಜೀವೋತ್ಪತ್ತಿ ವಾಕ್ಯವು ಗೌಣೋತ್ಪತ್ತಿ ಪರವಾಗಿ ಯೋಜಿಸಬೇಕೆಂದು ಹೇಳುತ್ತೇವೆಂದರೆ ಈ ಕಾರಣವೂ ಪಂಚರಾತ್ರಾಗಮದಲ್ಲಿಯೂ ಸಮಾನವೆನ್ನುತ್ತಾರೆ.) ಕ್ವಚಿತ್ = ಎಲ್ಲಿಯೂ, ಸಂಸಾರಸಾದಿತ್ವಂ = ಸಂಸಾರಕ್ಕೆ ಸಾದಿತ್ವವು, ಪಂಚರಾತ್ರೋದಿತಂ = ಪಂಚರಾತ್ರದಲ್ಲಿ ಹೇಳಲ್ಪಟ್ಟದ್ದು, ನ ಹಿ = ಇಲ್ಲವಷ್ಟೆ.

**ತಾ** ॥ (1) ಇದೇ ನ್ಯಾಯದಿಂದ 'ನ ಚ ಕರ್ತುಃ ಕರಣಂ' ಎನ್ನುವುದನ್ನೂ ತಿರಸ್ಕರಿಸಬೇಕು. ಹೇಗೆಂದರೆ— ೧ ಕರಣವು ಕರ್ತೃವಿನಿಂದ ಹುಟ್ಟುವುದಿಲ್ಲ ಎಂದು ವ್ಯಾಪ್ತಿಯೋ, ೨ಅಥವಾ ಯಾವಕ್ರಿಯೆಯಲ್ಲಿ ಯಾವುದು ಕರಣವೋ ಆವಾವ ಕ್ರಿಯಾಕರ್ತನಿಂದ ಹುಟ್ಟುವುದಿಲ್ಲವೆಂದೋ,

೧ನೇದ್ದು ಕೂಡಲಾರದು. ವ್ಯಭಿಚಾರವು ಬರುವುದು. ಇಲ್ಲವಾದರೆ ಕರಣಗಳಿಗೆ ಅನುತ್ಪತ್ತಿಯು ಬರಬೇಕಾಗುವುದು. ೨ನೇದ್ದೂ ಕೂಡಲಾರದು. ಪ್ರಕೃತದಲ್ಲಿಯೂ ಅದುಸಿದ್ಧವಾಗಲಿಲ್ಲ. 'ಏತಸ್ಮಾಜ್ಜಾಯತೇ' ಎನ್ನುವ ಶ್ರುತಿವಿರೋಧವೂಕೂಡ ೧ ಜೀವನದ್ವೆಶೆಯಿಂದ ಮನಸ್ಸಿಗೆ ಉತ್ಪತ್ತಿಯನ್ನು ಮಾತ್ರ ಅಂಗೀಕರಿಸಿದರೆ ಬರುವುದೋ, ೨ ಅಥವಾ ಉತ್ಪತ್ತಿ ವಿಶೇಷವನ್ನು ಅಂಗೀಕರಿಸಿದರೆ ಬರುವುದೋ, ೧ನೇದ್ದು ಕೂಡಲಾರದು. '**ಅನ್ನಮಶಿತಂ ತ್ರೇಧಾ ವಿಧೀಯತೇ**' ಇತ್ಯಾದಿ ಶ್ರುತಿಗಳಿಂದ ಪ್ರತಿನಿತ್ಯವೂ ಮನಸ್ಸಿಗೆ ಜೀವನಿಂದ ಉತ್ಪತ್ತಿಯು ಇದೆ. ೨ನೇದ್ದೂ ಕೂಡಲಾರದು. ತಥಾಭಾವವು ಜನನವಿಶೇಷವು ಪ್ರಕೃತದಲ್ಲಿಯೂ ಅಸಮ್ಮತವು. ಹೀಗೆಯೇ ಮನಸ್ಸಿನಿಂದ ಅಹಂಕಾರದ ಉತ್ಪತ್ತಿಯಲ್ಲಿಯೂ ದೋಷವನ್ನು ಪರಿಹರಿಸಬೇಕು. ॥ ೩೦೭ ॥ ೩೦೮ ॥

ಹೀಗೆ ಜೀವಾದಿಪದಗಳಿಗೆ ಯಥಾಶ್ರುತವಾದ ಅರ್ಥವನ್ನು ಅಂಗೀಕರಿಸಿರುವುದರಿಂದ ಎರಡು ಸೂತ್ರಗಳಲ್ಲಿ ಹೇಳಿದ ದೋಷಪರಿಹಾರವು ಹೇಳಲ್ಪಟ್ಟದೆ. ಈಗ ವಾಸುದೇವನಿಂದ ಸಂಕರ್ಷಣನಾಮಕ ಜೀವನು ಹುಟ್ಟುತ್ತಾನೆ ಇದು ಮೊದಲಾದ ವಾಕ್ಯಕ್ಕೆ ಪರರು ಕಲ್ಪಿಸಿದ ಅರ್ಥಕ್ಕಿಂತ ಅರ್ಥಾಂತರವನ್ನು ಹೇಳುತ್ತಾರೆ.

**ಮೂ ॥ ಜೀವಾಭಿಮಾನಿಶೇಷಸ್ಯ ನಾಮ್ನಾ ಸಂಕರ್ಷಣಸ್ಯ ತು ।**
**ವಾಸುದೇವಾಜ್ಜನಿಃ ಪ್ರೋಕ್ತಾ ಪ್ರದ್ಯುಮ್ನಸ್ಯ ತತಸ್ತಥಾ ॥ ೩೦೯ ॥**
**ಮನೋಽಭಿಮಾನಿನಃ ಕಾಮಸ್ಯೈವಂ ಸಾಕ್ಷಾದ್ಧರೇಃ ಕ್ವಚಿತ್ ।**
**ಸಂಕರ್ಷಣಾದಿ ನಾಮ್ನೈವ ನಿತ್ಯಾಚಿಂತ್ಯೋರುಶಕ್ತಿತಃ ।**
**ವ್ಯೂಹಉಕ್ತೋಽನ್ಯಥಾಽನೂದ್ಯ ಕಥಂ ದುಷ್ಟತ್ವಮುಚ್ಯತೇ ॥ ೩೧೦ ॥**

ಅ ॥ ನಾಮ್ನಾ=ಹೆಸರಿನಿಂದ, ಸಂಕರ್ಷಣಸ್ಯ=ಸಂಕರ್ಷಣನಾಮಕನಾದ, ಜೀವಾಭಿಮಾನಿಶೇಷಸ್ಯ ತು=ಜೀವರಿಗೆ ಅಭಿಮಾನಿಯಾದ ಶೇಷನಿಗಾದರೂ, ವಾಸುದೇವಾತ್=ವಾಸುದೇವನದ್ವೆಶೆಯಿಂದ, ಜನಿಃ=ಉತ್ಪತ್ತಿಯು, ಪ್ರೋಕ್ತಾ=ಹೇಳಲ್ಪಟ್ಟದೆ. ತತಃ=ಸಂಕರ್ಷಣನದ್ವೆಶೆಯಿಂದ, ಪ್ರದ್ಯುಮ್ನಸ್ಯ ತಥಾ=ಪ್ರದ್ಯುಮ್ನನಾಮಕನಾದ, ಮನೋಽಭಿಮಾನಿನಃ ಕಾಮಸ್ಯ=ಮನಸ್ಸಿಗೆ ಅಭಿಮಾನಿಯಾದ ಮನ್ಮಥನಿಗೆ, ಉತ್ಪತ್ತಿಯು ಹೇಳಲ್ಪಟ್ಟದೆ. ಏವಂ=ಹೀಗೆಯೇ ಪ್ರದ್ಯುಮ್ನನದ್ವೆಶೆಯಿಂದ ಅಹಂಕಾರಾಭಿಮಾನಿಯಾದ ಕಾಮಪುತ್ರನಾದ ಅನಿರುದ್ಧನಿಗೆ, ಉತ್ಪತ್ತಿಯು ಹೇಳಲ್ಪಟ್ಟದೆ. ಸಾಕ್ಷಾತ್ = ಮುಖ್ಯವಾಗಿ, ಹರೇರೇವ = ಶ್ರೀಪರಮಾತ್ಮನಿಗೇನೇ, ಕ್ವಚಿತ್=ಕೆಲವುಕಡೆ ಕಾಲವಿಶೇಷದಲ್ಲಿಯೂ, ಪ್ರಯೋಜನವಿಶೇಷದಲ್ಲಿಯೂ, ಸಂಕರ್ಷಣಾದಿ ನಾಮ್ನಾ=ಸಂಕರ್ಷಣ ಮೊದಲಾದ ನಾಮದಿಂದ, ನಿತ್ಯಾಚಿಂತ್ಯೋರುಶಕ್ತಿತಃ = ನಿತ್ಯವಾದ, ಅಚಿಂತ್ಯವಾದ, ಉತ್ಕೃಷ್ಟವಾದ ಶಕ್ತಿಯಿಂದ, ವ್ಯೂಹಃ=ಸಮೂಹವು, ಉಕ್ತಃ=ಹೇಳಲ್ಪಟ್ಟದೆ. (ಅಂದರೆ ಆದಿ ಕಾಲದಲ್ಲಿ ಶ್ರೀ ಹರಿಯು ಸ್ವಕೀಯರಿಗೆ ಮುಕ್ತಿಸ್ಥಾನವನ್ನು ಕೊಡುವುದಕ್ಕಾಗಿ ವಾಸುದೇವಾದಿ ನಾಲ್ಕು ವ್ಯೂಹವುಳ್ಳವನಾದನು. ಆ ಮೇಲೆ ಕಾಲಾಂತರದಲ್ಲಿ ಪ್ರಯೋಜನಕ್ಕಾಗಿ ೧೦, ೧೨, ಇತ್ಯಾದಿ ವ್ಯೂಹದಿಂದ ವ್ಯಕ್ತನಾದನು. ಇದು ಶುದ್ಧಸೃಷ್ಟಿಯೆಂದು ಪಾಂಚರಾತ್ರಿಕರು ಹೇಳುತ್ತಾರೆ. ಅದನ್ನು ಅಪೇಕ್ಷಿಸಿ ಚತುರ್ವ್ಯೂಹವರ್ಣನವು ಹೇಗೆ ಅನುಪಪನ್ನವಾಗುವುದು.) (ಹೀಗೆ ವಿಶೇಷಾಧಿಕಾರಿಗಳಿಗೆ ಆರಾಧಿಸುವುದಕ್ಕಾಗಿ ಈ ಉಕ್ತಿಯು ಯುಕ್ತವೇ. '**ಏಕಮೂರ್ತಿಶ್ಚತುರ್ಮೂರ್ತಿರಥವಾ ಪಂಚಮೂರ್ತಿಕಃ । ದ್ವಾದಶಾದಿಪ್ರಭೇದೋ ವಾ ಪೂಜ್ಯತೇ ಸಜ್ಜನೈರ್ಹರಿಃ ॥**' ಎಂದು) (ಅರ್ಥಾಂತರವನ್ನು ಹೇಳಿದ್ದಕ್ಕೆ ಪ್ರಯೋಜನವನ್ನು ಹೇಳುತ್ತಾರೆ )

ಅನ್ಯಥಾ ಅನೂದ್ಯ = ಹೀಗೆ ಅರ್ಥಾಂತರವನ್ನು ವಿವಕ್ಷಾಮಾಡಿಕೊಂಡು ಪ್ರಯುಕ್ತವಾದ ವಾಕ್ಯಕ್ಕೆ ಬೇರೆ ಪ್ರಕಾರ ಅನುವಾದವನ್ನು ಮಾಡಿಕೊಂಡು, ದುಷ್ಟತ್ವಂ = ದೂಷಣಾಭಿಧಾನವು, ಕಥಂ = ಹೇಗೆ, ಉಚ್ಯತೇ = ಹೇಳಲ್ಪಡುತ್ತದೆ.

**ತಾ** ॥ (1) ಜೀವಾದಿಶಬ್ದಗಳು ಅನುಪಪನ್ನಗಳು ಎಂದು ಹೇಳಕೂಡದು. ಶ್ರೀಹರಿಯೇ ಮುಖ್ಯವಾಗಿ ಪ್ರಾಣಧಾರಣಾದಿಗಳುಳ್ಳವನೆಂದು ಅದರ ಅರ್ಥವು. (2) '**ವಿಪ್ರತಿಷೇಧಾಚ್ಚ**' ಎನ್ನುವ ಸೂತ್ರದಲ್ಲಿ ಅಥವಾ ಪಂಚರಾತ್ರದಲ್ಲಿ ಪರಸ್ಪರವ್ಯಾಹತಿಯಿದೆಯೆಂದು ಯಾವುದು ಕಲ್ಪಿತವಾಗಿದೆಯೋ, ಅದೂಕೂಡ '**ನಿತ್ಯಾಚಿಂತ್ಯೋರುಶಕ್ತಿತಃ**' ಎನ್ನುವುದರಿಂದಲೇ ಪರಿಹೃತವಾಯಿತು. ಭಗವಂತನ ಶಕ್ತಿಯಿಂದಲೇ ಗುಣಗುಣ್ಯಾದಿ ವ್ಯವಹಾರವು ಉಪಪನ್ನವಾಗುತ್ತದೆ. ಭೇದಸ್ಥಾನದಲ್ಲಿ ಅಭಿಷಿಕ್ತವಾದ ಸರ್ವನಿರ್ವಾಹಕ್ಕೆ ಕಾರಣವಾದ ವಿಶೇಷವೂ ಸಮರ್ಥಿತವಾಗಿದೆ ॥ ॥ ೩೦೯ ॥ ೩೧೦ ॥

ಶಾಂಡಿಲ್ಯ ವೃತ್ತಾಂತವನ್ನು ಹೇಳುವಾಗ ಪಂಚರಾತ್ರಕ್ಕೆ ವೇದವಿದ್ವೇಷವು ತೋರುತ್ತದೆಂದು ಯಾವುದು ಹೇಳಲ್ಪಡುತ್ತದೋ ಅದನ್ನು ನಿರಾಕರಿಸುತ್ತಾರೆ—

**ಮೂ** ॥ **ಯದಿ ವಿದ್ಯಾಚ್ಚತುರ್ವೇದಾನಿತಿವದ್ವೇದಪೂರಣಂ** ॥ ೩೧೧ ॥
**ಪಂಚರಾತ್ರಾದಿತಿ ಕುತೋ ದ್ವೇಷಃ ಶಾಂಡಿಲ್ಯವರ್ತನೇ ।**
**ಅತಃ ಪರಮಶಾಸ್ತ್ರೋರುದ್ವೇಷಾದುದಿತಮಾಸುರೈಃ ॥**
**ದೂಷಣಂ ಪಂಚರಾತ್ರಸ್ಯ ವೀಕ್ಷಾಯಾಮಪಿ ನ ಕ್ಷಮಂ** ॥ ೩೧೨ ॥

**ಅ** ॥ ಯದಿ = ಯಾವಪಕ್ಷದಲ್ಲಿ, ಚತುರ್ವೇದಾನ್ = ನಾಲ್ಕುವೇದಗಳನ್ನು, ವಿದ್ಯಾತ್ = ತಿಳಿದಾನೋ, ಇತಿ ವತ್ = ಇದರಂತೆ, ವೇದಪೂರಣಂ = ವೇದಪೂರಣವು ಅಭಿಪ್ರೇತವಾದರೆ, (ಅಂದರೆ '**ಯದಿ ವಿದ್ಯಾಚ್ಚತುರ್ವೇದಾನ್ ಸಾಂಗೋಪನಿಷದಾನ್ ದ್ವಿಜಃ । ನ ಚೇತ್ಪುರಾಣಂ ಸಂವಿದ್ಯಾನ್ನೈವ ಸ ಸ್ಯಾದ್ವಿಚಕ್ಷಣಃ**' ಎನ್ನುವ ವಾಕ್ಯದಲ್ಲಿ ಹೇಗೆ ಇತಿಹಾಸಪುರಾಣಾದಿಗಳಿಂದ ವೇದಪೂರಣವು ಅಭಿಪ್ರೇತವಾಗಿದೆಯೋ ಹಾಗೆಯೇ ಇಲ್ಲಿಯೂ) ಪಂಚರಾತ್ರಾತ್ = ಪಂಚರಾತ್ರದ್ವಾರೆಯಿಂದ, ವೇದಪೂರಣಂ = ವೇದಪೂರಣವು ಅಭಿಪ್ರೇತವಾಗಿದೆ. ಇತಿ = ಹೀಗೆ ವ್ಯಾಖ್ಯಾನಮಾಡಿದರೆ, ಶಾಂಡಿಲ್ಯವರ್ತನೇ = ಶಾಂಡಿಲ್ಯನ ವೃತ್ತಾಂತವು ಹೇಳಲ್ಪಡುತ್ತಿರಲು, ಪಂಚರಾತ್ರಸ್ಯ = ಪಂಚರಾತ್ರಕ್ಕೆ, ದ್ವೇಷಃ = ವೇದವಿದ್ವೇಷವು ತೋರುತ್ತದೆನ್ನುವುದು, ಕುತಃ = ಯಾವುದರಿಂದ ತೋರುವುದಿಲ್ಲ? ಅಥವಾ ಹೀಗೆ ವಾಕ್ಯದ್ವಯವು ಸಮಾನವಾಗುವಾಗ ಶಾಂಡಿಲ್ಯ ವರ್ತನವನ್ನು ಹೇಳತಕ್ಕ ವಾಕ್ಯದಲ್ಲಿಯೇ ನಿಮಗೆ ದ್ವೇಷವು ಯಾವುದರಿಂದ? ಅಂದರೆ 'ಯದಿ ವಿದ್ಯಾತ್' ಎನ್ನುವುದನ್ನು ಇತಿಹಾಸ ಪುರಾಣಗಳಿಗೆ ವೇದಪೂರಕತ್ವಾಭಿಪ್ರಾಯವನ್ನು ಇಟ್ಟುಕೊಂಡು 'ಭಗವಾನ್ ಶಾಂಡಿಲ್ಯಃ' ಇತ್ಯಾದಿ ಪಂಚರಾತ್ರವಾಕ್ಯವು ವೇದವಿರೋಧಿತ್ವಾಭಿಪ್ರಾಯವುಳ್ಳದ್ದೆಂದು ವ್ಯಾಖಾನಮಾಡಿದ್ದು ಏಕೆ? ಯದಿ ವಿದ್ಯಾತ್ ಎನ್ನುವ ವಾಕ್ಯದಂತೆ ಈ ಪಂಚರಾತ್ರಾಗಮವೂ ವೇದಪೂರಕತ್ವಾಭಿಪ್ರಾಯವುಳ್ಳದ್ದೆಂದೇ ಏಕೆ ಇಟ್ಟುಕೊಳ್ಳುವುದಿಲ್ಲ? (ಅಪವ್ಯಾಖ್ಯಾನ ನಿರಾಕರಣವನ್ನು ಉಪಸಂಹಾರಮಾಡುತ್ತಾರೆ.) ಅತಃ = ಆದಕಾರಣ, ಪರಮಶಾಸ್ತ್ರೋರುದ್ವೇಷಾತ್ = ಉತ್ಕೃಷ್ಟವಾದ ಶಾಸ್ತ್ರದಲ್ಲಿ (ಪಂಚರಾತ್ರದಲ್ಲಿ) ಮಹಾದ್ವೇಷದಿಂದ, ಆಸುರೈಃ = ಅಸುರರಿಂದ, ಉದಿತಂ = ಹೇಳಲ್ಪಟ್ಟ, ಪಂಚರಾತ್ರಸ್ಯ = ಪಂಚರಾತ್ರದ, ದೂಷಣಂ = ದೂಷಣವು, ವೀಕ್ಷಾಯಾಮಪಿ = ನೋಡುವುದರಲ್ಲಿಯೂ, ನ ಕ್ಷಮಂ = ಸಮರ್ಥವಲ್ಲ. (ವ್ಯಧಿಕರಣವು. ಅಸಂಗತವು)

**ತಾ ||  ನ್ಯಾಯಸುಧಾ**— (1) ಇದು ಉತ್ತರಕ್ರಮವು. ಈ ವಾಕ್ಯದ ಬಲದಿಂದ ಪಂಚರಾತ್ರಕ್ಕೆ ವೇದವಿರೋಧಿತ್ವವನ್ನು ಕಲ್ಪಿಸುವುದಾದರೆ ಆಗ 'ಯದಿ ವಿದ್ಯಾತ್' ಎನ್ನುವ ವಾಕ್ಯದ ಬಲದ್ದೆಶೆಯಿಂದ ಇತಿಹಾಸ ಪುರಾಣಗಳಿಗೂ ವಿಶೇಷವಿಲ್ಲದಿರುವುದರಿಂದ ಅದನ್ನು ಕಲ್ಪಿಸಬೇಕು. ಹಾಗಾದರೆ ಇತಿಹಾಸಾದಿಗಳಿಗೆ ವೇದಪೂರಕತ್ವವೆಂದು ಅಭಿಪ್ರಾಯವಾದರೆ ವಿಶೇಷವಿಲ್ಲದಿರುವುದರಿಂದ ಇಲ್ಲಿಯೂ ಕಲ್ಪಿಸಬೇಕು. (2) '**ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್**' ಎನ್ನುವ ಉತ್ತರವಾಕ್ಯವನ್ನು ಅನುಸರಿಸಿ ಹಾಗೆ ಕಲ್ಪಿಸುವುದು ಯುಕ್ತವೆಂದರೆ— ಇಲ್ಲಿಯೂ '**ವೇದಾರ್ಥಪೂರಕಂಜ್ಞೇಯಂ ಪಂಚರಾತ್ರಂ**' ಇತ್ಯಾದಿ ವಾಕ್ಯವನ್ನ ಅನುಸರಿಸಿ ಹಾಗೆ ಕಲ್ಪಿಸುವುದು, ಪಂಚರಾತ್ರದಲ್ಲಿ ದ್ವೇಷಹೊರತು ಯಾವುದೊಂದು ವಿಶೇಷವೂ ಇಲ್ಲ. (3) ಪರಮಸಂಹಿತಾವಾಕ್ಯಕ್ಕೂ ಹೀಗೆಯೇ ವ್ಯಾಖ್ಯಾನವಮಾಡಬೇಕು. (4) ಭಾಗವತಶಾಸ್ತ್ರದಲ್ಲಿ ಅಸುರರಿಗೆ ಸ್ವಾಭಾವಿಕವಾದುದೇ ವಿದ್ವೇಷವು. ದೋಷದರ್ಶನ ನಿಮಿತ್ತವಾದುದಲ್ಲ. ಇವರು ಅಸುರಸಂಬಂಧಿಗಳು, ವೃತ್ತಿಕಾರರು, ಅಸುರಸ್ವಭಾವವುಳ್ಳವರು. ಇದನ್ನು ಅಸುರರೇ ಹೇಳಿದ್ದು, ಸೂತ್ರಕಾರರು ಹೇಳಿದ್ದಲ್ಲ. ಆದಕಾರಣ ಇದು ಸೂತ್ರಾರ್ಥವಲ್ಲ. ಮತ್ತೆ ನಾವು ಹೇಳಿದ ರೀತಿಯಿಂದ ಶಾಕ್ತಮತನಿರಾಸವೇ ಈ ಸೂತ್ರಾರ್ಥವು. || ೩೧೧ || ೩೧೨ ||

ಪಾದಾರ್ಥವನ್ನು ಉಪಸಂಹಾರಮಾಡುತ್ತಾರೆ—

**ಮೂ || ಅತೋಽಶೇಷಜಗದ್ಧಾತಾ ನಿರ್ದೋಷೋರುಗುಣಾರ್ಣವಃ |**
**ನಾರಾಯಣಃ ಶ್ರುತಿಗಣ ತಾತ್ಪರ್ಯಾದವಸೀಯತೇ || ೩೧೩ ||**

ಅ || ಅತಃ=ಆದ ಕಾರಣ, ಸಾಂಖ್ಯಮೊದಲಾದ ವಿರೋಧಿಸಮಯಗಳನ್ನು ನಿರಾಕರಿಸಿರುವುದರಿಂದ, ನಾರಾಯಣಃ=ಶ್ರೀ ನಾರಾಯಣನು, ಅಶೇಷಜಗದ್ಧಾತಾ=ಸರ್ವಜಗದ್ಧಾರಕನೆಂದೂ, ನಿರ್ದೋಷೋರುಗುಣಾರ್ಣವಃ=ದೋಷಲೇಶರಹಿತನೂ, ಉತ್ಕೃಷ್ಟಗಳಾದ ಗುಣಗಳಿಂದ ಸಮುದ್ರದಂತಿರುವವನೂ ಎಂದೂ, ಶ್ರುತಿಗುಣತಾತ್ಪರ್ಯಾತ್ = ಶ್ರುತಿಗಳ ಸಮುದಾಯದ ತಾತ್ಪರ್ಯದ್ದೆಶೆಯಿಂದ, ಅವಸೀಯತೇ=ನಿಶ್ಚಿತನಾಗುತ್ತಾನೆ. ಅಂದರೆ ಸಾಂಖ್ಯಾದಿ ವಿರೋಧಿಸಮಯಗಳನ್ನು ನಿರಾಕರಿಸಿರುವುದರಿಂದ ಪ್ರಥಮಾಧ್ಯಾಯದಲ್ಲಿ ಯಾವುದು ಸಕಲ ಶ್ರುತಿಸಮನ್ವಯದಿಂದ ಶ್ರೀ ಹರಿಗೆ ಜಗಜ್ಜನ್ಮಾದಿಕಾರಣತ್ವ, ಗುಣಪರಿಪೂರ್ಣತ್ವ ರೂಪಗಳಾದ ಎರಡು ಲಕ್ಷಣಗಳು ಸಾಧಿಸಲ್ಪಟ್ಟವೆಯೋ ಅವು ನಿರ್ಣೀತವೇ ಆಗಿವೆ. || ೩೧೩ ||

ಇದೆಲ್ಲಾ ಆಗಬಹುದು. '**ನ ನಿಗೃಹ್ಯ ಕಥಾಂ ಕುರ್ಯಾತ್**' ಇತ್ಯಾದಿ ಸ್ಮೃತಿನಿಷಿದ್ಧವಾದ ಈ ಪರನಿರಾಕರಣವನ್ನು ಮಾಡಲೇ ಕೂಡದು. ಆದಕಾರಣ ಸಾಂಖ್ಯಾದಿನಿರಾಕರಣವನ್ನು ಮಾಡಿದ್ದು ಹೇಗೆ ಎಂದರೆ— ಹಾಗೆ ಹೇಳಕೂಡದು. ಈ ನಿಷೇಧವು ಸದ್ವಿಷಯಕವಾಗಿದೆ. ಸಂಕೋಚವು ಯಾವುದರಿಂದ ಎಂದರೆ— ಶ್ರುತಿಸ್ಮೃತಿಗಳಲ್ಲಿ ಶ್ರುತಿಯು ಪ್ರಬಲವಾದುದು. ಶ್ರುತಿಯಲ್ಲಿ ಪರರ ನಿರಾಕರಣವನ್ನು ಅವಶ್ಯವಾಗಿ ಮಾಡಬೇಕೆಂದು ಹೇಳಲ್ಪಟ್ಟಿದೆ. ಎಂದಭಿಪ್ರಾಯವುಳ್ಳವರಾಗಿ '**ಅಂಧಂತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ | ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾಂ ರತಾಃ | ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋ ಭಯಂ ಸಹ | ಅವಿದ್ಯಯಾ ಮೃತ್ಯುಂತೀರ್ತ್ವಾ ವಿದ್ಯಯಾಽಮೃತಮಶ್ನುತೇ**' || ಈಶಾವಾಸ್ಯೋಪನಿಷತ್ತು. ಮಂ. ೯. ೧೧. ಪು. ೧೨.) ಎನ್ನುವ ಎರಡು ಮಂತ್ರಗಳನ್ನು ಅರ್ಥತಃ ಅನುವಾದ ಮಾಡುತ್ತಾರೆ.

ಮೂ॥ ಅಂಧಂತಮಃ ಪ್ರವಿಶಂತಿ ಯೇತ್ವವಿದ್ಯಾಮುಪಾಸತೇ ।
ತತೋ ಭೂಯ ಇವಾಯಾಂ(ಸ್ಯಂ)ತಿ ಏತಸ್ಯಾನ್ನೈವ ನಿಂದಕಾಃ ॥೩೧೪॥
ತತೋ ವಿದ್ಯಾಮವಿದ್ಯಾಂ ಚ ಯೋ ಜಾನಾತ್ಯುಭಯಂ ಸಹ ।
ದೋಷಜ್ಞಾನಾದತೀತ್ಯೈತಾಂ (ತಾನ್) ವಿದ್ಯಯಾಽಮೃತಮಶ್ನುತೇ ॥
॥ ೩೧೫ ॥ ಸೂ. ೪೨ ॥ ೪೩ ॥ ೪೪ ॥ ೪೫ ॥ ಅಧಿ. ೧೨ ॥

ಅ ॥ ಯೇ ತು = ಯಾರು, ಅವಿದ್ಯಾಂ=ಅವಿದ್ಯಾಕಲ್ಪಿತವಾದ, ಅವಿದ್ಯಮಾನವಾದ ಅರ್ಥವನ್ನು, ಉಪಾಸತೇ = ಉಪಾಸನಾಮಾಡುತ್ತಾರೋ, ತೇ=ಅವರು, ಅಂಧಂತಮಃ= ಅಂಧಂತಮಸ್ಸನ್ನು, ಪ್ರವಿಶಂತಿ = ಪ್ರವೇಶಮಾಡುತ್ತಾರೆ. ಯೇ = ಯಾರು, ಏತಸ್ಯಾಃ=ಈ ಅವಿದ್ಯೆಯನ್ನು, ನಿಂದಕಾಃ = ನಿಂದಿಸುವವರು, ನೈವ = ಆಗುವುದೇ ಇಲ್ಲವೋ? (ಅವರು) ತತಃ=ಅವಿದ್ಯೆಯನ್ನುಪಾಸನಾಮಾಡುವವರಕ್ಕಿಂತಲೂ, ಭೂಯ ಇವ=ಸ್ವಲ್ಪ ಅಧಿಕವಾಗಿಯೇ, ಆಯಾಂತಿ=ತಮಸ್ಸನ್ನು ಹೊಂದುತ್ತಾರೆ. ತತಃ = ಆದಕಾರಣ, ಯಃ = ಯಾವಾತನು, ವಿದ್ಯಾಂ ಚ=ವಿದ್ಯೆಯನ್ನೂ, ಅವಿದ್ಯಾಂ ಚ=ಅವಿದ್ಯೆಯನ್ನೂ ಕೂಡ, ಉಭಯಂ ಸಹ= ಎರಡು ಒಟ್ಟಿಗೇನೇ, ಜಾನಾತಿ=ತಿಳಿಯುತ್ತಾನೋ, ದೋಷಜ್ಞಾನಾತ್=ದೋಷಜ್ಞಾನದಿಂದ, ಏತಾಂ=ಈ ಅವಿದ್ಯೆಯನ್ನು, ಅತೀತ್ಯ=ದಾಟ, ವಿದ್ಯಯಾ=ತತ್ವಜ್ಞಾನದಿಂದ, ಅಮೃತಂ= ಮುಕ್ತಿಯನ್ನು, ಅಶ್ನುತೇ=ಹೊಂದುತ್ತಾನೆ.

ತಾ ॥ (1) ಯದ್ಯಪಿ ಪರಪಕ್ಷ ಪ್ರಮಾಣವನ್ನು ನಿರಾಕರಿಸದೆ ಇರುವ ತನಕ ತತ್ವಜ್ಞಾನವು ತನ್ನ ಪಕ್ಷದಲ್ಲಿ ಪ್ರಮಾಣಮಾತ್ರದಿಂದ ಆಗಲಾರದು. ಸತ್ಪ್ರತಿಪಕ್ಷವಾದ ಪ್ರಮಾಣವು ನಿರ್ಣಯಕ್ಕೆ ಅಂಗವಲ್ಲ. ಆದಕಾರಣ ತತ್ವಜ್ಞಾನವನ್ನು ಇಚ್ಛಿಸುವವನು ಅವಶ್ಯವಾಗಿ ಸ್ವಪಕ್ಷಸಾಧನವನ್ನು ಹೇಗೆ ಮಾಡುವನೋ ಹಾಗೆಯೇ ಪರಪಕ್ಷನಿರಾಸವನ್ನೂ ಕೂಡ ಅವಶ್ಯವಾಗಿ ಮಾಡತಕ್ಕದ್ದೇ, ಹೀಗೆ ಈ ಅರ್ಥವು ಉಪಪತ್ತಿ ಸಿದ್ಧವಾಗಿದೆ. ಆದಾಗ್ಯೂ ಆಗಮವನ್ನು ಇಟ್ಟುಕೊಂಡು ಹೇಳುವವನಿಗೆ ಹಾಗೆಯೇ ಬೋಧಿಸಬೇಕು, ಎನ್ನುವ ಅಭಿಪ್ರಾಯದಿಂದ ಮಂತ್ರಗಳನ್ನು ಉದಾಹರಿಸಿರುವರು. ಹೀಗೆ ಸರ್ವವೂ ನಿರ್ದುಷ್ಟವಾಯಿತು. ॥ ೩೧೪ ॥ ೩೧೫ ॥ ಸೂ. ೪೨ ॥ ೪೩ ॥ ॥ ೪೪ ॥ ೪೫ ॥ ಅಧಿ. ೧೨ ॥

ಉತ್ಪತ್ತ್ಯಧಿಕರಣವು ಸಮಾಪ್ತವಾಯಿತು.



## ೨ನೇ ಅಧ್ಯಾಯದ ೨ನೇ ಪಾದದ ಸಾರಾಂಶ.

೧ನೇ ರಚನಾಧಿಕರಣದಲ್ಲಿ ನಿರೀಶ್ವರ ಸಾಂಖ್ಯರ ಮತವನ್ನೂ,
೨ನೇ ಅನ್ಯತ್ರಾಭಾವಾಧಿಕರಣದಲ್ಲಿ ಸೇಶ್ವರ ಸಾಂಖ್ಯರ ಮತವನ್ನೂ,
೩ನೇ ಅಭ್ಯುಪಗಮಾಧಿಕರಣದಲ್ಲಿ ಚಾರ್ವಾಕರ ಮತವನ್ನೂ,
೪ನೇ ಪುರುಷಾಶ್ಮಾಧಿಕರಣದಲ್ಲಿ ನಿರೀಶ್ವರ ಸಾಂಖ್ಯೈಕದೇಶಿಗಳಾದ ಜೀವೋಪಸರ್ಜನಕ ಪ್ರಕೃತಿಕರ್ತೃತ್ವವಾದಿಗಳ ಮತವನ್ನೂ,
೫ನೇ ಅನ್ಯಥಾನುಮಿತ್ಯಧಿಕರಣದಲ್ಲಿ ನಿರೀಶ್ವರ ಸಾಂಖ್ಯೈಕದೇಶಿಗಳಾದ ಪ್ರಕೃತ್ಯುಪಸರ್ಜನಕ ಪುರುಷಕರ್ತೃತ್ವವಾದಿಗಳ ಮತವನ್ನೂ,

೬ನೇ **ವೈಶೇಷಿಕಾಧಿಕರಣದಲ್ಲಿ** ಪರಮಾಣ್ವಾರಂಭ ವಾದಿಗಳಾದ **ವೈಶೇಷಿಕರ** ಮತವನ್ನೂ,

೭ನೇ **ಸಮುದಾಯಾಧಿಕರಣದಲ್ಲಿ** ಅವೈದಿಕಪಾಷಂಡಿ ಬೌದ್ಧೈಕದೇಶಿಗಳಾದ ಪರಮಾಣು ಪುಂಜವಾದಿಗಳಾದ **ವೈಭಾಷಿಕ, ಸೌತ್ರಾಂತಿಕರ** ಮತವನ್ನೂ,

೮ನೇ **ಶೂನ್ಯಾಧಿಕರಣದಲ್ಲಿ** ಶೂನ್ಯವಾದಿಗಳಾದ **ಮಾಧ್ಯಮಿಕರ** ಮತವನ್ನೂ,

೯ನೇ **ಅನುಪಲಬ್ಧ್ಯಧಿಕರಣದಲ್ಲಿ** ವಿಜ್ಞಾನವಾದಿಗಳಾದ **ಯೋಗಾಚಾರರ** ಮತವನ್ನೂ,

೧೦ನೇ **ನೈಕಸ್ಮಿನ್ನಧಿಕರಣದಲ್ಲಿ** ಸ್ಯಾದ್ವಾದಿಗಳಾದ **ಜೈನರ** ಮತವನ್ನೂ,

೧೧ನೇ **ಪತ್ಯುರಧಿಕರಣದಲ್ಲಿ** ವೈದಿಕ ಪಾಷಂಡಿ, **ಪಾಶುಪತರ** ಮತವನ್ನೂ,

೧೨ನೇ **ಉತ್ಪತ್ತ್ಯಧಿಕರಣದಲ್ಲಿ** **ಶಾಕ್ತರ** ಅಂದರೆ ಶಕ್ತಿಯೇ ಜಗತ್ಕಾರಣವೆಂದು ಪ್ರತಿಪಾದಿಸುವ **ಮಹಾವಾಮ, ಮಧ್ಯವಾಮ, ಅಣುವಾಮರ** ಮತವನ್ನೂ ನಿರಾಕರಿಸಿದರು. ಆದಕಾರಣ ಪ್ರಥಮಾಧ್ಯಾಯದಲ್ಲಿ ಹೇಳಿದ ಸಮನ್ವಯದಲ್ಲಿ ಯಾವ ಸಮಯವಿರೋಧವೂ ಇಲ್ಲದಿರುವುದರಿಂದ ಶ್ರುತಿಸಮನ್ವಯಬಲದಿಂದ ಶ್ರೀಹರಿಗೇನೇ ಜಗಜ್ಜನ್ಮಾದಿಕಾರಣತ್ವವೂ ಗುಣಪೂರ್ಣತ್ವವೂ ನಿರ್ದೋಷತ್ವವೂ ಸಿದ್ಧವಾಯಿತು.

**ಇತಿ ಶ್ರೀಮದಾನಂತೀರ್ಥಭಗವತ್ಪಾದಾಚಾರ್ಯವಿರಚಿತೇ**
**ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನೇ ದ್ವಿತೀಯಾಧ್ಯಾಯಸ್ಯ**
**ದ್ವಿತೀಯಃ ಪಾದಃ ಸಮಾಪ್ತಃ ॥**

**ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ರಚಿಸಲ್ಪಟ್ಟ**
**ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನದಲ್ಲಿ ಎರಡನೇ ಅಧ್ಯಾಯದಲ್ಲಿ**
**ಎರಡನೇ ಪಾದವು ಸಮಾಪ್ತವಾಯಿತು.**

**ಇತಿ ಶ್ರೀಮತ್ಪೂರ್ಣಪ್ರಮತಿಭಗವತ್ಪಾದಸುಕೃತೇ- ।**
**ರನುವ್ಯಾಖ್ಯಾನಸ್ಯ ಪ್ರಗುಣಜಯತೀರ್ಥಾಖ್ಯಯತಿನಾ ॥**
**ಕೃತಾಯಾಂ ಟೀಕಾಯಾಂ ವಿಷಮಪದವಾಕ್ಯಾರ್ಥವಿವೃತೌ ।**
**ದ್ವಿತೀಯೋಽಧ್ಯಾಯೋಽಯಂ ಸಮಯಚರಣಃ ಪರ್ಯವಸಿತಃ ॥**
**ಶ್ರೀಮನ್ನಾರಾಯಣಾಖ್ಯಾನಂ ಸಜ್ಜ್ಞಾನಾನಂದಲಕ್ಷಣಂ ।**
**ವೇದಾಂತವೇದಿತೌದಾರ್ಯಂ ಮುಖ್ಯಂ ಬ್ರಹ್ಮ ಪ್ರತನ್ಮಹೇ ॥**

**॥ ಶ್ರೀ ಕೃಷ್ಣಾರ್ಪಣಮಸ್ತು ॥**



॥ ಶ್ರೀಃ ॥

# ಶ್ರೀಮದನುವ್ಯಾಖ್ಯಾನವು

ಓಂ ॥ ಯೇನ ಗೋವರ್ಧನಚ್ಛದ್ಮ ಛತ್ರೇಣಾತ್ರಾಯಿ ಗೋವ್ರಜಃ ।
ಕೃಷ್ಣಂ ತಮತಸೀಕೃಷ್ಣಂ ವಂದೇ ಸೌಂದರ್ಯವಾರಿಧಿಂ ॥
ನಮೋ ವೇದಾಂತರಾದ್ಧಾಂತ ಸೂಕ್ತಿರತ್ನಾಕರಾತ್ಮನೇ ।
ಶ್ರೀಮದಾನಂದತೀರ್ಥಾಖ್ಯ ಭಗವದ್ದುಗ್ಧಸಿಂಧವೇ ॥
ಶ್ರೀಮದ್ಗುರೂಣಾಂ ಕಾರುಣ್ಯಕಲ್ಪವೃಕ್ಷಸಮಾಶ್ರಯಾತ್ ।
ಅಭಿಪ್ರಾಯೋಽನುಭಾಷ್ಯಸ್ಯ ಯಾವದ್ಬೋಧಮನೂದ್ಯತೇ ॥

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥

ಮೂ ॥ ಅಥಾಶೇಷಸಮಾಮ್ನಾಯ ವಿರೋಧಾಪಾಕೃತಿಂ ಪ್ರಭುಃ ।
ಕರಿಷ್ಯನ್ನಧಿದೈವಾಧಿಭೂತಜೀವಪರಾತ್ಮನಾಂ ॥ ೧ ॥
ಸ್ವರೂಪ ನಿರ್ಣಯಾಯೈವ ವಚನಾನಾಂ ಪರಸ್ಪರಂ ।
ಪಾದೇನಾನೇನಾವಿರೋಧಂ ದರ್ಶಯತ್ಯಮಿತದ್ಯುತಿಃ ॥ ೨ ॥

ಅ ॥ ಅಥ=ಆ ಮೇಲೆ, ಅಮಿತದ್ಯುತಿಃ=ಸರ್ವಜ್ಞರಾದ, ಪ್ರಭುಃ=ಸೂತ್ರಕಾರರು, ಅಶೇಷಸಮಾಮ್ನಾಯವಿರೋಧಾಪಾಕೃತಿಂ, ಅಶೇಷ=ಸಮಸ್ತಗಳಾದ, ಸಮಾಮ್ನಾಯ ವಿರೋಧ=ವೇದವಿರೋಧಗಳ, ಅಪಾಕೃತಿಂ ನಿರಾಕರಣವನ್ನು, ಕರಿಷ್ಯನ್=ಮಾಡುತ್ತಾ, ಅಧಿದೈವಾಧಿಭೂತಜೀವಪರಾತ್ಮನಾಂ ಅಧಿದೈವ = ಇಂದ್ರಾದ್ಯಭಿಮಾನಿ ದೇವತೆಗಳೂ, ಅಧಿಭೂತ=ಕಾರ್ಯಕಾರಣೋಪೇತಗಳಾದ ವಿಯದಾದಿಭೂತಗಳೂ, ಜೀವ=ಜೀವರೂ, ಪರಾತ್ಮನಾಂ=ಪರಬ್ರಹ್ಮನೂ ಇವರ, ಸ್ವರೂಪನಿರ್ಣಯಾಯೈವ=ಸ್ವರೂಪವನ್ನು ನಿಶ್ಚಯಿಸುವುದಕ್ಕಾಗಿಯೇ, ಅನೇನ=ವ್ಯಾಖ್ಯಾನ ಮಾಡಲಿಕ್ಕೆ ಇಷ್ಟವಾಗಿರುವುದರಿಂದ ಬುದ್ಧಿಸನ್ನಿಹಿತವಾದ, ಪಾದೇನ=ಮೂರನೇ ಪಾದದಿಂದ, ವಚನಾನಾಂ=ವೈದಿಕವಚನಗಳಿಗೆ, ಪರಸ್ಪರಂ=ಅನ್ಯೋನ್ಯವಾಗಿ, ಅವಿರೋಧಂ=ವಿರೋಧಾಭಾವವನ್ನು, ದರ್ಶಯತಿ=ತೋರಿಸುತ್ತಾರೆ.

ತಾ ॥ ಸ. ರ. ವಿ.– (1) ಪರಮತಗಳಿಗೆ ಪ್ರತ್ಯೇಕವಾಗಿ ತಮ್ಮ ತಮ್ಮ ಮತದಿಂದ ವಿರೋಧವನ್ನುದ್ಭಾವಿಸಿ ಹೇಗೆ ಮೊದಲು ಅಪ್ರಾಮಾಣ್ಯವನ್ನು ಆಪಾದಿಸಿರುವರೋ, ಹಾಗೆಯೇ ಅಧಿಭೂತಾದಿ ವಿಷಯಗಳಲ್ಲಿಯೂ, ಅವುಗಳನ್ನು ಸೃಷ್ಟಿಸಿದವನ ವಿಷಯದಲ್ಲಿಯೂ, ಶ್ರುತಿಗಳಿಗೆ ಪರಸ್ಪರವಾಗಿ ವಿರೋಧವಿದ್ದ ಪ್ರಯುಕ್ತ ಅವುಗಳಿಗೆ ಅಪ್ರಾಮಾಣ್ಯವು ಬರಬೇಕಾಗುವುದು. ಹಾಗೆಯೇ ನಿಖಿಲವೇದಗಳಿಗೂ ಅಪ್ರಾಮಾಣ್ಯವು ಬರಬೇಕಾಗುವುದು. ತಥಾಚ ಹಿಂದೆ ಹೇಳಿದ ಸಮನ್ವಯವು ಸಿದ್ಧಿಸಲಾರದು, ಎಂದಾಶಂಕಿಸಿದರೆ— ಸರ್ವ ವೇದ ವಾಕ್ಯಗಳ ಪರಸ್ಪರ ವಿರೋಧವನ್ನು ಇನ್ನು ೩-೪ನೇ ಎರಡು ಪಾದಗಳಿಂದ ಪರಿಹರಿಸುತ್ತಾರೆ. ಅದರಲ್ಲಿ ಅಧಿದೈವಾದಿಗಳ ಸ್ವರೂಪವನ್ನು ನಿರ್ಣಯಮಾಡಿ ಅಧಿದೈವಾದಿಗಳಲ್ಲಿ ವಿರೋಧವಿರುವ ಕೆಲವು ವಚನಗಳ ಪರಸ್ಪರ ವಿರೋಧವನ್ನಾದರೂ ಈ ಪಾದದಿಂದ ಪರಿಹರಿಸುತ್ತಾರೆ.

**ನ್ಯಾಯಸುಧಾ**— (1) ಸೂತ್ರಕಾರರು ವೇದಗಳಿಗೆ ಎಲ್ಲಾ ವಿರೋಧಗಳನ್ನು ಪರಿಹರಿಸುವುದಕ್ಕಾಗಿ ಈ ಎರಡನೇ ಅಧ್ಯಾಯವನ್ನು ಅರಂಭಿಸಿರುವರು. ವೈದಿಕವಚನಗಳಿಗೆ ಇರುವ ಪರಸ್ಪರ ವಿರೋಧವೂ ಕೂಡ ಅದರಲ್ಲಿಯೇ ಅಂತರ್ಭೂತವಾಗಿರುವುದರಿಂದ ಅವುಗಳ ನಿರಾಸವೂ ಈ ಪಾದದಲ್ಲಿ ಸಂಗತವೇ ಆಗಿದೆ. (2) ಯುಕ್ತಿವಿರೋಧಪರಿಹಾರವು ಪ್ರಧಾನವಾಗಿರುವುದರಿಂದ ಅದನ್ನು ೧ನೇ ಪಾದದಲ್ಲಿ ನಿರೂಪಿಸಿ ಅದರ ವಿಸ್ತಾರರೂಪವಾಗಿರುವುದರಿಂದ ಸಮಯವಿರೋಧ ಪರಿಹಾರವನ್ನು ೨ನೇ ಪಾದದಲ್ಲಿ ನಿರೂಪಿಸಿ, ಈಗ ಶ್ರುತಿಗಳ ಪರಸ್ಪರ ವಿರೋಧಪರಿಹಾರವನ್ನು ಅವಸರ ಸಂಗತಿಯಿಂದ ಈ ಪಾದದಲ್ಲಿ ನಿರೂಪಿಸುತ್ತಾರೆ. (3) ಹೀಗಾದರೆ ಈ ೩ನೇ ಪಾದಕ್ಕೆ ೪ನೇ ಪಾದದ್ದೆಶೆಯಿಂದ ಭೇದವು ಇಲ್ಲದೆ ಹೋಗಬೇಕಾಗುವುದು. ೪ನೇ ಪಾದದಲ್ಲಿಯೂ, ವೇದವಚನಗಳ ಪರಸ್ಪರ ವಿರೋಧವನ್ನೇ ತಿರಸ್ಕರಿಸುವರು ಎಂದಾಶಂಕಿಸಿದರೆ— ಯದ್ಯಪಿ ಮೂರು ನಾಲ್ಕು ಈ ಎರಡು ಪಾದಗಳಲ್ಲಿಯೂ ವೇದವಾಕ್ಯಗಳಿಗೆ ಪರಸ್ಪರ ವಿರೋಧವನ್ನೇ ನಿರಾಕರಿಸುವರು. ಆದಾಗ್ಯೂ ಈ ೩ನೇ ಪಾದದಲ್ಲಿ ಅಧಿದೈವಾದಿ ವಿಷಯಕ ವಾಕ್ಯಗಳಿಗೂ ೪ನೇ ಪಾದದಲ್ಲಿ ಅಧ್ಯಾತ್ಮವಿಷಯಕವಾಕ್ಯಗಳಿಗೂ ಇರತಕ್ಕ ಪರಸ್ಪರ ವಿರೋಧವನ್ನು ನಿರಾಕರಿಸುವುದರಿಂದ ವಿಷಯಭೇದವಿದ್ದಪ್ರಯುಕ್ತ ಭೇದವು ಬರುವುದು. (4) ಹೀಗಾದರೆ ಈ ಪಾದಕ್ಕೆ ಅಧಿದೈವಾದ್ಯನೇಕವಿಷಯಕತ್ವವಿದ್ದಪ್ರಯುಕ್ತ ವಿಷಯೈಕ್ಯವಿಲ್ಲದಿರುವುದರಿಂದ ಏಕವಾಕ್ಯತ್ವವು ಬಾರದೆ ಹೋಗಬೇಕಾದೀತು, ಎಂದು ಹೇಳಕೂಡದು. ಅಧ್ಯಾತ್ಮೇತರತ್ವರೂಪದಿಂದ ವಿಷಯಗಳಿಗೆ ಏಕೀಕರಣವು ಕೂಡುವ ಪ್ರಯುಕ್ತ ಏಕವಾಕ್ಯತ್ವವು ಯುಕ್ತವಾಗುತ್ತದೆ. (5) ಹಾಗಾದರೆ ವೇದವಾಕ್ಯಗಳಿಗೆ ಪರಸ್ಪರ ವಿರೋಧವನ್ನು ಏತಕ್ಕೆ ಪರಿಹರಿಸುವುದು ಎಂದರೆ, ಪರಸ್ಪರವಾಗಿ ವಿರುದ್ಧಗಳಾದವುಗಳಿಗೆ ಪ್ರಾಮಾಣ್ಯ ನಿಶ್ಚಯವು ಆಗದಿರುವುದರಿಂದ ಅವುಗಳ ಪ್ರಾಮಾಣ್ಯವನ್ನು ನಿಶ್ಚಯಿಸುವುದಕ್ಕಾಗಿ ಎಂದು ಹೇಳುತ್ತೇವೆ ಎಂದರೆ ಹಾಗೆ ಹೇಳಕೂಡದು. ಹೀಗಾದರೆ ಈ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ ತರ್ಕಶಾಸ್ತ್ರತ್ವವು ಬಂದುದರಿಂದ ಪ್ರಮೇಯಮೀಮಾಂಸಾ ಶಾಸ್ತ್ರತ್ವವು ವ್ಯಾಹತವಾಗಬೇಕಾಗುವುದು ಎಂದರೆ— ಬ್ರಹ್ಮನು ಸರ್ವಜಗತ್ತಿಗೆ ಕಾರಣನೆನ್ನುವ ನಿಶ್ಚಯವು ಸರ್ವಜಗತ್ಸ್ವರೂಪನಿಶ್ಚಯವೂ, ಸರ್ವ ಜಗತ್ತಿಗೆ ಕಾರ್ಯತ್ವಾದಿ ನಿಶ್ಚಯವೂ ಆದ ಮೇಲೆಯೇ ಆಗುವುದು. ಇಲ್ಲವಾದರೆ ಆಗಲಾರದು. ಅಧಿದೈವಾದಿ ಜಗದ್ವಿಷಯಕಗಳಾದ ವಾಕ್ಯಗಳಿಗೆ ಪರಸ್ಪರವ್ಯಾಹತಿಯಿದ್ದರೆ ಅವುಗಳ ಸ್ವರೂಪನಿಶ್ಚಯವು ಆಗಲಾರದು. ಆದಕಾರಣ ಅಧಿದೈವಮೊದಲಾದ ವಸ್ತುತತ್ವವನ್ನು ನಿಶ್ಚಯಿಸುವುದಕ್ಕಾಗಿಯೇ ಪರಸ್ಪರ ವಿರೋಧಪರಿಹಾರವು. ಈ ಅಭಿಪ್ರಾಯದಿಂದಲೇ 'ಸ್ವರೂಪನಿರ್ಣಯಾಯೈವ' ಎಂದು ಹೇಳಿದ್ದು. (6) ಹಾಗಾದರೆ ೧ ಕೆಲವು ವಚನಗಳಿಗೆ ಇದ್ದ ಪರಸ್ಪರ ವಿರೋಧವನ್ನು ಪರಿಹರಿಸುತ್ತಾರೋ, ೨ ಅಥವಾ ಎಲ್ಲಾ ವಚನಗಳ ವಿರೋಧವನ್ನು ಪರಿಹರಿಸುತ್ತಾರೋ, ೧ನೇದ್ದು ಕೂಡಲಾರದು. ವ್ಯರ್ಥವಾಗುವುದು ಅಲ್ಲಿಯೇ ವಚನಾಂತರದಿಂದ ವಿರೋಧವಿರಬಹುದಾದಪ್ರಯುಕ್ತ ನಿರ್ಣಯವಾಗಲಾರದು. ೨ನೇದ್ದು ಕೂಡಲಾರದು. **'ಅನಂತಾ ವೈ ವೇದಾಃ'** ಎನ್ನುವ ಶ್ರುತಿಬಲದಿಂದ ವೇದವಾಕ್ಯಗಳಿಗೆ ಅನಂತ್ಯವಿದ್ದುದರಿಂದ ಎಲ್ಲಾ ವೇದಗಳನ್ನು ತಿಳಿಯುವುದೇ ಅಶಕ್ಯವು ಎಂದರೆ— ಅಮಿತದ್ಯುತಿಃ= ಸೂತ್ರಕಾರರು ಸರ್ವಜ್ಞರು. ಅಲ್ಪಜ್ಞರಲ್ಲ. ಆದುದರಿಂದ ಸೂತ್ರಕಾರರಿಗೆ ಸರ್ವವೇದಜ್ಞಾನವು ಅಶಕ್ಯವಲ್ಲ, ಎಂದು ನಿರೂಪಿಸಿದರು. ॥ ॥ ೧ ॥ ೨ ॥

**ಈ ಪಾದದಲ್ಲಿರತಕ್ಕ ಅಧಿಕರಣಗಳ ಪೂರ್ವಪಕ್ಷ ಸಿದ್ಧಾಂತಯುಕ್ತಿಗಳನ್ನು ಸಂಗ್ರಹಿಸಿ ಹೇಳುತ್ತಾರೆ**

ಮೂ ॥ ಅನುಭೂತಿಯುಕ್ತಿ ಬಹುವಾಗ್ವೈಲೋಮ್ಯಂ ಚ ತತೋಽಧಿಕಂ ।
ಏತತ್ಸರ್ವಂ ಸತಃ ಸಾಮ್ಯಂ ದ್ವಾರವೈಯರ್ಥ್ಯಮೇವ ಚ ॥ ೩ ॥
ದೃಷ್ಟಯುಕ್ತ್ಯನುಸಾರಿತ್ವಮುಕ್ತಾನ್ನಾರ್ಥಾವಿರೋಧತಃ ।
ಪ್ರಸಿದ್ಧ ನಾಮಸ್ವೀಕಾರೇ ಬಹುವಾಕ್ಯಾನುವರ್ತಿತಾ ॥ ೪ ॥
ಲೋಕದೃಷ್ಟಾನುಸಾರಿತ್ವಂ ಜೀವಸಾಮ್ಯಮನಾದಿತಾ ।
ತತ್ರ ತತ್ರ ಪರಿಜ್ಞಾನಂ ಗುಣಸಾಮ್ಯ ಶ್ರುತೀ ತಥಾ ॥ ೫ ॥
ಉತ್ಪತ್ತಿಮತ್ವಂ ಸ್ವಗುಣಾನನುಭೂತ್ಯಲ್ಪಕಲ್ಪನೇ ।
ನಾನಾಶ್ರುತಿಶ್ಚ ವೈಚಿತ್ರ್ಯಂ ಯುಕ್ತಯಃ ಪೂರ್ವಪಕ್ಷಗಾಃ ॥ ೬ ॥
ವ್ಯವಸ್ಥಾಽನುಪಪತ್ತಿಶ್ಚ ಸ್ವಾತಂತ್ರ್ಯಮನುಸಾರಿತಾ ।
ಮುಖ್ಯತಾ ಶಕ್ತಿಮತ್ವಂ ಚ ವೈರೂಪ್ಯಂ ಸರ್ವಸಂಗ್ರಹಃ ॥ ೭ ॥
ಗತ್ಯಾದಿರೀಶಶಕ್ತಿಶ್ಚ ಸರ್ವಮಾನಾವಿರೋಧಿತಾ ।
ಅಭೀಷ್ಟಾಸಿದ್ಧಿಸುವ್ಯಕ್ತೀ ಶಾಸ್ತ್ರಸಿದ್ಧಿರ್ವಿಪರ್ಯಯಃ ।
ವಿಶೇಷಕಾರಣಂ ಚೇತಿ ಸಿದ್ಧಾಂತಸ್ಯೈವ ಸಾಧಿ (ಧ) ಕಾಃ ॥ ೮ ॥

ಅ ॥ (೧) ಅನುಭೂತಿಯುಕ್ತಿ ಬಹುವಾಗ್ವೈಲೋಮ್ಯಂಚ=ಅನುಭವ ಯುಕ್ತಿ ಅನೇಕ ವಚನಗಳ ವಿರೋಧವು, (೨) ತತಃ= (ಮುಖ್ಯವಾಯುವಿಗೆ ಉತ್ಪತ್ತಿಯನ್ನು ಅಂಗೀಕರಿಸಿದರೆ) ಅದಕ್ಕಿಂತಲೂ, ಅಧಿಕಂ=ಹೆಚ್ಚಾಗಿ, ಏತತ್ಸರ್ವಂ=ಅನುಭವಯುಕ್ತಿ ಅನೇಕ ಶ್ರುತಿವಿರೋಧವು. (೩) ಸತಃ ಸಾಮ್ಯಂ = ಸಚ್ಛಬ್ದವಾಚ್ಯನಾದ ಬ್ರಹ್ಮನಿಗೆ ಆಕಾಶ ವಾಯುಗಳ ಸಾಮ್ಯವು. (೪) ದ್ವಾರವೈಯರ್ಥ್ಯಮೇವಚ=ದ್ವಾರಕಾರಣಕ್ಕೆ ವೈಯರ್ಥ್ಯವೇ. (೫) ದೃಷ್ಟಯುಕ್ತ್ಯನುಸಾರಿತ್ವಂ=ಕಾಣಲ್ಪಟ್ಟ ಯುಕ್ತಿಯನ್ನು ಅನುಸರಿಸುವಿಕೆ. (೬) ಉಕ್ತಾನ್ನಾರ್ಥಾವಿರೋಧತಃ= 'ತಾ ಅನ್ನಮಸೃಜತ' ಇತ್ಯಾದಿ ಶ್ರುತಿಗಳಲ್ಲಿ ಹೇಳಲ್ಪಟ್ಟ, ಪ್ರಸಿದ್ಧ ಅನ್ನಾಖ್ಯವಾದ ಪೃಥಿವೀ ಸಕಾಶದ್ದೇಶಿಯಿಂದ ಇತರವಾದ ಅರ್ಥದ ವಿರೋಧವಿಲ್ಲದಿರುವುದರಿಂದ ಅಂದರೆ ಅನ್ನಶಬ್ದವು ಅನ್ನಾರ್ಥವನ್ನು ಹೇಳುವುದರಿಂದ, ಪ್ರಸಿದ್ಧನಾಮಸ್ವೀಕಾರೇ= ಅನ್ನವೆನ್ನುವ ಪ್ರಸಿದ್ಧನಾಮವನ್ನು ಸ್ವೀಕರಿಸಿದರೆ, ಬಹುವಾಕ್ಯಾನುವರ್ತಿತಾ=ಅನೇಕವಾಕ್ಯಗಳ ಅನುಸರಣವು. (೭. ೮.) ಲೋಕದೃಷ್ಟಾನುಸಾರಿತ್ವಂ= (ರುದ್ರಾದಿಗಳು ಮಾರಕರು ಎಂದಂಗೀಕರಿಸಿದರೆ ತಂದೆಯಿಂದ ಇತರರಿಗೇನೇ ಮಾರಕತ್ವವು ದೃಷ್ಟವಾಗಿರುವುದರಿಂದ ಲೋಕದಲ್ಲಿ ದೃಷ್ಟವಾಗಿರುವುದರ ಅನುಸರಣವು. (೧೦) ಜೀವಸಾಮ್ಯಂ=ಜೀವನಿಂದ ಸಾಮ್ಯವು, (೧೧) ಅನಾದಿತಾ=ಜೀವನಿಗೆ ಅನಾದಿತ್ವವು. (೧೨) ತತ್ರ ತತ್ರ ಪರಿಜ್ಞಾನಂ=ಅಲ್ಲಿ ಅಲ್ಲಿ ಜೀವನಿಗೆ ಸ್ಪರ್ಶಾದಿಜ್ಞಾನವು. (೧೩) ಗುಣಸಾಮ್ಯ ಶ್ರುತೀ=ಗುಣಸಾಮ್ಯ. (೧೪) ಶ್ರುತಿಇವುಗಳು, (೧೫) ತಥಾ=ಹಾಗೆಯೇ, ಉತ್ಪತ್ತಿಮತ್ವಂ= ಜನನಇರುವಿಕೆಯು, (೧೬) ಸ್ವಗುಣಾನನುಭೂತ್ಯಲ್ಪಕಲ್ಪನೇ=ತನ್ನಗುಣಾದ ಜ್ಞಾನಾನಂದಾದಿಗಳಿಗೆ ಅನುಭವವಿಲ್ಲದಿರುವಿಕೆಯು, (೧೭) ಅಲ್ಪವಾದುದನ್ನು ಕಲ್ಪಿಸುವಿಕೆ ಇವುಗಳು, (೧೮) ನಾನಾಶ್ರುತಿಶ್ಚ=ಅನೇಕಪ್ರಕಾರಶ್ರವಣವು, (೧೯) ವೈಚಿತ್ರ್ಯಂ=ವೈಚಿತ್ರ್ಯವು, ಇವುಗಳುಪೂರ್ವಪಕ್ಷಗಾಃ=ಪೂರ್ವಪಕ್ಷದಲ್ಲಿರುವ, ಯುಕ್ತಯಃ=ಯುಕ್ತಿಗಳು, (೧) ವ್ಯವಸ್ಥಾ=ವ್ಯವಸ್ಥೆಯು (೨) ಅನುಪಪತ್ತಿಶ್ಚ=ವಾಯುವಿಗೆ ಅನುತ್ಪತ್ತಿಯು ಕೂಡದಿರುವುದು. (೩) ಸ್ವಾತಂತ್ರ್ಯಂ=ಸರ್ವಸ್ವಾತಂತ್ರ್ಯವು, (೪) ಅನುಸಾರಿತಾ = ವಿಷ್ಣುವಿಗೆ ದ್ವಾರಕಾರಣದ ಅನುಸರಣವು,

(೫)ಮುಖ್ಯತಾ=ಮುಖ್ಯತ್ವವು, (೬) ಶಕ್ತಿಮತ್ವಂಚ=ಅನ್ನಶಬ್ದಕ್ಕೆ ಪೃಥಿವಿಯಲ್ಲಿ ಶಕ್ತಿಯಿರುವಿಕೆಯು, (೭,೮)ವೈರೂಪ್ಯಂ=ವಿಷ್ಣುವಿಗೆ ಲೋಕಪಿತೃಗಳಿಂದ ವೈಲಕ್ಷಣ್ಯವು. (೯)ಸರ್ವಸಂಗ್ರಹಃ=ಲಯವನ್ನೂಹೊಂದತಕ್ಕ ಎಲ್ಲಾ ವಸ್ತುಗಳಿಗೂ ಸಂಗ್ರಹವು. ಅಥವಾ (೧೦) ಪ್ರಲಯಕಾಲದಲ್ಲಿ ಶ್ರೀಹರಿಯ ಉದರದಲ್ಲಿ ಎಲ್ಲಾ ಚೇತನರಿಗೂ ಪ್ರವೇಶವು. ಅಥವಾ(೧೧) ಸರ್ವವಸ್ತುಗಳಲ್ಲಿ ಜೀವನಿಗೂ ಗ್ರಹಣವು. (೧೨) ಗತ್ಯಾದಿಃ=ಗಮನಾಗಮನಾದಿಗಳು. (೧೩) ಈಶ ಶಕ್ತಿಶ್ಚ=ಈಶನ ಶಕ್ತಿಯೂ ಕೂಡ, (೧೪) ಸರ್ವಮಾನವಿರೋಧಿತಾ=ಐಕ್ಯಕ್ಕೆ ಅನುಭವಾದಿ ಸರ್ವಪ್ರಮಾಣಗಳಿಂದ ವಿರೋಧವು (೧೫, ೧೬) ಅಭೀಷ್ಟಾಸಿದ್ಧಿ ಸುವ್ಯಕ್ತೀ=ಇಷ್ಟಸಿದ್ಧಿಯಾಗದಿರುವಿಕೆ, ಚೆನ್ನಾಗಿ ಅಭಿವ್ಯಕ್ತಿ ಇವುಗಳು, (೧೭) ಶಾಸ್ತ್ರಸಿದ್ಧಿಃ=ಶಾಸ್ತ್ರಾರ್ಥಸಿದ್ಧಿಯು, (೧೮) ವಿಪರ್ಯಯಃ=ವ್ಯತ್ಯಾಸವು. (೧೯) ವಿಶೇಷಕಾರಣಂ ಚ=ವಿಶೇಷಕಾರಣವೂ ಕೂಡ, ಇತಿ=ಹೀಗೆ, (ಯುಕ್ತಿಗಳು) ಸಿದ್ಧಾಂತಸ್ಯೈವ = ಸಿದ್ಧಾಂತಕ್ಕೇನೇ, ಸಾಧಿಕಾಃ=ಸಾಧಕಗಳು.

**ತಾ ||** (1) * ೧ನೇ ವಿಯದಧಿಕರಣದಲ್ಲಿ **'ಆತ್ಮನ ಆಕಾಶಃ ಸಂಭೂತಃ'** ಆತ್ಮನ ದ್ದೆಶೆಯಿಂದ ಆಕಾಶವು ಹುಟ್ಟಿತು. **'ಅನಾದಿರ್ವಾ ಅಯಮಾಕಾಶಃ'** ಈ ಆಕಾಶವು ಅನಾದಿಯಾದುದು, ಎನ್ನುವ ಶ್ರುತಿವಿಪ್ರತಿಪತ್ತಿಯಿಂದ ಆಕಾಶಕ್ಕೆ ಉತ್ಪತ್ತಿಯಿದೆಯೋ ಇಲ್ಲವೋ ಎಂದು ಸಂಶಯವು ಬಂದರೆ ಆಕಾಶಕ್ಕೆ ಉತ್ಪತ್ತಿಯಿಲ್ಲವೆಂದು ಪೂರ್ವಪಕ್ಷವು. ಆಕಾಶಕ್ಕೆ ಉತ್ಪತ್ತಿಯಿದೆ ಎಂದು ಸಿದ್ಧಾಂತವು. ಅದರಲ್ಲಿ ಅನುಭೂತಿಯುಕ್ತಿಬಹುವಾಕ್ಯೈರ್ವಿರೋಧ್ಯಂ ಚ=ಅನುಭವಯುಕ್ತಿ ಅನೇಕವಚನಗಳ ವಿರೋಧವು ಎಂದು ಪೂರ್ವಪಕ್ಷನ್ಯಾಯವು. ವ್ಯವಸ್ಥಾ=ವ್ಯವಸ್ಥೆಯು, ಎಂದು ಸಿದ್ಧಾಂತನ್ಯಾಯವು. ಅಂದರೆ ಆಕಾಶಕ್ಕೆ ಉತ್ಪತ್ತಿಯನ್ನು ಅಂಗೀಕರಿಸಿದರೆ ಅವಕಾಶರೂಪವಾದ ಆಕಾಶಕ್ಕೆ ಅನುತ್ಪತ್ತಿಯು ಸಾಕ್ಷ್ಯನುಭವಸಿದ್ಧವಾಗಿರುವುದರಿಂದ ಆಕಾಶೋತ್ಪತ್ತಿಗೆ ಅನುಭವವಿರೋಧವು. ಹಾಗೆಯೇ ವಿಯತ್ ಅನುತ್ಪತ್ತಿಮತ್ ವಿಭುತ್ವಾತ್ ಸಂಪ್ರತಿಪನ್ನವತ್=ಆಕಾಶವು ಉತ್ಪತ್ತಿಯುಳ್ಳದ್ದಲ್ಲ, ವಿಭುವಾಗಿರುವುದರಿಂದ ಸಮ್ಮತವಾಗಿರುವುದರಂತೆ, ಇತ್ಯಾದಿ ಯುಕ್ತಿವಿರೋಧವು. 'ಅನಾದಿರ್ವಾ ಅಯಮಾಕಾಶಃ' ಇದುಮೊದಲಾದ ಬಹುವಾಕ್ಯಗಳ ವಿರೋಧವು. ಹೀಗೆ ಅನುಭವಾದಿಗಳ ವಿರೋಧದಿಂದ ಆಕಾಶಕ್ಕೆ ಉತ್ಪತ್ತಿಯಿಲ್ಲದಿರುವುದರಿಂದ, ಆಕಾಶಕ್ಕೆ ಉತ್ಪತ್ತಿಪ್ರತಿಪಾದಕವಾದ ಶ್ರುತಿಯಂತೆ ಜಗತ್ಕರ್ತೃತ್ವಪ್ರತಿಪಾದಕವಾದ ಶ್ರುತಿಯೂ ಅಪ್ರಮಾಣವಾಗಿರುವುದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವಲ್ಲ, ಎಂದು ಶಂಕಿಸಿದರೆ—

## ಸಿದ್ಧಾಂತವು.

ಹೀಗೆ ಹೇಳಕೂಡದು. ಏಕೆಂದರೆ— ಉತ್ಪತ್ತಿಶ್ರುತಿಗೆ ಆಕಾಶಪದಾರ್ಥಸರ್ವವಿಷಯಕತ್ವವು ಕೂಡುವುದರಿಂದ ಮುಖ್ಯಾರ್ಥತ್ವವು, ಅನಾದಿಶ್ರುತಿಗೆ ಕೆಲವು ಆಕಾಶಪದಾರ್ಥವಿಷಯಕತ್ವವಿದ್ದುದರಿಂದ ಗೌಣತ್ವವು ಎಂದು ವ್ಯವಸ್ಥೆಯು ಕೂಡುತ್ತದೆ. ಹೇಗೆಂದರೆ—ದಿಗ್ರೂಪವಾದ ಅವಕಾಶವು ಅವ್ಯಾಕೃತಸ್ವರೂಪವಾಗಿರುವುದರಿಂದ ಕೂಟಸ್ಥ (ನಿರ್ವಿಕಾರ) ವಾಗಿರುವ ಪ್ರಯುಕ್ತ **'ಅನಾದಿರ್ವಾ'** ಎಂದು ಅನುತ್ಪತ್ತಿಪ್ರತಿಪಾದಕ ವಚನಗಳಿಗೆ ಆಕಾಶಪದಾರ್ಥೈಕದೇಶ ಅವ್ಯಾಕೃತಾಕಾಶವಿಷಯಕತ್ವವು. **'ಆತ್ಮನ ಆಕಾಶಃ ಸಂಭೂತಃ'** ಇದುಮೊದಲಾದ

---

*** ಈ ಪೂರ್ವಪಕ್ಷ ಸಿದ್ಧಾಂತ ಯುಕ್ತಿಗಳನ್ನು ಶ್ರೀಮದಾಚಾರ್ಯರು ನ್ಯಾಯವಿವರಣದಲ್ಲಿ ವಿಸ್ತರಿಸಿ ಹೇಳಿರುವುದರಿಂದ ಶ್ರೀಮದನುವ್ಯಾಖ್ಯಾನದಲ್ಲಿ ಸಂಗ್ರಹಿಸಿ ಹೇಳಿರುವರು. ಸುಧಾಕಾರರು ಇವುಗಳ ತಾತ್ಪರ್ಯವನ್ನು ಹೇಳದಿರುವುದರಿಂದ ನ್ಯಾಯ ವಿವರಣ ರೀತಿಯಾಗಿ ತಾತ್ಪರ್ಯವು ವಿಸ್ತೃತವಾಗಿದೆ.**

ಉತ್ಪತ್ತಿಪ್ರತಿಪಾದಕ ವಚನಗಳು ನೀಲವರ್ಣವಿದ್ದಪ್ರಯುಕ್ತ ಅನುಮಿತವಾದ ಉತ್ಪತ್ತಿಯುಳ್ಳ ಭೂತಾಕಾಶ, ಭೂತಾಕಾಶಕ್ಕೆ ಅಭಿಮಾನಿಯಾದ ವಿನಾಯಕ, ಉತ್ಪತ್ತಿಯುಳ್ಳ ಜಡಶರೀರ ಇವುಗಳನ್ನು ವಿಷಯೀಕರಿಸುತ್ತವೆ. ಹಾಗೆಯೇ ಅವಕಾಶ, ತದಭಿಮಾನಿಭೂತ, ತದಭಿಮಾನಿ ರೂಪಗಳಾದ ನಾಲ್ಕು ಆಕಾಶಪದವಾಚ್ಯಗಳಿಗೂ ಪರಾಧೀನವಿಶೇಷವತ್ವಮಾತ್ರರೂಪವಾದ ಉತ್ಪತ್ತಿವಿಷಯತ್ವವು ಹೀಗೆ ವ್ಯವಸ್ಥೆಯು. **'ಆಕಾಶೋ ನೀಲಿಮೋದೇತಿ ನ ಪ್ರದೇಶಃ ಕಥಂಚನ । ಅಭಾವೋ ಹಿ ಪ್ರದೇಶಸ್ಯ ನಹ್ಯತ್ರಾಭಾವ ಇತ್ಯಪಿ'** ಎಂದು ಭೂತಾಕಾಶವು ನೀಲವರ್ಣವು ಎನ್ನುವ ವಿಷಯದಲ್ಲಿ ಪೈಂಗಿಶ್ರುತಿಯು. ತಥಾಚ ಆಕಾಶೋತ್ಪತ್ತಿ ಅನುತ್ಪತ್ತಿಪ್ರತಿಪಾದಕಶ್ರುತಿಗಳಿಗೆ ಹಿಂದೆ ಹೇಳಿದಪ್ರಕಾರ ವ್ಯವಸ್ಥೆಯು ಕೂಡುವುದರಿಂದ ಆ ಶ್ರುತಿಗಳಿಗೆ ಪ್ರಾಮಾಣ್ಯವು ಕೂಡುವಪ್ರಯುಕ್ತ ಶ್ರೀ ಹರಿಗೆ ಆಕಾಶಾದಿ ಸರ್ವಜಗತ್ಕರ್ತೃತ್ವವು ಯುಕ್ತವು.

(2) (೨ನೇ ಮಾತರಿಶ್ವಾಧಿಕರಣದಲ್ಲಿ **'ಕಾಸಾಂ ವಾಯುರ್ವತ್ಸಃ' 'ಸಾ ವಾ ಏಷಾ ದೇವತಾ ಅನಾದಿಯೋಽಯಂ ಪವತೇ'** ಎನ್ನುವ ಶ್ರುತಿವಿಪ್ರತಿಪತ್ತಿಯಿಂದ ಮುಖ್ಯ ವಾಯುವಿಗೆ ಉತ್ಪತ್ತಿಯಿದೆಯೋ ಇಲ್ಲವೋ ಎಂದು ಸಂಶಯವು ಬಂದರೆ ಉತ್ಪತ್ತಿಯು ಇಲ್ಲವೇ ಇಲ್ಲ, ಎಂದು ಪೂರ್ವಪಕ್ಷವು. ಉತ್ಪತ್ತಿಯಿದೆ ಎಂದು ಸಿದ್ಧಾಂತವು. ಅದರಲ್ಲಿ ಮುಖ್ಯ ವಾಯುವಿಗೆ ಉತ್ಪತ್ತಿಯನ್ನು ಅಂಗೀಕರಿಸಿದರೆ ತತಃ=ಅದಕ್ಕಿಂತಲೂ, ಅಧಿಕಂ=ಹೆಚ್ಚಾಗಿ, ಏತತ್ ಸರ್ವಂ=ಅನುಭವ, ಯುಕ್ತಿ, ಅನೇಕ ಶ್ರುತಿ ಇವುಗಳಿಂದ ವಿರೋಧವು ಎಂದು ಪೂರ್ವಪಕ್ಷ ನ್ಯಾಯವು. ಅನುಪಪತ್ತಿಶ್ಚ=ವಾಯುವಿಗೇನೇ ಅನುತ್ಪತ್ತಿಯು ಕೂಡದಿರುವುದು, ಎಂದು ಸಿದ್ಧಾಂತನ್ಯಾಯವು. ಅಂದರೆ ಆಕಾಶಕ್ಕೆ ಅನುತ್ಪತ್ತಿಯನ್ನು ಹೇಳತಕ್ಕ ಶ್ರುತಿಯಂತೆ ವಾಯುವಿಗೆ ಅನಾದಿತ್ವವನ್ನು ಪ್ರತಿಪಾದಿಸತಕ್ಕ ಶ್ರುತಿಗೆ ಗೌಣಾರ್ಥತ್ವವನ್ನು ಹೇಳಕೂಡದು. ಗೌಣಾರ್ಥತ್ವವನ್ನು ಅಂಗೀಕರಿಸಿದರೆ ಆಕಾಶಾದಿಗಳಂತೆ ಮುಖ್ಯ ವಾಯುವಿಗೂ ಉತ್ಪತ್ತಿ ಅನುತ್ಪತ್ತಿಗಳಿದ್ದರೆ **'ಅಥ ಹ ನಿತ್ಯಾಶ್ಚಾನಿತ್ಯಾಶ್ಚ ತೇಜೋಽಬನ್ನಾನ್ಯಾಕಾಶ ಇತಿ ಹಾನ್ಯನಿತ್ಯಾನಿ'** ಎಂದು ತೇಜಸ್ಸು-ಜಲ-ಪೃಥಿವಿ-ಆಕಾಶ- ಇತ್ಯಾದಿಗಳಿಗೆ ಅನಿತ್ಯತ್ವವನ್ನು ಹೇಳಿ **'ವಾಯುರ್ವಾವ ನಿತ್ಯಃ'** ಎಂದು ವಾಯುವಿಗೆ ನಿತ್ಯತ್ವವನ್ನು ಹೇಳಿದ್ದು ಕೂಡದೆಹೋಗಬೇಕಾಗುವುದು. ಮತ್ತು ಉತ್ಪತ್ತಿಯನ್ನು ಅಂಗೀಕರಿಸಿದರೆ ಸರ್ವಚೇತನ ಸಾಮ್ಯವೇ ಬರುವುದರಿಂದ **'ಅಥ ಚೇತನಾಶ್ಚಾಚೇತನಾಶ್ಚ ತೇಜೋಽಬನ್ನಾನ್ಯಾಕಾಶ ಇತಿ ಹಾನ್ಯಚೇತನಾನಿ'** ಎಂದು ತೇಜಸ್ಸು ಮೊದಲಾದವುಗಳಿಗೆ ಅಚೇತನತ್ವವನ್ನು ಹೇಳಿ **'ವಾಯುರ್ವಾವಚೇತನಃ'** ಎಂದು ವಾಯುವಿಗೆ ಅತಿಶಯಚೇತನತ್ವ ಹೇಳಿದ್ದು ಕೂಡದೆಹೋಗಬೇಕಾಗುವುದು. ಮತ್ತು **'ಕುವಿದಂಗ ನಮಸಾ ಯೇ ವೃಧಾಸಃ'** ಎನ್ನುವ ಋಕ್ಕಿನಲ್ಲಿ ಹೇಳಿದ ಸರ್ವದೇವೋಪಾಸ್ಯತ್ವವೂ ಕೂಡದೆಹೋಗಬೇಕಾಗುವುದು. ಆತನಿಗೆ ಉದಯ ನಿಮ್ಲೋಚಗಳು ಇಲ್ಲದಿದ್ದ ಮೇಲೆ ಉತ್ಪತ್ತಿಯು ಹೇಗೆ ಕೂಡಬಹುದು? ಇಂತಹ ವಾಯುವಿಗೆ ಉತ್ಪತ್ತಿಯನ್ನು ಅಂಗೀಕರಿಸಿದರೆ ಆಕಾಶಕ್ಕಿಂತಲೂ ಅಧಿಕವಾಗಿ ಅನುಭವ ಯುಕ್ತಿ ಬಹುಶ್ರುತ್ಯಾದಿ ವಿರೋಧವು ಬರುವುದು. ವಾಯುರ್ನೋತ್ಪತ್ತಿಮಾನ್ ಪರಮನಿತ್ಯತ್ವಾತ್ ಪರಮಚೇತನತ್ವಾತ್ ಇತ್ಯಾದಿರೂಪಗಳಾದ ಯುಕ್ತಿಗಳು. ಏವಂ ಚ ಅನುಭವಾದಿ ವಿರೋಧವಿದ್ದ ಪ್ರಯುಕ್ತ ಮುಖ್ಯ ವಾಯುವಿಗೆ ಉತ್ಪತ್ತಿಯಿಲ್ಲದಿರುವುದರಿಂದ ವಾಯೂತ್ಪತ್ತಿಪ್ರತಿಪಾದಕವಾದ ಶ್ರುತಿಯಂತೆ ಜಗತ್ಕರ್ತೃತ್ವಪ್ರತಿಪಾದಕ ಶ್ರುತಿಗೂ ಅಪ್ರಾಮಾಣ್ಯವು ಬರುವುದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವಲ್ಲ. ಎಂದರೆ–

ಹೀಗೆ ಹೇಳಕೂಡದು. ಏಕೆಂದರೆ— ಅನುತ್ಪತ್ತಿ ಶ್ರುತಿಯು ಪರಬ್ರಹ್ಮನಲ್ಲಿಯೇ ಮುಖ್ಯವಾಗಿರುವುದರಿಂದ ವಾಯುವಿಗೆ ಅನಿತ್ಯತ್ವವ್ಯಾಪ್ತವಾದ ಅಲ್ಪಶಕ್ತಿಯಿದ್ದ ಪ್ರಯುಕ್ತ

ಉತ್ಪತ್ತಿಯಿಲ್ಲನೆನ್ನುವುದು (ಅನುಪಪತ್ತಿಶ್ಚ=) ಕೂಡುವುದೇ ಇಲ್ಲ. ಮತ್ತು ಪರಾಧೀನ ವಿಶೇಷ ಲಾಭರೂಪವಾದ ಉತ್ಪತ್ತಿಯನ್ನು ವಾಯುವಿಗೆ ಅಂಗೀಕರಿಸದಿದ್ದರೆ ವಾಯು-ವಿಷ್ಣು ಇವರಿಬ್ಬರಿಗೂ ಸ್ವಾತಂತ್ರ್ಯವು ಬರಬೇಕಾಗುವುದು. ಸ್ವಾತಂತ್ರ್ಯವಾದರೂ ಸರ್ವೋತ್ತಮತ್ವವು ಇಬ್ಬರಿಗೆ ಕೂಡದಿರುವುದರಿಂದ ವಿರುದ್ಧವೇ ಆಗಿದೆ. ಮತ್ತು ವಾಯು ವಿಷ್ಣು ಇವರಿಬ್ಬರಿಗೂ ಪರಸ್ಪರ ನಿಯಮ್ಯ ನಿಯಾಮಕ ಭಾವವಿದ್ದರೆ ಇಬ್ಬರಿಗೂ ಪರಾಧೀನತ್ವವು ಬರಬೇಕಾಗುವುದು. ನಿಯಮ್ಯ ನಿಯಾಮಕಭಾವವಿಲ್ಲವಾದರೆ ವಾಯುವಿಗೆ ಈಶ್ವರನಿಯಾಮಕತ್ವವಿಲ್ಲದಿರುವುದರಿಂದಲೂ ಈಶ್ವರನಿಗೆ ವಾಯುನಿಯಾಮಕತ್ವವಿಲ್ಲದಿರುವುದರಿಂದಲೂ ಅವರಿಬ್ಬರಿಗೂ ಸರ್ವೈಶ್ವರ್ಯವಿಲ್ಲವೆಂದಾಗಬೇಕಾಗುವುದು. ಸ್ವರೂಪಾತಿರಿಕ್ತವಾದ ವೃತ್ತಿರೂಪವಾದ ಜ್ಞಾನಕ್ಕೂ ನಾಶವಿಲ್ಲದಿರುವುದರಿಂದ ವಾಯುವಿನಲ್ಲಿಯೂ ಶರೀರಾದ್ಯುತ್ಪತ್ತಿ ಸ್ವರೂಪಾನುತ್ಪತ್ತಿಗಳಿಂದ ಆಕಾಶಪದವಾಚ್ಯವಾದ ದೇವತಾಸಮಾನಯೋಗಕ್ಷೇಮವಿರುವಾಗ ಪ್ರವಾಹತಃ ಸ್ವರೂಪಾತಿರಿಕ್ತವಾದ ವೃತ್ತಿಜ್ಞಾನವನ್ನು ಇಟ್ಟುಕೊಂಡು ವ್ಯವಸ್ಥೆಯು ಕೂಡುತ್ತದೆ. ಅನುಪಪತ್ತಿಯಾದರೂ ವ್ಯವಸ್ಥೆಯನ್ನು ಹೊಂದಿಸಿಕೊಡುತ್ತದೆ. ಸಾಕ್ಷಾತ್ಸಿದ್ಧಾಂತ ಯುಕ್ತಿಯು ವ್ಯವಸ್ಥೆಯೇ. ಏವಂ ಚ ವಾಯುವಿಗೆ ಮುಖ್ಯವಾದ ಅನುತ್ಪತ್ತಿಯು ಕೂಡದಿರುವುದರಿಂದ ಹಿಂದಿನಂತೆಯೇ ವ್ಯವಸ್ಥೆಯಿಂದ ಶ್ರುತಿಪ್ರಾಮಾಣ್ಯವು ಕೂಡುವುದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವೇ.

(3) **೩ನೇ ಅಸಂಭವಾಧಿಕರಣದಲ್ಲಿ 'ಅಸತಃ ಸದಜಾಯತ' 'ಸದೇವ ಸೋಮ್ಯೇದಮಗ್ರ ಆಸೀತ್'** ಇತ್ಯಾದಿ ಶ್ರುತಿ ವಿಪ್ರತಿಪತ್ತಿಯಿಂದ ಪರಬ್ರಹ್ಮನಿಗೆ ಉತ್ಪತ್ತಿಯು ಇದೆಯೋ ಇಲ್ಲವೋ ಎಂದು ಸಂಶಯವು ಬಂದರೆ ಉತ್ಪತ್ತಿಯಿದೆ ಎಂದು ಪೂರ್ವಪಕ್ಷವು. ಇಲ್ಲವೆಂದು ಸಿದ್ಧಾಂತವು. ಅದರಲ್ಲಿ ಸತಃ=ಸಚ್ಛಬ್ದವಾಚ್ಯನಾದ ಬ್ರಹ್ಮನಿಗೆ, ಸಾಮ್ಯಂ=ಆಕಾಶವಾಯುಗಳ ಸಾಮ್ಯವು ಎಂದು ಪೂರ್ವಪಕ್ಷನ್ಯಾಯವು. ಸ್ವಾತಂತ್ರ್ಯಂ=ಸರ್ವಸ್ವತಂತ್ರತ್ವವು ಎಂದು ಸಿದ್ಧಾಂತನ್ಯಾಯವು. ಅಂದರೆ-ಸಚ್ಛಬ್ದವಾಚ್ಯನಾದ ಪರಬ್ರಹ್ಮನಿಗೆ ಉತ್ಪತ್ತಿಯು ಉಂಟೇ ಉಂಟು. ಅನಾದಿತ್ವವನ್ನು ಶ್ರುತಿಯಲ್ಲಿ ಪ್ರತಿಪಾದಿಸಿದಾಗ್ಯೂ ಅನಾದಿಭೂತಗಳಾದ ಆಕಾಶ ವಾಯುಗಳ ಉತ್ಪತ್ತಿಯಂತೆ ಸ್ವರೂಪಲಾಭಾದ್ಯುತ್ಪತ್ತಿಯು ಕೂಡದಿರುವುದಾಗ್ಯೂ ಪರಾಧೀನ ವಿಶೇಷವತ್ವರೂಪವಾದ ಉತ್ಪತ್ತಿಯನ್ನು ಅಂಗೀಕರಿಸಿರುವುದರಿಂದ ಅನಾದಿತ್ವ ಶ್ರುತಿವಿರೋಧವೂ ಇಲ್ಲ. ತಥಾ ಚ ಉತ್ಪತ್ತಿಯಿದ್ದ ಪ್ರಯುಕ್ತ ಆಕಾಶಾದಿಗಳಿಂದ ಸಾಮ್ಯವೇ ಇದ್ದ ಪ್ರಯುಕ್ತ ಬ್ರಹ್ಮನಿಗೆ ಜಗತ್ಕರ್ತೃತ್ವವು ಕೂಡುವುದಿಲ್ಲ ಎಂದರೆ— ಹಾಗೆ ಹೇಳಕೂಡದು. ಏಕೆಂದರೆ— ಶ್ರೀ ಹರಿಯು ಸರ್ವಸ್ವತಂತ್ರನಾದ ಪ್ರಯುಕ್ತ ಆತನಿಗೆ ಉತ್ಪತ್ತಿಯು ಇಲ್ಲವೇ ಇಲ್ಲ. ಗಗನ ಪವನಾದಿಗಳಿಗಾದರೂ ಸ್ವಾತಂತ್ರ್ಯವಿಲ್ಲದಿರುವುದರಿಂದಲೇ ಉತ್ಪತ್ತಿಯು ಕೂಡುತ್ತದೆ. ಏವಂ ಚ ಬ್ರಹ್ಮನಿಗೆ ಸ್ವಾತಂತ್ರ್ಯವಿದ್ದುದರಿಂದ ಅನುತ್ಪತ್ತಿಯು ಕೂಡುವುದರಿಂದ ಉತ್ಪತ್ತಿಯಿದ್ದ ಆಕಾಶಾದಿ ಸಾಮ್ಯವಿಲ್ಲ. ಆದ ಕಾರಣ ಶ್ರೀ ಹರಿಗೆ ಜಗತ್ಕಾರಣತ್ವವು ಯುಕ್ತವೇ.

(4) **೪ನೇ ತೇಜೋಧಿಕರಣದಲ್ಲಿ 'ವಾಯೋರಗ್ನಿಃ' 'ತತ್ತೇಜೋಽಸೃಜತ'** ಎನ್ನುವ ಶ್ರುತಿ ವಿಪ್ರತಿಪತ್ತಿಯಿಂದ, ತೇಜಸ್ಸು ವಾಯುವಿನಿಂದ ಹುಟ್ಟುವುದೋ, ಪರಬ್ರಹ್ಮನಿಂದಲೋ ಎಂದು ಸಂಶಯವು ಬರುವಾಗ ವಾಯುವಿನಿಂದ ಹುಟ್ಟುವುದು ಎಂದು ಪೂರ್ವಪಕ್ಷವು. ಪರಬ್ರಹ್ಮನಿಂದ ಎಂದು ಸಿದ್ಧಾಂತವು. ಅದರಲ್ಲಿ ದ್ವಾರವೈಯರ್ಥ್ಯಮೇವ ಚ=ದ್ವಾರಕಾರಣಕ್ಕೆ ವೈಯರ್ಥ್ಯವೇ ಎಂದು ಪೂರ್ವಪಕ್ಷನ್ಯಾಯವು. ಅನುಸಾರಿತಾ=ವಿಷ್ಣುವಿಗೆ ದ್ವಾರಕಾರಣದ ಅನುಸಾರಿತ್ವವಿದೆ, ಅಂದರೆ ದ್ವಾರಕಾರಣವನ್ನು ಅನುಸರಿಸಿಯೇ ವಿಷ್ಣುವಿನ ಪ್ರವೃತ್ತಿಯು.

ಎಂದು ಸಿದ್ಧಾಂತನ್ಯಾಯವು. ಅಂದರೆ '**ವಾಯೋರಗ್ನಿಃ**' ಎನ್ನುವ ಶ್ರುತಿಪ್ರಾಮಾಣ್ಯವನ್ನು ನಿರ್ವಾಹಮಾಡುವುದಕ್ಕಾಗಿ ತೇಜಸ್ಸು ವಾಯುದ್ವಾರಾ ಪರಮಾತ್ಮನಿಂದ ಹುಟ್ಟಿದ್ದು ಎಂದು ಹೇಳುವವನ ಹತ್ತಿರ ಪ್ರಶ್ನಿಸಬೇಕು. ೧ ಬ್ರಹ್ಮನು ವಾಯುವಿನ ಅಪೇಕ್ಷೆಯಿಲ್ಲದೇನೇ ಸೃಷ್ಟಿಮಾಡ ಲಿಕ್ಕೆ ಶಕ್ತನೋ, ಅಲ್ಲವೋ? ಅಲ್ಲವೆನ್ನುವ ೨ನೇ ಪಕ್ಷದಲ್ಲಿ ಬ್ರಹ್ಮ ವಾಯು ಇವರಿಬ್ಬರಿಗೂ ಕಾರಣ ತ್ವವು ಬರಬೇಕಾಗುವುದು. ಆದಕಾರಣ ಒಂದನೇ ಪಕ್ಷವನ್ನೇ ಇಟ್ಟುಕೊಳ್ಳಬೇಕು. ಅದರಲ್ಲಿ ವಿಷ್ಣುವಿನಿಂದಲೇ ವಾಯುವಿನ ಅಪೇಕ್ಷೆಯಿಲ್ಲದೆ ತೇಜಸ್ಸಿಗೆ ಉತ್ಪತ್ತಿಯನ್ನು ಅಂಗೀಕರಿಸಿದರೆ ವಾಯುರೂಪವಾದ ದ್ವಾರಕಾರಣಕ್ಕೆ ವೈಯರ್ಥ್ಯವು ತಥಾಚ ದ್ವಾರಕಾರಣಕ್ಕೆ ವೈಯರ್ಥ್ಯವು ಬರಬೇಕಾಗುವ ಪ್ರಯುಕ್ತ ತೇಜಸ್ಸಿಗೆ ವಾಯು-ಬ್ರಹ್ಮ ಇವರಿಬ್ಬರು ಕಾರಣರು ಎಂದೇ ಹೇಳ ಬೇಕು. ಆದಕಾರಣ ಬ್ರಹ್ಮನಿಗೇನೇ ಪ್ರಧಾನವಾಗಿ ಕರ್ತೃತ್ವವೆನ್ನುವುದು ಕೂಡುವುದಿಲ್ಲ. ಎಂದರೆ—ಹೀಗೆ ಹೇಳಕೂಡದು. ಏಕೆಂದರೆ—ತೇಜಸ್ಸು ಮೊದಲಾದುದನ್ನು ಕುರಿತು ವಾಯ್ವಾದಿ ಗಳಿಗೆ ಮುಖ್ಯ ಕಾರಣತ್ವವಿಲ್ಲವಾದರೂ ಶ್ರೀಹರಿಯು ವಾಯುಮೊದಲಾದ ದ್ವಾರಕಾರಣವನ್ನು ಅನುಸರಿಸಿಯೇ ತನ್ನ ಇಚ್ಛೆಯಿಂದಲೇ ಕ್ರೀಡೆಯಿಂದ ತೇಜಸ್ಸುಮೊದಲಾದವುಗಳನ್ನು ಸೃಷ್ಟಿಸುವು ದಕ್ಕಾಗಿ ಪ್ರವೃತ್ತಿಮಾಡುತ್ತಾನೆಂದು ಶ್ರುತ್ಯಾದಿಸಿದ್ಧವಾಗಿದೆ. ಏವಂಚ ಪರಬ್ರಹ್ಮನು ಒಬ್ಬನೇ ತೇಜಸ್ಸೇ ಮೊದಲಾದುದನ್ನು ಸೃಷ್ಟಿಮಾಡಲಿಕ್ಕೆ ಶಕ್ತನಾದಾಗ್ಯೂ ಶ್ರುತಿಸಿದ್ಧವಾದ ದ್ವಾರಕಾರಣ ವನ್ನು ಲೀಲೆಯಿಂದ ಅನುಸರಿಸಿರುವುದರಿಂದ ಅವನಿಗೇನೇ ಸರ್ವಕರ್ತೃತ್ವವು ಯುಕ್ತವು.

(5) (೫ನೇ **ಅಬದಧಿಕರಣದಲ್ಲಿ 'ಅಗ್ನೇರಾಪಃ' 'ತದಪೋಽಸೃಜತ'** ಎನ್ನುವ ಶ್ರುತಿ ವಿಪ್ರತಿಪತ್ತಿಯಿಂದ ತೇಜಸ್ಸಿನ ಅನಂತರದಲ್ಲಿ ಪ್ರಾಪ್ತಗಳಾದ ಜಲಗಳು ತೇಜಸ್ಸಿನಿಂದ ಹುಟ್ಟುತ್ತವೋ, ಪರಬ್ರಹ್ಮನಿಂದಲೋ ಎಂದು ಸಂಶಯವು ಬಂದರೆ ತೇಜಸ್ಸಿನಿಂದ ಎಂದು ಪೂರ್ವಪಕ್ಷವು. ಪರಬ್ರಹ್ಮನಿಂದ ಎಂದು ಸಿದ್ಧಾಂತವು. ಅದರಲ್ಲಿ) ದೃಷ್ಟಯುಕ್ತ್ಯನುಸಾರಿತ್ವಂ = ಕಾಣಲ್ಪಟ್ಟ ಯುಕ್ತಿಯನ್ನು ಅನುಸರಿಸುವಿಕೆ ಎಂದು ಪೂರ್ವಪಕ್ಷನ್ಯಾಯವು. ಮುಖ್ಯತಾ=ಮುಖ್ಯತ್ವವು. ಎಂದು ಸಿದ್ಧಾಂತನ್ಯಾಯವು. ಅಂದರೆ ದ್ವಾರಕಾರಣತ್ವವನ್ನು ಹೊರತು ಸ್ವತಂತ್ರವಾಗಿ ತೇಜ ಸ್ಸಿನದ್ದೆಶೆಯಿಂದ ಜಲಕ್ಕೆ ಉತ್ಪತ್ತಿಯನ್ನು ಅಂಗೀಕರಿಸಿದರೆ ತಾಪದಿಂದ ಸ್ವೇದಾದಿಗಳು ಕಂಡ ಪ್ರಯುಕ್ತ ದೃಷ್ಟ್ಯನುಸರಣವು. ಮತ್ತು ಪ್ರತ್ಯಕ್ಷಮೂಲಕವಾದ 'ವಿಮತಾ ಆಪಃ ತೇಜಸೋ ಜಾಯಂತೇ ಅಪ್‌ತ್ವಾತ್ ಸ್ವೇದಾದಿವತ್' ಎನ್ನುವ ಯುಕ್ತ್ಯನುಸಾರಿತ್ವವಿದ್ದಪ್ರಯುಕ್ತ 'ಅಗ್ನೇ ರಾಪಃ' ಎನ್ನುವ ಶ್ರುತಿಗೆ ಹಿಂದೆ ಹೇಳಿದ ಯುಕ್ತಿಯುಕ್ತತ್ವರೂಪಗುಣಯೋಗದಿಂದ ಪ್ರಾಬ ಲ್ಯವು. ಅಂತೂ ದೃಷ್ಟಿ, ದೃಷ್ಟವಾದ ಯುಕ್ತ್ಯನುಸರಣವೂ ಇದ್ದಪ್ರಯುಕ್ತ ಜಲವು ಸಾಕ್ಷಾತ್ತಾಗಿ ತೇಜಸ್ಸಿನಿಂದಲೇ ಹುಟ್ಟಿರುವುದರಿಂದ ಬ್ರಹ್ಮನಿಗೆ ಸರ್ವಕಾರಣತ್ವವಿಲ್ಲ. ಎಂದರೆ— ಹೀಗೆ ಹೇಳ ಕೂಡದು. ಏಕೆಂದರೆ '**ಇದಂ ಸರ್ವಮಸೃಜತ**' '**ಕರ್ತಾ ಸರ್ವಸ್ಯ ವೈ ವಿಷ್ಣುಃ**' ಎನ್ನುವ ಶ್ರುತಿ-ಸ್ಮೃತಿಗಳಲ್ಲಿರತಕ್ಕ ಸರ್ವಶಬ್ದಕ್ಕೆ ಅಸಂಕುಚಿತವಾದ ಸರ್ವರೂಪ ಮುಖ್ಯಾರ್ಥಕ್ಕೆ ಪರಿತ್ಯಾಗವು ಬರಬೇಕಾಗುವುದು. ಹಿಂದೆ ಹೇಳಿದ ಯುಕ್ತ್ಯುಪೇತವಾದ 'ಅಗ್ನೇರಾಪಃ' ಎನ್ನುವ ಶ್ರುತಿಯು ತೇಜಸ್ಸಿಗೆ ದ್ವಾರಕಾರಣತ್ವವನ್ನು ಪ್ರತಿಪಾದಿಸುವುದರಿಂದ ಸಾವಕಾಶವಾಗುತ್ತದೆ. ತಥಾಚ '**ಇದಂ ಸರ್ವಮಸೃಜತ**' ಇತ್ಯಾದಿ ವಾಕ್ಯಗಳಲ್ಲಿರತಕ್ಕ ಸರ್ವಶಬ್ದಕ್ಕೆ ಸಕಲಪದಾರ್ಥಗ್ರಹಣ ರೂಪವಾದ ಮುಖ್ಯತ್ವವು ಸಿಗುವುದರಿಂದ ವಿಷ್ಣುವಿಗೆ ಸರ್ವಜಗತ್ಕರ್ತೃತ್ವವು ಯುಕ್ತವು.

(6)**೬ನೇ ಪೃಥಿವ್ಯಧಿಕರಣದಲ್ಲಿ 'ತಾಃ ಆಪ ಐಕ್ಷಂತ' 'ಬಹ್ವ್ಯಃ ಸ್ಯಾಮ ಪ್ರಜಾಯೇ ಮಹೀತಿ' 'ತಾ ಅನ್ನ ಮಸೃಜಂತ' ಅದ್ಭ್ಯಃ ಪೃಥಿವೀ'** ಎನ್ನುವ ಶ್ರುತಿವಿಪ್ರತಿಪತ್ತಿಯಿಂದ

೧ ಜಲವು ಅನ್ನಕ್ಕೆ ದ್ವಾರಕಾರಣವೋ, ೨ ಅಥವಾ ಪೃಥಿವಿಗೋ ಎಂದು ಸಂಶಯವು ಬಂದರೆ ಜಲವು ಪೃಥಿವಿಗೆ ಕಾರಣವಲ್ಲ, ಅನ್ನಕ್ಕೂ ಅಲ್ಲ, ಎಂದು ಪೂರ್ವಪಕ್ಷವು, ಪೃಥಿವಿಗೆ ಕಾರಣವು ಎಂದು ಸಿದ್ಧಾಂತವು. ಅದರಲ್ಲಿ) ಉಕ್ತಾನ್ಯಾರ್ಥಾವಿರೋಧತಃ = **'ತಾ ಅನ್ನಮಸೃಜಂತ'** ಇತ್ಯಾದಿ ಶ್ರುತಿಗಳಲ್ಲಿ ಹೇಳಲ್ಪಟ್ಟ ಪ್ರಸಿದ್ಧ ಅನ್ನಾಖ್ಯವಾದ, ಪೃಥಿವೀಸಕಾಶದ್ದೆಶೆಯಿಂದ ಇತರ ವಾದ ಅರ್ಥದ ವಿರೋಧವಿಲ್ಲದಿರುವುದರಿಂದ (ಅಂದರೆ ಅನ್ಯಾರ್ಥವನ್ನು ಅನ್ನಶಬ್ದವು ಹೇಳುವುದ ರಿಂದ) ಪ್ರಸಿದ್ಧನಾಮಸ್ವೀಕಾರೇ=ಅನ್ನವೆನ್ನುವ ಪ್ರಸಿದ್ಧನಾಮವನ್ನು ಸ್ವೀಕರಿಸಿದರೆ, ಬಹುವಾಕ್ಯಾ ನುವರ್ತಿತಾ=ಅನೇಕ ವಾಕ್ಯಗಳ ಅನುಸರಣವು. (ಎಂದು ಪೂರ್ವಪಕ್ಷನ್ಯಾಯವು.) ಶಕ್ತಿ ಮತ್ವಂಚ=ಅನ್ನಶಬ್ದಕ್ಕೆ ಪ್ರಯೋಗಬಾಹುಲ್ಯವಿದ್ದಪ್ರಯುಕ್ತ ಪೃಥಿವಿಯಲ್ಲಿಯೂ ಶಕ್ತಿಯಿದೆ. ಎಂದು ಸಿದ್ಧಾಂತನ್ಯಾಯವು. ಅಂದರೆ— ಜಲವು ಪೃಥಿವಿಗೆ ಕಾರಣವಲ್ಲ, ಅನ್ನಕ್ಕೂ ಕಾರಣ ವಲ್ಲ, ಹಿಂದೆ ಹೇಳಿದ ಎರಡು ಶ್ರುತಿಗಳೂ ಪರಸ್ಪರ ವಿರುದ್ಧಗಳಾಗಿವೆ. ನಿರವಕಾಶಗಳಾಗಿರು ವುದರಿಂದ ಒಂದನ್ನು ಗ್ರಹಣ ಮಾಡಲಿಕ್ಕೆ ಬರುವುದಿಲ್ಲ. **'ತಾ ಅನ್ನಮಸೃಜಂತ' 'ತಾ ಅಪೋಽನ್ನಮಸೃಜಂತ' 'ಅದ್ಭ್ಯೋ ವಾ ಅನ್ನಮುತ್ಪದ್ಯತೇ'** ಇತ್ಯಾದಿಶ್ರುತಿಗಳಲ್ಲಿರ ತಕ್ಕ ಅನ್ನ ಶಬ್ದಕ್ಕೆ ಪೃಥಿವೀ ಎನ್ನುವ ಅರ್ಥವಾಗಿರುವುದರಿಂದ ಶ್ರುತಿಯು ಸಾವಕಾಶವಾಗಿದೆ ಎಂದು ಹೇಳಕೂಡದು. **'ತಾ ಅನ್ನಮಸೃಜಂತ'** ಇತ್ಯಾದಿ ಶ್ರುತಿಗಳಲ್ಲಿ ಹೇಳಲ್ಪಟ್ಟ, ಪ್ರಸಿದ್ಧಾನ್ನಾಖ್ಯವಾದ, ಪೃಥಿವಿಗಿಂತ ಅನ್ಯಾರ್ಥವನ್ನು ಹೇಳುವುದರಿಂದ ಪ್ರಸಿದ್ಧವಾದ ಅನ್ನ ಎನ್ನುವ ನಾಮವನ್ನು ಸ್ವೀಕರಿಸಿದರೆ **'ತಸ್ಮಾದ್ಯತ್ರ ಕ್ವಚ ವರ್ಷತಿ ತದೇವ ಭೂಯಿಷ್ಠಮನ್ನಂ ಭವತಿ' 'ಅದ್ಭ್ಯ ಏವ ತದ್ಧ್ಯನ್ನಾದ್ಯಂ ಜಾಯತೇ'** ಇದು ಮೊದಲಾದ ಬಹು ವಾಕ್ಯಾನು ಸರಣವು. ಹಾಗೆಯೇ **'ಅನ್ನಮಶಿತಂತ್ರೇಧಾ ವಿಧೀಯತೇ'** ಎಂದು ಪ್ರಸಿದ್ಧ ಅನ್ನ ಲಿಂಗ ವನ್ನು ಪ್ರತಿಪಾದಿಸತಕ್ಕ ಬಹುವಾಕ್ಯಾನುಸರಣವೆನ್ನುವ ಗುಣವು ಲಭಿಸುತ್ತದೆ. ಮತ್ತು ಪೃಥಿವೀ ಶಬ್ದಕ್ಕೆ ಅನ್ನ ಎನ್ನುವ ಅರ್ಥವನ್ನು ಇಟ್ಟುಕೊಂಡು 'ಅದ್ಭ್ಯಃ ಪೃಥಿವೀ' ಎನ್ನುವ ಶ್ರುತಿಗೆ ಸಾವ ಕಾಶತ್ವವು ಇಲ್ಲ. ಜಲದಿಂದಲೇ ಅನ್ನದ ಸೃಷ್ಟಿಯನ್ನು ಅಂಗೀಕರಿಸಿದರೆ **'ಅದ್ಭ್ಯಃ ಪೃಥಿವೀ' 'ಪೃಥಿವ್ಯಾ ಓಷಧಯಃ' 'ಓಷಧೀಭ್ಯೋಽನ್ನಂ'** ಎಂದು ವಿರೋಧವೂ ಇರುತ್ತದೆ. ಏವಂಚ ಎರಡು ಶ್ರುತಿಗಳಿಗೂ ಅಪ್ರಾಮಾಣ್ಯವಿದ್ದ ಪ್ರಯುಕ್ತ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ. ಎಂದರೆ— ಹೀಗೆ ಹೇಳಕೂಡದು. ಏಕೆಂದರೆ— **'ಆಪಶ್ಚ ಪೃಥಿವೀಚಾನ್ನಂ' 'ಪೃಥಿವೀವಾ ಅನ್ನಂ' 'ತಾ ಅಪೋಽನ್ನಮಸೃಜಂತ' 'ಪೃಥಿವೀ ವಾ ಅನ್ನಂ'** ಇತ್ಯಾದಿ ಶ್ರುತಿಗಳಲ್ಲಿ ಅನ್ನದಲ್ಲಿ ಅನ್ನಶಬ್ದವಿದ್ದಂತೆಯೇ ಪೃಥಿವಿಯ ಲ್ಲಿಯೂ ಅನ್ನ ಶಬ್ದಕ್ಕೆ ಪ್ರಯೋಗಬಾಹುಲ್ಯವಿದೆ. ಪ್ರಯೋಗಬಾಹುಲ್ಯವು ಶಕ್ತಿಗೆ ಕಲ್ಪಕ ವಾಗಿರುವುದರಿಂದ ಅನ್ನಶಬ್ದಕ್ಕೆ ಪೃಥಿಯಲ್ಲಿಯೂ ಶಕ್ತಿ ಇದೆ. **'ತಾ ಅನ್ನಮಸೃಜಂತ'** ಎನ್ನುವಲ್ಲಿ ಅನ್ನಶಬ್ದದಿಂದ ಪೃಥಿವಿಯೇ ಹೇಳಲ್ಪಡುತ್ತದೆ. ಹೀಗೆ ಜಲವು ಪೃಥಿವಿಗೇನೇ ದ್ವಾರ ಕಾರಣವು. ಮತ್ತು **'ತತ್ತೇಜೋಽಸೃಜತ' 'ತದಪೋಽಸೃಜತ' 'ತಾಸಾಂ ತ್ರಿವೃತಂ ತ್ರಿವೃತಮೇಕೈಕಾಮಕರೋತ್'** ಇತ್ಯಾದಿಗಳಿಂದ ಈ ಪ್ರಕರಣವು ಭೂತಾಧಿಕಾರವಾಗಿದೆ. ಕಾರ್ಷ್ಣ್ಯಪ್ರಾಚುರ್ಯರೂಪವಾದ ಪೃಥಿವೀಲಿಂಗಾದಿಗಳು ಪ್ರಸಿದ್ಧಾನ್ನದಲ್ಲಿ ನಿರವಕಾಶಗಳಾ ಗಿವೆ. ಆದಕಾರಣ **'ತಾ ಅನ್ನಮಸೃಜಂತ'** ಎನ್ನುವಲ್ಲಿ ಅನ್ನಶಬ್ದದಿಂದ ಪೃಥಿವಿಯೇ ಹೇಳ ಲ್ಪಡುತ್ತದೆ. **'ಅದ್ಭ್ಯೋ ವಾ ಅನ್ನಮುತ್ಪದ್ಯತೇ'** ಇತ್ಯಾದಿಗಳಲ್ಲಿ ಅನ್ನ ಶಬ್ದವು ಪೃಥಿವೀಪರವಾಗಿದೆ. **'ತದೇವ ಭೂಯಿಷ್ಠಮನ್ನಂ ಭವತಿ' 'ಅನ್ನಮಶಿತಂ'** ಇತ್ಯಾದಿಗಳಲ್ಲಿರತಕ್ಕ ಅನ್ನಶಬ್ದವು ಪಾರ್ಥಿವಾರ್ಥಕವಾದುದು. ಏವಂ ಚ ಅನ್ನಶಬ್ದಕ್ಕೆ

ಪೃಥಿವಿಯಲ್ಲಿಯೂ ಶಕ್ತಿಯಿದ್ದ ಪ್ರಯುಕ್ತ ಅನ್ನಶ್ರುತಿಗೆ ಪೃಥಿವೀಪರತ್ವವಿದ್ದುದರಿಂದ ಶ್ರುತಿ ವಿರೋಧವಿಲ್ಲದಿರುವ ಪ್ರಯುಕ್ತ ಜಲಕ್ಕೆ ಪೃಥಿವೀ ಕಾರಣತ್ವವು ಸಿದ್ಧಿಸುವುದರಿಂದ ವಿಷ್ಣುವಿಗೆ ಲೀಲೆಯಿಂದ ವಸ್ತ್ವಂತರವನ್ನು ದ್ವಾರೀಕರಿಸಿಕೊಂಡು ಜಗತ್ಕಾರಣತ್ವವು ಯುಕ್ತವು. (7) ೭ನೇ ತದಭಿಧ್ಯಾನಾಧಿಕರಣದಲ್ಲಿ '**ಯತ್ಪ್ರಯಂತ್ಯಭಿಸಂವಿಶಂತಿ**' '**ರುದ್ರೋವಾವಿಶಾಂತಕಃ**' ಎನ್ನುವ ಶ್ರುತಿವಿಪ್ರತಿಪತ್ತಿಯಿಂದ ಅಧಿಭೂತಾಧಿದೈವಗಳಿಗೆ ಶ್ರೀ ಹರಿಯಿಂದ ಲಯವೋ ರುದ್ರನಿಂದಲೋ ಎಂದು ಸಂಶಯವು ಬಂದರೆ ರುದ್ರನಿಂದಲೇ ಎಂದು ಪೂರ್ವಪಕ್ಷವು. ಶ್ರೀಹರಿಯಿಂದಲೇ ಎಂದು ಸಿದ್ಧಾಂತವು. ಅದರಲ್ಲಿ ಲೋಕದೃಷ್ಟಾನುಸಾರಿತ್ವಂ=ರುದ್ರಾದಿಗಳು ಮಾರಕರು ಎಂದಂಗೀಕರಿಸಿದರೆ ತಂದೆಯಿಂದ ಇತರರಿಗೇನೇ ಮಾರಕತ್ವವು ದೃಷ್ಟವಾಗಿರುವುದರಿಂದ ಲೋಕದಲ್ಲಿ ದೃಷ್ಟವಾಗಿರುವುದರ ಅನುಸರಣವು ಎಂದು ಪೂರ್ವಪಕ್ಷನ್ಯಾಯವು. ವೈರೂಪ್ಯಂ= ವಿಷ್ಣುವಿಗೆ ಲೋಕಪಿತೃಗಳಿಂದ ವೈಲಕ್ಷಣ್ಯವು ಎಂದು ಸಿದ್ಧಾಂತನ್ಯಾಯವು. ಅಂದರೆ— ಲೋಕದೃಷ್ಟವಾದುದನ್ನು ಅನುಸರಿಸಿ ಸೃಷ್ಟಿಕರ್ತನಾದ ವಿಷ್ಣುವಿನಿಂದ ಇತರರಾದ ರುದ್ರಾದಿಗಳಿಗೇನೇ ಸಂಹಾರಕತ್ವವನ್ನು ಅಂಗೀಕರಿಸಬೇಕಾಗುತ್ತಿರಲು ಶ್ರೀ ಹರಿಯು ಸಂಹಾರಕನು ಇತ್ಯಾದಿ ಶ್ರುತಿಗಳಿಗೆ ಅಪ್ರಾಮಾಣ್ಯವಿದ್ದ ಪ್ರಯುಕ್ತ ಜಗತ್ಕರ್ತೃತ್ವಾದಿಗಳು ವಿಷ್ಣುವಿಗೆ ಯುಕ್ತವಲ್ಲ ಎಂದರೆ— ಹೀಗೆ ಹೇಳಕೂಡದು. ಏಕೆಂದರೆ— ಶ್ರೀ ಹರಿಗೆ ಮಮತಾದಿ ದೋಷಗಳಿಲ್ಲದಿರುವುದರಿಂದ ಲೋಕಪಿತೃಗಳಿಂದ ವೈಲಕ್ಷಣ್ಯವಿದ್ದಪ್ರಯುಕ್ತ '**ಇದಂ ಸರ್ವಂ ವಿಲಾಪಯತಿ**' '**ಸ್ರಷ್ಟಾ ಪಾತಾ ಚ ಸಂಹರ್ತಾ ಸ ಏಕೋ ಹರಿರೀಶ್ವರಃ**' ಇದು ಮೊದಲಾದ ಶ್ರುತಿಸ್ಮೃತಿರೂಪವಾದ ವಾಕ್ಯವನ್ನು ಅನುಸರಿಸಿ ವಿಷ್ಣುವಿಗೇನೇ ಸಂಹರ್ತೃತ್ವಾಂಗೀಕಾರವು ಉಪಪನ್ನವಾಗುತ್ತದೆ. ಇಲ್ಲವಾದರೆ '**ನ ವಿಷ್ಣೋರನ್ಯೋವಿಲಯಕೃನ್ನವಿಷ್ಣೋರನ್ಯೋ ವಿಮುಕ್ತಿದಃ**' ಇತ್ಯಾದಿ ಶ್ರುತಿವಿರೋಧವು. ರುದ್ರನಿಗಾದರೂ ಕೆಲವು ವಸ್ತುವಿನ ಸಂಹಾರದಲ್ಲಿ ದ್ವಾರಕಾರಣತ್ವವಿದ್ದಪ್ರಯುಕ್ತವೇ ಆ ವಾಕ್ಯಗಳು ಸಾವಕಾಶಗಳಾಗುತ್ತವೆ. ತಥಾಚ ಶ್ರೀ ಹರಿಗೆ ಲೋಕಪಿತೃಗಳಿಂದ ವೈಲಕ್ಷಣ್ಯವಿದ್ದಪ್ರಯುಕ್ತ ಶ್ರೀಹರಿಯೊಬ್ಬನಿಗೇನೇ ಸೃಷ್ಟಿಸಂಹಾರಾದಿಕರ್ತೃತ್ವವು ಯುಕ್ತವು. (೮) ೮ನೇ ವಿಪರ್ಯಯಾಧಿಕರಣದಲ್ಲಿ '**ಅತ ಏವ ಹೀದಂ ಪರಾತ್ಕ್ರಮಾದುತ್ಪದ್ಯತೇ** '**ಕ್ರಮಾದ್ವಿಲೀಯತೇ**' '**ಅಕ್ಷರಾತ್ಪರಮಾಗೇವ ಸರ್ವಮುತ್ಪದ್ಯತೇ ಕ್ರಮಾತ್**' **ವ್ಯುತ್ಕ್ರಮಾ ದ್ವಿಲಯಶ್ಚ**ವ ಎನ್ನುವ ಶ್ರುತಿವಿಪ್ರತಿಪತ್ತಿಯಿಂದ ಅಧಿಭೂತಾದಿಗಳು ಉತ್ಪತ್ತಿ ಕ್ರಮವನ್ನು ಅನುಸರಿಸಿ ನಾಶಹೊಂದುತ್ತವೋ ವ್ಯುತ್ಕ್ರಮದಿಂದಲೋ ಎಂದು ಸಂಶಯವು ಬಂದರೆ— ಉತ್ಪತ್ತಿಕ್ರಮದಿಂದಲೇ ಲಯವೆಂದು ಪೂರ್ವಪಕ್ಷವು. ವ್ಯುತ್ಕ್ರಮದಿಂದಲೇ ಎಂದು ಸಿದ್ಧಾಂತವು. ಅದರಲ್ಲಿ, ಲೋಕದೃಷ್ಟಾನುಸಾರಿತ್ವಂ=ಲೋಕದಲ್ಲಿ ದೃಷ್ಟವಾದುದನ್ನು ಅನುಸರಿಸುವಿಕೆಯು ಎಂದು ಪೂರ್ವಪಕ್ಷ ನ್ಯಾಯವು. ವೈರೂಪ್ಯಂ=ಲೋಕಪಿತೃಗಳಿಂದ ವೈಲಕ್ಷಣವು ಎಂದು ಸಿದ್ಧಾಂತನ್ಯಾಯವು. ಅಂದರೆ ಲೋಕದಲ್ಲಿ ಉತ್ಪತ್ತಿಕ್ರಮವನ್ನು ಅನುಸರಿಸಿಯೇ ಲಯವು ಪ್ರಾಯಶಃ ಕಂಡಿದೆ. ಉತ್ಪತ್ತಿಕ್ರಮದಿಂದಲೇ ಲಯವನ್ನು ಅಂಗೀಕರಿಸಿದರೆ '**ಕ್ರಮಾದುತ್ಪದ್ಯತೇ**' '**ಕ್ರಮಾದ್ವಿಲೀಯತೇ**' '**ಕ್ರಮೇಣೈವೋತ್ಪತ್ತಿರ್ವಿಲಯಶ್ಚ**' '**ಕ್ರಮೇಣೈವಾಸ್ಯೋತ್ಪತ್ತಿವಿಲಯೌ**' ಇದು ಮೊದಲಾದ ಲೋಕಾನುಸಾರಿಯಾದ ಬಹುಶ್ರುತ್ಯನುಸರಣವು. ಏವಂ ಚ ಲೋಕದೃಷ್ಟ್ಯನುಸಾರಿಯಾದ ಕ್ರಮಶ್ರುತಿಯ ವಿರೋಧದಿಂದ ವ್ಯುತ್ಕ್ರಮಶ್ರುತಿಗೆ ಅಪ್ರಾಮಾಣ್ಯವಿದ್ದಂತೆಯೇ ಶ್ರುತ್ಯಂತರಕ್ಕೂ ಅಪ್ರಾಮಾಣ್ಯವಿದ್ದ ಪ್ರಯುಕ್ತ ಶ್ರೀ ಹರಿಗೆ ಜಗತ್ಕಾರಣತ್ವವು ಯುಕ್ತವಲ್ಲ ಎಂದರೆ— ಹೀಗೆ ಹೇಳಕೂಡದು. ಅಧಿಭೂತ ಮೊದಲಾದುದು ಉತ್ಪತ್ತಿಕ್ರಮಕ್ಕಿಂತ ವಿಪರೀತವಾಗಿಯೇ ಲಯವನ್ನು

ಹೊಂದುತ್ತವೆ. ಲೋಕಾನುಸಾರಿಯಾದ ಬಹುವಾಕ್ಯವಿರೋಧವಿಲ್ಲ. ಕ್ರಮವು ವ್ಯುತ್ಕ್ರಮ ಅನುಕ್ರಮ ಭೇದದಿಂದ ಅನೇಕಪ್ರಕಾರವಾಗಿದೆ. **'ಕ್ರಮಾದ್ವಿಲೀಯತೇ'** ಎನ್ನುವ ವಾಕ್ಯವು ವ್ಯುತ್ಕ್ರಮಪರವಾಗಿ ಸಾವಕಾಶವಾಗಿದೆ. **'ದ್ವಿವಿಧಃ ಕ್ರಮಉದ್ದಿಷ್ಟಃ ವ್ಯುತ್ಕ್ರಮೋಽನು ಕ್ರಮಸ್ತಥಾ । ಸೃಷ್ಟಾವನ್ಯೋ ಲಯೇ ಚಾನ್ಯ ಇತಿ ವೇದವಿದೋ ವಿದುಃ'** ॥ ಎನ್ನುವ ಶ್ರುತಿಯು ಕ್ರಮಾನೇಕತ್ವ ವಿಷಯದಲ್ಲಿ ಪ್ರಮಾಣವು. ಏವಂಚ ವ್ಯುತ್ಕ್ರಮ-ಅನುಕ್ರಮ ಭೇದ ದಿಂದ ಕ್ರಮವು ಎರಡು ವಿಧವಾಗಿರುವುದರಿಂದ ಕ್ರಮವಾಕ್ಯವು ವ್ಯುತ್ಕ್ರಮಪರವಾಗಿ ಸಾವಕಾಶ ವಾಗಿರುವುದರಿಂದ ಉತ್ಪತ್ತಿ ಕ್ರಮದಿಂದಲೇ ಲಯವನ್ನು ಅಂಗೀಕರಿಸಿದರೆ ಬಹುವಾಕ್ಯಾನುರೋಧ ವಿಲ್ಲ. ತಥಾಚ ಕ್ರಮವು ವ್ಯುತ್ಕ್ರಮ-ಅನುಕ್ರಮ ಭೇದದಿಂದ ವಿಲಕ್ಷಣವಾಗಿರುವಪ್ರಯುಕ್ತ ವ್ಯುತ್ಕ್ರಮದಿಂದ ಲಯವನ್ನು ಅಂಗೀಕರಿಸಿದರೂ ಶ್ರುತಿಗೆ ಪ್ರಾಮಾಣ್ಯವು ಕೂಡುವುದರಿಂದ ಶ್ರೀ ಹರಿಗೆ ಜಗತ್ಕರ್ತೃತ್ವವು ಯುಕ್ತವು. (9) ೯ನೇ ಅಂತರಾಧಿಕರಣದಲ್ಲಿ **'ಅಕ್ಷರಾತ್ಪರಮಾ ದೇವ'** ಎನ್ನುವ ಶ್ರುತಿಯಿಂದಲೂ **'ಪ್ರಾಣಾನ್ಮನೋ ಮನಸಶ್ಚ ವಿಜ್ಞಾನಂ' 'ಯಚ್ಛೇದ್ವಾ ಙ್ಮನಸೀ ಪ್ರಾಜ್ಞಸ್ತದ್ಯಚ್ಛೇಜ್ಜ್ಞಾನ ಆತ್ಮನಿ'** ಎನ್ನುವ ಲಿಂಗದರ್ಶನದಿಂದಲೂ ೧ ಅಧಿ ಭೂತಾದಿಗಳೆಲ್ಲವೂ ಉತ್ಪತ್ತಿಕ್ರಮಕ್ಕಿಂತ ವಿಪರೀತವಾಗಿ ಲಯವನ್ನು ಹೊಂದುತ್ತಾವೋ, ೨ ಕೆಲವು ಪದಾರ್ಥಗಳು ಕ್ರಮದಿಂದಲೂ ಲಯವನ್ನು ಹೊಂದುತ್ತಾವೋ? ಎಂದು ಸಂಶಯವು ಬಂದರೆ ಸರ್ವರಿಗೆ ವ್ಯುತ್ಕ್ರಮದಿಂದ ಲಯವಲ್ಲ ಮತ್ತೆ ಕೆಲವರಿಗೆ ಕ್ರಮದಿಂದಲೂ, ಕೆಲವರಿಗೆ ವ್ಯುತ್ಕ್ರಮದಿಂದಲೂ ಲಯವು ಎಂದು ಪೂರ್ವಪಕ್ಷವು. ಸರ್ವರಿಗೆ ವ್ಯುತ್ಕ್ರಮದಿಂದಲೇ ಲಯ ವೆಂದು ಸಿದ್ಧಾಂತವು. ಇಲ್ಲಿಯೂ **'ಲೋಕದೃಷ್ಟಾನುಸಾರಿತ್ವಂ'** ಎಂದೇ ಪೂರ್ವಪಕ್ಷ ನ್ಯಾಯವು. ಸರ್ವಸಂಗ್ರಹಃ=ಲಯವನ್ನು ಹೊಂದತಕ್ಕ ಎಲ್ಲಾ ವಸ್ತುವಿಗೂ ಸಂಗ್ರಹವು ಆಗುತ್ತದೆ ಎಂದು ಸಿದ್ಧಾಂತನ್ಯಾಯವು. ಆದರೆ, ಕೆಲವರಿಗೆ ಕ್ರಮದಿಂದ ಲಯವು, ಕೆಲವರಿಗೆ ವ್ಯುತ್ಕ್ರಮದಿಂದ ಲಯವು ಎಂದಂಗೀಕರಿಸಿದರೆ ಲೋಕದೃಷ್ಟ್ಯನುಸರಣ ಬರುವುದರಿಂದ ವಿಜ್ಞಾನ ತತ್ವ-ಮನಸ್ತತ್ವ ಇವುಗಳನ್ನು ಹೊರತು ವ್ಯುತ್ಕ್ರಮದಿಂದ ಲಯವು. ಇವುಗಳಿಗಾದರೂ ಉತ್ಪತ್ತಿಕ್ರಮಾನುಸಾರವಾಗಿಯೇ ಲಯವು. ಏವಂಚ ಲೋಕದೃಷ್ಟ್ಯನುಸಾರಿ ಲಿಂಗವು ಕಂಡ ದರಿಂದ ವಿರುದ್ಧವಾದ ಶ್ರುತಿಗೆ ಅಪ್ರಾಮಾಣ್ಯವಿದ್ದಪ್ರಯುಕ್ತ ಶ್ರೀ ಹರಿಗೆ ಜಗತ್ಕಾರಣತ್ವವು ಯುಕ್ತವಲ್ಲ ಎಂದರೆ— ಹೀಗೆ ಹೇಳಕೂಡದು. **'ಸರ್ವಂ ವಾ ಏತತ್ಕ್ರಮಾದುತ್ಪದ್ಯತೇ' 'ವ್ಯುತ್ಕ್ರಮಾಲ್ಲೀಯತೇ'** ಎನ್ನುವ ಶ್ರುತಿಯಲ್ಲಿ ಸರ್ವವಸ್ತುಗಳಿಗೂ ವ್ಯುತ್ಕ್ರಮದಿಂದ ಲಯವು ಸಂಗೃಹೀತವಾಗುತ್ತದೆ. ವಿಜ್ಞಾನಮನಸ್ಸುಗಳಿಗೆ ಉತ್ಪತ್ತಿಕ್ರಮಾನುಸಾರವಾಗಿ ವಿಲಯ ವನ್ನು ಸಾಧಿಸಿಕೊಡತಕ್ಕ ಲಿಂಗವು ಚರಾಚರಾರ್ಥಕವಾದ ವಿಜ್ಞಾನಾದಿ ಶಬ್ದಬೋಧ್ಯವಾದ ತತ್ವಭಿನ್ನ ವಿಜ್ಞಾನವಿಷಯಕವಾಗಿಯೇ ಸಾವಕಾಶವಾಗುವುದು. **'ಮನಸಶ್ಚ ವಿಜ್ಞಾನಂ'** ಎನ್ನುವ ಶ್ರುತಿಯಾದರೂ ಚರಾಚರವಿಷಯಕವೃತ್ತಿರೂಪವಾದ ಜ್ಞಾನವು ಮನೋರೂಪವಾದ ಇಂದ್ರಿಯದಿಂದ ಹುಟ್ಟದ್ದು ಎಂದು ಪ್ರತಿಪಾದಿಸಿಯೇ ಸಾವಕಾಶವಾಗುತ್ತದೆ. ಏವಂಚ **'ಸರ್ವಂ ವಾ'** ಎನ್ನುವ ಶ್ರುತಿಯಲ್ಲಿ ಲಯವನ್ನು ಹೊಂದತಕ್ಕ ಎಲ್ಲಾ ವಸ್ತುಗಳಿಗೂ ಸಂಗ್ರಹವಾಗುವು ದರಿಂದ, ವ್ಯುತ್ಕ್ರಮದಿಂದಲೇ ಲಯವು ಸಿದ್ಧಿಸುವುದರಿಂದ ಶ್ರುತಿಗಳಿಗೆ ಪ್ರಾಮಾಣ್ಯವಿದ್ದಪ್ರಯುಕ್ತ ಶ್ರೀ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವೇ.

(10) ೧೦ನೇ ನಾತ್ಮಾಧಿಕರಣದಲ್ಲಿ— **'ನಿತ್ಯೋ ನಿತ್ಯಾನಾಂ' 'ಅಂತಸ್ತಮಸಿ ನಿಲೀನಃ'** ಎನ್ನುವ ಶ್ರುತಿವಿರೋಧದಿಂದ ೧ ಶ್ರೀ ಪರಮಾತ್ಮನು ಲಯವನ್ನು ಹೊಂದುತ್ತಾನೋ, ೨ ಇಲ್ಲವೋ ಎಂದು ಸಂಶಯವು ಬಂದರೆ ಲಯವನ್ನು ಹೊಂದುತ್ತಾನೆಂದು ಪೂರ್ವಪಕ್ಷವು.

ಲಯುವನ್ನು ಹೊಂದುವುದಿಲ್ಲವೆಂದು ಸಿದ್ಧಾಂತವು. ಅದರಲ್ಲಿ 'ಜೀವಸಾಮ್ಯಂ' ಜೀವನಿಂದ ಸಾಮ್ಯವು, ಎಂದು ಪೂರ್ವಪಕ್ಷನ್ಯಾಯುವು. ಸರ್ವಸಂಗ್ರಹಃ=ಪ್ರಲಯಕಾಲದಲ್ಲಿ ಶ್ರೀಹರಿಯ ಉದರದಲ್ಲಿ ಎಲ್ಲಾ ಚೇತನರಿಗೂ ಪ್ರವೇಶವು ಎಂದು ಸಿದ್ಧಾಂತನ್ಯಾಯುವು. ಅಂದರೆ— ಶ್ರೀ ಹರಿಯೂ ಚೇತನನಾಗಿರುವುದರಿಂದ, ಜೀವನಿಂದ ಚೇತನತ್ವೇನ ಸಾಮ್ಯವಿದ್ದಪ್ರಯುಕ್ತ ಶ್ರೀ ಹರಿಗೂ ದೇಹಲಯುವಿದೆ. ತಥಾಚ 'ವಿಷ್ಣುಃ ಲಯವಾನ್ ಚೇತನತ್ವಾತ್ ಜೀವವತ್' ಎಂದು ಉಕ್ತವಾಯಿತು. ಏವಂಚ ಚೇತನನಾಗಿರುವುದರಿಂದ, ಜೀವಸಾಮ್ಯವಿದ್ದುದರಿಂದ ಈಶ್ವರನಿಗೆ ಲಯವು ಸಿದ್ಧಿಸುವ ಪ್ರಯುಕ್ತ ಪ್ರಬಲವಾದ ಲಯಶ್ರುತಿವಿರೋಧದಿಂದ ನಿತ್ಯತ್ವಶ್ರುತಿಗೆ ಅಪ್ರಾಮಾಣ್ಯ ಬರುವ ಪ್ರಯುಕ್ತ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವಲ್ಲ. ಎಂದರೆ— ಹೀಗೆ ಹೇಳಕೂಡದು. ಏಕೆಂದರೆ— **'ಸರ್ವೇ ವಾ ಏತೇ ಚಿದಾತ್ಮನೋ ಬ್ರಹ್ಮನ್ ಲ್ಲಯಮನುಪ್ರಾಪ್ಯ ವಿಷ್ಣೋರುದರೇ ಸಂವಿಶಂತಿ'** ಪ್ರಲಯಕಾಲದಲ್ಲಿ ಶ್ರೀಹರಿಯ ಹೊಟ್ಟೆಯಲ್ಲಿ ಸರ್ವ ಚೇತನರೂ ಪ್ರವಿಷ್ಟರಾಗುತ್ತಾರೆ, ಎಂದು ಪ್ರತಿಪಾದಿಸತಕ್ಕ ಶ್ರುತಿಗಳಿಂದ ಪ್ರಳಯಕಾಲದಲ್ಲಿಯೂ ಇದ್ದ ಶ್ರೀಹರಿಯ ಶರೀರಕ್ಕೆ ನಿತ್ಯತ್ವವು ಅವಗತವಾಗುತ್ತದೆ. ಶ್ರೀಹರಿಯ ದೇಹವು ಅನಿತ್ಯವಾದರೆ ಪ್ರಳಯಕಾಲದಲ್ಲಿ ಸರ್ವರೂ ಶ್ರೀಹರಿಯ ಹೊಟ್ಟೆಯಲ್ಲಿರುತ್ತಾರೆನ್ನುವುದು ಕೂಡದೆ ಹೋಗಬೇಕಾಗುವುದು. ಏವಂಚ ಪ್ರಳಯಕಾಲದಲ್ಲಿ ವಿಷ್ಣುವಿನ ಹೊಟ್ಟೆಯಲ್ಲಿ ಸರ್ವ ಚೇತನರೂ ಪ್ರವಿಷ್ಟರಾಗುತ್ತಾರೆಂದು ಶ್ರುತಿಯಲ್ಲಿ ಹೇಳಿರುವುದರಿಂದ **'ಅಂತಸ್ತಮಸಿ ನಿಲೀನಃ'** ಎನ್ನುವ ಶ್ರುತಿಯು ಪ್ರಕೃತ್ಯಾಚ್ಛಾದಿತತ್ವರೂಪ ಅರ್ಥವನ್ನು ಪ್ರತಿಪಾದಿಸುವುದರಿಂದ ಸಾವಕಾಶವಾಗಿರುವುದರಿಂದಲೂ, ಶ್ರೀಹರಿಯ ದೇಹಕ್ಕೆ ಅನಿತ್ಯತ್ವಪ್ರತಿಪಾದಕವಾದ ಸ್ಪಷ್ಟಶ್ರುತಿಯು ಸರ್ವಥಾ ಇಲ್ಲದಿರುವುದರಿಂದಲೂ ಶ್ರೀಹರಿಯ ದೇಹಕ್ಕೆ ಲಯವು ಇಲ್ಲದಿರುವುದರಿಂದ ಶ್ರೀಹರಿಗೆ ನಿತ್ಯತ್ವವೇ ಲಯಾಭಾವವೇ ಸಿದ್ಧವಾಗುವ ಪ್ರಯುಕ್ತ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವು.

(11) ೧೧ನೇ ಜ್ಞಾಧಿಕರಣದಲ್ಲಿ **'ನಿತ್ಯೋ ನಿತ್ಯಾನಾಂ'** **'ಸರ್ವ ಏತೇ ಚಿದಾತ್ಮನೋ ವ್ಯುಚ್ಚರಂತಿ'** ಎನ್ನುವ ಶ್ರುತಿವಿಪ್ರತಿಪತ್ತಿಯಿಂದ ಜೀವನು ಹುಟ್ಟುತ್ತಾನೋ ಇಲ್ಲವೋ ಎಂದು ಸಂದೇಹವು ಬಂದರೆ ಹುಟ್ಟುವುದಿಲ್ಲವೆಂದು ಪೂರ್ವಪಕ್ಷವು. ಹುಟ್ಟುತ್ತಾನೆಂದು ಸಿದ್ಧಾಂತವು. ಅದರಲ್ಲಿ ಅನಾದಿತಾ=ಜೀವನಿಗೆ ಅನಾದಿತ್ವವು, ಎಂದು ಪೂರ್ವಪಕ್ಷನ್ಯಾಯುವು. ಸರ್ವಸಂಗ್ರಹಃ= ಸರ್ವ ವಸ್ತುಗಳಲ್ಲಿ ಜೀವನಿಗೂ ಗ್ರಹಣವು ಎಂದು ಸಿದ್ಧಾಂತನ್ಯಾಯುವು. ಅಂದರೆ— ಜೀವನಿಗೆ ಅನಾದಿತ್ವವಿದ್ದುದರಿಂದ ಉತ್ಪತ್ತಿಯು ಕೂಡದಿರುವುದರಿಂದ ವಿಷ್ಣುವಿಗೆ ಸರ್ವಕರ್ತೃತ್ವವು ಯುಕ್ತವಲ್ಲ. ಎಂದರೆ - ಹೀಗೆ ಹೇಳಕೂಡದು. ಏಕೆಂದರೆ— **'ಇದಂ ಸರ್ವಮಸೃಜತ'** ಎಂದು ಸರ್ವ ವಸ್ತುವಿನಲ್ಲಿ ಜೀವನು ಗೃಹೀತನಾಗಿರುವುದರಿಂದಲೂ ಜೀವನಿಗೆ ಪರಾಧೀನವಿಶೇಷವತ್ವರೂಪವಾದ ಉತ್ಪತ್ತಿಯನ್ನು ಅಂಗೀಕರಿಸಿದರೂ ಸ್ವರೂಪಾನಾದಿತ್ವಕ್ಕೆ ವಿರೋಧವಿಲ್ಲದಿರುವುದರಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವೇ.

(12) ೧೨ನೇ ಉತ್ಕ್ರಾಂತ್ಯಧಿಕರಣದಲ್ಲಿ **'ವ್ಯಾಪ್ತಾ ಹ್ಯಾತ್ಮಾನಃ'** **'ಅಣುರ್ಹ್ಯೇಷ ಆತ್ಮಾ'** ಎನ್ನುವ ಶ್ರುತಿವಿಪ್ರತಿಪತ್ತಿಯಿಂದ ಜೀವನು ೧ ವ್ಯಾಪ್ತನೋ, ೨ ಅಣುವೋ ಎಂದು ಸಂಶಯವು ಬಂದರೆ ವ್ಯಾಪ್ತನೆಂದು ಪೂರ್ವಪಕ್ಷವು. ಅಣುವೆಂದು ಸಿದ್ಧಾಂತವು. ಅದರಲ್ಲಿ ತತ್ರ ತತ್ರ ಪರಿಜ್ಞಾನಂ=ಅಲ್ಲಿ ಅಲ್ಲಿ ಜೀವನಿಗೆ ಸ್ಪರ್ಶಾದಿಜ್ಞಾನವು ಎಂದು ಪೂರ್ವಪಕ್ಷನ್ಯಾಯುವು ಗತ್ಯಾದಿಃ=ಗಮನಾಗಮನಾದಿಗಳು ಎಂದು ಸಿದ್ಧಾಂತನ್ಯಾಯುವು. ಅಂದರೆ ಸರ್ವದೇಹದಲ್ಲಿ ಜೀವನಿಗೆ ಸ್ಪರ್ಶಜ್ಞಾನವಿದ್ದುದರಿಂದಲೂ, ಆಯಾಯ ರಸನೇಂದ್ರಿಯಾದ್ಯಧಿಷ್ಠಾನದಲ್ಲಿ ಏಕಕಾಲದಲ್ಲಿ ರಸಾದಿಗಳ ಜ್ಞಾನಬರುವುದರಿಂದಲೂ ಜೀವನು ಅಣುವಲ್ಲ. **'ಏವಂಚ. ತ್ಯಾಕಾತ್ಸ್ನ್ಯ್ಕಂ'**

ಎನ್ನುವಲ್ಲಿ ದೇಹಪರಿಮಾಣವು ನಿರಸ್ತವಾಗಿರುವುದರಿಂದ ಪರಿಶೇಷತಃ ವ್ಯಾಪ್ತತ್ವವೇ ಸಿದ್ಧವಾಗುತ್ತದೆ. ಎಂದರೆ— ಹೀಗೆ ಹೇಳಕೂಡದು. ಜೀವನಿಗೆ ಉತ್ಕ್ರಮಣ ಗಮನ, ಆಗಮನ ಇತ್ಯಾದಿಗಳು ಇದ್ದ ಪ್ರಯುಕ್ತ ಜೀವನು ಅಣುವೇ. ಸೂಕ್ಷ್ಮತೇಜೋರೂಪವಾದ ಚಿದ್ಗುಣದಿಂದ ಜೀವನಿಗೆ ವ್ಯಾಪ್ತಿ ಇದ್ದುದರಿಂದ ಸರ್ವ ದೇಹಾದಿಗಳಲ್ಲಿ ಏಕಕಾಲದಲ್ಲಿಯೇ ಸ್ಪರ್ಶಾದಿಜ್ಞಾನವು ಉಪಪನ್ನವಾಗುತ್ತದೆ. ಏವಂಚ ಹಿಂದೆ ಹೇಳಿದ ಕ್ರಮದಿಂದ ಸ್ವರೂಪದಿಂದ ಅಣುತ್ವವೂ, ಚಿದ್ಗುಣದಿಂದ ದೇಹವ್ಯಾಪ್ತತ್ವವೂ ಕೂಡುವುದರಿಂದ ಎರಡು ಶ್ರುತಿಗಳಿಗೂ ಅಪ್ರಾಮಾಣ್ಯವಿಲ್ಲ. (13) ೧೩ನೇ ವ್ಯತಿರೇಕಾಧಿಕರಣದಲ್ಲಿ **'ಸ ನಿತ್ಯೋ ನಿರವಯವಃ ಸ ಏಕಧಾ ನ ಸಪ್ತಧಾ' 'ಸ ಪಂಚಧಾ ಸ ಸಪ್ತಧಾ'** ಎನ್ನುವ ಶ್ರುತಿವಿಪ್ರತಿಪತ್ತಿಯಿಂದ ಜೀವನು ಏಕರೂಪನೋ, ಅನೇಕರೂಪನೋ ಎಂದು ಸಂಶಯವು ಬಂದರೆ ಏಕರೂಪನೇ ಎಂದು ಪೂರ್ವಪಕ್ಷವು. ಅನೇಕರೂಪನೆಂದು ಸಿದ್ಧಾಂತವು. ಅದರಲ್ಲಿ ಗುಣಸಾಮ್ಯವೆನ್ನುವುದು ಪೂರ್ವಪಕ್ಷಯುಕ್ತಿಯು ಈಶಶಕ್ತಿಃ=ಈಶನ ಶಕ್ತಿಯು ಎನ್ನುವುದು ಸಿದ್ಧಾಂತ ನ್ಯಾಯವು. ಅಂದರೆ— ಜೀವನಿಗೆ ಅನೇಕರೂಪತ್ವವಿದ್ದರೆ ಈಶನಿಂದ ಗುಣಸಾಮ್ಯವು ಪ್ರಾಪ್ತವಾಗುವುದರಿಂದ ತರ್ಕಸಹಿತವಾದ ಐಕರೂಪ್ಯ ಶ್ರುತಿವಿರೋಧದಿಂದ ಅನೇಕತ್ವಪ್ರತಿಪಾದಕ ಶ್ರುತಿಗೆ ಅಪ್ರಾಮಾಣ್ಯವು ಬರುವುದರಿಂದ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವಲ್ಲ. ಎಂದರೆ— ಹೀಗೆ ಹೇಳಕೂಡದು. ಯೋಗಿಗಳಿಗೂ ಬಹುರೂಪತ್ವಾದಿಗಳು ಯೋಗಾರಾಧಿತ ಈಶ್ವರಪ್ರಸಾದರೂಪವಾದ ಶಕ್ತ್ಯಧೀನಗಳಾಗಿವೆ. ಏವಂಚ ಈಶ್ವರನ ಶಕ್ತಿಯಿಂದಲೇ ಬಹುರೂಪತ್ವವು ಕೂಡುತ್ತದೆ ಆದಕಾರಣ ಗುಣಸಾಮ್ಯವಿಲ್ಲದಿರುವುದರಿಂದ ಶ್ರುತಿಗಳಿಗೆ ಸ್ವರೂಪದಿಂದ ಏಕತ್ವ, ಅದರಿಂದ ಅನೇಕತ್ವ ವಿಷಯತ್ವವಿದ್ದುದರಿಂದ ವಿರೋಧವಿಲ್ಲದಿರುವುದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವಲ್ಲ. (೧೪) ೧೪ನೇ ಪೃಥಗಧಿಕರಣದಲ್ಲಿ ತತ್ತ್ವಮಸಿ **'ಅಹಂ ಬ್ರಹ್ಮಾಸ್ಮಿ' 'ನಿತ್ಯೋನಿತ್ಯಾನಾಂ ಚೇತನಶ್ಚೇತನಾನಾಂ' 'ದ್ವಾಸುಪರ್ಣಾ'** ಇದು ಮೊದಲಾದ ಶ್ರುತಿವಿಪ್ರತಿಪತ್ತಿಯಿಂದ ಜೀವನು ೧ ಬ್ರಹ್ಮನಿಂದ ಭಿನ್ನನೋ, ೨ ಅಭಿನ್ನನೋ ಎಂದು ಸಂದೇಹವು ಬರುತ್ತಿರಲು ಅಭಿನ್ನನೆಂದು ಪೂರ್ವಪಕ್ಷವು. ಭಿನ್ನನೇ ಎಂದು ಸಿದ್ಧಾಂತವು. ಅದರಲ್ಲಿ ಶ್ರುತಿಯೆಂದು ಪೂರ್ವಪಕ್ಷಯುಕ್ತಿಯು. ಸರ್ವಮಾನವಿರೋಧಿತಾ ಎಂದು ಸಿದ್ಧಾಂತ ಯುಕ್ತಿಯು. ಅಂದರೆ ಶ್ರುತಿಃ='ತತ್ತ್ವಮಸಿ' 'ಅಹಂ ಬ್ರಹ್ಮಾಸ್ಮಿ' ಇದು ಮೊದಲಾದ ಶ್ರುತಿಯು ಜೀವೇಶ್ವರರಿಗೆ ಐಕ್ಯವನ್ನು ಹೇಳುತ್ತದೆ ಎಂದರೆ— ಹಾಗೆ ಹೇಳಕೂಡದು. ಸರ್ವಮಾನ ವಿರೋಧಿತಾ=ಐಕ್ಯಕ್ಕೆ ಅನುಭವಾದಿ ಸರ್ವಪ್ರಮಾಣಗಳಿಂದ ವಿರೋಧವು. **'ತತ್ತ್ವಮಸಿ'** ಎನ್ನುವ ಶ್ರುತಿಯು ಸಾದೃಶ್ಯದಿಂದಲೂ, **'ಪರೇಽವ್ಯಯೇ ಸರ್ವ ಏಕೀ ಭವಂತಿ'** ಇತ್ಯಾದಿ ಶ್ರುತಿಯು ಸ್ಥಾನೈಕ್ಯ-ಮತ್ಯೈಕ್ಯದಿಂದಲೂ ಸಾವಕಾಶವಾಗಿದೆ. ಭೇದಗ್ರಾಹಕಗಳಾದ ಅನುಭವಾದಿ ರೂಪಗಳಾದ ಅನೇಕ ಪ್ರಮಾಣಗಳಿಂದ ವಿರೋಧವಿದ್ದುದರಿಂದ ಅಭೇದಪ್ರತಿಪಾದಕವೆಂದಭಿಮತವಾದ ಶ್ರುತಿರೂಪವಾದ ಒಂದು ಪ್ರಮಾಣಕ್ಕೆ ದೌರ್ಬಲ್ಯವನ್ನೇ ಹೇಳಬೇಕು. ಮತ್ತು ಜೀವ ಈಶ್ವರ ರೂಪಗಳಾದ ಧರ್ಮಿಗ್ರಾಹಕಗಳಾದ ಅನುಭವ ಆಗಮಗಳು ಪರಸ್ಪರವಾಗಿ ಜೀವ ಈಶ್ವರರು ಭಿನ್ನರೆಂದೇ ತಿಳಿಸಿಕೊಡುತ್ತವೆ. ಆದುದರಿಂದ ಧರ್ಮಿಗ್ರಾಹಕ ಪ್ರಮಾಣವಿರೋಧವೂ ಬರುವುದು. ಏವಂಚ ಸಮಸ್ತಪ್ರಮಾಣಗಳಿಂದ ವಿರೋಧವಿದ್ದಪ್ರಯುಕ್ತ ಈಶ್ವರನಿಂದ ಜೀವನು ಏಕೀಭೂತನಲ್ಲ. ಮತ್ತೆ ಭಿನ್ನನಾಗಿಯೇ ಇರುತ್ತಾನೆ. (15) ೧೫ನೇ ಯಾವದಧಿಕರಣದಲ್ಲಿ **'ಬ್ರಹ್ಮನ್ ಲಯಮಭ್ಯುಪೈತಿ' 'ಆನಂತ್ಯಾಯ ಕಲ್ಪತೇ'** ಎನ್ನುವ ಶ್ರುತಿವಿಪ್ರತಿಪತ್ತಿಯಿಂದ ಜೀವನು ೧ ನಿತ್ಯನೋ, ೨ ಅನಿತ್ಯನೋ ಎಂದು ಸಂಶಯವು ಬರುತ್ತಿರಲು ಅನಿತ್ಯನೆಂದು ಪೂರ್ವಪಕ್ಷವು. ನಿತ್ಯನೇ ಎಂದು ಸಿದ್ಧಾಂತವು. ಅದರಲ್ಲಿ ಉತ್ಪತ್ತಿಮತ್ತ್ವಂ=ಜನನ ಇರುವಿಕೆಯು ಎಂದು ಪೂರ್ವ

ಪಕ್ಷನ್ಯಾಯವು. ಅಭೀಷ್ಟಾಸಿದ್ಧಿಃ=ಇಷ್ಟವು ಸಿದ್ಧಿಯಾಗದೆ ಇರುವಿಕೆ ಎಂದು ಸಿದ್ಧಾಂತನ್ಯಾಯವು. ಅಂದರೆ, ಜೀವನಿಗೆ ಉತ್ಪತ್ತಿಯಿದ್ದಪ್ರಯುಕ್ತ (ವಿನಾಶಿತ್ವವು) ಅನಿತ್ಯತ್ವವು ಎಂದು ಯುಕ್ತಿಸಹಿತವಾದ ಅನಿತ್ಯತ್ವಶ್ರುತಿವಿರೋಧದಿಂದ ನಿತ್ಯತ್ವಶ್ರುತಿಯು ಅಪ್ರಮಾಣವಾಗಿರುವಪ್ರಯುಕ್ತ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವಲ್ಲ. ಎಂದರೆ— ಹಾಗೆ ಹೇಳಕೂಡದು. ಏಕೆಂದರೆ (೧) ಜೀವನಿಗೆ ಅನಿತ್ಯತ್ವವಿದ್ದರೆ ಜೀವನಿಗೆ ಅಭೀಷ್ಟವಾದ ಮೋಕ್ಷಾದಿಗಳು ಸಿದ್ಧಿಸದೆ ಹೋಗಬೇಕಾಗುವವು. (೨) ಯಾವುದು ವಿನಾಶದಿಂದ ವ್ಯಾಪ್ತವಾದ ಸ್ವರೂಪೋತ್ಪತ್ತಿರೂಪವಾದ ಉತ್ಪತ್ತಿಯೋ ಅದು ಜೀವನಿಗೆ ಇಲ್ಲ. ಮತ್ತೆ ಜ್ಯೋತ ಏವ ಎನ್ನುವಲ್ಲಿ ಹೇಳಿದ ಕೇವಲ ಪರಾಧೀನವಿಶೇಷಲಾಭರೂಪವಾದ ಉತ್ಪತ್ತಿಯು ವಿನಾಶದಿಂದ ವ್ಯಾಪ್ತವಲ್ಲ ಏಕೆಂದರೆ- ಪರಾಧೀನವಿಶೇಷಲಾಭರೂಪವಾದ ಉತ್ಪತ್ತಿಯುಳ್ಳವುಗಳಿಗೇನೇ **'ಅವಿನಷ್ಟಾ ಏವೋತ್ಪದ್ಯಂತೇ ನ ವಿನಶ್ಯಂತಿ ಕದಾಚನ'** ಎನ್ನುವ ಶ್ರುತಿಯಲ್ಲಿ ನಿತ್ಯತ್ವವೇ ಹೇಳಲ್ಪಟ್ಟಿದೆ. ಆದಕಾರಣ ಪರಾಧೀನ ವಿಶೇಷಾವಾಪ್ತಿರೂಪವಾದ ಉತ್ಪತ್ತಿಮಾತ್ರವು ವಿನಾಶಕ್ಕೆ ಅಸಾಧಕವಾಗಿರುವುದರಿಂದ ಜೀವನಿತ್ಯತ್ವಪ್ರತಿಪಾದಕ ಶ್ರುತಿಗೆ ಅಪ್ರಾಮಾಣ್ಯವಿಲ್ಲದಿರುವುದರಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವೇ. (16) ೧೬ನೇ ಪುಂಸ್ತ್ವಾಧಿಕರಣದಲ್ಲಿ **'ವಿಜ್ಞಾನಾತ್ಮಾ ಸಹ ದೇವೈಶ್ಚ ಸರ್ವೈಃ ಸ ಆನಂದಃ ಸ ಬಲಃ ಸ ಓಜಃ ಸ ದುಃಖಾದ್ವಿಮುಕ್ತಃ ಆನಂದೀ ಭವತಿ ಸೋಽಜ್ಞಾನಾದ್ವಿಮುಕ್ತೋ ಜ್ಞಾನೀ ಭವತಿ ಸೋಽಬಲಾದ್ವಿಮುಕ್ತೋ ಬಲೀ ಭವತಿ'** ಎನ್ನುವ ಶ್ರುತಿವಿಪ್ರತಿಪತ್ತಿಯಿಂದ ಜೀವನು ಜ್ಞಾನಾದಿರೂಪನೋ ಅಲ್ಲವೋ ಎಂದು ಸಂಶಯವು ಬಂದರೆ ಜ್ಞಾನಾದಿರೂಪನಲ್ಲವೆಂದು ಪೂರ್ವಪಕ್ಷವು. ಜ್ಞಾನಾದಿರೂಪನೇ ಎಂದು ಸಿದ್ಧಾಂತವು. ಅದರಲ್ಲಿ ಸ್ವಗುಣಾನನುಭೂತಿಃ=ತನ್ನ ಗುಣಗಳಾದ ಜ್ಞಾನಾನಂದಾದಿಗಳಿಗೆ ಅನುಭವವಿಲ್ಲದಿರುವಿಕೆಯು ಎಂದು ಪೂರ್ವಪಕ್ಷನ್ಯಾಯವು. ಸುವ್ಯಕ್ತಿಃ=ಚೆನ್ನಾಗಿ ಅಭಿವ್ಯಕ್ತಿಯು. ಎಂದು ಸಿದ್ಧಾಂತನ್ಯಾಯವು. ಅಂದರೆ ಜೀವನು ಜ್ಞಾನಾನಂದಾದಿ ಸ್ವರೂಪನಲ್ಲ. ಸ್ವರೂಪಭೂತಗಳಾದ ಜ್ಞಾನಾನಂದಾದಿಗುಣಗಳಿಗೆ ಅನುಭವವಿಲ್ಲದಿರುವುದರಿಂದ, ಏವಂಚ ಜೀವನಿಗೆ ಜ್ಞಾನ-ಆನಂದಮೊದಲಾದ ಗುಣಗಳ ಅನುಭವವು ಇಲ್ಲದಿರುವುದರಿಂದ, ಆನಂದಾದಿ ಸ್ವರೂಪತ್ವವು ಇಲ್ಲದಿರುವ ಪ್ರಯುಕ್ತ ಜೀವನಿಗೆ ಆನಂದಾದಿಸ್ವರೂಪತ್ವವನ್ನು ಪ್ರತಿಪಾದಿಸತಕ್ಕ ಶ್ರುತಿಯು ಅಪ್ರಮಾಣವೇ ಆಗಿರುವುದರಿಂದ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವಲ್ಲ, ಎಂದರೆ— ಹಾಗೆ ಹೇಳಕೂಡದು. ಮುಕ್ತಿಯಿಂದ ಮೊದಲು ಸಂಸಾರದೆಶೆಯಲ್ಲಿ ಅಜ್ಞಾನಾವೃತಗಳಾಗಿರುವುದರಿಂದ ಅವ್ಯಕ್ತಗಳಾದ ಆನಂದಾದಿಗುಣಗಳಿಗೆ ಮುಕ್ತ್ಯನಂತರದಲ್ಲಿ ಅಜ್ಞಾನನಿವೃತ್ತಿಯಾಗಿ ಚೆನ್ನಾಗಿ ವ್ಯಕ್ತಿಯು ಕೂಡುತ್ತದೆ. ಏವಂಚ ಮೋಕ್ಷಾನಂತರದಲ್ಲಿಯೇ ಜೀವಗುಣಗಳಿಗೆ ಚೆನ್ನಾಗಿ ಅಭಿವ್ಯಕ್ತಿಯಾಗುವುದರಿಂದ ಅದಕ್ಕಿಂತ ಮೊದಲು ಇದ್ದವುಗಳಿಗೂ ಆವರಣದಿಂದ ಅನನುಭವವು ಕೂಡುವುದರಿಂದ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವು. (17) ೧೭ನೇ ಕರ್ತೃತ್ವಾಧಿಕರಣದಲ್ಲಿ **'ನಾನ್ಯಃ ಕರ್ತಾ' 'ಯತ್ಕರ್ಮ ಕುರುತೇ ತದಭಿಸಂಪದ್ಯತೇ'** ಎನ್ನುವ ಶ್ರುತಿವಿಪ್ರತಿಪತ್ತಿಯಿಂದ ಜೀವನು ೧ ಕರ್ತನೋ, ೨ ಅಲ್ಲವೋ ಎಂದು ಸಂಶಯವು ಬಂದರೆ ಕರ್ತನಲ್ಲವೆಂದು ಪೂರ್ವಪಕ್ಷವು. ಕರ್ತನೇ ಎಂದು ಸಿದ್ಧಾಂತವು. ಅದರಲ್ಲಿ ಅಲ್ಪಕಲ್ಪನಂ=ಅಲ್ಪವಾದುದನ್ನು ಕಲ್ಪಿಸುವಿಕೆ ಎಂಬು ಪೂರ್ವಪಕ್ಷನ್ಯಾಯವು. ಶಾಸ್ತ್ರಸಿದ್ಧಿಃ= ಶಾಸ್ತ್ರಾರ್ಥಸಿದ್ಧಿಯು ಎಂದು ಸಿದ್ಧಾಂತನ್ಯಾಯವು. ಅಂದರೆ— ಈಶ್ವರನಿಗೇನೇ ಕರ್ತೃತ್ವವನ್ನು ಅಂಗೀಕರಿಸಿದರೆ ಕಲ್ಪನಾಲಾಘವವು ಎನ್ನುವ ಯುಕ್ತಿಸಹಿತವಾದ ಅಕರ್ತೃತ್ವಶ್ರುತಿವಿರೋಧದಿಂದ ಕರ್ತೃತ್ವಶ್ರುತಿಗೆ ಅಪ್ರಾಮಾಣ್ಯವಿದ್ದಪ್ರಯುಕ್ತ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗ

ತ್ಕರ್ತೃತ್ವವು ಯುಕ್ತವಲ್ಲ. ಎಂದರೆ— ಹೀಗೆ ಹೇಳಕೂಡದು. ಏಕೆಂದರೆ— ಜೀವನಿಗೆ ಸರ್ವಥಾ ಕರ್ತೃತ್ವವಿಲ್ಲವಾದರೆ **'ಪ್ರಾತಃ ಸಂಧ್ಯಾಮುಪಾಸೀತ'** ಇದುಮೊದಲಾದ ವಿಧಿನಿಷೇಧರೂಪ ವಾದಶಾಸ್ತ್ರವು ವ್ಯರ್ಥವಾಗಬೇಕಾಗುವುದು. ಜೀವನಿಗೂ ಕರ್ತೃತ್ವವನ್ನು ಅಂಗೀಕರಿಸಿದರೆ— ಶಾಸ್ತ್ರಕ್ಕೆಸಾರ್ಥಕ್ಯವು ಸಿದ್ಧವಾಗುತ್ತದೆ. ಏವಂಚ ಜೀವನಿಗೆ ಕರ್ತೃತ್ವವಿದ್ದರೆ ಶಾಸ್ತ್ರಕ್ಕೆ ಸಾರ್ಥಕ್ಯವು ಸಿದ್ಧಿಸುವುದರಿಂದ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವೇಆಗಿದೆ.

(18)ನೆಲ ಅಂಶಾಧಿಕರಣದಲ್ಲಿ **'ಅಂಶಾ ಏವ ಹೀಮೇ ಜೀವಾಃ'** **'ನೈವಾಂಶೋ ನ ಸಂಬಂಧಃ'** ಎನ್ನುವ ಶ್ರುತಿವಿಪ್ರತಿಪತ್ತಿಯಿಂದ ಜೀವನು ಈಶ್ವರನ ಅಂಶನೋ ಅಲ್ಲವೋ ಎಂದು ಸಂಶಯವು ಬಂದರೆ, ಜೀವನು ಹರಿಯ ಅಂಶನೆಂದೂ ಅನಂಶನೆಂದೂ ನಿರ್ಣಯವಾಗುವುದಿಲ್ಲ ಎಂದು ಪೂರ್ವಪಕ್ಷವು ಅಂಶನು ಆಗಿಯೇ ಆಗುತ್ತಾನೆಂದುಸಿದ್ಧಾಂತವು ಅದರಲ್ಲಿನಾನಾಶ್ರುತಿಶ್ಚ= ನಾನಾಪ್ರಕಾರ ಶ್ರವಣವಿದೆ, ಎಂದು ಪೂರ್ವಪಕ್ಷನ್ಯಾಯವು. ವಿಪರ್ಯಯಃ=ವ್ಯತ್ಯಾಸವು ಎಂದು ಸಿದ್ಧಾಂತನ್ಯಾಯವು. ಅಂದರೆ—ನಾನಾಪ್ರಕಾರ ಶ್ರುತವಾಗುವುದರಿಂದ ಎರಡು ಶ್ರುತಿಗಳಿಗೂ ಅಪ್ರಾಮಾಣ್ಯವು. ಅಥವಾ ನಿಯಮದಿಂದ ಅಂಶತ್ವ ಅನಂಶತ್ವರೂಪ ವಿರುದ್ಧಾರ್ಥವನ್ನು ಪ್ರತಿಪಾದಿಸುವ ಶ್ರುತಿಗಳಿಗೆ ವಿರುದ್ಧಾರ್ಥತ್ವರೂಪನಾನಾತ್ವವಿದ್ದುದರಿಂದಲೇ ಅಪ್ರಾಮಾಣ್ಯವು. ನಿವಂಚ ಶ್ರುತಿಗೆ ನಾನಾತ್ವವಿದ್ದುದರಿಂದಲೇ ಶ್ರುತಿದ್ವಯಕ್ಕೆ ಅಪ್ರಾಮಾಣ್ಯವಿದ್ದಪ್ರಯುಕ್ತ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವಲ್ಲ. ಎಂದರೆ ಹೀಗೆ ಹೇಳಕೂಡದು. ಏಕಂದರೆ—ಜೀವೇಶ್ವರ ಪ್ರತಿಯೋಗಿಕಭೇದವು ಪ್ರತ್ಯಕ್ಷ ಸಿದ್ಧವಾಗಿರುವುದರಿಂದ ಅದನ್ನು ಅನುಸರಿಸಿ ಅಂಶತ್ವಾದಿ ಪ್ರತಿಪಾದಕಶ್ರುತಿಗಳಿಗೆ ಅಂಶತ್ವರೂಪವಾದ ಗೌಣಾಭೇದಾಖ್ಯವಾದ ಅರ್ಥವು ಕೂಡುತ್ತದೆ. ವೇದವು ಅಪೌರುಷೇಯವಾಗಿರುವುದರಿಂದ ಅದಕ್ಕೆ ವಕ್ತೃವಿಪರೀತ ಜ್ಞಾನಮೂಲತ್ವವು ಕೂಡಲಾರದು. ಏವಂಚ ವಕ್ತೃವಿನಭ್ರಮದಿಂದ ವಾಕ್ಯಕ್ಕೆ ಅಪ್ರಾಮಾಣ್ಯವು. ವೇದದಲ್ಲಿ ಆದರೂ ಅದು ಕೂಡದಿರುವುದರಿಂದ ಅಂಶತ್ವಶ್ರುತಿಗೆ ಭಿನ್ನಾಂಶತ್ವ ರೂಪಾರ್ಥಾಂತರದಲ್ಲಿ ಪ್ರಾಮಾಣ್ಯವೇ. ಆದಕಾರಣ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವೇ.
(19) ನೆನೇ ಅದೃಷ್ಟಾಧಿಕರಣದಲ್ಲಿ **'ರೂಪಂ ರೂಪಂ ಪ್ರತಿರೂಪೋ ಬಭೂವ'** ಶ್ರುತಿ ವಿರೋಧಪರಿಹಾರ ಪ್ರಕರಣವಾದಪ್ರಯುಕ್ತ **'ನ ಜೀವಃಪರಮಾತ್ಮಪ್ರತಿಬಿಂಬಃ'** ಎಂದನುಮಿತವಾದ ಶ್ರುತಿವಿಪ್ರತಿಪತ್ತಿಯಿಂದ ಜೀವನು ಭಗವಂತನ ಪ್ರತಿಬಿಂಬನೋಅಲ್ಲವೊ ಎಂದು ಸಂಶಯವು ಬಂದರೆ ಭಗವಂತನ ಪ್ರತಿಬಿಂಬನಲ್ಲವೆಂದು ಪೂರ್ವಪಕ್ಷವು. ಪ್ರತಿಬಿಂಬನೆಂದು ಸಿದ್ಧಾಂತವು. ಅದರಲ್ಲಿ ವೈಚಿತ್ರ್ಯಂ=ವೈಚಿತ್ರ್ಯವು, ಎನ್ನುವುದು ಪೂರ್ವಪಕ್ಷನ್ಯಾಯವು. ಇವುಗಳು ಪೂರ್ವಪಕ್ಷದಲ್ಲಿರತಕ್ಕ ಯುಕ್ತಿಗಳು. ವಿಶೇಷಕಾರಣಂ ಚ=ವಿಶೇಷ ಕಾರಣವು ಎಂದು ಸಿದ್ಧಾಂತನ್ಯಾಯವು. ಈಪ್ರಕಾರ ಸಿದ್ಧಾಂತಕ್ಕೇನೆ ಸಾಧಿಕಾಃ=ಸಾಧಕಗಳಾದ ಯುಕ್ತಿಗಳು ಅಂದರೆ— ಜೀವರಿಗೆ ಸುರ-ಅಸುರ-ನರ ತಿರ್ಯಕ್ತ್ವಾದಿರೂಪವಾದ, ಪ್ರಮಿತವಾದ ವೈಚಿತ್ರ್ಯವು ಅಪ್ರತಿಬಿಂಬತ್ವದಲ್ಲಿ ಕಾರಣವು. ಏವಂಚ ಜೀವರಿಗೆ ವೈಚಿತ್ರ್ಯವಿದ್ದುದರಿಂದ, ಅವಿಚಿತ್ರನಾದ ಈಶ್ವರನ ಪ್ರತಿಬಿಂಬತ್ವವು ಕೂಡದಿರುವುದರಿಂದ, ಪ್ರತಿಬಿಂಬತ್ವಶ್ರುತಿಯು ಅಪ್ರಮಾಣವಾಗಿರುವುದರಿಂದ, ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವಲ್ಲ. ಎಂದರೆ—ಹೀಗೆ ಹೇಳಕೂಡದು. ಏಕೆಂದರೆ—ಜೀವರಿಗೆ ಜೀವತ್ವರೂಪದಿಂದ ಭಗವತ್ಪ್ರತಿಬಿಂಬತ್ವವಿದ್ದಾಗ್ಯೂ ಅನಾದ್ಯವಿದ್ಯಾಕರ್ಮಾದಿ ರೂಪವಾದ ವಿಶೇಷಾದೃಷ್ಟ ಕಾರಣದ್ವೇಶೆಯಿಂದ ವೈಚಿತ್ರ್ಯವು ಕೂಡಬಹುದು. ಏವಂಚ ವಿಶೇಷಕಾರಣದಿಂದ ವೈಚಿತ್ರ್ಯವು ಕೂಡುವಪ್ರಯುಕ್ತ ಜೀವನಿಗೆ ಈಶ್ವರಪ್ರತಿಬಿಂಬತ್ವವು ಕೂಡುವುದರಿಂದ ಶ್ರುತಿಸಮನ್ವಯದಿಂದ ಶ್ರೀಹರಿಗೆ ಜಗತ್ಕರ್ತೃತ್ವವು ಯುಕ್ತವೇ.

# ವಿಯದಧಿಕರಣವು.

## "ಓಂ ನವಿಯದಶ್ರುತೇಃ ಓಂ" ॥ ಸೂ. ೧ ॥

ಆಕಾಶವು ಅನುತ್ಪತ್ತಿಯುಳ್ಳದ್ದಲ್ಲ, ಉತ್ಪತ್ತಿಯುಳ್ಳದ್ದೇ. ಏಕೆಂದರೆ-- ಅನುತ್ಪತ್ತಿಪ್ರತಿಪಾದಕವಾದ ಶ್ರುತಿಯು ಇಲ್ಲದಿರುವುದರಿಂದ.

## "ಓಂ ಅಸ್ತಿ ತು ಓಂ" ॥ ಸೂ. ೨ ॥

ಆಕಾಶಕ್ಕೆ ಉತ್ಪತ್ತಿಪ್ರತಿಪಾದಕವಾದ '**ಆಕಾಶಃ ಸಂಭೂತಃ**' ಇತ್ಯಾದಿ ಶ್ರುತಿಯು ಇದ್ದೇ ಇದೆ

## "ಓಂ ಗೌಣ್ಯಸಂಭವಾತ್ ಓಂ" ॥ ಸೂ. ೩ ॥

ಅನಾದಿತ್ವ ಶ್ರುತಿಯು ಗೌಣಾನಾದಿತ್ವಪರವಾದುದು. ಅಸ್ತಿತು ಎನ್ನುವ ಸೂತ್ರದಲ್ಲಿ ಹೇಳಿದ ಉತ್ಪತ್ತಿಶ್ರುತಿಗಳು ಕೂಡದಿರುವುದರಿಂದ, ಮುಖ್ಯಾನಾದಿತ್ವಪರವಲ್ಲ.

## "ಓಂ ಶಬ್ದಾಚ್ಚ ಓಂ" ॥ ಸೂ. ೪ ॥

'ಅಥ ಹ ವಾವ ನಿತ್ಯಾನಿ' ಎಂದು ಭಾಷ್ಯೋಕ್ತ ಶ್ರುತಿಯಿಂದಲೂ ಅನಾದಿಶ್ರುತಿಯು ಗೌಣವಾದುದು.

## "ಓಂ ಸ್ಯಾಚ್ಚೈಕಸ್ಯ ಬ್ರಹ್ಮಶಬ್ದವತ ಓಂ" ॥ ಸೂ. ೫ ॥

ಹೇಗೆ ಒಂದೇ ಬ್ರಹ್ಮಶಬ್ದವು ಶ್ರೀ ಹರಿಯಲ್ಲಿ ಮುಖ್ಯವೂ ಬೇರೆ ಕಡೆ ಅಮುಖ್ಯವೂ ಆಗಿದೆಯೋ ಹಾಗೆಯೇ ಒಂದೇ ಅನುತ್ಪತ್ತಿವಾಚಕವಾದ ಶಬ್ದವು ವಿಷ್ಣುವಿನಲ್ಲಿ ಮುಖ್ಯವಾಗಿದ್ದಾಗ್ಯೂ ಬೇರೆ ಕಡೆ ಅಮುಖ್ಯವಾಗುವುದು.

## "ಓಂ ಪ್ರತಿಜ್ಞಾಹಾನಿರವ್ಯತಿರೇಕಾಚ್ಛಬ್ದೇಭ್ಯಃ ಓಂ" ॥ ಸೂ. ೬ ॥

ಆಕಾಶದಲ್ಲಿಯೂ ಅನುತ್ಪತ್ತಿವಾಚಕಶಬ್ದವು ಮುಖ್ಯವಾದರೆ '**ಇದಂ ಸರ್ವಮಸೃಜತ**' ಎನ್ನುವ ಪ್ರತಿಜ್ಞಾವಿರೋಧವು ಬರಬೇಕಾಗುವುದು. ಆಕಾಶವೂ ಸರ್ವ ಮಧ್ಯದಲ್ಲಿ ಸೇರಿಯದೆ. '**ಆತ್ಮಾ ವಾ ಇದಮೇಕ ಏವಾಗ್ರೇ**' '**ಅಸದೇವ ವಾ ಇದಮಗ್ರೇ**' '**ಇದಂ ವಾ ವಾಗ್ರೇ**' ಇತ್ಯಾದಿ ಶ್ರುತಿಗಳಿಂದಲೂ '**ಅನಾದಿರ್ವಾ**' ಇತ್ಯಾದಿ ಶ್ರುತಿಯು ಗೌಣಾರ್ಥಕವು.

## "ಓಂ ಯಾವದ್ವಿಕಾರಂ ತು ವಿಭಾಗೋ ಲೋಕವತ್ ಓಂ" ॥ ಸೂ. ೭ ॥

ವಿಕ್ರಿಯಮಾಣವಾದ ಅರ್ಥವೇ ಅಲ್ಪ ಶಕ್ತಿಯುಳ್ಳದ್ದು, ಲೌಕಿಕಘಟಾದಿಗಳಂತೆ. ತಥಾಚ ಆಕಾಶಕ್ಕೆ ಮುಖ್ಯಾನುತ್ಪತ್ತಿಯನ್ನು ಹೇಳಕೂಡದು.

ಈ ಅಧಿಕರಣದಲ್ಲಿ '**ಅನಾದಿರ್ವಾ ಅಯಮಾಕಾಶಃ**' ಇತ್ಯಾದಿ ಶ್ರುತಿಗಳಿಗೆ ಗೌಣತ್ವವು, '**ಆತ್ಮನ ಆಕಾಶಃ ಸಂಭೂತಃ**' ಇತ್ಯಾದಿ ಶ್ರುತಿಗಳಿಗೆ ಮುಖ್ಯತ್ವವನ್ನು ಇಟ್ಟುಕೊಂಡು ಆಕಾಶಕ್ಕೆ ಉತ್ಪತ್ತಿಯನ್ನು ಸಮರ್ಥಿಸುವರು. ಈ ಸೂತ್ರದಲ್ಲಿರುವ ವಿಯತ್ಪದವು ಆಕಾಶಮಾತ್ರ

ಪರವಲ್ಲ, ಮತ್ತೆ ' **ಅಥ ಹ ವಾ ವ ನಿತ್ಯಾನಿ ಪುರುಷಃ ಪ್ರಕೃತಿರಾತ್ಮಾ ಕಾಲಃ**' ಇತ್ಯಾದಿ ಶ್ರುತಿವಿಪ್ರತಿಪತ್ತಿವಿಷಯಗಳಾದ ಪರಮಾತ್ಮಾತಿರಿಕ್ತಗಳಾದ ಪ್ರಕೃತ್ಯಾದಿಗಳಿಗೂ ಉಪಲಕ್ಷಕವೆಂದು ತಿಳಿಯತಕ್ಕದ್ದು ಎನ್ನುತ್ತಾರೆ—

**ಮೂ ॥ ಪ್ರಕೃತಿಃ ಪುರುಷಃ ಕಾಲೋ ವೇದಾ(ದೇವಾ) ಸ್ತದಭಿಮಾನಿನಃ ॥೧೦॥**
**ಮಹದಾದ್ಯಾಶ್ಚ ಜಾಯಂತೇ ಪರಾಧೀನವಿಶೇಷಿತಾ ।**
**ಇದಂ ಸರ್ವಂ ಸಸರ್ಜೇತಿ ಜನಿಮತ್ತ್ವಮಿಹೋದಿತಂ ॥ ೧೧ ॥**

**ಅ ॥** ಪ್ರಕೃತಿಃ=ಅಚೇತನಪ್ರಕೃತಿಯು, ಪುರುಷಃ = ಜೀವನು, ಕಾಲಃ=ಕಾಲವು, ವೇದಾಃ = ವೇದಗಳು, ತದಭಿಮಾನಿನಃ = ಪ್ರಕೃತ್ಯಾದ್ಯಭಿಮಾನಿಗಳು, ಮಹದಾದ್ಯಾಶ್ಚ= ಮಹತ್ತತ್ತ್ವ, ಅಹಂಕಾರತತ್ತ್ವ, ಮನಸ್ತತ್ತ್ವ, ಬುದ್ಧಿ, ಇಂದ್ರಿಯ, ಭೂತಸೂಕ್ಷ್ಮ, ರೂಪಾದಿ ತನ್ಮಾತ್ರಗಳು. ಜಾಯಂತೇ=ಹುಟ್ಟುತ್ತವೆ. (ಇಲ್ಲಿ ಆಕಾಶಕ್ಕೆ ಹೇಳಿದ ಉತ್ಪತ್ತಿಯು ಆ ಘಟಾದಿಗಳಿಗೆ ಇದ್ದಂತೆಯೇ ಅಭೂತ್ವಾಭವನರೂಪವಾದುದು ಎಂದು ಕೆಲವರು ಹೇಳುತ್ತಾರೆ. ಅದನ್ನು ನಿರಾಕರಿಸುತ್ತಾ ತನ್ನ ಮತವನ್ನು ಹೇಳುತ್ತಾರೆ) ಪರಾಧೀನವಿಶೇಷಿತಾ=**'ಆತ್ಮನ ಆಕಾಶಃ ಸಂಭೂತಃ' 'ಸ ಇದಂ ಸರ್ವಮಸೃಜತ'** ಇದುಮೊದಲಾದ ಶ್ರುತಿಗಳನ್ನು ವಿಭಕ್ತತ್ವಾದಿ ಯುಕ್ತಿಯನ್ನೂ ಆಶ್ರಯಿಸಿ ಈ ಅಧಿಕರಣದಲ್ಲಿ ಆಕಾಶಕ್ಕೆ ಯಾವುದು ಉತ್ಪತ್ತಿಯು ಹೇಳಲ್ಪಟ್ಟದೋ ಅದು ಪರಾಧೀನಾತಿಶಯಲಾಭರೂಪವಾದುದು ಎಂದು ತಿಳಿಯತಕ್ಕದು. ('ದೇವದತ್ತಃ ಶರೀರೀಜಾತಃ' ವಿದ್ವಾನ್ ಜಾತಃ ಎಂದೂ, ಘಟಃ ಸಂಯುಕ್ತೋ ಜಾತಃ ವಿಭಕ್ತೋ ಜಾತಃ ಎಂದೂ ಯಥಾವಸ್ಥಿತವಾದ ಸ್ವರೂಪವುಳ್ಳ ವಸ್ತುವಿನಲ್ಲಿಯೇ ವಿಶೇಷಪ್ರಾಪ್ತಿಮಾತ್ರದಿಂದ ಉತ್ಪತ್ತಿವ್ಯವಹಾರವು ತೋರುತ್ತದಷ್ಟೆ) ಇದಂ ಸರ್ವಂ = ಈ ಎಲ್ಲಾ ಪ್ರಕೃತ್ಯಾದಿ ವಸ್ತುಗಳನ್ನು ಸೃಷ್ಟಿಸಿದನು, ಇತಿ=ಹೀಗೆ, ಜನಿಮತ್ತ್ವಂ=ಉತ್ಪತ್ತಿಯು, ಇಹ=ಈ ಶ್ರುತಿಯಲ್ಲಿ, ಉದಿತಂ= ಹೇಳಲ್ಪಟ್ಟದೆ ॥ ೧೦ ॥ ೧೧ ॥

ಆಕಾಶಕ್ಕೆ ಪರರು ಹೇಳಿದಪ್ರಕಾರ ಘಟಾದಿಗಳಂತೆಯೇ ಅಭೂತ್ವಾಭವನರೂಪವಾದ ಉತ್ಪತ್ತಿಯೇ ಶ್ರುತಿಗಳಲ್ಲಿಯೂ ಸೂತ್ರದಲ್ಲಿಯೂ ವಿವಕ್ಷಿತವಾಗಿದೆ ಎಂದು ಏಕೆ ಆಗಲಾರದು? ಎಂದರೆ— ಇಲ್ಲಿ ಇಷ್ಟು ಪ್ರಶ್ನಿಸುತ್ತೇವೆ. ಆಕಾಶಶಬ್ದದಿಂದ ೧ ವೈಶೇಷಿಕಾದಿಗಳಂತೆಯೇ ಅವಕಾಶಮಾತ್ರವು ವಿವಕ್ಷಿತವಾಗಿದೆಯೋ, ೨ ಅಥವಾ ಬೌದ್ಧರಂತೆ ಮೂರ್ತಾಭಾವವು ವಿವಕ್ಷಿತವಾಗಿದೆಯೋ? ಇವುಗಳಲ್ಲಿ ೧ನೇದ್ದನ್ನು ದೂಷಿಸುತ್ತಾರೆ—

**ಮೂ ॥ ಅವಕಾಶಮಾತ್ರಮಾಕಾಶಃ ಕಥಮುತ್ಪದ್ಯತೇಽನ್ಯಥಾ ।**
**ಯದ್ಯನಾಕಾಶತಾಪೂರ್ವಂ ಕಿಂ ಮೂರ್ತನಿಬಿಡಂ ಜಗತ್ ॥ ೧೨ ॥**
**ಮೂರ್ತಸಂಪೂರ್ಣತಾ ಚೈವ ಯದ್ಯನಾಕಾಶತಾ ಭವೇತ್ ।**
**ಮೂರ್ತದ್ರವ್ಯಾಣಿ ಚಾಕಾಶೇ ಸ್ಥಿತಾನ್ಯೇವ ಹಿ ಸರ್ವದಾ ॥ ೧೩ ॥**

**ಅ ॥** ಅನ್ಯಥಾ = ಪರಾಧೀನವಿಶೇಷಾವಾಪ್ತಿಯು ಉತ್ಪತ್ತಿಯು ಎಂದಂಗೀಕರಿಸದೆ ಅಭೂತ್ವಾಭವನವೇ ಉತ್ಪತ್ತಿಯು ಎಂದಂಗೀಕರಿಸಿದರೆ, ಅವಕಾಶಮಾತ್ರಂ ಆಕಾಶಃ=ಕೇವಲ ಅವಕಾಶವೇ ಆಕಾಶವು ಎಂದಂಗೀಕರಿಸಿದರೆ, ಕಥಂ=ಹೇಗೆ, ಉತ್ಪದ್ಯತೇ=(ಇದು)ಹುಟ್ಟುತ್ತದೆ. (ಆಕಾಶಕ್ಕೆ ಉತ್ಪತ್ತಿಯು ಕೂಡುವುದಿಲ್ಲ.) (ಬೌದ್ಧರಂತೆ ಮೂರ್ತಾಭಾವವೇ ಆಕಾಶವು ಎನ್ನುವ

೨ನೇ ಕಲ್ಪದಲ್ಲಿಯೂ, ೧ ಪ್ರದೇಶರೂಪವಾದ ಆಕಾಶವನ್ನು ಅಂಗೀಕರಿಸಿ, ಇದನ್ನು ಹೇಳು ವುದೋ, ೨ ಅಂಗೀಕರಿಸದೆ ಹೇಳುವುದೋ, ೧ನೇ ಕಲ್ಪದಲ್ಲಿ ಯಾವುದಾದರೊಂದು ಮೂರ್ತ ದ್ರವ್ಯಾಭಾವಕ್ಕೆ ಉತ್ಪತ್ತಿಯು ವಿವಕ್ಷಿತವಾಗಿದೆಯೋ, ೨ ಎಲ್ಲಾದಕ್ಕೂ ವಿವಕ್ಷಿತವಾಗಿದೆಯೋ? ೧ನೇದ್ದು ಕೂಡಲಾರದು. ಯಾವುದೋ ಒಂದು ಮೂರ್ತದ್ರವ್ಯಾಭಾವದ ಉತ್ಪತ್ತಿಯು ಪ್ರತ್ಯ ಕ್ಷಾದಿಸಿದ್ಧವಾಗಿರುವುದರಿಂದ ಅಧಿಕರಣಾರಂಭಕವಾಗುವುದಿಲ್ಲ. ೨ನೇದ್ದನ್ನು ದೂಷಿಸುತ್ತಾರೆ) (ಎಲ್ಲಾ ಮೂರ್ತಾಭಾವಕ್ಕೂ ಸೃಷ್ಟಿಕಾಲದಲ್ಲಿ ಉತ್ಪತ್ತಿಯನ್ನು ಅಂಗೀಕರಿಸಿದರೆ ಪ್ರಲಯಕಾಲ ದಲ್ಲಿ ಅವಶ್ಯವಾಗಿ ಮೂರ್ತಾಭಾವವಿಲ್ಲವೆಂದು ಅಂಗೀಕರಿಸಬೇಕಾಗುವುದು. ಏಕೆಂದರೆ— ಸರ್ವಥಾ ಇದ್ದದ್ದಕ್ಕೆ ಉತ್ಪತ್ತಿಯು ಕೂಡಲಾರದು.) ಯದಿ=ಯಾವ ಪಕ್ಷದಲ್ಲಿ, ಪೂರ್ವಂ= ಸೃಷ್ಟಿಗಿಂತ ಮೊದಲು ಪ್ರಲಯಕಾಲದಲ್ಲಿ, ಅನಾಕಾಶತಾ = ಎಲ್ಲಾ ಮೂರ್ತದ್ರವ್ಯಾಭಾವದ ಅಭಾವವು (ಅಂಗೀಕರಿಸಲ್ಪಡುತ್ತದೋ, ಹಾಗಾದರೆ— ಆಗ, ಪ್ರಲಯಕಾಲದಲ್ಲಿ) ಜಗತ್= ಪ್ರಪಂಚವು, ಮೂರ್ತನಿಬಿಡಂ=ಮೂರ್ತದಿಂದ ನಿಬಿಡವಾದುದ್ದಾಗಿ, (ಅಂಗೀಕ್ರಿಯತೇ) ಕಿಂ= (ಅಂಗೀಕರಿಸಲ್ಪಡುತ್ತದೋ) ಏನು? (ಇದನ್ನೇ ಸ್ಪಷ್ಟೀಕರಿಸುತ್ತಾರೆ.) ಯದಿ=ಯಾವ ಪಕ್ಷ ದಲ್ಲಿ, ಅನಾಕಾಶತಾ ಭವೇತ್=ಸರ್ವ ಮೂರ್ತದ್ರವ್ಯಾಭಾವರೂಪವಾದ ಆಕಾಶದ ಅಭಾವವು ಪ್ರಲಯಕಾಲದಲ್ಲಿ ಇರುವುದೆಂದಾದರೆ, ತದಾ=ಆಗ, ಮೂರ್ತಸಂಪೂರ್ಣತಾ=ಮೂರ್ತಪದಾ ರ್ಥದಿಂದ ತುಂಬಿ ಇರೋಣವು, ಭವೇದೇವ=ಆಗಿಯೇ ಆಗುವುದು. ಚ ಭವೇದೇವ=ಮತ್ತು ಸೃಷ್ಟಿಯಾದಮೇಲೆ ಮೂರ್ತಮಾತ್ರವೇ ಇಲ್ಲದೆ ಹೋಗಬೇಕಾಗುವುದು. (ಏವಂಚ ಸೃಷ್ಟಿಯೇ ಮೂರ್ತಾಭಾವರೂಪವಾದ ಪ್ರಲಯವೆಂದೂ, ಮೂರ್ತಸಂಪೂರ್ಣತ್ವರೂಪವಾದ ಪ್ರಲಯವೇ ಸೃಷ್ಟಿಯೆಂದೂ ಸೃಷ್ಟಿಪ್ರಲಯಗಳ ವ್ಯತ್ಯಾಸವು ಆಗಬೇಕಾಗುವುದು. ಇನ್ನು ಪ್ರಲಯಕಾಲದಲ್ಲಿ ಮೂರ್ತಸಂಪೂರ್ತಿಯು ಬರಬೇಕಾಗುವುದು.) (ಮೂರ್ತದ್ರವ್ಯಾಭಾವವೇ ಆಕಾಶವು. ಅದರಿಂದ ಅತಿರಿಕ್ತವಾದ, ಪ್ರದೇಶಾದಿರೂಪವಾದ ಆಕಾಶವು ಇಲ್ಲ ಎನ್ನುವ ಎರಡನೇದ್ದನ್ನು ನಿರಾಕರಿ ಸುತ್ತಾರೆ.) ಹಿ = ಯಾವ ಕಾರಣದ್ದೆಶೆಯಿಂದ, ಮೂರ್ತದ್ರವ್ಯಾಣಿ = ಮೂರ್ತದ್ರವ್ಯಗಳೂ, ಚ=ಮೂರ್ತಾದ್ರವ್ಯಾಭಾವವೂ, ಸರ್ವದಾ=ಯಾವಾಗಲೂ, ಆಕಾಶೇ=ಆಕಾಶದಲ್ಲಿ, ಸ್ಥಿತಾ ನ್ಯೇವ=ಇರತಕ್ಕವುಗಳೋ, (ಆದಕಾರಣ ಯಾವಾತನು ಮೂರ್ತದ್ರವ್ಯಗಳನ್ನೂ, ಅವುಗಳ ಅಭಾವಗಳನ್ನೂ ಅಂಗೀಕರಿಸುತ್ತಾನೋ ಆತನು ಅವಶ್ಯವಾಗಿ ಮೂರ್ತಾಭಾವದಿಂದ ಅತಿರಿಕ್ತ ವಾದ ಆಕಾಶವನ್ನು ಅಂಗೀಕರಿಸಬೇಕು.)

**ತಾ ||** **ನ್ಯಾಯಸುಧಾ**— (1) ಆಕಾಶಕ್ಕೆ ಉತ್ಪತ್ತಿಯು ಕೂಡುವುದಿಲ್ಲ. ಉಪಾ ದಾನ ಸಹಿತವಾದುದೇ ಸರ್ವಸೃಷ್ಟಿಯೂ ಕಂಡದೆ. ಆಕಾಶೋತ್ಪತ್ತಿಯಲ್ಲಿ ಉಪಾದಾನ ಕಾರಣ ವಿಲ್ಲ. ಬ್ರಹ್ಮನಿಗೆ ಉಪಾದಾನತ್ವವು ಕೂಡುವುದಿಲ್ಲವೆಂದು ಪ್ರಕೃತ್ಯಧಿಕರಣದಲ್ಲಿ ಹೇಳಿಯದೆ. ಯಾವುದಕ್ಕೆ ಉತ್ಪತ್ತಿಯಿದೆಯೋ ಅದಕ್ಕೆ ಪ್ರಾಗಭಾವವು ಆವಶ್ಯಕವು. ಪ್ರತೀತಿಯು ಕೂಡದಿ ರುವುದರಿಂದ ಆಕಾಶಕ್ಕೆ ಪ್ರಾಗಭಾವವು ಕೂಡುವುದಿಲ್ಲ. ಅಭಾವವು ತೋರಿದಾಗ 'ಅಸ್ಯ ಅತ್ರ' ಎಂದೇ ತೋರುತ್ತದೆ. ನಿರಾಶ್ರಯವಾಗಿ ತೋರುವುದಿಲ್ಲ. ಆಕಾಶಾಭಾವಕ್ಕೆ ಆಶ್ರಯಪ್ರತೀತಿಯೇ ಕೂಡುವುದಿಲ್ಲ. ಇಹ ಎಂದು ನಿರ್ದೇಶಿಸಿಕೊಳ್ಳಲ್ಪಡತಕ್ಕದೇ ಆಕಾಶವು. ಉಪಾದಾನಾಶ್ರಿತ ವಿಲ್ಲವೆನ್ನುವ ವಾದದಲ್ಲಿಯೂ ಅದು ಇಲ್ಲದಿರುವುದರಿಂದ ಅಭಾವ ಪ್ರತೀತಿಯು ಕೂಡುವುದಿಲ್ಲ. ತಥಾ ಚ ಶ್ರುತಿಯು. **'ಅಭಾವೋ ಹಿ ಪ್ರದೇಶಸ್ಯ ನ ಹ್ಯತ್ರಾಭಾವ ಇತ್ಯಪಿ'** ಎಂದು

|| ೧೨ || ೧೩ ||

ಹೀಗೆ ಪರಕೃತವಾದ ಅಪವ್ಯಾಖ್ಯಾನವು ಇರಲಿ. ಹಾಗಾದರೆ ಆಕಾಶಶಬ್ದಾರ್ಥವು ಯಾವುದು? ಅದಕ್ಕೆ ಪರಾಧೀನ ವಿಶೇಷಾವಾಪ್ತಿಯೂ ಯಾವುದು? ಎಂದರೆ—

**ಮೂ ॥ ಅತ ಆಕಾಶಶಬ್ದೋಕ್ತಸ್ತದ್ದೇವೋಽತ್ರ ವಿನಾಯಕಃ ।**
**ದೇಹೋತ್ಪತ್ತ್ಯಾ ಸಮುತ್ಪನ್ನ ಇತಿ ಶ್ರುತ್ಯಾಭಿಧೀಯತೇ ॥ ೧೩ ॥**
**ಭೂತಮಪ್ಯಸಿತಂ ದಿವ್ಯದೃಷ್ಟಿಗೋಚರಮೇವ ತು ।**
**ಉತ್ಪದ್ಯತೇಽವ್ಯಾಕೃತಂ ಹಿ ಗಗನಂ ಸಾಕ್ಷಿಗೋಚರಂ ॥**
**ಪ್ರದೇಶ ಇತಿ ವಿಜ್ಞೇಯಂ ನಿತ್ಯಂ ನೋತ್ಪದ್ಯತೇ ಹಿ ತತ್ ॥ ೧೪ ॥**

ಅ ॥ ಅತಃ = ಪರಕೀಯವ್ಯಾಖ್ಯಾನವು ಅಯುಕ್ತವಾಗಿರುವುದರಿಂದ, ಆಕಾಶಶಬ್ದೋಕ್ತಃ=ಆಕಾಶಶಬ್ದದಿಂದ ಹೇಳಲ್ಪಟ್ಟದ್ದು, ತದ್ದೇವಃ = ಭೂತಾಕಾಶಾಭಿಮಾನಿಯಾದ, ವಿನಾಯಕಃ=ವಿನಾಯಕನು, ಅತ್ರ='ಆತ್ಮನ ಆಕಾಶಃ ಸಂಭೂತಃ' ಇತ್ಯಾದಿ ಶ್ರುತಿಗಳಲ್ಲಿ, ದೇಹೋತ್ಪತ್ತ್ಯಾ=ಶರೀರದ ಉತ್ಪತ್ತಿಯಿಂದ, ಸಮುತ್ಪನ್ನಃ ಇತಿ=ಹುಟ್ಟುತ್ತಾನೆಂದು, ಶ್ರುತ್ಯಾ=ಶ್ರುತಿಯಿಂದ, ಅಭಿಧೀಯತೇ=ಹೇಳಿಸಿಕೊಳ್ಳಲ್ಪಡುತ್ತಾನೆ. (ಶ್ರುತಿಗೆ ವಿಷಯಾಂತರವನ್ನು ಹೇಳುತ್ತಾರೆ.) ಅಸಿತಂ=ನೀಲವರ್ಣವಾದ, ಭೂತಮಪಿ = ಆಕಾಶಶಬ್ದೋಕ್ತವಾದ ಭೂತಾಕಾಶವಾದರೂ, ದಿವ್ಯದೃಷ್ಟಿಗೋಚರಮೇವ ತು = ಅಲೌಕಿಕದೃಷ್ಟಿವಿಷಯವಾದುದಾಗಿಯೇ, ಉತ್ಪದ್ಯತೇ=ಹುಟ್ಟುತ್ತದೆ. ಇತಿ=ಹೀಗೆ, ಶ್ರುತ್ಯಾ='**ಆಕಾಶೋ ನೀಲಿಮೋದೇತಿ**' ಎನ್ನುವ ಶ್ರುತಿಯಿಂದ, ಅಭಿಧೀಯತೇ=ಹೇಳಿಸಿಕೊಳ್ಳಲ್ಪಡುತ್ತದೆ. (ಹಾಗಾದರೆ ಆಕಾಶಕ್ಕೆ ಅಭೂತ್ವಾಭವನರೂಪವಾದ ಉತ್ಪತ್ತಿಯನ್ನು ಈಗಲೇ ನಿರಾಕರಿಸಿ ಇಲ್ಲಿ ಪುನಃ ಅದನ್ನೇ ಅಂಗೀಕರಿಸಿದರೆ ಪೂರ್ವೋತ್ತರವ್ಯಾಹತಿಯು ಹೇಗೆ ಬಾರದೆ ಹೋದೀತು? ಎಂದರೆ) ಹಿ = ಯಾವಕಾರಣದ್ದೆಶೆಯಿಂದ, ಅವ್ಯಾಕೃತಂ ಗಗನಂ=ಅವ್ಯಾಕೃತವಾದ ಗಗನವೇ, ನೋತ್ಪದ್ಯತೇ = ಹುಟ್ಟುವುದಿಲ್ಲ (ವೆಂದುಕ್ತವಾಗಿದೆ. ಭೂತಾಕಾಶವು ಹುಟ್ಟುವುದಿಲ್ಲವೆಂದು ಹೇಳಲಿಲ್ಲ, ಆದಕಾರಣ ವಿರೋಧವಿಲ್ಲ) (ಅದು ಹುಟ್ಟದಿರಲಿಕ್ಕೆ ಕಾರಣಾಂತರವನ್ನು ಹೇಳುತ್ತಾರೆ.) ತತ್=ಅವ್ಯಾಕೃತಾಕಾಶವು, ನಿತ್ಯಂ ಹಿ=ನಿತ್ಯವಷ್ಟೆ. (ಹಾಗಾದರೆ ಅವ್ಯಾಕೃತಾಕಾಶದಲ್ಲಿ ಪ್ರಮಾಣವೇ ಇಲ್ಲ. ಯಾವುದಕ್ಕೆ ಅನುತ್ಪತ್ತಿಯನ್ನು ಹೇಳುವುದು ಎಂದರೆ) ಸಾಕ್ಷಿಗೋಚರಂ=ಆಕಾಶವು ಸಾಕ್ಷಿವಿಷಯವಾದುದು. (ಅದು ಹೇಗಂದರೆ) ಪ್ರದೇಶ ಇತಿ=ಪ್ರದೇಶವೆಂತೆಂದು, ವಿಜ್ಞೇಯಂ=ತಿಳಿಯತಕ್ಕದು ॥೧೩॥೧೪॥

ಹಾಗಾದರೆ ಅವ್ಯಾಕೃತಾಕಾಶಕ್ಕೆ ಉತ್ಪತ್ತಿಯಿಲ್ಲದಿದ್ದರೆ '**ಆಕಾಶಃ ಸಂಭೂತಃ**' ಎನ್ನುವ ಶ್ರುತಿಯಿಂದ ವಿರೋಧವು ಆಗದೆ ಹೋಗಲಿ. '**ಇದಂ ಸರ್ವಮಸೃಜತ**' ಇತ್ಯಾದಿ ಶ್ರುತಿವಿರೋಧವಾದರೂ ಬರುವುದು ಎಂದರೆ— ಹಾಗೆ ಹೇಳಕೂಡದು. ಆಕಾಶಕ್ಕೆ ಅಭೂತ್ವಾಭವನರೂಪವಾದ ಉತ್ಪತ್ತಿಯು ಕೂಡದೆ ಇದ್ದರೂ ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿಯು ಕೂಡುತ್ತದೆನ್ನುತ್ತಾರೆ—

**ಮೂ ॥ ತಥಾಽಪಿ ಮೂರ್ತಸಂಬಂಧಪರತಂತ್ರವಿಶೇಷಯುಕ್ ॥ ೧೫ ॥**
**ಖಮೇವೋತ್ಪತ್ತಿಮನ್ನಾಮ ಶ್ರುತಿಶಬ್ದವಿವಕ್ಷಿತಂ ।**
**ಪ್ರಕೃತಿಃ ಪುರುಷಃ ಕಾಲ ಇತ್ಯೇತೇ ಚ ಸಮಸ್ತಶಃ ॥ ೧೬ ॥**

**ಈಶಾಧೀನವಿಶೇಷೇಣ ಜನ್ಯಾ ಇತ್ಯೇವ ಶಬ್ದಿತಾಃ (ಕೀರ್ತಿತಾಃ) ।**
**ಕಾಲಪ್ರವಾಹ ಏವೈಕೋ ನಿತ್ಯೋ ನ ತು ವಿಶೇಷವಾನ್ ॥ ೧೭ ॥**

ಅ ॥ ತಥಾಪಿ=ಆದಾಗ್ಯೂ, ಮೂರ್ತಸಂಬಂಧಪರತಂತ್ರವಿಶೇಷಯುಕ್ = ಮೂರ್ತ ಸಂಬಂಧವಾದ ಪರತಂತ್ರವಿಶೇಷದಿಂದ ಕೂಡಿದ, ಖಮೇವ=ಯಾವುದು ಅನಾದಿಯೆಂದು ಹೇಳ ಲ್ಪಟ್ಟದೋ ಆ ಆಕಾಶವೇ, ಉತ್ಪತ್ತಿಮನ್ನಾಮ = ಉತ್ಪತ್ತಿಯುಳ್ಳದ್ದು, ಶ್ರುತಿಶಬ್ದವಿವಕ್ಷಿತಂ= **'ಇದಂ ಸರ್ವಮಸೃಜತ'** ಎನ್ನುವ ಶ್ರುತಿವಾಕ್ಯದಿಂದ ಹೇಳಲಿಷ್ಟವಾಗಿದೆ. (ಹೀಗೆ ಸೂತ್ರ ಘಟಕವಾದ ಆಕಾಶಕ್ಕೆ ಉತ್ಪತ್ತಿಯನ್ನು ಹೇಳಿ ಉಪಲಕ್ಷಿತವಾದ ಪ್ರಕೃತ್ಯಾದಿಗಳ ಉತ್ಪತ್ತಿ ಯನ್ನು ವ್ಯಾಖ್ಯಾನಮಾಡುತ್ತಾರೆ.) ಪ್ರಕೃತಿಃ=ಪ್ರಕೃತಿಯು, ಪುರುಷಃ=ಪುರುಷನು, ಕಾಲಃ= ಕಾಲವು, ಇತ್ಯೇತೇ ಚ ಸಮಸ್ತಶಃ=ಇದುಮೊದಲಾದವುಗಳೆಲ್ಲವೂ, ಈಶಾಧೀನವಿಶೇಷೇಣೈವ= ಈಶ್ವರಾಧೀನವಾದ ವಿಶೇಷದಿಂದಲೇ (ಅಭೂತ್ವಾಭವನದಿಂದ ಅಲ್ಲ.) ಜನ್ಯಾಃ ಇತಿ=ಹುಟ್ಟದವು ಗಳೆಂದೇ, ಶಬ್ದಿತಾಃ=ಹೇಳಲ್ಪಟ್ಟವೆ. (ಕಾಲಕ್ಕಾದರೂ ಅಭೂತ್ವಾಭವನರೂಪವಾದ ಉತ್ಪತ್ತಿ ಯಿದೆನ್ನುತ್ತಾರೆ.) ಕಾಲಪ್ರವಾಹ ಏಕ ಏವ=ಕಾಲಪ್ರವಾಹವಂದೇ, ನಿತ್ಯಃ=ನಿತ್ಯವು, ವಿಶೇಷ ವಾನ್=ಕ್ಷಣಲವಾದಿರೂಪವಾದುದು, ನ ತು ನಿತ್ಯಃ=ನಿತ್ಯವಲ್ಲ. ॥ ೧೫ ॥ ೧೬ ॥ ೧೭ ॥

ಮೊದಲು ಹೇಳಲ್ಪಟ್ಟ ಪ್ರಕೃತ್ಯಾದಿಗಳಿಗೆ ಈಶ್ವರಾಧೀನವಿಶೇಷಾವಾಪ್ತಿಯೇ ಉತ್ಪತ್ತಿಯೆಂದು ಹೇಳಲ್ಪಟ್ಟದೆ. ಅದರಲ್ಲಿ ಯಾವುದು ಯಾವುದಕ್ಕ ಎಂತಹ ವಿಶೇಷಪ್ರಾಪ್ತಿಯು ಎಂಬರೆ— ಪ್ರಕೃತಿ ಮೊದಲಾದ ಮೂರಕ್ಕೆ ಅಭಿಮಾನಿಯಾದ ದೇವತೆಗೆ ಪರಾಧೀನ ವಿಶೇಷಪ್ರಾಪ್ತಿ ಯನ್ನು ವಿಶದೀಕರಿಸುತ್ತಾರೆ.

**ವ್ಯಾ ॥ ಪುರುಷಾವ್ಯಕ್ತಕಾಲಾನಾಂ ರಮೇವೈಕಾಭಿಮಾನಿನೀ ।**
**ಸಿಸೃಕ್ಷುತ್ವವಿಶೇಷಂ ತತ್ಸಾಕ್ಷಾದ್ಭಗವದಿಚ್ಛಯಾ ॥ ೧೮ ॥**
**ಪ್ರಾಪ್ತೈವ ಸೃಷ್ಟೇತ್ಯುದಿತಾ ಪ್ರಧಾನಂ ವಿಕೃತೇರಪಿ ।**
**ಪುಮಾಂಸೋ ದೇಹಸಂಬಂಧಾತ್ಸೃಷ್ಟಿಮಂತ ಇತೀರಿತಾಃ ॥ ೧೯ ॥**

ಅ ॥ (ಯಾವಕಾರಣದ್ದೆಶೆಯಿಂದ) ಪುರುಷಾವ್ಯಕ್ತಕಾಲಾನಾಂ=ಪುರುಷ ಪ್ರಕೃತಿ ಕಾಲಗಳಿಗೆ, ರಮೈವೇಕಾ = ಲಕ್ಷ್ಮಿಯೊಬ್ಬಳೇ, ಅಭಿಮಾನಿನೀ = ಅಭಿಮಾನಿಯುಳು. ತತ್= ಆದಕಾರಣದ್ದೆಶೆಯಿಂದ, ಸಾಕ್ಷಾತ್=ಮುಖ್ಯವಾಗಿ, ಭಗವದಿಚ್ಛಯಾ=ಶ್ರೀಹರಿಯ ಇಚ್ಛೆಯಿಂದ, ಸಿಸೃಕ್ಷುತ್ವವಿಶೇಷಂ=ಸೃಷ್ಟಿಮಾಡಲಿಚ್ಛಾ ವಿಶೇಷವನ್ನು, ಪ್ರಾಪ್ತೈವ=ಹೊಂದಿದವಳೇ, ಸೃಷ್ಟಾ= ಸೃಷ್ಟಿಸಲ್ಪಟ್ಟವಳು, ಇತಿ=ಹೀಗೆ, ಉದಿತಾ=ಹೇಳಲ್ಪಟ್ಟದ್ದಾಳೆ. (ವಿನಾಯಕಾದಿ ಭೂತಾಕಾಶಾ ದ್ಯಭಿಮಾನಿ ದೇವತೆಯಂತೆ ದೇಹೋತ್ಪತ್ತಿಯನ್ನು ಹೊಂದಲಾರಳು.) (ಜಡಪ್ರಕೃತಿಗೆ ಪರಾ ಧೀನ ವಿಶೇಷಾವಾಪ್ತಿಯನ್ನು ವಿವರಿಸುತ್ತಾರೆ.) ಪ್ರಧಾನಮಪಿ=ಪ್ರಧಾನವೂಕೂಡ, ವಿಕೃತೇಃ= ಈಶ್ವರಾಧೀನ ವಿಕಾರರೂಪ ಉತ್ಪತ್ತಿಯಿರೋಣದರದ್ದೆಶೆಯಿಂದ, **'ಇದಂ ಸರ್ವಮಸೃಜತ'** ಇತ್ಯಾದಿಗಳಲ್ಲಿ ಸೃಷ್ಟಿಸಲ್ಪಟ್ಟತು ಎಂದುಕ್ತವಾಗಿದೆ. ('ವಿಕಾರೋವ್ಯಕ್ತಜನ್ಮಹಿ' ಎಂದುಕ್ತ ವಾಗಿದೆ.) (ಜೀವರಿಗೆ ಪರಾಧೀನ ವಿಶೇಷಾವಾಪ್ತಿಯನ್ನು ಸ್ಪಷ್ಟೀಕರಿಸುತ್ತಾರೆ.) ಪುಮಾಂಸಃ= ಪುರುಷರು, ದೇಹಸಂಬಂಧಾತ್ = ಶರೀರಸಂಬಂಧದಿಂದ, ಸೃಷ್ಟಿಮಂತ ಇತಿ=ಸೃಷ್ಟಿಯುಳ್ಳವ ರೆಂದು, ಈರಿತಾಃ=ಹೇಳಿಸಿಕೊಳ್ಳಲ್ಪಡುತ್ತಾರೆ. (ಕಾಲಪ್ರವಾಹಕ್ಕೆ ಪ್ರವಾಹಿಗೆ ಉತ್ಪತ್ತಿಯು.

ಮಹದಾದಿಗಳಿಗೆ ಉಪಚಯಾವಾಪ್ತಿಯು.) ॥ ೧೮ ॥ ೧೯ ॥ ಸೂ. ೧ ॥ ೨ ॥ ೩ ॥ ೪ ॥ ೫ ॥ ॥ ೬ ॥ ೭ ॥ ॥ ಅಧಿ. ೧ ॥

**ಏಯುದಧಿಕರಣವು ಸಮಾಪ್ತವಾಯಿತು**



# ಮಾತರಿಶ್ವಾಧಿಕರಣವು.

## "ಓಂ ಏತೇನ ಮಾತರಿಶ್ವಾ ವ್ಯಾಖ್ಯಾತಃ ಓಂ" ॥ ಸೂ. ೮ ॥

ಮುಖ್ಯವಾಯುವು 'ಅಸ್ರುತೇಃ' ಇತ್ಯಾದಿಗಳಲ್ಲಿ ಹೇಳಿದ ಯುಕ್ತಿಸಮುದಾಯದಿಂದ ಗೌಣಾನುತ್ಪತ್ತಿಯುಳ್ಳವನೆಂದು ಹೇಳಲ್ಪಡುತ್ತಾನೆ.

ಅತೀತಾಧಿಕರಣದಲ್ಲಿ ಆಕಾಶಾದಿ ವಿಷಯಕಗಳಾದ ಉತ್ಪತ್ತಿ-ಅನುತ್ಪತ್ತಿ ಪ್ರತಿಪಾದಕ ಶ್ರುತಿಗಳಿಗ ವ್ಯವಸ್ಥೆಯಿಂದ ವಿರೋಧವು ಪರಿಹೃತವಾಗಿದೆ. ಈಗ '**ತೇಜೋಽಬನ್ನಾನ್ಯಾಕಾಶ ಇತಿ ತಾನ್ಯನಿತ್ಯಾನಿ ವಾಯುರ್ವಾವ ನಿತ್ಯಃ**' ಎನ್ನುವ ಶ್ರುತಿಯಲ್ಲಿ ವ್ಯವಸ್ಥಿತವಾದ ನಿತ್ಯತ್ವ, ಅನಿತ್ಯತ್ವವುಳ್ಳ ಆಕಾಶವನ್ನೂ ಅನಿತ್ಯಪಕ್ಷದಲ್ಲಿ ಇಟ್ಟು ವಾಯುವಿಗೇನೇ ನಿತ್ಯತ್ವವನ್ನು ಹೇಳಿರುವುದರಿಂದ ಆಕಾಶದೇವತೆಯಾದ ವಿನಾಯಕನಂತೆ ವಾಯುದೇವತೆಗೂ ಸ್ವರೂಪತಃ ನಿತ್ಯತ್ವವು ದೇಹೋತ್ಪತ್ತ್ಯಾದಿಗಳಿಂದ ಉತ್ಪತ್ತ್ಯಾದಿಗಳು. ಹೀಗೆ ವ್ಯವಸ್ಥೆಯು ಕೂಡದಿರುವುದರಿಂದ ವಾಯುವಿಗೆ ಮುಖ್ಯವಾದುದೇ ಅನುತ್ಪತ್ತಿಯು. ಹೀಗೆ ಅಧಿಕಾಶಂಕೆಯಿಂದ ಪೂರ್ವಪಕ್ಷಬಂದರೆ ಹಿಂದೆ ಹೇಳಿದ ವ್ಯವಸ್ಥಾತಿದೇಶದಿಂದಲೇ ಸಿದ್ಧಾಂತವು ಮಾಡಲ್ಪಟ್ಟಿದೆ. ಆದರಲ್ಲಿ ಶ್ರುತಿಗಳಿಗೆ ವಾಯುವಿನಲ್ಲಿ ಎಂತಹ ವ್ಯವಸ್ಥೆಯು? ಯಾವ ವ್ಯವಸ್ಥೆಯಿಂದ ಅಧಿಕಾಶಂಕಾ ಪರಿಹಾರವು ಆಗುವುದು ಎಂದರೆ— ಆ ವ್ಯವಸ್ಥೆಯನ್ನು ತೋರಿಸುತ್ತಾರೆ—

**ಮೂ॥ ಏವಂ ಪ್ರಲಯಕಾಲೇಽಪಿ ಪ್ರತಿಭಾತಪರಾವರಃ ।**
**ಮುಖ್ಯವಾಯುರ್ನಿತ್ಯಸಮಃ ಶರೀರೋತ್ಪತ್ತಿಕಾರಣಾತ್ ॥ ೨೦ ॥**
**ಪರಾಧೀನವಿಶೇಷೇಣ ಜನಿಮಾನೇವ ಶಬ್ದಿತಃ ।**
**ನೈವ ಕಿಂಚಿತ್ತತೋ ಜನ್ಮವರ್ಜಿತಂ ಪರಮಾದೃತೇ ॥ ೨೧ ॥**
**ಪರಾಧೀನವಿಶೇಷತ್ವೇ ಜನ್ಮನಃ ಸ್ಥೂಲತಾಭವಃ ।**
**ಪೂರ್ವಶಬ್ದವಿಲೋಪಶ್ಚ ಯದಿ ಜನ್ಮೇತಿ ಕೀರ್ತ್ಯತೇ ॥ ೨೨ ॥**
**ರಮಾಯಾ ನೈವ ಜನ್ಮಾಸ್ತಿ ಚೈತನ್ಯಸ್ಯಾಪಿ ಕೇವಲಂ ।**
**ಪ್ರಧಾನಸ್ಯ ಚ ವೇದಸ್ಯ ವೇದಸ್ಯಾಪೀಶ್ವರೇಚ್ಛಯಾ ॥ ೨೩ ॥**
**ವ್ಯಕ್ತಿರ್ನಾಮ ವಿಶೇಷೋಽಸ್ತಿ ತಸ್ಮಾತ್ತದ್ವಶತೈವ ಹಿ ।**
**ಉತ್ಪತ್ತಿರತ್ರ ಕಥಿತಾ [ಸ್ವತಂತ್ರತ್ವಾತ್ಪರಾತ್ಮನಃ] ॥ ೨೪ ॥**

**॥ ಸೂ. ೮ ॥ ಅಧಿ. ೨ ॥**

ಅ ॥ ಏವಂ=ಹೇಗೆ ಆಕಾಶವು ಅನಾದಿಯು ಉತ್ಪತ್ತಿಯುಳ್ಳದ್ದೂ ಎಂದು ಹೇಳಲ್ಪಟ್ಟದೋ ಹೀಗೆಯೇ, ಪ್ರತಿಭಾತಪರಾವರಃ=ಶರೀರವಿಲ್ಲವಾದರೂ ನವನವೋನ್ಮೇಷಶಾಲಿಯಾದ

ಪ್ರಜ್ಞಾವಿಶೇಷದಿಂದಲೇ ವಿಷಯೀಕೃತವಾದ ಅತೀತಾನಾಗತಜ್ಞಾನವುಳ್ಳ. ಮುಖ್ಯವಾಯುಃ=ಮುಖ್ಯ ಪ್ರಾಣನು, ನಿತ್ಯಸಮಃ=ನಿತ್ಯಸಮನೆಂದು, ಶಬ್ದಿತಃ=ಹೇಳಿಸಿಕೊಳ್ಳಲ್ಪಟ್ಟದ್ದಾನೆ. ಶರೀರೋತ್ಪತ್ತಿ ಕಾರಣಾತ್=ದೇಹೋತ್ಪತ್ತಿಕಾರಣದ್ದೆಶೆಯಿಂದ, ಪರಾಧೀನವಿಶೇಷೇಣ ಏವ=ಪರಾಧೀನವಿಶೇಷ ಮಾತ್ರದಿಂದಲೇ, ಜನಿಮಾನ್=ಉತ್ಪತ್ತಿಯುಳ್ಳವನೆಂದು, ಶಬ್ದಿತಃ = ಹೇಳಿಸಿಕೊಳ್ಳಲ್ಪಟ್ಟದ್ದಾನೆ. (ಮುಖ್ಯವಾಯುಃ ಎನ್ನುವುದರಿಂದ ಭೂತಪ್ರಕರಣದಲ್ಲಿಯೂ ಈ ಸೂತ್ರವು ಭೂತವಾಯುವಿಷ ಯಕವಲ್ಲವೆಂದು ಉಕ್ತವಾಯಿತು. ಸ್ವರೂಪಾತಿರಿಕ್ತವಾದ ಪ್ರತಿಭಾದಿಂದುಂಟಾದ ಜ್ಞಾನಕ್ಕೂ ವಿನಾಶವಿಲ್ಲದಿರುವುದರಿಂದ ಆಕಾಶದೇವತೆಗಿಂತ ವಿಶೇಷವು ಕೂಡುತ್ತದೆ.) (ಈ ಪ್ರಕರಣದಲ್ಲಿ ಪರಾಧೀನವಿಶೇಷಾವಾಪ್ತಿಯೇ ಉತ್ಪತ್ತಿಯು, ಅಭೂತ್ವಾಭವನವಲ್ಲ, ಎಂದು ಯಾವುದು ಹೇಳ ಲ್ಪಟ್ಟದೋ ಅದನ್ನು ಯುಕ್ತ್ಯಂತರದಿಂದ ಉಪಪಾದಿಸುತ್ತಾ ಅಧಿಕರಣಾರ್ಥವನ್ನುಪಸಂಹಾರ ಮಾಡುತ್ತಾರೆ.) ತತಃ=ಆದಕಾರಣ, ಪರಮಾತ್=ಶ್ರೀಹರಿಯದ್ದೆಶೆಯಿಂದ, ಋತೇ=ಹೊರತು, ಜನ್ಮವರ್ಜಿತಂ=ಉತ್ಪತ್ತಿಯಿಲ್ಲದಿರುವುದು, ಕಿಂಚಿತ್=ಯಾವುದೊಂದೂ, ನೈವ=ಇಲ್ಲವೇ ಇಲ್ಲ. (ಎಂದು ಸಿದ್ಧವಾಯಿತು.) (ಇದಾದರೂ ಶ್ರೀಹರಿಯಿಂದ ವ್ಯತಿರಿಕ್ತವಾದುದೆಲ್ಲಾದಕ್ಕೂ ಉತ್ಪತ್ತಿಯಿದೆ ಎನ್ನುವುದು,) ಜನ್ಮನಃ = ಉತ್ಪತ್ತಿಗೆ, ಪರಾಧೀನವಿಶೇಷತ್ವೇ = ಪರಾಧೀನವಿಶೇಷ ಸ್ವರೂಪತ್ವವನ್ನು ಅಂಗೀಕರಿಸಿದರೇನೇ, (ಸಿದ್ಧವಾಗುತ್ತದೆ. ಅಭೂತ್ವಾಭವನರೂಪತ್ವವನ್ನು ಅಂಗೀಕರಿಸಿದರೆ ಸಿದ್ಧವಾಗಲಾರದು.) (ಹಾಗಾದರೆ ಅವ್ಯಾಕೃತಾಕಾಶಕ್ಕೆ ಅಭೂತ್ವಾಭವನವು ಕೂಡದಿರುವುದರಿಂದ ಅಲ್ಲಿ ಪರಾಧೀನವಿಶೇಷಾವಾಪ್ತಿಯೇ ಜನ್ಮಶಬ್ದಾರ್ಥವಾಗಲಿ ಬೇರೆಕಡೆ ಅಭೂತ್ವಾಭವನವನ್ನೇ ಅಂಗೀಕರಿಸಿದರೆ ಯಾವ ದೋಷವು? ಬಾಧಕಭಾವಾಭಾವಗಳಿಂದ ಅನೇಕಾರ್ಥತ್ವದ ಕಲ್ಪನೆಗೆ ವಿರೋಧವಿಲ್ಲ ಎಂದರೆ) ಸ್ಥೂಲತಾಭವಃ = ಉಪಾದಾನ ಧರ್ಮಿಗೆ ಧರ್ಮ್ಯಂತರಸ್ವರೂಪದಿಂದ ಪರಿವರ್ತನವು, ಪೂರ್ವಶಬ್ದವಿಲೋಪಶ್ಚ = ಪೂರ್ವಶಬ್ದನಿವೃತ್ತಿ ಯಾಗಿ ಶಬ್ದಾಂತರಪ್ರವೃತ್ತಿಯೂ ಕೂಡ, ಜನ್ಮೇತಿ=ಉತ್ಪತ್ತಿಯೆಂದು, ಯದಿ=ಯಾವಪಕ್ಷದಲ್ಲಿ, ಕೀರ್ತ್ಯತೇ=ಹೇಳಲ್ಪಟ್ಟದೋ, (ಹಾಗಾದರೆ) ರಮಾಯಾಃ=ಲಕ್ಷ್ಮೀದೇವಿಗೂ, ಕೇವಲಂ ಚೈತನ ಸ್ಯಾಪಿ=ಜೀವಚೈತನ್ಯಕ್ಕೂ, ಪ್ರಧಾನಸ್ಯ = ಪ್ರಕೃತಿಗೂ, ವೇದಸ್ಯ ಚ=ವೇದಕ್ಕೂ ಕೂಡ, ಜನ್ಮ=ಇಂತಹ ಉತ್ಪತ್ತಿಯು, ನೈವಾಸ್ತಿ=ಇಲ್ಲವೇ ಇಲ್ಲ. (ಆದಕಾರಣ ಪರಮೇಶ್ವರನಿಂದ ಹೊರತು ಸರ್ವವೂ ಉತ್ಪತ್ತಿಯುಳ್ಳದ್ದೆಂದು ಸಿದ್ಧಿಸಲಾರದು. ತಥಾಚ 'ಇದಂ ಸರ್ವಮಸೃಜತ' ಇತ್ಯಾದಿ ಪ್ರತಿಜ್ಞಾಹಾನಿಯು, 'ಆತ್ಮಾ ವಾ' ಇತ್ಯಾದಿ ಶಬ್ದವಿರೋಧವೂ, ವಿಭಕ್ತತ್ವಹೇತುವಿಗೆ ವ್ಯಭಿಚಾರವೂ ಬರುವುದು.) (ಹಾಗಾದರೆ ವೇದಕ್ಕೆ ಎಂತಹ ಪರಾಧೀನವಿಶೇಷಪ್ರಾಪ್ತಿಯು ಯಾವುದರಿಂದ ನಿಮ್ಮ ಪಕ್ಷದಲ್ಲಿ ಪ್ರತಿಜ್ಞಾಹಾನ್ಯಾದಿಗಳು ಬಾರದೆ ಹೋದಾವು ಎಂದರೆ—) ವೇದಸ್ಯಾಪಿ=ವೇದಕ್ಕಾದರೂ, ಈಶ್ವರೇಚ್ಛಯಾ = ಈಶ್ವರನ ಇಚ್ಛೆಯಿಂದ, ವ್ಯಕ್ತಿರ್ನಾಮ= ವ್ಯಕ್ತಿಯೆನ್ನುವ, ವಿಶೇಷಃ=ವಿಶೇಷವು, ಅಸ್ತಿ=ಇದೆ. ಅಂದರೆ ನಿಯತವಿಶಿಷ್ಟಾನುಪೂರ್ವಿಕವಾಗಿ ಅರ್ಥಬೋಧಕತ್ವಶಕ್ತಿಯಿಂದ ಆವಿರ್ಭಾವವು ವ್ಯಕ್ತಿಯು.) (ಮಹದಾದಿ ಸೂಕ್ಷ್ಮರೂಪಕ್ಕೆ ನಿತ್ಯತ್ವವು ಶ್ರುತ್ಯಾದಿಪ್ರಸಿದ್ಧವಾಗಿರುವುದರಿಂದ ಪ್ರತಿಜ್ಞಾಹಾನ್ಯಾದ್ಯನಿಸ್ತಾರವು ಎನ್ನುವ ಅಭಿಪ್ರಾ ಯದಿಂದ ಉಪಸಂಹಾರಮಾಡುತ್ತಾರೆ.) ತಸ್ಮಾತ್=ಆದುದರಿಂದ, ತದ್ವಶತ್ವೈವ=ಭಗವದಧೀನತ್ವ ವಿಶೇಷಲಾಭವೇ, ಅತ್ರ=ಶ್ರುತಿಸೂತ್ರಗಳಲ್ಲಿ, ಉತ್ಪತ್ತಿಃ=ಉತ್ಪತ್ತಿಯೆಂದು, ಕಥಿತಾ=ಹೇಳಿಸಿ ಕೊಳ್ಳಲ್ಪಡುತ್ತದೆ. ಹಿ=ಪ್ರಸಿದ್ಧವು.

**ತಾ ||** '**ಏಷ ಚೇತನಯಾ ಯುಕ್ತೋ ಜೀವಃ ಇತ್ಯಭಿಧೀಯತೇ**' ಇತ್ಯಾದಿ ವಚನದ್ದೆಶೆಯಿಂದ ಜೀವಶಬ್ದವು ಭೂತಾದಿ ಸಮೂಹದಲ್ಲಿ ಇರುತ್ತದೆ. ಅದಕ್ಕೆ ಇಂತಹ

ಉತ್ಪತ್ತಿಯು ಇದ್ದೇ ಇದೆ. ಆದಕಾರಣ 'ಕೇವಲಂ ಚೈತನ್ಯಸ್ಯ' ಎಂದು ಹೇಳಿದ್ದು. ಕ್ಷೀರವು ದಧಿಯಾಯಿತು ಎನ್ನುವುದರಂತೆ ಈ ದ್ರವ್ಯವು ರವಾದಿಯಾಗಿ ಪರಿಣಮಿಸಿತು ಎನ್ನುವಲ್ಲಿ ಪ್ರಮಾಣ ಇಲ್ಲ. ಮತ್ತೆ '**ದ್ವಾವೇತೌ ನಿತ್ಯಮುಕ್ತೌ ನಿತ್ಯೌ ಸರ್ವಗತೌ**' '**ಅಜೋನಿತ್ಯಃ**' **ಅಜಾಮೇಕಾಂ** '**ಯಾವದ್ಬ್ರಹ್ಮವಿಷ್ಠಿತಂ ತಾವತೀ ವಾಕ್**' ಇತ್ಯಾದಿಶ್ರುತಿಗಳಿಂದ ಅನಾದಿತ್ವವೇ ಅವಗತವಾಗುತ್ತದೆ.

**ಸಾರಾಂಶ —**

ಸ. ರ. ವಿ —(1) '**ತೇಜೋಽಬನ್ನಾನ್ಯಾಕಾಶ ಇತಿ ತಾನ್ಯನಿತ್ಯಾನಿ ವಾಯುರ್ವಾವ ನಿತ್ಯಃ ಸೈಷಾನಾಸ್ತಮಿತಾ ದೇವತಾ ಯದ್ವಾಯುಃ**' ಇತ್ಯಾದಿ ಶ್ರುತಿಯಿಂದ ಮುಖ್ಯ ವಾಯುವಿಗೆ ವಿಷ್ಣುಸೃಷ್ಟತ್ವವಿಲ್ಲವೆಂದಾಶಂಕಿಸಿದರೆ— 'ಆಕಾಶಾದ್ವಾಯುಃ' ಇತ್ಯಾದಿ ಶ್ರುತಿಯಿಂದ ದೇಹಸಂಬಂಧರೂಪವಾದ ಪರಾಧೀನ ವಿಶೇಷೋತ್ಪತ್ತಿಯಿದ್ದ ಪ್ರಯುಕ್ತ ಮುಖ್ಯಪ್ರಾಣನೂ ಕೂಡ ವಿಷ್ಣುವಿನಿಂದ ಸೃಷ್ಟಿಸಲ್ಪಟ್ಟವನೆಂದು ಹಿಂದೆ ಹೇಳಿದ ನ್ಯಾಯದಿಂದ ತಿಳಿಯತಕ್ಕದ್ದು. ನಿತ್ಯತ್ವವಚನವಾದರೂ ಪ್ರಲಯಕಾಲದಲ್ಲಿಯೂ ಅವಿನಷ್ಟಜ್ಞಾನಸಿಷಯಕವಾದುದು. ರಮೇಶನಂತೆ ಅಪರಾಧೀನತ್ವದಿಂದ ವಾಯುವಿಗೆ ನಿತ್ಯತ್ವವು ಕೂಡಲಾರದು. ಇಬ್ಬರಿಗೆ ಪರಮೈಶ್ವರ್ಯವು ಕೂಡಲಾರದು. ಆದಕಾರಣ ಈಶ್ವರವ್ಯತಿರಿಕ್ತವಾದುದು ಎಲ್ಲವೂ ಉತ್ಪತ್ತಿಯುಳ್ಳದ್ದೇ. ಉತ್ಪತ್ತಿನಿರಹಿತವಾದುದು ಅಲ್ಲ. (2) ಮೊದಲು ಸೂಕ್ಷ್ಮರೂಪದಿಂದ ಇದ್ದುದಕ್ಕೆ ಸ್ಥೂಲರೂಪತ್ವಾಪತ್ತಿರೂಪವಾದುದು, ಮೊದಲಿನ ಸಂಜ್ಞೆಯನ್ನು ಬಿಟ್ಟು ಸಂಜ್ಞಾಂತರಲಾಭರೂಪವಾದುದೂ ಯಾವುದು ಉತ್ಪತ್ತಿಯೋ ಅದು ಪೃಥಿವ್ಯಾದಿಗಳಿಗೇನೇ ಕೂಡುತ್ತದೆ. ಲಕ್ಷ್ಮೀತತ್ವ, ಜೀವತತ್ವಾದಿಗಳಿಗೆ ಕೂಡಲಾರದು. ಆದಕಾರಣ 'ಇದಂ ಸರ್ವಮಸೃಜತ' ಎನ್ನುವಲ್ಲಿ ಮತ್ತೊಬ್ಬರಿಂದ ವಿಶೇಷವನ್ನು ಹೊಂದುವುದೇ ಜನ್ಮವು ವಿವಕ್ಷಿತವಾಗಿದೆ ॥ ೨೦ ॥ ೨೧ ॥ ೨೨ ॥ ೨೩ ॥ ೨೪ ॥ ॥ ಸೂ. ೮ ॥ ಅಧಿ. ೨ ॥

**ಮಾತರಿಶ್ವಾಧಿಕರಣವು ಸಮಾಪ್ತವಾಯಿತು.**



# ಅಸಂಭವಾಧಿಕರಣವು.

## "ಓಂ ಅಸಂಭವಸ್ತು ಸತೋಽನುಪಪತ್ತೇಃ ಓಂ" ॥ ಸೂ. ೯ ॥

ಸಚ್ಛಬ್ದವಾಚ್ಯನಾದ ಬ್ರಹ್ಮನಿಗೆ ಅನುತ್ಪತ್ತಿಯೇ, ಏಕೆಂದರೆ ಅಸತ್ತಿನದ್ದೆಶೆಯಿಂದ ಸತ್ತಿಗೆ ಉತ್ಪತ್ತಿಯು ಎಲ್ಲಿಯೂ ಕಾಣದಿರುವುದರಿಂದ ಕೂಡಲಾರದು.

ಸರ್ವಥಾ ಅಸಂಭಾವ್ಯಮಾನ ಉತ್ಪತ್ತಿಯುಳ್ಳ ಆಕಾಶ ವಾಯುಗಳಿಗೆ ಉತ್ಪತ್ತಿಯನ್ನು ಹೇಳಿದ ಮೇಲೆ '**ಸದಜಾಯತ**' ಇತ್ಯಾದಿ ಶ್ರುತಿಗಳಿಂದ ಬ್ರಹ್ಮನಿಗೂ ಉತ್ಪತ್ತಿಯಿರಲಿ ಎಂದು ಶಂಕೆಯು ಬರುತ್ತದೆ. ಬ್ರಹ್ಮನಿಗೆ ಉತ್ಪತ್ತಿಯಿಲ್ಲವೆಂದು ಹೇಳತಕ್ಕ ಶ್ರುತ್ಯಾದಿಗಳಿಂದ ವಿರೋಧವು ಬರುತ್ತದೆಂದು ಹೇಳಕೂಡದು. ಏಕೆಂದರೆ ಬ್ರಹ್ಮನಿಗೆ ಸ್ವರೂಪತಃ ಉತ್ಪತ್ತಿಯಿಲ್ಲದಿದ್ದರೂ ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿಯು ಆಕಾಶ-ವಾಯುಗಳಂತೆಯೇ ಕೂಡಬಹುದೆನ್ನುವ ಆಶಂಕೆಯನ್ನು ಹೋಗಲಾಡಿಸುವುದಕ್ಕಾಗಿ ಈ ಅಧಿಕರಣವು ಆರಬ್ಧವಾಗಿದೆ. ಇದಾದರೂ

ಅಯುಕ್ತದಂತೆಯೇ ತೋರುತ್ತದೆ. 'ಅಸಂಭವಃ' ಎನ್ನುವುದರಿಂದ ಅನುತ್ಪತ್ತಿಯನ್ನು ಮಾತ್ರ ಪ್ರತಿಜ್ಞಾಮಾಡಿದ್ದು. ಅನುತ್ಪತ್ತಿಮಾತ್ರವನ್ನು ಪರರೂ ಅಂಗೀಕರಿಸಿರುವರು. (2) ಹಾಗಾದರೆ ಅವಧಾರಣಾರ್ಥಕವಾದ ತು ಶಬ್ದವನ್ನು ಪ್ರಯೋಗಿಸಿದರಿಂದ ಉತ್ಪತ್ತಿಯಿಲ್ಲವೆಂದೇ ಹೇಳಿದಹಾಗಾಯಿತು ಎಂದರೆ ಸತ್ಯವೇ. ಆದಾಗ್ಯೂ 'ಸರ್ವಥಾ ಉತ್ಪತ್ತಿಯಿಲ್ಲವೆನ್ನುವ ವಿಷಯದಲ್ಲಿ ಹೇತುವನ್ನು ಹೇಳದಿರುವುದರಿಂದ ಅಯುಕ್ತವೇ. (3) ಹಾಗಾದರೆ 'ಅನುಪಪತ್ತೇಃ' ಎಂದು ಅಸತ್ತಿನಿಂದ ಸತ್ ಹುಟ್ಟುವುದಿಲ್ಲವೆಂದು ಹೇತುವು ಉಕ್ತವಾಗಿದೆ ಎಂದರೆ— ಇದು ಕಾರಣ ವಿಶೇಷವನ್ನು ಪ್ರತಿಷೇಧಮಾಡಿದರಿಂದ ಸರ್ವಥ್ಯಾಪಿ ಉತ್ಪತ್ತ್ಯಭಾವವನ್ನು ಸಾಧಿಸಲಿಕ್ಕೆ ಸಮರ್ಥ ವಲ್ಲ, ಎಂದರೆ— ಹೀಗೆ ಹೇಳಕೂಡದು. ಪ್ರಸಕ್ತಕಾರಣವನ್ನು ನಿರಾಸಮಾಡಿದರಿಂದ ಬೇರೆ ಯಾವ ಕಾರಣಕ್ಕೂ ಪ್ರಸಕ್ತಿಯೇ ಇಲ್ಲದಿರುವುದರಿಂದ 'ಅನುಪಪತ್ತೇಃ' ಎನ್ನುವುದರಿಂದ ಸರ್ವಥಾ ಉತ್ಪತ್ತ್ಯಭಾವಸಾಧಕವಾದ ಕಾರಣಾಭಾವರೂಪ ಹೇತುವೇ ಸಿದ್ಧವಾದರೂ 'ಅನುಪಪತ್ತೇಃ' ಎನ್ನುವ ಹೇತುವನ್ನು ರೀತ್ಯಂತರದಿಂದ ವ್ಯಾಖ್ಯಾನಮಾಡುತ್ತಾ ಸೂತ್ರಾರ್ಥವನ್ನು ಹೇಳುತ್ತಾರೆ -

**ಮೂ ॥ [ಉತ್ಪತ್ತಿರತ್ರ ಕಥಿತಾ] ಸ್ವತಂತ್ರತ್ವಾತ್ಪರಾತ್ಮನಃ ।**
**ನೈವೋತ್ಪತ್ತಿಃ ಕಥಮಪಿ ನ ಸ್ವತಂತ್ರಂ ತತೋಽಪರಂ ॥ ೨೫ ॥**

ಅ ॥ ಪರಾತ್ಮನಃ=ಶ್ರೀಹರಿಗೆ, ಸ್ವತಂತ್ರತ್ವಾತ್=ಸ್ವಾತಂತ್ರ್ಯವಿದ್ದುದರಿಂದ, ಕಥಮಪಿ= ಸ್ವರೂಪದಿಂದಲೂ ವಿಶೇಷಾವಾಪ್ತಿಯಿಂದಲೂ, ಉತ್ಪತ್ತಿಃ=ಉತ್ಪತ್ತಿಯು, ನೈವ=ಕೂಡುವುದೇ ಇಲ್ಲ. (ಪರಮಾತ್ಮನಿಗೆ ಸ್ವಾತಂತ್ರ್ಯವು ಯಾವುದರಿಂದ ಎಂದರೆ ಹೀಗೆ ಹೇಳಕೂಡದು. ೧ ಸ್ವತಂತ್ರವಸ್ತುವೇ ಅಂಗೀಕರಿಸಲ್ಪಡುವುದಿಲ್ಲವೋ, ೨ ಅಥವಾ ಬೇರೊಂದು ಸ್ವತಂತ್ರವಸ್ತುವನ್ನು ಅಂಗೀಕರಿಸಿ ಬ್ರಹ್ಮನಿಗೆ ಸ್ವಾತಂತ್ರ್ಯವು ನಿರಾಕರಿಸಲ್ಪಡುತ್ತದೋ, ೧ನೇದ್ದು ಕೂಡಲಾರದು. ನಿಯಾಮಕಪರಂಪರೆಗೆ ವಿಶ್ರಾಂತಿಯೇ ಇಲ್ಲದಿರುವುದರಿಂದ ಅನವಸ್ಥಾ ಬರುವುದರಿಂದಲೂ ನಿಯಾಮಕನಿಗೂ ನಿಯಮ್ಯಚೇತನದಿಂದ ಸಾಮ್ಯವಿರೋಣದರಿಂದ ನಿಯಮ್ಯ-ನಿಯಾಮಕ ಭಾವವು ಕೂಡದಿರುವುದರಿಂದಲೂ ಸ್ವತಂತ್ರವಸ್ತುವು ಇಲ್ಲವೆನ್ನುವುದು ಕೂಡಲಾರದು. ೨ನೇದ್ದನ್ನು ನಿರಾಕರಿಸುತ್ತಾರೆ.) ತತಃ=ಶ್ರೀ ಹರಿಯಿಂದ, ಅಪರಂ = ಮತ್ತೊಂದು, ಸ್ವತಂತ್ರಂ= ಸ್ವತಂತ್ರವಾದುದು, ನ=ಇಲ್ಲ. ಈ ವಿಷಯದಲ್ಲಿ ಪ್ರಮಾಣವೇ ಇಲ್ಲ. ಪ್ರಮಾಣವಿದ್ದರೆ ಸ್ವತಂತ್ರ ವಸ್ತುವನ್ನೇ ನಾವು ಶ್ರೀ ಪರಮಾತ್ಮನೆಂದು ಅಂಗೀಕರಿಸುತ್ತೇವೆ ॥ ೨೫ ॥ ಸೂ. ೯ ॥ ಅಧಿ. ೩ ॥

**ಅಸಂಭವಾಧಿಕರಣವು ಸಮಾಪ್ತವಾಯಿತು.**



## ತೇಜೋಽಧಿಕರಣವು.

### "ಓಂ ತೇಜೋಽತಸ್ತಥಾ ಹ್ಯಾಹ ಓಂ" ॥ ಸೂ. ೧೦ ॥

ಆಕಾಶಾದಿಗಳಂತೆಯೇ ತೇಜಸ್ಸೂ ಕೂಡ ಪರಬ್ರಹ್ಮನಿಂದಲೇ ಹುಟ್ಟುತ್ತದೆ. '**ತತ್ತೇಜೋಽಸೃಜತ**' ಎನ್ನುವ ಶ್ರುತಿಯು ಹಾಗೆ ಹೇಳುತ್ತದೆ ॥ ಸೂ. ೧೦ ॥ ಅಧಿ. ೪ ॥

**ತೇಜೋಽಧಿಕರಣವು ಸಮಾಪ್ತವಾಯಿತು.**



## ಅಬಧಿಕರಣವು.

**“ ಓಂ ಆಪಃ ಓಂ ” ॥ ಸೂ. ೧೧ ॥**

ಜಲಗಳೂ ಕೂಡ ಪರಬ್ರಹ್ಮನಿಂದಲೇ ಹುಟ್ಟುತ್ತವೆ. ಅಗ್ನಿಯಿಂದ ಅಲ್ಲ. **‘ಬ್ರಹ್ಮೈವೇದ ಮಗ್ರ ಆಸೀತ್ ತದಪೋಽಸೃಜತ’** ಎನ್ನುವ ಶ್ರುತಿಯು ಹಾಗೆ ಹೇಳುತ್ತದೆ. ॥ ಸೂ. ೧೧ ॥ ॥ ಅಧಿ. ೫ ॥

**ಅಬಧಿಕರಣವು ಸಮಾಪ್ತವಾಯಿತು.**

——o⊂⊃o——

## ಪೃಥಿವ್ಯಧಿಕರಣವು.

**“ ಓಂ ಪೃಥಿವ್ಯಧಿಕಾರರೂಪಶಬ್ದಾಂತರಾದಿಭ್ಯಃ ಓಂ ” ॥ ಸೂ. ೧೨ ॥**

**‘ತತ್ತೇಜೋಽಸೃಜತ’** ಇತ್ಯಾದಿ ಭೂತಪ್ರಕರಣವಾಗಿರುವುದರಿಂದಲೂ **‘ಯತ್ಕೃಷ್ಣಂ ತದನ್ನಸ್ಯ’** ಎಂದು ಕಾರ್ಷ್ಣ್ಯರೂಪವಿದ್ದುದರಿಂದಲೂ **‘ಪೃಥಿವೀ ವಾ ಅನ್ನಂ’** ಎನ್ನುವ ಶಬ್ದಾಂತರವಿದ್ದುದರಿಂದಲೂ ‘ವೇದೋ ನಾಪ್ರಮಾಣಂ ಅಪೌರುಷೇಯತ್ವಾತ್’ ಇತ್ಯಾದಿ ಯುಕ್ತಿಯಿದ್ದುದರಿಂದಲೂ, ಅನ್ನಶಬ್ದವಾಚ್ಯವು ಪೃಥಿವಿಯೇ ಪ್ರಸಿದ್ಧಾನ್ನವಲ್ಲ ॥ ಸೂ. ೧೨ ॥ ಅಧಿ. ೬ ॥

**ಪೃಥಿವ್ಯಧಿಕರಣವು ಸಮಾಪ್ತವಾಯಿತು.**

## ತದಭಿಧ್ಯಾನಾಧಿಕರಣವು.

**“ ಓಂ ತದಭಿಧ್ಯಾನಾದೇವ ತು ತಲ್ಲಿಂಗಾತ್ಸಃ ಓಂ ” ॥ ಸೂ. ೧೩ ॥**

**‘ತಸ್ಯಾಭಿಧ್ಯಾನಾತ್’** ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟ ಅನಾದಿಬಂಧಸಂಜಿಹೀರ್ಷಾರೂಪವೇ ಆದ ಸಾದಿಜಗತ್ಸಂಹರ್ತೃತ್ವವನ್ನು ಸಾಧಿಸುವ ಲಿಂಗದ್ದೆಶೆಯಿಂದ ಆ ವಿಷ್ಣುವೇ ಸಂಹಾರಕನು, ರುದ್ರನಲ್ಲ. ಅನಾದಿಯಾದ ಬಂಧಕ್ಕೂ ನಾಶಕನು ವಿಷ್ಣುವೇ, ಸಾದಿಯಾದ ಜಗತ್ತಿಗೆ ನಾಶಕನೆನ್ನುವುದು ಸುತರಾಂ ಸಿದ್ಧವು. **‘ಯಮಪ್ಯೇತಿ ಭುವನಂ ಸಾಂಪರಾಯೇ’** **‘ಇದಂ ಸರ್ವಮಸೃಜತ’** ಇತ್ಯಾದಿ ಸ್ಪಷ್ಟಶ್ರುತಿಗಳಿಂದಲೂ ಸಾದಿಯಾದ ಜಗತ್ತಿಗೆ ಸಂಹಾರಕನು ವಿಷ್ಣುವೇ ॥ ಸೂ. ॥ ೧೩ ॥ ಅಧಿ. ೭ ॥

**ತದಭಿಧ್ಯಾನಾಧಿಕರಣವು ಸಮಾಪ್ತವಾಯಿತು.**

## ವಿಪರ್ಯಯಾಧಿಕರಣವು.

**“ ಓಂ ವಿಪರ್ಯಯೇಣ ತು ಕ್ರಮೋಽತ ಉಪಪದ್ಯತೇ ಚ ಓಂ ” ॥ ಸೂ. ೧೪ ॥**

'**ಕ್ರಮಾದ್ಯುದ್ಯತೇ ಕ್ರಮಾದ್ವಿಲೀಯತೇ**' ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟ ಕ್ರಮವಾದರೂ ಸೃಷ್ಟಿಕ್ರಮದಿಂದ ವಿಪರೀತವಾಗಿಯೇ ಆಗುತ್ತದೆ. ಯಾವ ಭಾಲ್ಲವೇಯ ಶ್ರುತಿಯಲ್ಲಿ '**ಕ್ರಮಾದುತ್ಪದ್ಯತೇ**' ಇತ್ಯಾದಿಗಳಿಂದ ಕ್ರಮದಿಂದ ಲಯವು ಶ್ರುತವಾಗಿದೆಯೋ, ಅದೇ ಶ್ರುತಿಯಲ್ಲಿ ವ್ಯುತ್ಕ್ರಮದಿಂದಲೇ ಲಯವು ಶ್ರುತವಾಗಿದೆ. ಪೂರ್ವೋತ್ಪನ್ನರಿಗೆ ಸಾಮರ್ಥ್ಯಾಧಿಕ್ಯವಿದ್ದುದರಿಂದ ಸೃಷ್ಟಿಕ್ರಮಕ್ಕಿಂತ ಲಯಕ್ರಮಕ್ಕೆ ವೈಪರೀತ್ಯವೂ ಯುಕ್ತವಾಗುತ್ತದೆ. ಸೂ. ॥ ೧೪ ॥ ಅಧಿ. ॥ ೮ ॥

**ವಿಪರ್ಯಯಾಧಿಕರಣವು ಸಮಾಪ್ತವಾಯಿತು**

## ಅಂತರಾಧಿಕರಣವು.

### "ಓಂ ಅಂತರಾ ವಿಜ್ಞಾನಮನಸೀ ಕ್ರಮೇಣ ತಲ್ಲಿಂಗಾದಿತಿ ಚೇನ್ನಾವಿಶೇಷಾತ್ ಓಂ" ॥ ಸೂ. ೧೫ ॥

ವಿಜ್ಞಾನತತ್ವ ಮನಸ್ತತ್ವಗಳನ್ನು ಹೊರತು ವ್ಯುತ್ಕ್ರಮದಿಂದ ಇತರ ತತ್ವಗಳಿಗೆ ಲಯವು, ಹೇಳಿದ ಅರ್ಥದಲ್ಲಿ '**ಮನಶ್ಚ ವಿಜ್ಞಾನಂ**' '**ಯಚ್ಛೇದ್ವಾಙ್ಮನಸೀ ಪ್ರಾಜ್ಞಸ್ತದ್ಯಚ್ಛೇಜ್ಞಾನ ಆತ್ಮನಿ**' ಎಂದು ಶ್ರುತ್ಯುಕ್ತವಾದ ಉತ್ಪತ್ತಿಕ್ರಮದಿಂದ ವಿಜ್ಞಾನ ಮನಸ್ಸುಗಳಿಗೆ ಸೃಷ್ಟಿಕ್ರಮದಿಂದಲೇ ಲಯಸಾಧಕವಾದ ಲಿಂಗವಿದ್ದುದರಿಂದ ಎಂದರೆ— ಹೀಗೆ ಹೇಳಕೂಡದು. ವಿಜ್ಞಾನ ಮನಸ್ತತ್ವಗಳಿಗೆ ಉತ್ಪತ್ತಿಕ್ರಮದಿಂದಲೇ ಲಯವು ಎನ್ನುವಲ್ಲಿ ವಿಶೇಷಪ್ರಮಾಣವಿಲ್ಲ. '**ವ್ಯುತ್ಕ್ರಮಾದ್ವಿಲಯಶ್ಚ**' ಎಂದು ವಿಶೇಷಪ್ರಮಾಣವೂ ಇದೆ.

### "ಓಂ ಚರಾಚರವ್ಯಪಾಶ್ರಯಸ್ತು ಸ್ಯಾತ್ತದ್ವ್ಯಪದೇಶೋ ಭಾಕ್ತಸ್ತದ್ಭಾವಭಾವಿತ್ವಾತ್ ಓಂ" ॥ ಸೂ. ೧೬ ॥

ಮನೋರೂಪವಾದ ಇಂದ್ರಿಯವೂ ವೃತ್ತಿಜ್ಞಾನವೂ ಕೂಡ ಚಂಚಲವಾಗಿರುವುದರಿಂದ ಚರವೆನ್ನಿಸುತ್ತದೆ. ಮನಸ್ತತ್ವವೂ ವಿಜ್ಞಾನತತ್ವವೂ ಕೂಡ ಸ್ಥಿರವಾಗಿರುವುದರಿಂದ ಅಚರವೆನ್ನಿಸುತ್ತದೆ. ಹೀಗೆ ಮನಸ್ಸೇ ಮೊದಲಾದ ನಾಲ್ಕರ ವಿಷಯಕವಾಗಿ ತೋರಿದಾಗ್ಯೂ '**ಮನಶ್ಚ ವಿಜ್ಞಾನಂ**' ಎನ್ನುವ ಶ್ರೌತವ್ಯವಹಾರವು ನಾಲ್ಕರಲ್ಲಿ ಏಕದೇಶವಾದ ವೃತ್ತಿಜ್ಞಾನ, ಮನಸ್ಸು ಏತದ್ವಿಷಯಕವೇ ಆಗಿದೆ, ಮನಸ್ತತ್ವಾದಿ ವಿಷಯಕವಲ್ಲ. ಸ್ಥಾವರಜಂಗಮಾತ್ಮಕವಾದ ಸರ್ವವಸ್ತುವಿಷಯಕವಾಗಿ ಆಲೋಚನದಿಂದ ವೃತ್ತಿರೂಪವಾದ ಜ್ಞಾನವು ಹುಟ್ಟುವುದರಿಂದ. ॥ ಸೂ. ॥ ೧೫ ॥ ೧೬ ॥ ಅಧಿ. ॥ ೯ ॥

**ಅಂತರಾಧಿಕರಣವು ಸಮಾಪ್ತವಾಯಿತು.**

## ನಾತ್ಮಾಧಿಕರಣವು.

### "ಓಂ ನಾತ್ಮಾಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ ಓಂ" ॥ ಸೂ. ೧೭ ॥

ಶ್ರೀ ಪರಮಾತ್ಮನು ದೇಹನಾಶಾಖ್ಯ ಲಯವುಳ್ಳನಾಗುವುದಿಲ್ಲ. ಬ್ರಹ್ಮನಿಗೆ ಲಯವು ಎಲ್ಲಿಯೂ ಶ್ರುತವಾಗದಿರುವುದರಿಂದ '**ಸರ್ವಂ ವಿಲಾಪ್ಯಾಂತಸ್ತಮಸಿ ನಿಲೀನಃ**' ಎನ್ನುವ ಶ್ರುತಿಯಾದರೂ ಬ್ರಹ್ಮನಿಗೆ ಪ್ರಕೃತ್ಯಾಚ್ಛಾದಿತತ್ವವನ್ನು ಹೇಳುತ್ತದೆ. '**ತುಚ್ಛೇನಾಭ್ವಪಿಹಿತಂ ಯದಾಸೀತ್**' ಎನ್ನುವ ಶ್ರುತಿಯಿದ್ದುದರಿಂದ ಹೀಗೆ ಕಲ್ಪಿಸಿದ್ದು. ಅಂದರೆ–'**ನಾಸದಾಸೀತ್**' ಎನ್ನುವುದರಿಂದ ಎಲ್ಲಾದಕ್ಕೂ ಲಯವನ್ನು ಹೇಳಿ, '**ತಮ ಆಸೀತ್**' ಎಂದು ಪ್ರಕೃತಿಗೆ ಸ್ಥಿತಿಯನ್ನು ಹೇಳಿ ಬ್ರಹ್ಮನಿಗೆ ಪ್ರಕೃತ್ಯಾಚ್ಛಾದಿತತ್ವವನ್ನು ಪುನಃ ಪ್ರಾದುರ್ಭಾವವನ್ನು ಹೇಳಿಯದೆ. '**ನಿತ್ಯೋ ನಿತ್ಯಾನಾಂ ಸ ನಿತ್ಯೋ ನಿರ್ಗುಣಃ ಸ ನಿತ್ಯೋ ವಿಭುಃ**' ಇತ್ಯಾದಿ ಶ್ರುತಿಗಳಿಂದ ಆತ್ಮನ ದೇಹಕ್ಕೂ ನಿತ್ಯತ್ವವೇ ಅವಗತವಾಗುತ್ತದೆ. ॥ ಸೂ. ೧೭ ॥ ಅಧಿ. ೧೦ ॥

**ನಾತ್ಮಾಧಿಕರಣವು ಸಮಾಪ್ತವಾಯಿತು.**



## ಜ್ಞಾಧಿಕರಣವು.

### "ಓಂ ಜ್ಞೋಽತ ಏವ ಓಂ" ॥ ಸೂ. ೧೮ ॥

ಜೀವನೂ ಕೂಡ ಪರಮಾತ್ಮನಿಂದಲೇ ಹುಟ್ಟುತ್ತಾನೆ. '**ತೇವಾ ಏತೇ ಚಿದಾತ್ಮಾನೋ ವ್ಯುಚ್ಚರಂತಿ ಅವಿನಷ್ಟಾ ಏವೋತ್ಪದ್ಯಂತೇ**' ಇತ್ಯಾದಿ ಶ್ರುತಿಗಳಿಂದಲೇ.

### "ಓಂ ಯುಕ್ತೇಶ್ಚ ಓಂ" ॥ ಸೂ. ೧೯ ॥

ನಿತ್ಯನಾದಾಗ್ಯೂ ಜೀವನು ಹುಟ್ಟುತ್ತಾನೆ. ನಿತ್ಯವಾದುದಕ್ಕೂ ಪರಾಧೀನ ವಿಶೇಷದೇಹಾದ್ಯುಪಾಧಿಗಳನ್ನು ಅಪೇಕ್ಷಿಸಿ ಉತ್ಪತ್ತಿಯು ಯುಕ್ತವಾಗುತ್ತದೆ.॥ ಸೂ. ೧೮ ॥ ೧೯ ॥ ಅಧಿ. ೧೧ ॥

**ಜ್ಞಾಧಿಕರಣವು ಸಮಾಪ್ತವಾಯಿತು.**



## ಉತ್ಕ್ರಾಂತ್ಯಧಿಕರಣವು.

### "ಓಂ ಉತ್ಕ್ರಾಂತಿಗತ್ಯಾಗತೀನಾಂ ಓಂ" ॥ ಸೂ. ೨೦ ॥

ಉತ್ಕ್ರಮಣ ಗಮನಾಗಮನಾದಿಗಳು ಇದ್ದ ಪ್ರಯುಕ್ತ ಜೀವನು ಅಣುವೇ, ವ್ಯಾಪಕನಲ್ಲ.

### "ಓಂ ಸ್ವಾತ್ಮನಾ ಚೋತ್ತರಯೋಃ ಓಂ" ॥ ಸೂ. ೨೧ ॥

ಪರಮಾತ್ಮನಿಂದಲೇ ಜೀವನಿಗೆ ಉತ್ಕ್ರಮಣಾದಿಗಳು. ಸ್ವತಃ ಅಲ್ಲ. '**ಪರೇಣೇಮಂ ಗರ್ಭಮನುಪ್ರವಿಶತಿ ಏಷ ಹ್ಯೇನಂ ಜೀವಮಭಿಜೀವಯತಿ**' ಎನ್ನುವ ಮೇಲಿನ ಎರಡು ವಾಕ್ಯಗಳಲ್ಲಿ ಪರಾಧೀನತ್ವವನ್ನು ಪ್ರತಿಪಾದಿಸಿದ್ದರಿಂದ,

### "ಓಂ ನಾಣುರತಚ್ಛ್ರುತೇರಿತಿ ಚೇನ್ನೇತರಾಧಿಕಾರಾತ್ ಓಂ" ॥ ಸೂ. ೨೨ ॥

ಜೀವನು ಅಣುವಲ್ಲ. ಅಣುತ್ವವಿರುದ್ಧವಾದ ಮಹತ್ವವನ್ನು ಬೋಧಿಸತಕ್ಕ '**ವ್ಯಾಪ್ತಾ ಹ್ಯಾತ್ಮಾನಃ**' ಎನ್ನುವ ಶ್ರುತಿಯಿದ್ದ ಪ್ರಯುಕ್ತ ಎಂದರೆ ಹೀಗೆ ಹೇಳಕೂಡದು. ಆ ಶ್ರುತಿಯು ಬ್ರಹ್ಮಪರವಾಗಿದೆ. '**ಸ ಆತ್ಮೇದಂ ಸೃಜತಿ**' ಎಂದು ಪರಬ್ರಹ್ಮನ ಪ್ರಕರಣವಾಗಿರುವುದರಿಂದ ಪರಮಾತ್ಮ ಪ್ರತಿಪಾದಕವಾಗಿದೆ.

**"ಓಂ ಸ್ವಶಬ್ದೋನ್ಮಾನಾಭ್ಯಾಂ ಚ ಓಂ"** ॥ ಸೂ. ೨೩ ॥

ಆತ್ಮಶಬ್ದ ಅಪರಿಮಿತತ್ವರೂಪ ಲಿಂಗಗಳಿಂದಲೂ ಶ್ರುತಿಯು ಈಶ್ವರನ ಪರವು. ಕೇವಲ ಅಧಿಕಾರದಿಂದ ಅಲ್ಲ. '**ಏಷೋ ಹ್ಯಾತ್ಮಾಧ್ಯುದ್ಗತೋ ಮಾನಶಕ್ತೇಃ**' ಎನ್ನುವ ವಾಕ್ಯ ಶೇಷದಲ್ಲಿ ಅವುಗಳು ಶ್ರುತಗಳಾಗಿವೆ.

**"ಓಂ ಅವಿರೋಧಶ್ಚಂದನವತ್ ಓಂ"** ॥ ಸೂ. ೨೪ ॥

ಜೀವನಿಗೆ ಅಣುತ್ವವಿದ್ದಾಗ್ಯೂ ದೇಹವ್ಯಾಪ್ತಿವಿರೋಧವಿಲ್ಲ. ಹರಿಚಂದನ ಬಿಂದುವಂತೆ. ಅಂದರೆ— ಏಕದೇಶದಲ್ಲಿ ಬಿದ್ದ ಹರಿಚಂದನ ಬಿಂದುವಿಗೆ ತನ್ನ ಅಂಶಗಳಿಂದ ಹೇಗೆ ಶರೀರ ವ್ಯಾಪ್ತಿಯಿದೆಯೋ, ಹಾಗೆಯೇ ಜೀವನಿಗೂ ತನ್ನ ಅಂಶಗಳಿಂದ ದೇಹವ್ಯಾಪ್ತಿಯು ಯುಕ್ತವೇ.

**"ಓಂ ಅವಸ್ಥಿತಿವೈಶೇಷ್ಯಾದಿತಿ ಚೇನ್ನಾಭ್ಯುಪಗಮಾದ್ಧೃದಿ ಹಿ ಓಂ"** ॥ ಸೂ ॥ ೨೫ ॥

ಚಂದನ ಬಿಂದುವಿಗೆ ದೇಹದಲ್ಲಿ ಕೆಲವುಕಡೆ ಚೆನ್ನಾಗಿಯೂ ಕೆಲವುಕಡೆ ಸ್ವಲ್ಪ ಸ್ಥಿತಿವಿಶೇಷ ವಿದ್ದಪ್ರಯುಕ್ತ ವ್ಯಾಪ್ತಿಕೂಡಿದರೂ ಜೀವನಿಗೆ ಅದು ಇಲ್ಲದಿರುವುದರಿಂದ ದೇಹವ್ಯಾಪ್ತಿಯು ಯುಕ್ತವಲ್ಲ ಎಂದರೆ—ಹಾಗೆ ಹೇಳಕೂಡದು. '**ಹೃದಿ ಹ್ಯೇಷ ಆತ್ಮಾ**' ಎನ್ನುವ ಶ್ರುತಿಯಿಂದ ಜೀವನಿಗೂ ಹೃದಯದಲ್ಲಿ ಸಮ್ಯಕ್ ಅನ್ಯತ್ರ ಅಸಮ್ಯಕ್ ಅವಸ್ಥಿತಿಯನ್ನು ಅಂಗೀಕರಿಸಿದರಿಂದ ವೈಷಮ್ಯವು ಇಲ್ಲ.

**"ಓಂ ಗುಣಾದ್ವಾಲೋಕವತ್ ಓಂ"** ॥ ಸೂ ॥ ೨೬ ॥

ಅಣುವಾದಾಗ್ಯೂ ಜೀವನಿಗೆ ಚಿದ್ಗುಣದಿಂದ ದೇಹವ್ಯಾಪ್ತಿಯು ದೀಪದಂತೆಯೇ ಕೂಡುತ್ತದೆ. ಅಂದರೆ—ದೀಪಾದಿಗಳು ಸ್ವರೂಪದಿಂದ ದೀಪಿಕಾದಿಗಳಲ್ಲಿ ಒಂದೇಕಡೆ ಇದ್ದಾಗ್ಯೂ ಪ್ರಕಾಶ ಗುಣದಿಂದ ಹೇಗೆ ವ್ಯಾಪ್ತಗಳಾಗಿವೆಯೋ ಹಾಗೆಯೇ ಜೀವನೂ ಸ್ವರೂಪದಿಂದ ಹೃದಯದಲ್ಲಿ ಇದ್ದವನಾದಾಗ್ಯೂ ಚಿದ್ಗುಣದಿಂದ ದೇಹದಲ್ಲಿ ವ್ಯಾಪಿಸಿಕೊಂಡೇ ಇದ್ದಾನೆ. ॥ ಸೂ ॥ ೨೦ ॥ ೨೧ ॥ ೨೨ ॥ ೨೩ ॥ ೨೪ ॥ ೨೫ ॥ ೨೬ ॥ ಅಧಿ. ॥ ೧೨ ॥

**ಉತ್ಕ್ರಾಂತ್ಯಧಿಕರಣವು ಸಮಾಪ್ತವಾಯಿತು—**



## ವ್ಯತಿರೇಕಾಧಿಕರಣವು.

**"ಓಂ ವ್ಯತಿರೇಕೋ ಗಂಧವತ್ತಥಾ ಚ ದರ್ಶಯತಿ ಓಂ"** ॥ ಸೂ. ೨೭ ॥

ಅಣುವಾದಾಗ್ಯೂ ಜೀವನಿಗೆ ಅಂಶಗಳಿಂದ ಭೇದವದೆ. ಪುಷ್ಪದ್ದೆಶೆಯಿಂದ ಗಂಧಕ್ಕೆ ತನ್ನ ಅಂಶಗಳಿಂದ ವಿಭಾಗವಿದ್ದಂತೆಯೇ. ಅಂತೂ '**ಸ ಪಂಚಧಾ ಸ ಸಪ್ತಧಾ ದಶಧಾ**' ಎನ್ನುವ ಶ್ರುತ್ಯುಕ್ತವಾದ ಬಹುರೂಪತ್ವವು ಯುಕ್ತವು. ಹೇಗೆಂದರೆ— '**ಅಥೈಕ ಏವ ಸನ್ ಗಂಧವದ್ವ್ಯತಿರಿಚ್ಯತೇ ಅಥೈಕೀ ಭವತಿ ಅಥ ಬಹ್ವೀ ಭವತಿ**' ಎನ್ನುವ ಶ್ರುತಿಯೂ '**ಅಚಿಂತ್ಯಯೋಗಶಕ್ತ್ಯೈವ**' ಎನ್ನುವ ಸ್ಮೃತಿಯೂ ಹಾಗೆ ತೋರಿಸುತ್ತದೆ.

ಈ ಅಧಿಕರಣದಲ್ಲಿ ಯೋಗಿಗಳಿಗೆ ಸ್ವರೂಪದಿಂದಲೇ ಅನೇಕತ್ವವನ್ನುಪಪಾದಿಸುತ್ತಾರೆ. ಆ ಅನೇಕತ್ವಕ್ಕೆ '**ಅವಿರೋಧಶ್ಚಂದನವತ್**' ಎಂದುಕ್ತವಾದ ಅರ್ಥಕ್ಕೆ ಉಪಪಾದಕತ್ವರೂಪ ಸಂಗತಿಯಿದ್ದರೂ '**ಅಸಂಭವಸ್ತು ಸತೋಽನುಪಪತ್ತೇಃ**' ಎನ್ನುವಲ್ಲಿ ಈಶ್ವರನಿಗೆ ಹೇಳಿದ ಸರ್ವಸ್ವಾತಂತ್ರ್ಯೋಪಪಾದಕತ್ವದಿಂದಲೂ ಸಂಗತಿಯನ್ನು ತಿಳಿಸುತ್ತಾ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

**ಮೂ ॥ ಅಚ್ಛೇದ್ಯಸ್ಯಾಪಿ ಜೀವಸ್ಯ ವಿಭಾಗಂ ಬಹುದಾ ಹರಿಃ ।**
**ಕೃತ್ವಾ ಭೋಗಾನ್ಪ್ರದಾಯ್ಯೈವ ಚೈಕ್ಯಮಾಪಾದಯೇತ್ಪುನಃ ॥**
**ಅತ ಈಶವಶಂ ಸರ್ವಂ ಚೇತನಾಚೇತನಂ ಜಗತ್ ॥ ೨೬ ॥**
**ಅವಿಭಾಗಂ ವಿಭಾಗಾಯ ಯದಾ ನಯತಿ ಕೇಶವಃ ।**
**ಕಿಮಶಕ್ಯಂ ಪರೇಶಸ್ಯ ತದೇತಿ ಹ್ಯಭಿಧೀಯತೇ ॥ ೨೭ ॥**

ಅ ॥ ಹರಿಃ = ಶ್ರೀ ಪರಮಾತ್ಮನು, ಅಚ್ಛೇದ್ಯಸ್ಯಾಪಿ = ಛೇದ್ಯನಾಗದೆ ಇದ್ದಾಗ್ಯೂ, ಜೀವಸ್ಯ=ಜೀವನಿಗೆ, ಬಹುದಾ=ಅನೇಕಪ್ರಕಾರ, ವಿಭಾಗಂ=ವಿಭಾಗವನ್ನು, ಕೃತ್ವಾ=ಮಾಡಿ, ಭೋಗಾಂಶ್ಚ=ಭೋಗಗಳನ್ನೂ ಕೂಡ, ಪ್ರದಾಯ=ಕೊಟ್ಟು, ಪುನಃ=ಮತ್ತು, ಐಕ್ಯಮೇವ=ಏಕರೂಪತ್ವವನ್ನೇ, ಆಪಾದಯೇತ್=ಹೊಂದಿಸಿಕೊಡುವನು. ಅತಃ=ಆದಕಾರಣ, ಚೇತನಾಚೇತನಂ=ಚರಾಚರಾತ್ಮಕವಾದ, ಸರ್ವಂ ಜಗತ್=ಎಲ್ಲಾ ಜಗತ್ತು, ಈಶವಶಂ=ಶ್ರೀ ಹರಿಯ ಅಧೀನವೇ. (ತಥಾಚ ಆ ಶ್ರೀ ಹರಿಯೇ ಸ್ವತಂತ್ರನು) (ಹಾಗಾದರೆ ಇತರರಿಂದ ಛೇದಿಸಲಿಕ್ಕೆ ಅಶಕ್ಯವಾದ ಜೀವನ ಅಂಶವನ್ನು ಛೇದಿಸಿ ಆ ಭಾಗಗಳಿಗೂ ಭೋಗಶಕ್ತಿಯನ್ನು ಕೊಟ್ಟು ಪುನಃ ಶ್ರೀಹರಿಯು ಏಕತ್ವವನ್ನು ಹೊಂದಿಸಿಕೊಡುವುದಾದರೆ ಆ ವಿಷಯದಲ್ಲಿ ಶ್ರೀಹರಿಗೆ ಸಾಮರ್ಥ್ಯವು ಇರಲಿ. ಎಲ್ಲಾ ಜಗತ್ತು ಈಶ್ವರನ ಅಧೀನವೆನ್ನುವುದು ಹೇಗೆ ಕೂಡುತ್ತದೆ? ಎಂದರೆ) ಕೇಶವಃ=ಶ್ರೀಹರಿಯು, ಯದಾ=ಯಾವಾಗ, ಅವಿಭಾಗಂ=ವಿಭಾಗಮಾಡಲಿಕ್ಕೆ ಅಯೋಗ್ಯವಾದುದನ್ನು, ವಿಭಾಗಾಯ=ವಿಭಾಗಕ್ಕಾಗಿ, ನಯತಿ = ಒಯ್ಯುತ್ತಾನೋ, ತದಾ=ಆಗ, ಪರೇಶಸ್ಯ=ಶ್ರೀ ಹರಿಗೆ, ಅಶಕ್ಯಂ=ಮಾಡಲು ಅಶಕ್ಯವಾದುದು, ಕಿಂ=ಯಾವುದಿದೆ? ಹಿ=ಯಾವ ಕಾರಣದ್ದೆಶೆಯಿಂದ, ಇತಿ=ಹೀಗೆ, ಅಭಿಧೀಯತೇ=ಶ್ರುತಿಸ್ಮೃತಿಗಳಿಂದ ಹೇಳಲ್ಪಡುತ್ತದೋ ಆದಕಾರಣ, ಸೂತ್ರದಿಂದಲೂ ಹೀಗೆಯೇ ಹೇಳಲ್ಪಡುತ್ತದೆ.

ತಾ ॥ (1) ಹೇಗೆ ಲೋಕದಲ್ಲಿ ಯಾವುದಾದರೊಂದು ಅದ್ಭುತಕಾರ್ಯವನ್ನು ಮಾಡಿದವನಿಗೆ ಅಂತಹ ಬೇರೆ ಕಾರ್ಯದಲ್ಲಿಯೂ ಕಾರ್ಯಶಕ್ತಿಯೂ ಸಂಭಾವಿಸಲ್ಪಡುತ್ತದೋ, ಹಾಗೆಯೇ ಅತ್ಯಂತಾಘಟಿತವಾದುದನ್ನು ಕೂಡಿಸತಕ್ಕ ಜಗನ್ನಾಥನಿಗೆ ಎಲ್ಲಾ ಕೆಲಸಗಳಲ್ಲಿಯೂ ಶಕ್ತಿ ಸಂಭಾವನೆಯು ಯುಕ್ತವೇ. (2) ಹಾಗಾದರೆ ಈ ಸೂತ್ರದಲ್ಲಿ ಜೀವನಿಗೆ ಅನೇಕತ್ವಾಪತ್ತಿ ಮಾತ್ರವು ಹೇಳಲ್ಪಡುತ್ತದೆ. ಅದಕ್ಕೆ ಪರಮಾತ್ಮಾಧೀನತ್ವವು ಹೇಳಲ್ಪಡುವುದಿಲ್ಲ. ಆದಕಾರಣ ಇದರಿಂದ ಶ್ರೀ ಹರಿಗೆ ಸರ್ವೈಶ್ವರ್ಯವು ಹೇಗೆ ಅವಗತವಾಗುತ್ತದೆಂದರೆ— 'ತಂ ಯಥಾ

**ಯಥೇಶ್ವರಃ ಪ್ರಕುರುತೇ ತಥಾ ತಥಾ ಭವತಿ । ಸೋಽಚಿಂತ್ಯಃ ಪರಮೋ ಗರೀಯಾನ್ ಅಚಿಂತ್ಯಯೋಃ ಶಶಕ್ತ್ಯೈವ ಹ್ಯೇಕೋಽನಯುವವರ್ಜಿತಃ । ಆತ್ಮಾನಂ ಬಹುಧಾ ಕೃತ್ವಾ ಕ್ರೀಡತೇ ಯೋಗಸಂಪದಾ '** ॥ ಹೀಗೆ ಸೂತ್ರೋಪಾತ್ತಗಳಾದ ಶ್ರುತಿಸ್ಮೃತಿಗಳಿಂದ ಹೀಗೆ ಹೇಳಲ್ಪಡುವಪ್ರಯುಕ್ತ ಸೂತ್ರದಿಂದಲೂ ಹೀಗೆಯೇ ಹೇಳಲ್ಪಡುತ್ತದೆ. ಪ್ರತಿಜ್ಞಾಪ್ರಮಾಣಗಳಿಗೆ ಏಕಾರ್ಥತ್ವವು ಆವಶ್ಯಕವು ॥ ೨೬ ॥ ೨೭ ॥ ಸೂ. ೨೭ ॥ ಅಧಿ ೧೩ ॥

**ವ್ಯತಿರೇಕಾಧಿಕರಣವು ಸಮಾಪ್ತವಾಯಿತು.**

---

# ಪೃಥಗಧಿಕರಣವು.

"ಓಂ **ಪೃಥಗುಪದೇಶಾತ್** ಓಂ" ॥ ಸೂ. ॥ ೨೮ ॥

ಜೀವನು ಶ್ರೀ ಪರಮಾತ್ಮನಿಂದ ಭಿನ್ನನೇ, ಅಭಿನ್ನನಲ್ಲ. '**ಭಿನ್ನೋ ಚಿಂತ್ಯಃ ಪರಮೋ ಜೀವಸಂಘಾತ್**' '**ದ್ವಾ ಸುಪರ್ಣಾ**' ಇತ್ಯಾದಿ ಶ್ರುತಿಗಳಿಂದ.

ಈ ಅಧಿಕರಣದಲ್ಲಿ ಜೀವಾತ್ಮನಿಗೆ ಪರಮಾತ್ಮನಿಂದ ಆತ್ಯಂತಿಕ ಭೇದವು ಸಮರ್ಥಿಸಲ್ಪಡುತ್ತದೆ. ಹೇಗೆ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿಂಹಕ್ಕೂ, ದೇವದತ್ತನಿಗೂ ಭೇದವನ್ನು ನಿಶ್ಚೈಸಿಕೊಂಡವನಿಗೆ 'ಸಿಂಹೋ ದೇವದತ್ತಃ' ಎಂದು ವಾಕ್ಯಶ್ರವಣವಾದಾಗ್ಯೂ ಸಿಂಹ ದೇವದತ್ತ ಸ್ವರೂಪಕ್ಕೆ ಐಕ್ಯಪ್ರತಿಪತ್ತಿಯಾಗುವುದಿಲ್ಲವೋ, ಇದು ಗೌಣಪ್ರಯೋಗವೇ ಎಂದು ನಿಶ್ಚೈಸಿಕೊಳ್ಳುತ್ತಾನೋ, ಹಾಗೆಯೇ '**ಅಥಾತೋ ಬ್ರಹ್ಮಜಿಜ್ಞಾಸಾ**'ಎಂದಾರಂಭಿಸಿ **ವ್ಯತಿರೇಕೋ ಗಂಧವತ್** ಎಂಬುವ ಪರ್ಯಂತ ಸೂತ್ರಗಳಿಂದ ಜೀವ-ಬ್ರಹ್ಮರ ಭೇದವನ್ನು ಪ್ರತ್ಯಕ್ಷಾದಿ ಪ್ರಮಾಣಬಲದಿಂದ ಉಪಪಾದಿಸಿದರಿಂದ '**ತತ್ತ್ವಮಸ್ಯಾದಿ**' ಅನಂತ ಶ್ರುತಿಗಳಿಂದಲೂ ಜೀವ-ಬ್ರಹ್ಮ ಭೇದಪ್ರತಿಪತ್ತಿಯು ಹುಟ್ಟಲಿಕ್ಕೆ ಸಮರ್ಥವಲ್ಲ. ಮತ್ತೆ ಶ್ರುತಿಗಳು ಗೌಣಾರ್ಥಗಳೇ ಎಂದು ನಿಶ್ಚಯವು ಆಗುವುದು. ಆದಕಾರಣ ಐಕ್ಯ ಪ್ರಾಪಕವೇ ಇಲ್ಲದಿರುವುದರಿಂದ ಈ ಅಧಿಕರಣವನ್ನು ಆರಂಭಿಸಕೂಡದು, ಎಂದರೆ— ಅಧಿಕಾಶಂಕೆಯನ್ನು ತೋರಿಸುತ್ತಾ ಪೂರ್ವಪಕ್ಷಿಸುತ್ತಾರೆ—

**ಮೂ ॥ ಏವಂ ಸ್ಥಿತೇಽಪಿ ಜೀವೈಕ್ಯಂ ಕೇಚಿದಾಹುಃ ಪರಾತ್ಮನಾ ।**
**ತದ್ಯೋಽಹಮಿತಿಪೂರ್ವಾಭಿಃ ಶ್ರುತಿಭಿಶ್ಚಾನುಮಾಬಲಾತ್ ।**
**ನ ತದ್ಯುಕ್ತಂ ಯತೋ ವಿಷ್ಣುಃ ಪೃಥಗೇವಾಭಿಧೀಯತೇ ॥ ೨೮ ॥**

ಅ ॥ ಏವಂ ಸ್ಥಿತೇಽಪಿ = ಅತೀತ ಗ್ರಂಥಗಳಲ್ಲಿ ಹೇಳಿದ ನ್ಯಾಯದಿಂದ ಜೀವಾತ್ಮ-ಪರಮಾತ್ಮರಿಗೆ ಭೇದವು ನಿಶ್ಚಿತವಾದಾಗ್ಯೂ. ಕೇಚಿತ್=ಕೆಲವರು, ತದ್ಯೋಹಮಿತಿ ಪೂರ್ವಾಭಿಃ= ತದ್ಯೋಹಂ ಸೋಽಸೌ ಇದುಮೊದಲಾದ, ಶ್ರುತಿಭಿಶ್ಚ=ಶ್ರುತಿಗಳಿಂದಲೂ, ಸ್ಮೃತಿಗಳಿಂದಲೂ, ಅನುಮಾ ಬಲಾಚ್ಚ=ಅನುಮಾನದ ಸಾಮರ್ಥ್ಯದ್ದೆಶೆಯಿಂದಲೂ, ಪರಮಾತ್ಮನಾ = ಪರಬ್ರಹ್ಮನಿಂದ, ಜೀವೈಕ್ಯಂ=ಜೀವರಿಗೆ ಐಕ್ಯವನ್ನು, ಆಹುಃ=ಹೇಳುತ್ತಾರೆ. ಯತಃ=ಯಾವಕಾರಣದ್ದೆಶೆಯಿಂದ, ವಿಷ್ಣುಃ=ಶ್ರೀ ಪರಮಾತ್ಮನು, ಪೃಥಗೇವ=ಭಿನ್ನನೇ ಎಂದು, ಅಭಿಧೀಯತೇ=ಶ್ರುತ್ಯಾದಿಗಳಿಂದ ಹೇಳಿಸಿಕೊಳ್ಳಲ್ಪಡುತ್ತಾನೋ, ತತ್=ಆದಕಾರಣ, ತತ್=ಜೀವನಿಗೆ ಪರಬ್ರಹ್ಮನಿಂದ, ಐಕ್ಯವು, ಯುಕ್ತಂ ನ=ಯುಕ್ತವಲ್ಲ.

ತಾ ॥ (1) ಯದ್ಯಪಿ ಭೇದವು ಮೊದಲು ಸಮರ್ಥಿತವಾಗಿದೆ. ಆದಾಗ್ಯೂ ಜೀವನು ಪರಬ್ರಹ್ಮನಿಂದ ಅಭಿನ್ನನೇ. '**ತದ್ಯೋಽಹಂ ಸೋಽಸೌ ಯೋಽಸೌ ಸೋಽಹಂ ತತ್ತ್ವಮಸಿ ಅಹಂ ಬ್ರಹ್ಮಾಸ್ಮಿ**' ಇತ್ಯಾದಿ ಶ್ರುತಿಗಳಿಂದಲೂ, '**ಅಹಂ ಹರಿಃ ಸರ್ವಮಿದಂ ಜನಾರ್ದನೋ ನಾನ್ಯತ್ತತಃ ಕಾರಣಕಾರ್ಯಜಾತಂ । ಈದೃಙ್ ಮನೋಯಸ್ಯ ನ ತಸ್ಯ ಭೂಯೋ ಭವೋದ್ಭವಾ ದ್ವಂದ್ವಗದಾ ಭವಂತಿ**' ಇತ್ಯಾದಿ ಸ್ಮೃತಿಗಳಿಂದಲೂ ಅಭೇದವೇ ಸಿದ್ಧಿಸುತ್ತದೆ. (2) ಈ ಶ್ರುತಿಗಳೂ, ಸ್ಮೃತಿಗಳೂ ಗೌಣಾರ್ಥಕಗಳೆಂದು ಹೇಳಕೂಡದು. ಉಪಕ್ರಮಾದಿಗಳ ಬಲದಿಂದ ಐಕ್ಯದಲ್ಲಿಯೇ ತಾತ್ಪರ್ಯವು ನಿಶ್ಚಿತವಾಗುತ್ತದೆ. ಪ್ರಬಲವಾದ ಬಾಧಕವೂ ಇಲ್ಲ. ಉಪನ್ಯಸ್ತಗಳಾದ ಪ್ರಮಾಣಗಳಾದರೂ ಆವಿದ್ಯಕವಾದ ಮಿಥ್ಯಾಭೇದವಿಷಯಕವಾಗಿಯೂ ಕೂಡುತ್ತವೆ. 'ವಿಮತಃ ಭೇದಃ ಮಿಥ್ಯಾ ಭೇದತ್ವಾತ್ ಚಂದ್ರಭೇದವತ್' ಎಂದು ಮಿಥ್ಯಾತ್ವ ಸಾಧಕವಾದ ಅನುಮಾನವು. (೩) '**ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ**' ಎಂದು ಮುಕ್ತಿಯಲ್ಲಿಯೂ ಭೇದೋಕ್ತಿಯು ಬಾಧಕವು ಎಂದು ಹೇಳಕೂಡದು ಭೇದೋಕ್ತಿಗೆ ಅವಾಂತರ ಮುಕ್ತಿ ವಿಷಯತ್ವವು ಕೂಡುತ್ತದೆ. ಪರಮ ಮುಕ್ತಿಯಲ್ಲಿ ಭೇದವಿದೆ ಎನ್ನುವ ವಿಷಯದಲ್ಲಿ ಪ್ರಮಾಣವಿಲ್ಲ. '**ಯತ್ರತ್ವಸ್ಯ ಸರ್ವಮಾತ್ಮೈವಾಭೂತ್**' '**ವಿಭೇದಜನಕೇ ಜ್ಞಾನೇ ನಾಶಮಾತ್ಯಂತಿಕಂ ಗತೇ । ಆತ್ಮನೋ ಬ್ರಹ್ಮಣೋ ಭೇದಮಸಂತಂ ಕಃ ಕರಿಷ್ಯತಿ । ಅವಿಮುಕ್ತೇಽಸ್ತು ಭೇದಃ ಸ್ಯಾಜ್ಜೀವಸ್ಯ ಪರಮಸ್ಯ ಚ । ತತಃ ಪರಂ ನ ಭೇದೋಽಸ್ತಿ ಭೇದಹೇತೋರಭಾವತಃ ।**' ಇದುಮೊದಲಾದ ಶ್ರುತಿ, ಸ್ಮೃತಿಗಳು ಪರಮ ಮುಕ್ತಿಯಲ್ಲಿ ಜೀವ-ಪರಬ್ರಹ್ಮರಿಗೆ ಭೇದವಿಲ್ಲವೆಂದೇ ತಿಳಿಸುತ್ತವೆ. ಹೀಗೆ ಮಾಯಾವಾದಿಗಳು ಹೇಳುತ್ತಾರೆ. ಆದಕಾರಣ ಆ ಮತವನ್ನು ನಿರಾಕರಿಸುವುದಕ್ಕಾಗಿ ಅಧಿಕರಣಾರಂಭವು ಯುಕ್ತವು. ಏವಂಚ ಜೀವ-ಬ್ರಹ್ಮರಿಗೆ ಐಕ್ಯವೆಂದಾಶಂಕಾಬಂದರೆ— ಜೀವ-ಬ್ರಹ್ಮೈಕ್ಯವು ಯುಕ್ತವಲ್ಲ. ಮತ್ತೆ ಜೀವ-ಬ್ರಹ್ಮರು ಪರಸ್ಪರವಾಗಿ ಭಿನ್ನರೇ ಏಕೆಂದರೆ— ಶ್ರೀ ಹರಿಯು ಜೀವನಿಂದಲೂ, ಜೀವನು ವಿಷ್ಣುವಿನಿಂದಲೂ ಭಿನ್ನನೇ. '**ಭಿನ್ನೋಽಚಿಂತ್ಯಃ ಪರಮೋ ಜೀವಸಂಘಾತ್**' ಇತ್ಯಾದಿ ಶ್ರುತಿಗಳಿಂದಲೂ ಭಿನ್ನನೇ ಎಂದು ಹೇಳಿಸಿಕೊಳ್ಳಲ್ಪಡುತ್ತಾನೆ ॥ ೨೮ ॥

ಹಾಗಾದರೆ ಈ ಶ್ರುತಿ ಸ್ಮೃತಿಗಳು ಅವಿದ್ಯಾಕಲ್ಪಿತ ಭೇದವಿಷಯಕಗಳಾಗಿರುವುದರಿಂದ ತಾತ್ವಿಕಭೇದಪರಗಳಲ್ಲವೆಂದುಕ್ತವಾಗಿದೆ ಎಂದರೆ— ಶ್ರುತ್ಯಾದಿಗಳಿಗೆ ಅತತ್ವಾವೇದಕತ್ವವನ್ನು ನಿರಾಕರಿಸುವೆವು ಎನ್ನುವ ಅಭಿಪ್ರಾಯದಿಂದ ಅಕಲ್ಪಿತ ಭೇದವನ್ನು ಹೇಳತಕ್ಕ ಶ್ರುತಿಯನ್ನುದಾಹರಿಸುತ್ತಾರೆ—

**ಮೂ॥ ಪ್ರಜ್ಞಾನೇತ್ರೋಽಲೋಕ ಇತಿ ಮುಕ್ತೌ ಭೇದೋಽಭಿಧೀಯತೇ ॥ ೨೯ ॥**
**ಏತಮಾನಂದಮಿತ್ಯನ್ಯಾ ಪರಮಂ ಸಾಮ್ಯಮಿತ್ಯಪಿ ।**
**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ॥ ೩೦ ॥**
**ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ।**
**ಉಪಸಂಪದ್ಯತೇ ಜ್ಯೋತಿಃಸ್ವರೂಪೇಣಾಭಿಪದ್ಯತೇ ॥ ೩೧ ॥**
**ತತ್ರ ಪರ್ಯೇತಿ ಜಕ್ಷಂಶ್ಚ ಕ್ರೀಡನ್ನಪಿ ಸದಾ ಸುಖೀ ।**
**ಆಚಕ್ಷತೇ ಮೋ ಪರಂ ಮೋಕ್ಷಂ ಧೀರಾ ಯಂ ಪ್ರವದಂತಿ ತಂ ॥ ೩೨ ॥**
**ಇತ್ಯುಕ್ತ ಆಹ ವಾಗ್ದೇವೀ ಪರಂ ಮೋಕ್ಷಂ ಪ್ರಜಾಪತೇಃ ।**
**ಶಾಖಾಂ ಶಾಖಾಂ ಮಹಾನದ್ಯಃ ಸಂಯಾಂತಿ ಸರಿತಸ್ತಥಾಃ ॥ ೩೩ ॥**

**ಧಾನಾಪೂಪಾಃ ಮಾಂಸಕಾಮಾಃ ಸದಾ ಪಾಯಸಕರ್ದಮಾಃ ।**
**ಯಸ್ಮಿನ್ನಗ್ನಿಮುಖಾಃ ದೇವಾಃ ಸೇಂದ್ರಾಃ ಸಹ ಮರುದ್ಗಣಾಃ ॥ ೩೪ ॥**
**ಈಜಿರೇ ಕ್ರತುಭಿಃ ಶ್ರೇಷ್ಠೈಸ್ತದಕ್ಷರಮುಪಾಸತೇ ।**
**ಪ್ರವಿಶಂತಿ ಪರಂ ದೇವಂ ಮುಕ್ತಾಸ್ತತ್ರೈವ ಭೋಗಿನಃ ॥ ೩೫ ॥**
**ನಿರ್ಗಚ್ಛಂತಿ ಯಥಾ ಕಾಮಂ ಶರೀರೇಣೈವ ಚೋದಿತಾಃ ।**
**ಭೇದದೃಷ್ಟ್ಯಾಭಿಮಾನೇನ ನಿಸ್ಸಂಗೇನಾಪಿ ಕರ್ಮಣಾ ॥ ೩೬ ॥**
**ಕರ್ತೃತ್ವಾತ್ಸಗುಣಂ ಬ್ರಹ್ಮ ಪುರುಷಂ ಪುರುಷರ್ಷಭಂ ।**
**ಸ ಸಂಗತ್ಯ ಪುನಃ ಕಾಲೇ ಕಾಲೇನೇಶ್ವರಮೂರ್ತಿನಾ ।**
**ಜಾತೇಽಗುಣವ್ಯತಿಕರೇ ಯಥಾಪೂರ್ವಂ ಪ್ರಜಾಯತೇ ॥ ೩೭ ॥**

ಅ ॥ (**'ಏಷಃ ಬ್ರಹ್ಮೈಷಪ್ರಜಾಪತಿರಿಂದ್ರಃ'** ಇತ್ಯಾದಿಗಳಿಂದ ಪ್ರಪಂಚವನ್ನು ಅನುವಾದಮಾಡಿ **'ಸರ್ವಂ ತತ್ಪ್ರಜ್ಞಾ ನೇತ್ರಂ'** ಎಂದು ಪ್ರಪಂಚಕ್ಕೆ ಪ್ರಜ್ಞಾಖ್ಯಬ್ರಹ್ಮನೇ ಪ್ರೇರಕನೆಂದು ಹೇಳಿ ನೇತೃನೇತವ್ಯಭಾವವು ಕಲ್ಪಿತವಾಗಿದೆ ಎನ್ನುವ ಆಶಂಕೆಯನ್ನು ಪರಿಹರಿಸುವುದಕ್ಕಾಗಿ **'ಪ್ರಜ್ಞಾ ನೇತ್ರೋ ಲೋಕಃ'** ಎನ್ನುವ ಶ್ರುತಿಯಿಂದ) ಅಲೋಕಃ=ಮುಕ್ತನೂ ಕೂಡ, ಪ್ರಜ್ಞಾನೇತ್ರಃ=ಬ್ರಹ್ಮನೇ ಪ್ರೇರಕನಾಗಿ ಉಳ್ಳವನು, ಇತಿ=ಹೀಗೆ, ಮುಕ್ತೌ=ಮುಕ್ತಿಯಲ್ಲಿಯೂ ಕೂಡ, ಭೇದಃ=ಜೀವಬ್ರಹ್ಮರಿಗೆ ಭೇದವು, ಅಭಿಧೀಯತೇ=ಹೇಳಿಸಿಕೊಳ್ಳಲ್ಪಡುತ್ತದೆ. (ಅಂತೂ ಅವಿದ್ಯಾನಿವೃತ್ತಿಕಾಲೀನ ಪರಮಮುಕ್ತಿಯಲ್ಲಿಯೂ ಇರುವ ಭೇದವು ಅವಿದ್ಯಾಕಲ್ಪಿತವಾಗಲಿಕ್ಕೆ ಯೋಗ್ಯವಾಗುವುದಿಲ್ಲ.) (ಹಾಗಾದರೆ ಮುಕ್ತಿಯಲ್ಲಿ ಅಭೇದವಿದೆ ಎನ್ನುವಲ್ಲಿ ಅನೇಕ ಶ್ರುತಿಗಳೂ ಸ್ಮೃತಿಗಳೂ ಇವೆ. ಆದಕಾರಣ ಇದೊಂದು ಶ್ರುತಿಯು ಮುಕ್ತಿಯಲ್ಲಿ ಭೇದವನ್ನು ಸಾಧಿಸಲಿಕ್ಕೆ ಹೇಗೆ ಸಮರ್ಥವಾದೀತು? ಎಂದರೆ— ಮುಕ್ತಿಯಲ್ಲಿ ಭೇದವನ್ನು ಹೇಳತಕ್ಕ ಅನೇಕ ಶ್ರುತಿ-ಸ್ಮೃತಿಗಳನ್ನು ಉದಾಹರಿಸುತ್ತಾರೆ.) (೧) ಏತಂ ಆನಂದಂ=ಈ ಪೂರ್ಣಾನಂದರೂಪಿಯಾದ ಶ್ರೀಹರಿಯನ್ನು, (ಸಮೀಪ ಹೊಂದಿ) ಇತಿ=ಹೀಗೆ, ಅನ್ಯಾ= **'ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ'** (ತೈತ್ತಿ. ಉಪ. ಅಧ್ಯಾ. ೩ ಮಂ. ೧೪ ಪು. ೧೭೫) ಎನ್ನುವ ಶ್ರುತಿಯು (ಮುಕ್ತನಿಗೆ ಶ್ರೀಹರಿಯಿಂದ ಭೇದವನ್ನು ಹೇಳುತ್ತದೆ. **'ಅಸ್ಮಾಲ್ಲೋಕಾತ್ಪ್ರೇತ್ಯ'** ಎಂದು ಪ್ರಾಕೃತದೇಹರಾಹಿತ್ಯವನ್ನು ಹೇಳಿದರಿಂದ ಇದು ಪರಮಮುಕ್ತಿವಿಷಯಕವೆಂದು ತಿಳಿಯುತ್ತದೆ.) (೨) ಪರಮಂ ಸಾಮ್ಯಂ ಇತ್ಯಪಿ=ಪರಮಸಾಮ್ಯವನ್ನು (ಹೊಂದುತ್ತಾನೆ) ಎನ್ನುವುದೂ ಕೂಡ (ಅಂದರೆ— **'ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ'** ಎನ್ನುವ ಶ್ರುತಿಯೂ ಮುಕ್ತಿಯಲ್ಲಿ ಜೀವನಿಗೆ ಬ್ರಹ್ಮನಿಂದ ಭೇದವನ್ನು ಹೇಳುತ್ತದೆ. ಪುಣ್ಯ, ಪಾಪ, ಅಂಜನಾಖ್ಯವಾದ ಅವಿದ್ಯಾನಿವೃತ್ತಿಯನ್ನು ಹೇಳಿದರಿಂದ ಇದೂ ಪರಮಮುಕ್ತಿವಿಷಯಕವೆಂದು ತಿಳಿಯುತ್ತದೆ.) (**೩**) ಇದಂ ಜ್ಞಾನಂ=ಈ ಜ್ಞಾನವನ್ನು, ಉಪಾಶ್ರಿತ್ಯ=ಆಶ್ರಯಿಸಿ, ಮಮ=ನನ್ನ, ಸಾಧರ್ಮ್ಯಂ=ಸಮಾನಧರ್ಮತ್ವವನ್ನು, ಆಗತಾಃ = ಹೊಂದಿರುತ್ತಾರೆ. ಸರ್ಗೇಽಪಿ=ಸೃಷ್ಟಿಕಾಲದಲ್ಲಿಯೂ, ನೋಪಜಾಯಂತೇ=ಹುಟ್ಟುವುದಿಲ್ಲ. ಪ್ರಲಯೇ=ಪ್ರಲಯಕಾಲದಲ್ಲಿ, ನ ವ್ಯಥಂತಿ ಚ=ನಾಶವನ್ನು ಹೊಂದುವುದಿಲ್ಲ. ಗೀತಾ ಅಧ್ಯಾ. ೧೪. ಶ್ಲೋ. ೨. (ಈ ವಾಕ್ಯದಲ್ಲಿಯೂ 'ಮಮ ಸಾಧರ್ಮ್ಯಮಾಗತಾಃ' ಎನ್ನುವುದರಿಂದ ಭೇದವು ತಿಳಿಯಲ್ಪಡುತ್ತದೆ. ಸರ್ಗಪ್ರಲಯಗಳಲ್ಲಿಯೂ ಉತ್ಪತ್ತಿನಾಶಾಭಾವಗಳನ್ನು ಹೇಳಿದರಿಂದ ಪರಮಮುಕ್ತಿವಿಷಯತ್ವವೂ ತಿಳಿಯಲ್ಪಡುತ್ತದೆ.) (೪)

ಜ್ಯೋತಿಃ=ಪರಂಜ್ಯೋತಿಯನ್ನು, ಉಪಸಂಪದ್ಯತೇ = ಹೊಂದುತ್ತಾನೆ. ಸ್ವರೂಪೇಣ=ಜ್ಞಾನಾನಂದಾತ್ಮಕಸ್ವಸ್ವರೂಪದಿಂದ, ಅಭಿಪದ್ಯತೇ = ವ್ಯಕ್ತನಾಗುತ್ತಾನೆ. ತತ್ರ = ಮುಕ್ತಿಯಲ್ಲಿ, ಜಕ್ಷಂಶ್ಚ=ಭಕ್ಷಿಸುವವನಾಗಿ, ಕ್ರೀಡನ್ನಪಿ=ಕ್ರೀಡಿಸುತ್ತಾ, ಸದಾ=ಯಾವಾಗಲೂ, ಸುಖೀ=ಸುಖವುಳ್ಳವನಾಗಿ, ಪರ್ಯೇತಿ=ತಿರುಗಾಡಿಕೊಂಡು ಇರುತ್ತಾನೆ. (ಇದರಿಂದ '**ಪರಂ ಜ್ಯೋತಿರುಪಸಂಪದ್ಯಸ್ವೇನ ರೂಪೇಣಾಭಿನಿಷ್ಪದ್ಯತೇ । ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ರಮಮಾಣಃ**' ಎನ್ನುವ ಶ್ರುತಿಯನ್ನು ಅರ್ಥತಃ ಅನುವಾದಮಾಡುತ್ತಾರೆ. ಇಲ್ಲಿಯೂ ಸಾಮ್ಯಾಪ್ಯಪ್ರಾಪ್ತ್ಯಾದಿಗಳಿಂದ ಭೇದವು ತಿಳಿಯಲ್ಪಡುತ್ತದೆ. '**ಅಸ್ಮಾಚ್ಛರೀರಾತ್ಸಮುತ್ಥಾಯ ಸ್ವೇನ ರೂಪೇಣಾಭಿನಿಷ್ಪದ್ಯತೇ**' ಎನ್ನುವ ಉಕ್ತಿಯಿಂದ ಪರಮಮೋಕ್ಷವಿಷಯಕತ್ವವೂ ತಿಳಿಯಲ್ಪಡುತ್ತದೆ. (೫) ಧೀರಾಃ=ಜ್ಞಾನಿಗಳು, ಯಂ=ಯಾವುದನ್ನು, ಪ್ರವದಂತಿ=ಹೇಳುತ್ತಾರೋ, ತಂ=ಅದಾವ, ಪರಂ ಮೋಕ್ಷಂ=ಸರ್ವೋತ್ಕೃಷ್ಟವಾದ ಮೋಕ್ಷವನ್ನು, ಮೇ=ನನಗೋಸ್ಕರ, ಆಚಕ್ಷ್ವ = ಹೇಳು. ಇತಿ = ಹೀಗೆ, ಉಕ್ತೇ = ಪ್ರಜಾಪತಿಯಿಂದ ಪ್ರಶ್ನಿಸಲ್ಪಡುತ್ತಿರಲು, ವಾಗ್ದೇವೀ = ವಾಗಭಿಮಾನಿಯಾದ ಲಕ್ಷ್ಮೀದೇವಿಯು, ಪ್ರಜಾಪತೇಃ = ಪ್ರಜಾಪತಿಗೆ, ಪರಂ ಮೋಕ್ಷಂ=ಪ್ರಕೃಷ್ಟಮೋಕ್ಷವನ್ನು, ಆಹ=ಹೇಳಿದಳು. ('**ತಸ್ಯ ಮಧ್ಯೇ ವೇತಸಃ ಪುಣ್ಯಗಂಧಃ ಸಹಸ್ರಶಾಖೋ ವಿಮಲೋ ವಿಭಾತಿ**' ವೃಕ್ಷವಿಶೇಷದ ಅಥವಾ ಜಂಬೂ ವೃಕ್ಷದ) ಶಾಖಾಂ ಶಾಖಾಂ=ಪ್ರತಿಗೆಲ್ಲನ್ನು ಆಶ್ರಯಿಸಿ, ಧಾನಾಪೂಪಾಃ=ಧಾನ್ಯವಿಶೇಷದ ಅಪೂಪವುಳ್ಳ, ಮಾಂಸಕಾಮಾಃ = ಕಾಮ್ಯಮಾನವಾದ ಮಾಂಸವುಳ್ಳ, ಸದಾ = ಯಾವಾಗಲೂ, ಪಾಯಸಕರ್ದಮಾಃ=ಕರ್ದಮಸ್ಥಾನೀಯವಾದ ಪಾಯಸವುಳ್ಳ, ಪರಿತಸ್ರವಾಃ=ಸುತ್ತಮುತ್ತಲೂ ಸುರಿಸತಕ್ಕ, ಮಹಾನದ್ಯಃ=ಮಹಾನದಿಗಳು, ಸಂಯಾಂತಿ=ಹರಿಯುತ್ತವೆ.(ಈ ಮಹಾಭಾರತವಾಕ್ಯದಲ್ಲಿ ಸ್ಪಷ್ಟವಾಗಿಯೇ ಭೇದವು ತೋರುತ್ತದೆ. ಆ ವಾಕ್ಯಕ್ಕೆ ಪರಮಮೋಕ್ಷವಿಷಯತ್ವವನ್ನು ತೋರಿಸುವುದಕ್ಕಾಗಿ 'ಆಚಕ್ಷ್ವ ಮೇ' ಇತ್ಯಾದಿ ಪೂರ್ವವಾಕ್ಯಾರ್ಥವನ್ನು ಸಂಗ್ರಹಿಸಿ ಹೇಳಿದ್ದು.) (೬) ಯಸ್ಮಿನ್=ಯಾವ ಲೋಕದಲ್ಲಿ, ಅಗ್ನಿಮುಖಾಃ=ಅಗ್ನಿಯೇ ಮೊದಲಾಗಿವುಳ್ಳ, ಸೇಂದ್ರಾಃ=ಇಂದ್ರನಿಂದ ಕೂಡಿದ, ಸಹ ಮರುದ್ಗಣಾಃ=ಏಕೋನ ಪಂಚಾಶತ್ ಮರುತ್‌ಗಳ ಸಮೂಹಗಳಿಂದ ಕೂಡಿದ, ದೇವಾಃ = ದೇವತೆಗಳು, ಶ್ರೇಷ್ಠೈಃ = ಶ್ರೇಷ್ಠಗಳಾದ, ಕ್ರತುಭಿಃ=ಯಾಗಗಳಿಂದ, ಈಜಿರೇ=ಯಾಗಮಾಡಿದರು. ತತ್=ಆ, ಅಕ್ಷರಂ=ಪರಬ್ರಹ್ಮನನ್ನು, ಉಪಾಸತೇ=ಉಪಾಸನಾಮಾಡುತ್ತಾರೆ. ಮುಕ್ತಾಃ = ಮುಕ್ತರು, ತತ್ರೈವ = ಪರಮೇಶ್ವರನ ಒಳಗೇನೇ, ಭೋಗಿನಃ=ಭೋಗವುಳ್ಳವರಾಗಿ, ಪರಂ ದೇವಂ=ಶ್ರೀ ಹರಿಯನ್ನು, ಪ್ರವಿಶಂತಿ=ಪ್ರವೇಶಮಾಡುತ್ತಾರೆ. ಪರೇಶೇನೈವ=ಶ್ರೀ ಹರಿಯಿಂದಲೇ, ಚೋದಿತಾಃ=ಪ್ರೇರಿಸಿಕೊಳ್ಳಲ್ಪಟ್ಟವರಾಗಿ, ಯಥಾಕಾಮಂ=ಇಚ್ಛಾನುಸಾರವಾಗಿ, ನಿರ್ಗಚ್ಛಂತಿ=ಹೊರಗೆ ಬರುತ್ತಾರೆ. (೭) ('**ಆದ್ಯಃ ಸ್ಥಿರಚರಾಣಾಂ ಯೋ ವೇದಗರ್ಭಃ ಸಹರ್ಷಿಭಿಃ । ಯೋಗೇಶ್ವರೈಃ ಕುಮಾರಾದ್ಯೈಃ ಸಿದ್ಧೈಃ ಯೋಗಪ್ರವರ್ತಕೈಃ**') ಸಃ=ಚತುರ್ಮುಖನು, ಭೇದದೃಷ್ಟ್ಯಾ = ಜೀವೇಶ್ವರಾದಿಭೇದಜ್ಞಾನದಿಂದಲೂ, ಅಭಿಮಾನೇನ = ಈಶ್ವರನಲ್ಲಿ ಪರಮ ಭಕ್ತಿಯಿಂದಲೂ, ನಿಸ್ಸಂಗೇನಾಪಿ ಕರ್ಮಣಾ=ನಿವೃತ್ತಕರ್ಮದಿಂದಲೂ, ಕರ್ತೃತ್ವಾತ್=ಜಗತ್ಕರ್ತೃತ್ವವಿದ್ದುದರಿಂದ, ಸಗುಣಂ=ಸಾರ್ವಜ್ಞಾದಿಗುಣಗಳಿಂದ ಕೂಡಿದ, ಪುರುಷಂ=ಪರಮಪುರುಷಾಖ್ಯನಾದ, ಪುರುಷರ್ಷಭಂ=ಪುರುಷಶ್ರೇಷ್ಠನಾದ, ಬ್ರಹ್ಮ=ಬ್ರಹ್ಮನನ್ನು, ಸಂಗತ್ಯ=ಮುಕ್ತನಾಗಿ ಪ್ರವೇಶಿಸಿ, ಪುನಃ=ಮತ್ತು, ಕಾಲೇನ = ಕಾಲಾಖ್ಯವಾದ, ಈಶ್ವರಮೂರ್ತಿನಾ = ಪರಮೇಶ್ವರಮೂರ್ತಿಯಿಂದ, ಕಾಲೇ ಜಾತೇ=ಸೃಷ್ಟಿಕಾಲವು ಉಂಟಾಗುತ್ತಿರಲು, ಅಗುಣವ್ಯತಿಕರೇ=ಸತ್ವಾದಿಗುಣಗಳ ವಿಕಾರವಿಲ್ಲದಿರುವ ವಿಷ್ಣುಲೋಕದಲ್ಲಿ, ಯಥಾಪೂರ್ವಂ=ಮೊದಲಿನಂತೆ, ಪ್ರಜಾಯತೇ=ಎಲ್ಲಾ ಮುಕ್ತರಿಗೂ

ಅಧಿಪತಿಯಾಗುತ್ತಾನೆ. (ಚತುರ್ಮುಖನ ಮುಕ್ತಿಯಾಗಿರುವುದರಿಂದಲೇ ಪರಮ ಮುಕ್ತಿತ್ವವು ಸಿದ್ಧವಾಯಿತು. ॥ ೨೯ ॥ ೩೦ ॥ ೩೧ ॥ ೩೨ ॥ ೩೩ ॥ ೩೪ ॥ ೩೫ ॥ ೩೬ ॥ ೩೭ ॥

**ಮೂ ॥ ಋಚಾಂ ತ್ವಃ ಪೋಷಮಾಸ್ತೇ ಚ ಪರೇಣ ಪ್ರೇರಿತಾಃ ಸದಾ ॥ ೩೮ ॥**
**ಯತ್ಕಾಮಸ್ತತ್ಸೃಜತ್ಯದ್ಧ್ಯಾತ್ಮನಾ ತತ್ಸೃಜತ್ಯಪಿ ।**
**ಸಹೈವ ಬ್ರಹ್ಮಣಾ ಕಾಮಾನ್ ಭುಂಕ್ತೇ ನಿಸ್ತೀರ್ಣತದ್ಗುಣಃ ॥ ೩೯ ॥**
**ದುಃಖಾದೀಂಶ್ಚ ಪರಿತ್ಯಜ್ಯ ಜಗದ್ವ್ಯಾಪಾರವರ್ಜಿತಃ ।**
**ಭುಂಕ್ತೇ ಭೋಗಾನ್ಸದೈವೇಚ್ಛಾನಿತ್ಯಾದ್ಯಾಗಮಮಾನತಃ ॥ ೪೦ ॥**
**ಮುಕ್ತಸ್ಯ ಭೇದಾವಗತೇಃ ಕಥಮೇವ ಹ್ಯಭಿನ್ನತಾ ।**
**ಜೀವೇಶಯೋಃ [ನಾನುಮಾ ಚ ತದಭೇದಂ ಪ್ರಮಾಪಯೇತ್] ॥**
**॥ ೪೧ ॥**

ಅ ॥ (೧) ತ್ವಃ=ಒಬ್ಬಬ್ರಹ್ಮನು, ಋಚಾಂ=ಋಕ್ಕುಗಳ, ಪೋಷಂ = ಪುಷ್ಟಿಯನ್ನು ಮಾಡುತ್ತಾ, ಆಸ್ತೇ=ಇದ್ದಾನೆ, (ಇದರಿಂದ, '**ಋಚಾಂತ್ವಃ ಪೋಷಮಾಸ್ತೇ ಪುಪುಷ್ವಾನ್ ಗಾಯತ್ರಂ ತ್ವೋ ಗಾಯತಿ ಶಕ್ವರೀಷು' 'ಬ್ರಹ್ಮಾತ್ವೋವದತಿ ಜಾತವಿದ್ಯಾಂ ಯಜ್ಞಸ್ಯ ಮಾತ್ರಾಂ ವಿಮಿಮೀತಉತ್ವಃ**'= (ಋ. ಅಷ್ಟ. ೮. ಅಧ್ಯಾ ೨. ವ. ೨೪.) ಮುಕ್ತಿಸ್ಥಾನದಲ್ಲಿ ಒಬ್ಬಬ್ರಹ್ಮನು ಋಕ್ಕುಗಳನ್ನು ಪುಷ್ಟೀಕರಿಸುತ್ತಾ ಇದ್ದಾನೆ. ಮತ್ತೊಬ್ಬಬ್ರಹ್ಮನು ಶಕ್ವರೀಛಂದಸ್ಕಋಕ್ಕುಗಳಲ್ಲಿ ಆರೂಢವಾದ ಗಾಯತ್ರನಾಮಕ ಸಾಮವನ್ನು ಗಾನಮಾಡುತ್ತಾನೆ. ಇನ್ನೊಬ್ಬ ಬ್ರಹ್ಮನು ಪೌರುಷೇಯ ವಿದ್ಯೆಯನ್ನು ಹೇಳುತ್ತಿರುತ್ತಾನೆ. ಮತ್ತೊಬ್ಬಬ್ರಹ್ಮನು ವಿಷ್ಣುವಿನ ರೂಪವಿಶೇಷವನ್ನೇ ಧ್ಯಾನಮಾಡುತ್ತಾಇರುತ್ತಾನೆ. ಇಲ್ಲಿಯೂ ಭೇದವು ಸ್ಪಷ್ಟವಾಗಿಯೇ ತೋರುತ್ತದೆ. ಬ್ರಹ್ಮಬಾಹುಲ್ಯವು ಶ್ರುತವಾಗಿರುವುದರಿಂದ ಪರಮ ಮೋಕ್ಷತ್ವವೂ ತಿಳಿಯುತ್ತದೆ.) (೨) ಪರೇಣ=ಶ್ರೀಪರಮಾತ್ಮನಿಂದ, ಸದಾ=ಯಾವಾಗಲೂ, ಪ್ರೇರಿತಾಃ=ಪ್ರೇರಿಸಿಕೊಳ್ಳಲ್ಪಡುತ್ತಾರೆ. (ಇದರಿಂದ '**ಸವಾ ಏಷ ಬ್ರಹ್ಮನಿಷ್ಠ ಇದಂ ಶರೀರಂ ಮರ್ತ್ಯಮತಿಸೃಜ್ಯ ಬ್ರಹ್ಮಾಭಿಸಂಪದ್ಯ ಬ್ರಹ್ಮಣಾ ಪಶ್ಯತಿ**' ಇತ್ಯಾದಿ ಶ್ರುತಿಗಳನ್ನು '**ಯಥೇಷ್ಟಂ ಪರಿವರ್ತಂತೇ ತಸ್ಯೈವಾನುಗ್ರಹೇರಿತಾಃ**' ಇತ್ಯಾದಿಸ್ಮೃತಿಗಳನ್ನು ಇಟ್ಟುಕೊಳ್ಳತಕ್ಕದು.) (೩) ಯತ್ಕಾಮಃ=ಯದ್ವಿಷಯಕ ಇಚ್ಛೆಯುಳ್ಳವನೋ, ತತ್=ಅದನ್ನು, ಅದ್ಧ್ಯೇವ=ನಿಶ್ಚಯವಾಗಿಯೇ, ಸೃಜತಿ=ಸೃಷ್ಟಿಸುತ್ತಾನೆ. ತದಪಿ=ಅದನ್ನೂ ಕೂಡ, ಆತ್ಮನಾ=ಪರಮೇಶ್ವರಾನುಗ್ರಹದಿಂದಲೇ, ಸೃಜತಿ=ಸೃಷ್ಟಿಮಾಡುತ್ತಾನೆ. (ಇದರಿಂದ '**ನ ಹಾಸ್ಯ ಕರ್ಮ ಕ್ಷೀಯತೇ ಅಸ್ಮಾದ್ಧ್ಯೇವಾತ್ಮನೋ ಯದ್ಯತ್ಕಾಮಯತೇ ತತ್ತತ್ಸೃಜತೇ**' ಎನ್ನುವ ಶ್ರುತಿಯನ್ನು ಇಟ್ಟುಕೊಳ್ಳಬೇಕು. ಇಲ್ಲಿ ಈಶ್ವರನಿಂದ ಜೀವನಿಗೆ ಭೇದವು ಸ್ಪಷ್ಟವೇತೋರುತ್ತದೆ. ಕರ್ಮವು ಅಕ್ಷಯವಾಗುತ್ತದೆಂದು ಹೇಳಿರುವುದರಿಂದ ಪರಮ ಮುಕ್ತಿತ್ವವೂ ತಿಳಿಯಲ್ಪಡುತ್ತದೆ.) (೪) ಬ್ರಹ್ಮಣಾ=ಪರಬ್ರಹ್ಮನಿಂದ, ಸಹೈವ=ಕೂಡಿಕೊಂಡೇ, ಕಾಮಾನ್=ಕಾಮಿತಾರ್ಥಗಳನ್ನು ಭುಂಕ್ತೇ = ಅನುಭವಿಸುತ್ತಾನೆ. ಇದರಿಂದ '**ಸೋಽಶ್ನುತೇ ಸರ್ವಾನ್ ಕಾಮಾನ್ಸಹ. ಬ್ರಹ್ಮಣಾವಿಪಶ್ಚಿತಾ**' (ತೈತ್ತಿ. ಉ. ಅಧ್ಯಾ. ೨. ಮ. ೨. ಪು. ೧೨೩.) ಎನ್ನುವ ಶ್ರುತಿಯನ್ನು ಇಟ್ಟುಕೊಳ್ಳಬೇಕು.) (೫) ನಿಸ್ತೀರ್ಣತದ್ಗುಣಃ=ದಾಟಲ್ಪಟ್ಟ ಹೃದ್ಗುಣಗಳಾದ ದುಃಖಾದಿಗಳುಳ್ಳವನಾಗಿ (ಶ್ರೀ ಪರಬ್ರಹ್ಮನ ದಾಸನಾಗುತ್ತಾನೆ.) (ಇದರಿಂದ '**ತೀರ್ಣೋಹಿ ತದಾ ಸರ್ವಾನ್ ಶೋಕಾನ್ ಹೃದಯಸ್ಯ ಭವತಿ**' ಎನ್ನುವ ಶ್ರುತಿಯನ್ನು ಇಟ್ಟುಕೊಳ್ಳಬೇಕು. ಇಲ್ಲಿ ಸರ್ವ

ಶೋಕತರಣವನ್ನು ಹೇಳಿರುವುದರಿಂದ ಪರಮ ಮುಕ್ತಿತ್ವವು ತಿಳಿಯಲ್ಪಡುತ್ತದೆ.) (೬) ದುಃಖಾದೀಂಶ್ಚ=ದುಃಖಮೊದಲಾದವುಗಳನ್ನು, ಪರಿತ್ಯಜ್ಯ=ಬಿಟ್ಟು, (ಆನಂದವನ್ನು ಅನುಭವಿಸುತ್ತಾ ಇರುತ್ತಾನೆ. ಇದರಿಂದ '**ಜ್ಯೋತಿರ್ಮಯೇಷು ದೇಹೇಷು ಸ್ವೇಚ್ಛಯಾ ವಿಶ್ವತೋಕ್ಷಿಣಃ। ಭುಂಜತೇ ಸುಸುಖಾನ್ಯೇವ ನ ದುಃಖಾದೀನ್ ಕದಾಚನ**' ಇದುಮೊದಲಾದ ಬ್ರಹ್ಮವೈವರ್ತವಾಕ್ಯವನ್ನು ಇಟ್ಟುಕೊಳ್ಳಬೇಕು. ಇಲ್ಲಿಯೂ ಬಹುವಚನದಿಂದ ಭೇದವೂ ದುಃಖಾದ್ಯಭಾವದಿಂದ ಪರಮಮುಕ್ತಿತ್ವವೂ ತಿಳಿಯಲ್ಪಡುತ್ತದೆ.) (೭) ಜಗದ್ವ್ಯಾಪಾರವರ್ಜಿತಃ=ಸೃಷ್ಟಿ ಮೊದಲಾದ ಜಗದ್ವ್ಯಾಪಾರದಿಂದ ವಿರಹಿತನಾಗಿ, ಸದೈವ=ಯಾವಾಗಲೂ, ಉಚ್ಚಾನ್=ಉತ್ತಮಗಳಾದ, ಭೋಗಾನ್=ಭೋಗಗಳನ್ನು, ಭುಂಕ್ತೇ=ಅನುಭವಿಸುತ್ತಾನೆ. (ಇದರಿಂದ '**ಸ್ವಾಧಿಕಾನಂದಸಂಪ್ರಾಪ್ತೌ ಸೃಷ್ಟ್ಯಾದಿವ್ಯಾಪೃತಿಷ್ವಪಿ। ಮುಕ್ತಾನಾಂ ನೈವ ಕಾಮಃ ಸ್ಯಾದನ್ಯಾನ್ಕಾಮಾಂಸ್ತು ಭುಂಜತೇ**' ಎನ್ನುವ ವಾರಾಹವಚನವನ್ನು ಇಟ್ಟುಕೊಳ್ಳಬೇಕು. ಇಲ್ಲಿಯೂ ಐಶ್ವರ್ಯಮರ್ಯಾದೆಯಿಂದ ಭೇದವು ಅವಗತವಾಗುತ್ತದೆ.) (ಸ್ವಪಕ್ಷಸಾಧನವನ್ನುಪಸಂಹಾರ ಮಾಡುತ್ತಾರೆ.) ಇತ್ಯಾದ್ಯಾಗಮಮಾನತಃ = ಇದುಮೊದಲಾದ ಆಗಮರೂಪಪ್ರಮಾಣದ್ವೇಶಿಯಿಂದ, ಮುಕ್ತಸ್ಯ=ಮುಕ್ತನಿಗೆ, (ಪರಬ್ರಹ್ಮನದ್ವೇಶಿಯಿಂದ) ಭೇದಾವಗತೇಃ=ಭೇದವು ತಿಳಿಯುವುದರಿಂದ, ಜೀವೇಶಯೋಃ=ಜೀವೇಶ್ವರರಿಗೆ, ಅಭಿನ್ನತಾ=ಅಭೇದವು, ಕಥಮೇವ ಹಿ=ಹೇಗೆ ಕೂಡುವುದು? ॥ ೩೮ ॥ ೩೯ ॥ ೪೦ ॥ ೪೧ ॥

ಈಗ ಪರಪಕ್ಷವನ್ನು ನಿರಾಕರಿಸುತ್ತಾ 'ಶ್ರುತಿಭಿಶ್ಚಾನುಮಾ ಬಲಾತ್' ಎಂದು ಶ್ರುತಿಸಾಹಾಯ್ಯದಿಂದ ಕೂಡಿದ ಅನುಮಾನವು ಯಾವುದು ಪರರಿಂದ ಉಕ್ತವಾಗಿದೆಯೋ, ಅದನ್ನು ನಿರಾಕರಿಸುವುದಕ್ಕಾಗಿ ಉಪಕ್ರಮಿಸುತ್ತಾರೆ—

**ಮೂ॥ [ಜೀವೇಶಯೋ]ರ್ನಾನುಮಾ ಚ ತದಭೇದಂ ಪ್ರಮಾಪಯೇತ್ ।**
**ಮಿಥ್ಯೈವ ಭೇದೋ ವಿಮತೋ ಭೇದತ್ವಾಚ್ಚಂದ್ರಭೇದವತ್ ।**
**ಇತಿ ಚೇತ್ಸಾಧ್ಯಧರ್ಮೋಽಯಂ ಸನ್ನಸನ್ವಾ ನ ವೋಭಯಂ ॥ ೪೨ ॥**
**ಯದಿ ಸನ್ನಪಸಿದ್ಧಾಂತಃ ಸ ಏವಾಸನ್ನಿತೀರಿತೇ ।**
**ನೋಭಯಂ ಚೇನ್ನಸಿದ್ಧಂ ತದಿತಿ ಮಾನಸ್ಯ ದೂಷಣಂ ॥ ೪೩ ॥**

ಅ॥ ಅನುಮಾ ಚ=ಅನುಮಾನವೂ ಕೂಡ, ತದಭೇದಂ=ಜೀವೇಶ್ವರರಿಗೆ ಅಭೇದವನ್ನು, ನ ಪ್ರಮಾಪಯೇತ್ = ಯಥಾರ್ಥಜ್ಞಾನವಿಷಯವಾದುದನ್ನಾಗಿ ಮಾಡಲಾರದು. ಅಥವಾ ಅನುಮಾ ಚ=ಜೀವೇಶ್ವರಾಭೇದದಲ್ಲಿ ಪರೋಪನ್ಯಸ್ತಗಳಾದ ಎಲ್ಲಾ ಅನುಮಾನಗಳು ಶ್ರುತಿಸ್ಮೃತಿಗಳೂ ಕೂಡ (ಅದು ಹೇಗೆಂದರೆ— ಅನುಮಾನವನ್ನು ಈಗ ಅನುವಾದಮಾಡುತ್ತಾರೆ.) ವಿಮತಃ ಭೇದಃ=ವಿವಾದವಿಷಯವಾದ ಎಲ್ಲಾ ಭೇದವೂ (ಜೀವಬ್ರಹ್ಮರ ಭೇದವು) ಮಿಥ್ಯೈವ=ಅನಿರ್ವಚನೀಯವೇ, ಭೇದತ್ವಾತ್=ಭೇದತ್ವವಿದ್ದುದರಿಂದ, ಚಂದ್ರಭೇದವತ್=ಅಂಗುಲ್ಯವಷ್ಟಬ್ಧನೇತ್ರದಿಂದ ತೋರತಕ್ಕ ಚಂದ್ರಭೇದದಂತೆ, (ಭೇದಕ್ಕೆ ಮಿಥ್ಯಾತ್ವವು ಸಿದ್ಧವಾದರೆ ಅಭೇದವೇ ಪಾರಮಾರ್ಥಿಕವಾಗಿ ಸಿದ್ಧಿಸುವುದು.) ಇತಿ ಚೇತ್=ಹೀಗೆ ಹೇಳಿದರೆ, ಅಯಂ ಸಾಧ್ಯಧರ್ಮಃ=ಜೀವ-ಬ್ರಹ್ಮ ಭೇದಕ್ಕೆ ಮಿಥ್ಯಾತ್ವರೂಪವಾದ ಸಾಧ್ಯಧರ್ಮವು, ಸನ್ ವಾ=(ತಮ್ಮ ಮತಾನುಸಾರವಾಗಿ) ಸತ್ತಾದುದೋ, ಅಸನ್ ವಾ = (ಬೌದ್ಧಮತಾನುಸಾರವಾಗಿ) ಅಸತ್ತಾದುದೋ, ಉಭಯಂ ನ ವಾ = (ಪ್ರತಿವಾದಿಮತಾನುಸಾರವಾಗಿ) ಸದಸದ್ವಿಲಕ್ಷಣವೋ, (ಇವುಗಳಲ್ಲಿ

೧ನೇದ್ದನ್ನು ದೂಷಿಸುತ್ತಾರೆ.) ಯದಿ ಸನ್=ಈ ಸಾಧ್ಯಧರ್ಮವು ಸತ್ತೆಂದು ಹೇಳುವುದಾದರೆ, ಅಪಸಿದ್ಧಾಂತಃ = (ಮಾಯಾವಾದಿಗೆ) ಅಪಸಿದ್ಧಾಂತವು ಬರುವುದು. (ಅಸತ್ ಎನ್ನುವ ೨ನೇ ಕಲ್ಪದಲ್ಲಿ ದೂಷಣವನ್ನು ಹೇಳುತ್ತಾರೆ.) ಸ ಏವ ಅಸನ್ನಿತಿ = ಮಿಥ್ಯಾತ್ವರೂಪಸಾಧ್ಯಧರ್ಮವು ಅಸತ್ತೆಂದು, ಈರಿತೇ=ಹೇಳಿದರೂ, ಸ ಏವ=ಅಪಸಿದ್ಧಾಂತವೇ. (ಅಂದರೆ ಮಿಥ್ಯಾತ್ವಕ್ಕೆ ಅಸತ್ವ ವಿದ್ದರೆ ಜೀವಬ್ರಹ್ಮಭೇದಕ್ಕೆ ಸತ್ವವೇ ಬರುವುದು. ಅಸತ್ತು ಪ್ರಮಾಣವಿಷಯವೆಂದು ಅವರ ಪಕ್ಷ ವಲ್ಲ.) (ಸದಸದ್ವಿಲಕ್ಷಣವೆನ್ನುವ ಅಂತ್ಯಪಕ್ಷವನ್ನು ನಿರಾಕರಿಸುತ್ತಾರೆ.) ನೋಭಯಂ ಚೇತ್= (ಜೀವಬ್ರಹ್ಮಭೇದಕ್ಕೆ ಮಿಥ್ಯಾತ್ವರೂಪಸಾಧ್ಯಧರ್ಮವು) ಸತ್ತು ಅಲ್ಲ, ಅಸತ್ತೂ ಅಲ್ಲ, ಸದಸದ್ವಿ ಲಕ್ಷಣವೆಂದು ಹೇಳುವುದಾದರೆ, ತತ್=ಸದಸದ್ವಿಲಕ್ಷಣತ್ವವು, ನ ಸಿದ್ಧಂ = (ಜೀವಬ್ರಹ್ಮಭೇದ ಮಿಥ್ಯಾತ್ವದಲ್ಲಿಯೂ ಬೇರೆ ಕಡೆಯಲ್ಲಿಯೂ) ಸಿದ್ಧವೇ ಆಗಲಿಲ್ಲ. (ದೂಷಣಾಂತರವನ್ನೂ ಹೇಳುತ್ತಾರೆ.) ಇತಿ=ಹೀಗೆ, ಮಾನಸ್ಯ ದೂಷಣಂ = ಮಿಥ್ಯಾಶಬ್ದಾರ್ಥವನ್ನು ವಿಕಲ್ಪಿಸಿಯೂ ಹೀಗೆಯೇ ದೂಷಣವನ್ನು ಹೇಳತಕ್ಕದು. (ಅಂದರೆ ಮಿಥ್ಯೆಯೆಂದರೆ ಅಸತ್ವವೆಂದು ಹೇಳುವು ದಾದರೆ ಅಪಸಿದ್ಧಾಂತವು. ಅನಿರ್ವಾಚ್ಯತ್ವವೆಂದು ಹೇಳುವುದಾದರೆ ಅಪ್ರಸಿದ್ಧವಿಶೇಷಣತ್ವವು. ಸತ್ವಾಭಾವವೆಂದು ಹೇಳಿದರೆ ಅದೇ ಅಸತ್ವಪದಾರ್ಥವಾಗಿರುವುದರಿಂದ ಅಪಸಿದ್ಧಾಂತವೇ.) (ಅಥವಾ ಇದೇ ಮೂಲದಿಂದ ದೋಷಾಂತರವನ್ನು ಹೇಳುತ್ತಾರೆ.) ಇತಿ = ಹೀಗೆ, ಮಾನಸ್ಯ= ಲಿಂಗಕ್ಕೆ, ದೂಷಣಂ=ದೂಷಣವನ್ನು ಹೇಳಬೇಕು. (ಹೇಗೆಂದರೆ— ಭೇದತ್ವ ಹೇತುವೂ ಕೂಡ ೧ ಸತ್ತೋ, ೨ ಅಸತ್ತೋ, ೩ ಸದಸತ್ತೋ, ೪ ಅನಿರ್ವಾಚ್ಯವೋ, ೧ನೇ ಕಲ್ಪದಲ್ಲಿ ಅದ್ವೈತ ವಾದಿಗೆ ಅಸಿದ್ಧಿಯು. ದೃಷ್ಟಾಂತದಲ್ಲಿ ಸಾಧನವೈಕಲ್ಯವು. ೨ ನೇ ೩ನೇ ಕಲ್ಪಗಳಲ್ಲಿ, ವಾದಿ ಪ್ರತಿವಾದಿಗಳಿಬ್ಬರ ಮತದಲ್ಲಿಯೂ, ದೃಷ್ಟಾಂತದಲ್ಲಿ ಸಾಧನವೈಕಲ್ಯವು. ೪ನೇ ಕಲ್ಪದಲ್ಲಿ ದ್ವೈತಿ ಗಳ ಮತದಲ್ಲಿ ಎಲ್ಲಿಯೂ ಅನಿರ್ವಚನೀಯ ಭೇದವನ್ನು ಅಂಗೀಕರಿಸದೆ ಇರುವುದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವು.) ಅಥವಾ ಇತಿ ಮಾನಸ್ಯ ದೂಷಣಂ=ಜೀವಃ ಬ್ರಹ್ಮಣೋ ನ ಭಿದ್ಯತೇ ಆತ್ಮತ್ವಾತ್ ಬ್ರಹ್ಮವತ್- ಇದು ಮೊದಲಾದ ಅನುಮಾನಾಂತರಗಳಲ್ಲಿಯೂ ಹೀಗೆಯೇ ವಿಕಲ್ಪಿಸಿಕೊಂಡು ದೂಷಣಾಂತರವನ್ನು ಹೇಳಬೇಕು. ಅಥವಾ ಅದ್ವೈತಿಗಳಿಂದ ಪ್ರಯುಕ್ತಗಳಾದ ವಿರುದ್ಧವಿಷಯಕಗಳಾದ ಎಲ್ಲಾ ಅನುಮಾನಗಳಲ್ಲಿಯೂ ಹೀಗೆಯೇ ಸಾಧ್ಯ ವನ್ನೂ ಹೇತುವನ್ನೂ ವಿಕಲ್ಪಿಸಿ ದೋಷವನ್ನು ಹೇಳಬೇಕು. ॥ ೪೨ ॥ ೪೩ ॥

ಅನಿರ್ವಚನೀಯತ್ವವು ಎಲ್ಲಿಯೂ ಸಿದ್ಧವಾಗಲಿಲ್ಲವೆಂದುಕ್ತವಾಗಿದೆ. ಆದರೆ ಪಕ್ಷೀಕೃತ ವಾದ ಭೇದದಲ್ಲಿ ಆಗಲೀ, ಪ್ರಪಂಚದಲ್ಲಿ ಆಗಲೀ, ಅವಿದ್ಯೆಯಲ್ಲಿ ಆಗಲೀ, ಶುಕ್ತಿರಜತಾದಿಗಳಲ್ಲಿ ಆಗಲೀ ಅನಿರ್ವಚನೀಯತ್ವವು ಪ್ರಮಾಣದಿಂದ ಸಾಧಿಸಲಿಕ್ಕೆ ಶಕ್ಯವಾಗುವುದು, ಎಂದಾ ಶಂಕಿಸಿದರೆ—

**ಮೂ ॥ ನ ಚ ಮಾನಾಂತರೇಣೈತಚ್ಛಕ್ಯಂ ಸಾಧಯಿತುಂ ಕ್ವಚಿತ್ ।**
**ಅನುಮಾನೇನ ಚೇತ್ಸೈವ ಹ್ಯನವಸ್ಥಾ ಭವಿಷ್ಯತಿ ॥ ೪೪ ॥**
**ನ ಚಾಗಮಸ್ತದರ್ಥೋಽಸ್ತಿ ನಾಸದಾಸೀನ್ನ ತದ್ವದೇತ್ ।**
**ಪರಿಶೇಷಾದನಿರ್ವಾಚ್ಯಂ ಯದಿ ಸಿದ್ಧ್ಯೇತ್ಪರಾತ್ಮನಃ ।**
**ಅನಿರ್ವಾಚ್ಯತ್ವಮೇವ ಸ್ಯಾತ್ಪರಿಶಿಷ್ಟೋ ಹ್ಯಸೌ ತದಾ ॥ ೪೫ ॥**

೮ ॥ ಮಾನಾಂತರೇಣ= (ಭೇದಮಿಥ್ಯಾತ್ವವು ಸತ್ತ್ವೋ ಅಸತ್ತ್ವೋ ಇತ್ಯಾದಿರೀತಿಯಿಂದ ವಿಕಲ್ಪಿಸಿ ದೂಷಣವನ್ನು ಹೇಳುವುದಾದರೆ ಅಂತರಶಬ್ದಕ್ಕೆ ವಿಶೇಷವೆಂದರ್ಥವು. ಮಿಥ್ಯಾ ಶಬ್ದಾರ್ಥವನ್ನು ವಿಕಲ್ಪಿಸಿ ದೂಷಣವನ್ನು ಹೇಳುವುದಾದರೆ ಆಗ ಬೇರೆ ಎಂದರ್ಥವು.) ವ್ಯತಿರೇಕಿ ಹೇತ್ವಾದಿರೂಪವಾದ ಪ್ರಮಾಣವಿಶೇಷದಿಂದ, ಅಥವಾ, ಮತ್ತೊಂದುಪ್ರಮಾಣದಿಂದ, ಏತತ್= ಅನಿರ್ವಾಚ್ಯತ್ವವನ್ನು, ಸಾಧಯಿತುಂ = ಸಾಧಿಸುವುದಕ್ಕಾಗಿ, ಕ್ವಚಿತ್=ಭೇದವೇ ಮೊದಲಾದ ಹಿಂದೆಹೇಳಿದ ಯಾವ ಸ್ಥಳಗಳಲ್ಲಿಯೂ, ನ ಚ ಶಕ್ಯಂ=ಶಕ್ಯವಾಗಲಾರದು. (ಅದು ಹೇಗೆಂದರೆ ಯಾವುದಾದರೊಂದು ಪದಾರ್ಥಕ್ಕೆ ಅನಿರ್ವಾಚ್ಯತ್ವವಿಷಯದಲ್ಲಿ ಪ್ರತ್ಯಕ್ಷವನ್ನಾಗಲೀ, ಅನುಮಾನ ವನ್ನಾಗಲೀ, ಆಗಮವನ್ನಾಗಲೀ, ಅರ್ಥಾಪತ್ತಿಯನ್ನಾಗಲೀ, ಉಪಮಾನವನ್ನಾಗಲೀ, ಅಭಾವ ವನ್ನಾಗಲೀ ಪ್ರಮಾಣವನ್ನಾಗಿ ಹೇಳಬೇಕು. ಎಂದು ವಿಕಲ್ಪಗಳನ್ನು ಮನಸ್ಸಿನಲ್ಲಿಟ್ಟು ಪರರು ಅನುಮಾನಕ್ಕೆ ಪ್ರಾಚುರ್ಯವನ್ನು ಅಂಗೀಕರಿಸಿರುವುದರಿಂದ ಅನುಮಾನವನ್ನು ಈಗ ನಿರಾಕರಿ ಸುತ್ತಾರೆ) ಅನುಮಾನೇನ=ವಿಮತಮನಿರ್ವಾಚ್ಯಂ ಬಾಧ್ಯತ್ವಾತ್=ಇತ್ಯಾದ್ಯನುಮಾನದಿಂದ, (ಸಾಧ್ಯತೇ) ಚೇತ್ = (ಶುಕ್ತಿರಜತಾದಿಗಳಿಗೆ ಅನಿರ್ವಾಚ್ಯತ್ವವು) ಸಾಧಿಸಲ್ಪಡುವು ದಾದರೆ, ಅನವಸ್ಥಾ=ಅನವಸ್ಥೆಯು, ಭವಿಷ್ಯತಿ=ಬರುವುದು. (ಹೇಗೆಂದರೆ—) ಸೈವ ಹಿ=ಅಪ್ರಸಿದ್ಧ ವಿಶೇ ಷಣತ್ವವನ್ನು ಪರಿಹರಿಸತಕ್ಕ ಅನುಮಾನಗಳ ಪರಂಪರೆಯೆ ದ್ವಾರವಾಗಿರತಕ್ಕದು ಎನ್ನುವುದು ಪ್ರಸಿದ್ಧವೇಆಗಿದೆ. (ಆಗಮವನ್ನು ತಿರಸ್ಕರಿಸುತ್ತಾರೆ.) ತದರ್ಥಃ=ಅನಿರ್ವಚನೀಯಾರ್ಥಕವಾದ, ಆಗಮಃ=ಆಗಮವು, ನ ಚಾಸ್ತಿ=ಇಲ್ಲವೇ ಇಲ್ಲ, (ಹಾಗಾದರೆ '**ನಾಸದಾಸೀನ್ನೋ ಸದಾಸೀ ತ್ತದಾನೀಂ**' ಎನ್ನುವ ಆಗಮವು ಇದೆ ಎಂದಾಶಂಕಿಸಿದರೆ—) ನಾಸದಾಸೀತ್=ನಾಸದಾಸೀತ್ ಎನ್ನುವ ಆಗಮವು, ತತ್=ಅನಿರ್ವಾಚ್ಯವಸ್ತುವನ್ನು, ನ ವದೇತ್=ಹೇಳಲಾರದು. (ಅಂದರೆ ಪದದಲ್ಲಿರುವ ಶಕ್ತ್ಯಾದಿವೃತ್ತಿತಾತ್ಪರ್ಯ ಬಲದಿಂದ ಪ್ರತೀತವಾದ ಪದಾರ್ಥಸಂಸರ್ಗವೇ ವಾಕ್ಯಾ ರ್ಥವು. ಬೇರೆಯಾವುದೂ ಅನುಪಪತ್ತಿ ಲಭ್ಯವಾದುದು ಅಲ್ಲ. ಇಲ್ಲಿ ಪ್ರಲಯಕಾಲದಲ್ಲಿ ಸತ್ ಮೊದಲಾದವುಗಳ ಅಭಾವಮಾತ್ರವು ವಾಕ್ಯದಿಂದ ತೋರುತ್ತದೆ ಪುನಃ ಅನಿರ್ವಾಚ್ಯವಸ್ತುವು ತೋರುವುದಿಲ್ಲ. ಆದಪ್ರಯುಕ್ತ ಈ ಆಗಮವು ಅನಿರ್ವಾಚ್ಯವಸ್ತುವನ್ನು ಹೇಳುವುದಿಲ್ಲ.) (ಈ ಆಗ ಮವು ಅನಿರ್ವಚನೀಯರೂಪವಾದ ಅರ್ಥವನ್ನು ಪ್ರತಿಪಾದಿಸದಿದ್ದರೂ ಈ ವಚನಬಲದಿಂದ ಅನಿರ್ವಚನೀಯವಾದ ಅರ್ಥವು ಸಿದ್ಧಿಸುವುದು. ಹೇಗೆಂದರೆ— ಪ್ರಲಯಕಾಲದಲ್ಲಿ ಸದಸತ್ತು ಗಳ ಅಭಾವವು ಪ್ರತಿಪಾದಿಸಲ್ಪಡುತ್ತದೆ. ಅದರ ಸಾಮರ್ಥ್ಯದಿಂದ ಆಗ ಇರತಕ್ಕ ಅರ್ಥವೂ ಸತ್ತಲ್ಲ ಅಸತ್ತಲ್ಲ, ಎಂದು ತಿಳಿಯುತ್ತಿರಲು ಪರಿಶೇಷದಿಂದ ಅನಿರ್ವಾಚ್ಯವೆಂದೇ ತಿಳಿಯುತ್ತದೆ. ಆಗ ವಸ್ತುವೇ ಇಲ್ಲವೆಂದು ಹೇಳಕೂಡದು. ಪುನಃ ಸೃಷ್ಟಿಯೇ ಕೂಡದೆಹೋಗಬೇಕಾಗುವುದು. ಮತ್ತು ಅಭಾವವನ್ನು ಅಂಗೀಕರಿಸಲೇಬೇಕು.) (ಪರಿಶೇಷವು ಅರ್ಥಾಪತ್ತಿಯೋ ಅನುಮಾನವೋ ಎಂದಾಶಂಕಿಸುತ್ತಾರೆ.) ಪರಿಶೇಷಾತ್ = ಪರಿಶೇಷಪ್ರಮಾಣದಿಂದ, ಅನಿರ್ವಾಚ್ಯಂ ಯದಿ ಸಿಧ್ಯೇತ್=ಅನಿರ್ವಾಚ್ಯವಾದ ವಸ್ತುವು ಸಿದ್ಧಿಸುವುದು ಎಂದು ಹೇಳುವುದಾದರೆ (ಇಲ್ಲಿ ಸದಸ ಚ್ಛಬ್ದಗಳಿಗೆ ಪ್ರತೀತಗಳಾದ ಅರ್ಥಗಳನ್ನೇ ಇಟ್ಟುಕೊಳ್ಳುವುದಾದರೆ ಇದಾಗುತ್ತಿತ್ತು. ಪ್ರತೀತ ಅರ್ಥಗಳೇ ಅಲ್ಲ. ಸತ್, ಅಸತ್ ಶಬ್ದಗಳು ಪ್ರತ್ಯಕ್ಷ, ಅಪ್ರತ್ಯಕ್ಷ ಪಂಚಮಹಾಭೂತಪರ ಗಳಾಗಿವೆ. '**ಮೂರ್ತಾಮೂರ್ತವ್ಯತೀತತ್ವಾತ್ ನ ಸನ್ನೈವಾಸದುಚ್ಯತೇ । ಮೂರ್ತಂ ಸದವಗಮ್ಯತ್ವಾದಜ್ಞೇಯತ್ವಾದಸತ್ಪರಂ । ಪುಂಸಾಮುಖ್ಯಾದಿಗಮ್ಯತ್ವಾತ್ಸರ್ವವೇದ ಪ್ರಸಿದ್ಧತಃ । ವಿಲಕ್ಷಣಂ ಸದಸತೋರ್ಭಗವಾನ್ವಿಷ್ಣುರವ್ಯಯಃ**' । ಮತ್ತು '**ಅನಾದಿ ಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ**' । ಇತ್ಯಾದಿಗಳಲ್ಲಿ ಸದಸಚ್ಛಬ್ದಗಳು

ಪಂಚಮಹಾಭೂತಪರಗಳೆಂದು ಸಮರ್ಥಿತಗಳಾಗಿವೆ. ಏತಕ್ಕೆ ಹೀಗೆ ಇಟ್ಟುಕೊಳ್ಳಬೇಕೆಂದರೆ— ಪ್ರತೀತಾರ್ಥವನ್ನು ಇಟ್ಟುಕೊಂಡರೆ ಅನಿಷ್ಟವದೆ ಎನ್ನುತ್ತಾರೆ. ಪರಾತ್ಮನ ಏವ=ಸತ್ತೆಂದಂಗೀಕೃತನಾದ ಪರಮಾತ್ಮನಿಗೇನೇ, ಅನಿರ್ವಾಚ್ಯತ್ವಂ ಸ್ಯಾತ್=ಅನಿರ್ವಾಚ್ಯತ್ವವು ಬರಬೇಕಾಗುವುದು (ಏಕೆಂದರೆ—) ಸದಸತ್ತುಗಳ ನಿಷೇಧಸಾಮರ್ಥ್ಯದಿಂದ ಸರ್ವಕಾರ್ಯಗಳಿಗೆ ಲಯವಾದ ಕಾಲದಲ್ಲಿ ಅವಶಿಷ್ಟನಾದುದಕ್ಕೆ ಅನಿರ್ವಾಚ್ಯತ್ವವನ್ನು ಒಪ್ಪಬೇಕು.) ಅಸೌ=ಈ ಹರಿಯು, ಹಿ= ಯಾವ ಕಾರಣದ್ದೆಶೆಯಿಂದ, ತದಾ=ಪ್ರಲಯಕಾಲದಲ್ಲಿ, ಪರಿಶಿಷ್ಟಃ=ನಾಶವಿಲ್ಲದೆ ಅವಶಿಷ್ಟನಾಗಿದ್ದಾನೋ, (ಆದಕಾರಣ ಶ್ರೀಹರಿಗೆ ಅನಿರ್ವಾಚ್ಯತ್ವವು ಬರಬೇಕಾದೀತು.) ॥ ೪೪ ॥ ೪೫ ॥

(1) ಯದ್ಯಪಿ ಪ್ರಲಯಕಾಲದಲ್ಲಿ ಶ್ರೀಹರಿಯು ಇದ್ದೇ ಇದ್ದಾನೆ. ಆದಾಗ್ಯೂ 'ತಮ ಆಸೀತ್' ಇತ್ಯಾದಿ ಸನ್ನಿಹಿತ ವಾಕ್ಯದ್ದೆಶೆಯಿಂದ ಅವಿದ್ಯಾಖ್ಯವಾದ ತಮಸ್ಸು ಬುದ್ಧಿಸನ್ನಿಹಿತವಾಗಿದೆ. ತತ್ಸಂಬಂಧವಾದ ಬುದ್ಧಿಯಲ್ಲಿ ಪರಿಶೇಷಪ್ರಮಾಣವೂ ಕೂಡ ತಮಸ್ಸಿಗೇನೇ ಅನಿರ್ವಾಚ್ಯತ್ವವನ್ನು ಪ್ರತಿಪಾದಿಸುತ್ತದೆಂದು ಹೇಳಕೂಡದು. '**ಆನೀದವಾತಂ**' ಎನ್ನುವ ವಾಕ್ಯದಿಂದ ಬ್ರಹ್ಮನೂ ಬುದಿ ಸನ್ನಿಹಿತನಾಗಿದ್ದಾನೆ. ಹಾಗಾದರೆ ಬ್ರಹ್ಮನಿಗೆ 'ಸತ್ಯಂಜ್ಞಾನಂ' ಎನ್ನುವ ವಾಕ್ಯದಿಂದ ಸತ್ಯತ್ವವು ಅವಗತವಾಗಿರುವುದರಿಂದ ಅನಿರ್ವಾಚ್ಯತ್ವವಿಷಯದಲ್ಲಿ ಬಾಧಕವಿದೆ ಎಂದರೆ— ತಮ ಆಸೀತ್ ಎನ್ನುವುದರಿಂದ ತಮಸ್ಸಿಗೂ ಸತ್ವವು ಅವಗತವಾಗುವುದರಿಂದ ಈ ಬಾಧಕವು ಅಲ್ಲಿಯೂ ಸಮಾನವಾಗಿದೆ. ತಮಸ್ಸಿನಲ್ಲಿ ವ್ಯಾವಹಾರಿಕ ಸತ್ವವೆಂದರೆ ಬ್ರಹ್ಮನಿಗೂ ವ್ಯಾವಹಾರಿಕ ಸತ್ಯತ್ವವೆಂದು ಏಕೆ ಆಗಲಾರದು. (2) ಮತ್ತು ಯಾವಾಗಲೂ ತಮಸ್ಸು ಅನಿರ್ವಾಚ್ಯವಾಗಿರುವುದರಿಂದ ಈ ವ್ಯಾಖ್ಯಾನದಲ್ಲಿ ತದಾನೀಂ ಎನ್ನುವುದೂ ವ್ಯರ್ಥವು. (3) **ನತಂ ವಿದಾಥ ಯ ಇಮಾ ಜಜಾನಾನ್ಯದ್ಯುಷ್ಮಾಕಮಂತರಂ ಬಭೂವ । ನೀಹಾರೇಣ ಪ್ರಾವೃತಾ ಜಲ್ಪ್ಯಾ ಚಾಸುತೃಪ ಉಕ್ಥಶಾಸಶ್ಚರಂತಿ । ತ ಇಮೇ ಸತ್ಯಾಃ ಕಾಮಾಃ ಅನೃತಾಪಿಧಾನಾಃ ।** (ಋಗ್ವೇದ. ಅಷ್ಟಕ. ೮. ಅಧ್ಯಾಯ. ೩. ವರ್ಗ. ) ಇದು ಮೊದಲಾದ ಆಗಮವು ಅಜ್ಞಾನಕ್ಕೆ ಅನಿರ್ವಾಚ್ಯತ್ವದಲ್ಲಿ ಪ್ರಮಾಣವೆಂದಾಶಂಕಿಸಿದರೆ—

**ಮೂ ॥ ನ ಚಾನ್ಯ ಆಗಮಸ್ತತ್ರ ಸದಸತ್ಪ್ರತಿಯೋಗಿನಿ ॥ ೪೬ ॥**
**ನ ಚ ಪ್ರತ್ಯಕ್ಷಮತ್ರಾಸ್ತಿ ನ ಚಾರ್ಥಾಪತ್ತಿರಿಷ್ಯತೇ ॥**
**ಬಾಧಾಯೋಗಾತ್ಸತ ಇತಿ ಬಾಧಾಭಾವತ ಏವ ಹಿ ॥ ೪೭ ॥**
**ಇಷ್ಟಾಪತ್ತಿರ್ನ ಹಿ ಭ್ರಾಂತಾವಪಿ ಬಾಧೋವ (ಽಧಿ) ಗಮ್ಯತೇ ।**
**ವಿಷಯಸ್ಯ ಕುತೋ ಬಾಧೋ ವಿದ್ಯಮಾನಂ ಹಿ ಬಾಧ್ಯತೇ ॥ ೪೮ ॥**
**ನ ಹಿ ವಂಧ್ಯಾಸುತೋ ಬಾಧ್ಯೋ ಯಜ್ಞದತ್ತೋ ಹಿ ಬಾ(ವ)ಧ್ಯತೇ॥**
**ಬಾಧಾಯೋಗಾತ್ಸತ ಇತಿ ವ್ಯಾಪ್ತಿರೇಷಾ ಕ್ವದೃಶ್ಯತೇ ॥ ೪೯ ॥**

ಅ ॥ ಸದಸತ್ಪ್ರತಿಯೋಗಿನಿ=ಸದಸತ್ತುಗಳೇ ಪ್ರತಿಯೋಗಿಯಾಗಿಉಳ್ಳ, ತತ್ರ=ಅನಿರ್ವಾಚ್ಯವಾದ ಅರ್ಥದಲ್ಲಿ, ಅನ್ಯಃ ಆಗಮಃ=ಬೇರೆ ಆಗಮವು, ನ ಚ=ಪ್ರಮಾಣವಾಗುವುದಿಲ್ಲ. (ಅಂದರೆ ಅನ್ಯಾನೃತ ಶಬ್ದಗಳಿಂದ ಅನಿರ್ವಚನೀಯಾಜ್ಞಾನವನ್ನು ಹೇಳಿದರಿಂದ ಪ್ರಮಾಣವಿಲ್ಲದಿರುವುದು ಹೇಗೆಂದರೆ— ಯಾವುದು ಸತ್ತಲ್ಲವೋ ಅಸತ್ತೂ ಅಲ್ಲವೋ ಅದು ಅನಿರ್ವಾಚ್ಯವು ಇಲ್ಲಿ ಅದನ್ನು ಪ್ರತಿಪಾದಿಸತಕ್ಕ ಶಬ್ದವಿಲ್ಲ. ಅನೃತಾದಿಶಬ್ದವು ಅಜ್ಞಾನಾದಿಮಾತ್ರಾರ್ಥಕವಾಗಿದೆ.) (ಪ್ರತ್ಯಕ್ಷವನ್ನು ತಿರಸ್ಕರಿಸುತ್ತಾರೆ.) ಅತ್ರ=ಅನಿರ್ವಾಚ್ಯತ್ವವಿಷಯದಲ್ಲಿ, ಪ್ರತ್ಯಕ್ಷಂ=

ಪ್ರತ್ಯಕ್ಷಪ್ರಮಾಣವು, ನ ಚ ಅಸ್ತಿ=ಇಲ್ಲವೇ ಇಲ್ಲ. (ಇದು ಅನಿರ್ವಾಚ್ಯವೆಂದು ಯಾವನೊಬ್ಬ ಲೌಕಿಕನಾಗಲೀ ಪರೀಕ್ಷಕನಾಗಲೀ ಚಕ್ಷುರಾದಿಗಳಿಂದ ನೋಡುವುದಿಲ್ಲ.) (ಅರ್ಥಾಪತ್ತಿಯನ್ನು ತಿರಸ್ಕರಿಸುತ್ತಾರೆ.) ಅರ್ಥಾಪತ್ತಿಃ=ಅರ್ಥಾಪತ್ತಿಯು, (ಪ್ರಾಮಾಣಿಕರಿಂದ) ನ ಚ ಇಷ್ಯತೇ= ಅನುಮಾನದ್ವೇಶಿಯಿಂದ ಪ್ರತ್ಯೇಕವಾಗಿ ಅಂಗೀಕರಿಸಲ್ಪಡುವುದಿಲ್ಲ. (ಅನುಮಾನವಾದರೂ ಅಪ್ರಸಿದ್ಧವಿಶೇಷಣವೆಂದು ಮೊದಲೇ ನಿರಸ್ತವಾಗಿದೆ) ಆಕಾಶಾದಿ ಜಗತ್ತಾಗಲೀ ಶುಕ್ತಿರಜತಾದಿ ಗಳಾಗಲೀ ಸತ್ತಾಗಿದ್ದರೆ ಆಗ ಸತ್ತಿಗೆ ಬಾಧವಿಲ್ಲದಿರುವುದರಿಂದ ಬಾಧಿಸಲ್ಪಡಲಾರದು. ಸತ್ತಾದ ಆತ್ಮನಿಗೆ ಬಾಧವಿಲ್ಲವಷ್ಟೆ, ಅಸತ್ತಾಗಿದ್ದರೆ ಅಸತ್ತಿಗೆ ಪ್ರತೀತಿಯು ಕೂಡದಿರುವುದರಿಂದ ತೋರ ದೇನೇ ಹೋಗಬೇಕಾಗುವುದು. ಗೋವಿನಂತೆ ಮನುಷ್ಯನಲ್ಲಿ ಕೋಡು ತೋರುವುದಿಲ್ಲವಷ್ಟೆ. ಆದಕಾರಣ ಬಾಧಪ್ರತೀತಿಗಳು ಕೂಡದಿರುವುದರಿಂದ ಅನಿರ್ವಾಚ್ಯತ್ವವು ತಿಳಿಯಲ್ಪಡುತ್ತದೆ. ಎಂದರೆ— ಸತಃ=ಸತ್ಪದಾರ್ಥಕ್ಕೆ, ಬಾಧಾಯೋಗಾತ್=ಬಾಧವು ಕೂಡದಿರುವುದರಿಂದ, ಅಸ ತ್ಪದಾರ್ಥಕ್ಕೆ ಪ್ರತೀತಿಯು ಕೂಡದಿರುವುದರಿಂದ ಖ್ಯಾತಿಬಾಧಾನ್ಯಥಾನುಪಪತ್ತಿ ರೂಪವಾದ ಅರ್ಥಾಪತ್ತಿಯು ಅನಿರ್ವಾಚ್ಯತ್ವವನ್ನು ತಿಳಿಸಿಕೊಡುತ್ತದೆಂದು ಹೇಳಲಿಕ್ಕೆ ಬರುವುದಿಲ್ಲ. ಆಕಾಶಾದಿಗಳಿಗೆ ಸತ್ಯತ್ವದಲ್ಲಿಯೂ ಶುಕ್ತಿರಜತಾದಿಗಳಿಗೆ ಅಸತ್ವದಲ್ಲಿಯೂ ಅನುಪಪತ್ತಿಯಿಲ್ಲ.) (ಆಕಾಶಾದಿಜಗತ್ತೂ ಸತ್ತಾದರೆ ಆಗ ಬಾಧವು ಬಾರದೆ ಹೋಗಬೇಕಾಗುವುದು ಎಂದುಕ್ತವಾಗಿದೆ ಎಂದರೆ) ಬಾಧಾಭಾವತ ಏವ=ಆಕಾಶಾದಿ ಜಗತ್ತಿಗೆ ಬಾಧಾಭಾವದಿಂದಲೇ ಅಂದರೆ— ಸತ್ವ ಏದ್ದರೆ ಬಾಧವು ಬಾರದೆ ಹೋಗಬೇಕಾಗುವುದು ಎನ್ನುವ ಆಪಾದನವು, ಇಷ್ಟಾಪತ್ತಿಃ=ಇಷ್ಟಾ ಪಾದಾನವು, ಹಿ=ನೇಹ ನಾನಾಸ್ತಿ ಎನ್ನುವ ಶ್ರೌತ ನಿಷೇಧರೂಪವಾದ ಬಾಧವು ಇದೆ ಎಂತ ಹೇಳ ಕೂಡದು. ಅದು ಮೊದಲೇ ನಿಷಿದ್ಧವಾಗಿದೆ ಎಂದು ಪ್ರಸಿದ್ಧವು (ವಿಮತಂ ಬಾಧ್ಯಂ ದೃಶ್ಯ ತ್ವಾತ್ ಎಂದು ಆಕಾಶಾದಿ ಜಗತ್ತಿನಲ್ಲಿ ಬಾಧ್ಯತ್ವವು ಪ್ರಮಿತವಾಗಿದೆ ಎಂದರೆ) ಭ್ರಾಂತಾವಪಿ= ಭ್ರಾಂತಿಯಲ್ಲಿಯೂಕೂಡ, ಬಾಧಃ = ಬಾಧವು, ನ ಹಿ ಅವಗಮ್ಯತೇ = ತಿಳಿಯಲ್ಪಡುವುದಿಲ್ಲ. (ಆದಕಾರಣ ದೃಷ್ಟಾಂತವು ಸಾಧ್ಯವಿಕಲವು.) (ಹೇಗೆಂದರೆ— ಜ್ಞಾನಕ್ಕೆ ಬಾಧವೋ ವಿಷಯಕ್ಕೆ ಬಾಧವೋ, ೧ನೇದ್ದು ಕೂಡಲಾರದು. ಅಧಿಷ್ಠಾನಜ್ಞಾನ ನಾಶ್ಯತ್ವರೂಪವಾದ ಪರಾಭಿಮತವಾದ ಬಾಧವು ಸ್ವಭಾವತಃ ವಿನಶ್ವರವಾದಜ್ಞಾನದಲ್ಲಿ ಇಲ್ಲ. ಪರಮತದಲ್ಲಿ ಜ್ಞಾನವು ಸಾಕ್ಷಿರೂಪವಾಗಿ ರುವುದರಿಂದ ವಿನಾಶವು ಕೂಡಲಾರದು.) (೨ನೇದ್ದನ್ನು ತಿರಸ್ಕರಿಸುತ್ತಾರೆ.) ವಿಷಯಸ್ಯ=ವಿಷ ಯಕ್ಕೆ, ಬಾಧಃ=ಬಾಧವು, ಕುತಃ=ಯಾವುದರಿಂದ? (ಯಾವುದರಿಂದಲೂ ಆಗಲಾರದು.) (ಏಕೆಂದರೆ, ೧ ಶುಕ್ತ್ಯಾದಿವಿಷಯವೆಂದು ಅಭಿಮತವೋ ೨ ರಜತಮೊದಲಾದುದು ವಿಷಯವೆಂದು ಅಭಿಮತವೋ, ೧ನೇದ್ದರಲ್ಲಿ ಹೇತುವನ್ನುಹೇಳುತ್ತಾರೆ.) ವಿದ್ಯಮಾನಂ = ಯಥಾರ್ಥಜ್ಞಾನವು ಹುಟ್ಟಿದಮೇಲೆಯೂ ಅನುಸರಿಸಿಕೊಂಡು ಇರುವುದು, ನ ಹಿ ಬಾಧ್ಯತೇ=ಬಾಧಿಸಲ್ಪಡುವುದಿಲ್ಲ. ಇದ್ದದ್ದಕ್ಕೂ ಬಾಧ ಹೇಳುವುದಾದರೆ ಆತ್ಮನಿಗೂ ಬಾಧವು ಬರಬೇಕಾಗುವುದು.) (೨ನೇ ಕಲ್ಪ ದಲ್ಲಿ ಹೇತುವನ್ನು ಹೇಳುತ್ತಾರೆ.) ವಿದ್ಯಮಾನಂ ಹಿ=ಯಾವುದು ಮೊದಲು ಇರತಕ್ಕುದೋ ಅದೇ, ಬಾಧ್ಯತೇ=ಯಾವುದರಿಂದಲಾದರೂ, ನಾಶಹೊಂದಲ್ಪಡುತ್ತದೆ. (ಅವಿದ್ಯಮಾನವಾದು ದಲ್ಲ. ಶುಕ್ತಿರಜತ ಮೊದಲಾದುದಾದರೂ ಅವಿದ್ಯಮಾನವೇ, ಆದುದರಿಂದ ಅದಕ್ಕೆ ನಾಶ್ಯ ತ್ವವು ಕೂಡದಿರುವುದರಿಂದ ತದ್ವಿಷಯಕವಾದ ಬಾಧವು ಸುತರಾಂ ಅಯುಕ್ತವು.) (ಅಸತ್ತಿಗೆ ನಾಶ್ಯತ್ವವಿಲ್ಲ. ಮತ್ತೆ ವಿದ್ಯಮಾನವಾದುದಕ್ಕೇನೇ ಎನ್ನುವಲ್ಲಿ ದೃಷ್ಟಾಂತಗಳನ್ನು ಹೇಳುತ್ತಾರೆ.) ವಂಧ್ಯಾಸುತಃ=ಬಂಜೆಯ ಮಗನು, ನ ಹಿ ಬಾಧ್ಯಃ = ಬಾಧಿಸಲ್ಪಡಲಾರನು. ಯಜ್ಞದತ್ತಃ= ಯಜ್ಞದತ್ತನು, ಬಾಧ್ಯತೇ ಹಿ=ಬಾಧಿಸಲ್ಪಡುತ್ತಾನಷ್ಟೆ. ತಥಾಚ ಶುಕ್ತಿರಜತಂ ನ ನಾಶ್ಯಂ

ಅಸತ್ವಾತ್ ಯತ್ ಅಸತ್ ತತ್ ನ ನಾಶ್ಯಂಯಥಾ ವಂಧ್ಯಾಸುತಃ ಅಥವಾ ಯತ್ ನಾಶ್ಯಂ ನ ತತ್ ಅಸತ್ ಯಥಾ ಯಜ್ಞದತ್ತಃ=ಶುಕ್ತಿರಜತವು ನಾಶ್ಯವಲ್ಲ, ಅಸತ್ವವಿದ್ದಪ್ರಯುಕ್ತ ಯಾವುದು ಅಸತ್ತೋ ಅದು ನಾಶ್ಯವಲ್ಲ, ವಂಧ್ಯಾಸುತನಂತೆ, ಅಥವಾ ಯಾವುದು ನಾಶ್ಯವೋ ಅದು ಅಸತ್ತಲ್ಲ, ಯಜ್ಞದತ್ತನಂತೆ ಶುಕ್ತಿರಜತಾದಿಗಳಿಗೆ ಬಾಧವನ್ನು ಅಂಗೀಕರಿಸದೆ ಇದ್ದರೆ ಲೌಕಿಕ ವೈದಿಕ ವ್ಯವಹಾರ ವಿರೋಧವು. ಅಪಸಿದ್ಧಾಂತವೂ ಬರಬೇಕಾಗುವುದರಿಂದ ಸರ್ವಥಾ ಬಾಧವನ್ನು ಅಂಗೀಕರಿಸಬೇಕಾಗುತ್ತಿರಲು, ಅದನ್ನು ದೃಷ್ಟಾಂತೀಕರಿಸಿ ಆಕಾಶಾದಿಗಳಿಗೂ ಬಾಧವು ಸಿದ್ಧವಾದರೆ ಸತ್ತಿಗೆ ಬಾಧವು ಕೂಡದಿರುವುದರಿಂದ ಸತ್ವವು ಕೂಡುವುದಿಲ್ಲ, ಎಂದಾಶಂಕಿಸಿದರೆ)— ಸತಃ=ಸತ್ತಿಗೆ, ಬಾಧಾಯೋಗಾತ್=ಬಾಧವು ಕೂಡದಿರುವುದರಿಂದ, ಬಾಧ್ಯಮಾನವಾದ ಈ ಜಗತ್ತು ಸತ್ತಲ್ಲ ಎನ್ನುವ ಅನುಮಾನದಲ್ಲಿ, ಇತ್ಯೇಷಾ ವ್ಯಾಪ್ತಿಃ='ಯತ್ಸತ್ ತನ್ನಬಾಧ್ಯತೇ' ಈ ವ್ಯಾಪ್ತಿಯು, ಕ್ವದೃಶ್ಯತೇ=ಎಲ್ಲಿ ಕಾಣಲ್ಪಡುತ್ತದೆ?

**ತಾ ॥ ನ್ಯಾಯಸುಧಾ**— (1) ಅನ್ಯಥಾ ವಿಜ್ಞಾತವಾದುದಕ್ಕೆ ಸಮ್ಯಕ್ ವಿಜ್ಞಾನಗೋಚರತ್ವರೂಪವಾದ ಬಾಧವನ್ನು ನಾವು ಅಂಗೀಕರಿಸುವೆವು. ಆ ಬಾಧವು ಭ್ರಾಂತಿಯಲ್ಲಿದ್ದಂತೆಯೇ ಆಕಾಶಾದಿಗಳಲ್ಲಿಯೂ ಇದ್ದೇ ಇದೆ. ಕ್ಷಣಿಕತ್ವ ಬ್ರಹ್ಮ ಪರಿಣಾಮತ್ವಾದಿ ರೂಪದಿಂದ ತಿಳಿಯಲ್ಪಟ್ಟದ್ದು ಜಗತ್ತಿಗೆ ಸ್ಥಾಯಿತ್ವಾದಿರೂಪದಿಂದ ಅವಗತವಾಗುತ್ತದೆ. ಅಧಿಷ್ಠಾನ ಯಾಥಾತ್ಮ್ಯಜ್ಞಾನನಾಶ್ಯತ್ವರೂಪಬಾಧ್ಯತ್ವವನ್ನೇ ಮೊದಲು ನಿರಾಕರಿಸಿದ್ದು, ನಮಗೆ ಅಭಿಮತವಾದ ಅನ್ಯಥಾ ವಿಜ್ಞಾತವಾದುದಕ್ಕೆ ಸಮ್ಯಕ್ ವಿಜ್ಞಾನ ಗೋಚರತ್ವರೂಪವಾದ ಬಾಧ್ಯತ್ವವನ್ನೂ ಸಾಧಿಸಿದರೆ ಸಿದ್ಧಸಾಧನತ್ವವು ಬರುವುದು. ಅಂತಹ ಬಾಧ್ಯತ್ವದಿಂದ ಆಕಾಶಾದಿಗಳಲ್ಲಿ ಸತ್ವವಿಲ್ಲವೆನ್ನುವುದು ಕೂಡುವುದಿಲ್ಲ. 'ಯತ್ಸತ್ ತನ್ನ ಬಾಧ್ಯತೇ' ಎನ್ನುವ ವ್ಯಾಪ್ತಿಯೇ ಸಿದ್ಧವಾಗಲಿಲ್ಲ. ಆತ್ಮನು ಸತ್ಯನಾದಾಗ್ಯೂ ಅವನಿಗೆ ಅನ್ಯಥಾ ವಿಜ್ಞಾತಸ್ಯ ಸಮ್ಯಕ್‌ವಿಜ್ಞಾತತ್ವಲಕ್ಷಣಬಾಧ್ಯತ್ವವು ಉಭಯರಿಗೂ ಸಿದ್ಧವಾಗಿದೆ. ಜ್ಞಾನನಿವರ್ತ್ಯತ್ವರೂಪವಾದ ಪರಾಭಿಮತವಾದ ಬಾಧ್ಯತ್ವವನ್ನು ಪ್ರಪಂಚದಲ್ಲಿ ನಾವು ಒಪ್ಪುವುದಿಲ್ಲ. ನಮಗೆ ಅಭಿಮತವಾದ ಅನ್ಯಥಾ ವಿಜ್ಞಾತಸ್ಯ ಇತ್ಯಾದಿಗಳಿಂದ ಹೇಳಿದ ಬಾಧ್ಯತ್ವವು ಆತ್ಮನಲ್ಲಿಯೂ ಇರುವುದರಿಂದ ಸತ್ವಾಭಾವಸಾಧಕವಾಗಲಾರದು. ॥ ೪೬ ॥ ೪೭ ॥ ೪೮ ॥ ೪೯ ॥

ಹೀಗೆ ಬಾಧವು ವಿನಾಶರೂಪವೆನ್ನುವುದನ್ನು ಸಿದ್ಧೀಕರಿಸಿ ಶುಕ್ತಿರಜತಾದಿಗಳಲ್ಲಿಯೂ, ಆಕಾಶಾದಿಗಳಲ್ಲಿಯೂ, ಬಾಧಕ್ಕೆ ಅಸಿದ್ಧಿಯು ಹೇಳಲ್ಪಟ್ಟದೆ. ಈಗ ಅಸಿದ್ಧಿಯನ್ನೇ ವಿವರಿಸುವುದಕ್ಕಾಗಿ ಬಾಧಸ್ವರೂಪವನ್ನು ಪರನ ಹತ್ತಿರ ಪ್ರಶ್ನಿಸುತ್ತಾರೆ.

**ಮೂ ॥ ಕಶ್ಚಾಯಂ ಬಾಧಉದ್ದಿಷ್ಟೋ ನ ಹಿ ನಾಶೋಽಸತೋ ಭವೇತ್ ।**
**ನಿವೃತ್ತಿಶ್ಚಾಪ್ರವೃತ್ತಸ್ಯ ಕಥಮೇವೋಪಪದ್ಯತೇ ॥ ೫೦ ॥**
**ನಾಸೀದಸ್ತಿ ಭವಿಷ್ಯಚ್ಚ ತದಿತಿ ಜ್ಞಾನಮೇಯತಾ ।**
**ಯದಿ ಬಾಧಸ್ತದಾಽಸತ್ವಂ ತೇನೈವಾಂಗೀಕೃತಂ ಪುನಃ ॥ ೫೧ ॥**

**ಅ ॥** ಬಾಧಃ ಉದ್ದಿಷ್ಟಃ=ಆಕಾಶಾದಿಗಳಿಗೂ ಶುಕ್ತಿರಜತಾದಿಗಳಿಗೂ, ಸತ್ವಾಭಾವವು ಸಿದ್ಧಿಯಾಗುವುದಕ್ಕಾಗಿ ೧ ಯಾವ ಬಾಧವು ಉದ್ದಿಷ್ಟವಾಗಿದೆಯೋ, ಕಶ್ಚಾಯಂ=ಇದು ಯಾವುದು? (ಜ್ಞಾನದಿಂದ ವಿನಾಶವೋ, ೨ ತಿರೋಭಾವಾದಿರೂಪ ನಿವೃತ್ತಿಯೋ, ೩ ಅಥವಾ ನಾಸೀತ್ ನಾಸ್ತಿ 'ನ ಭವಿಷ್ಯತಿ ಎಂದು ಕಾಲತ್ರಯ ಸತ್ತಾ ನಿಷೇಧವೋ, ೧ನೇದ್ದನ್ನು ದೂಷಿಸುತ್ತಾರೆ.) ಅಸತಃ=ಅಸತ್ತಿಗೆ, ನಾಶಃ=ನಾಶವು, ನ ಹಿ ಭವೇತ್=ಆಗಲಾರದಷ್ಟೆ. (ಅಸದೇವ

ರಜತಂ ಪ್ರತ್ಯಭಾತ್ ಎಂದು ಮುಂದೆ ಬರುವ ಅನುಭವದ ಬಲದಿಂದ ಶುಕ್ತಿರಜತವು **ಅಸತ್ತೇ,** ಎಂದು **ಹೇಳಬೇಕು.** ಅಸತ್ತಿಗೆ ಶಶವಿಷಾಣದಂತೆ ವಿನಾಶವು ಕೂಡುವುದಿಲ್ಲ. ಸ್ವರೂಪ ನಿವೃತ್ತಿಯೇ ವಿನಾಶವು. ವ್ಯಾಹತಿಯು ಬರುವುದರಿಂದ ಅಸತ್ತಿಗೆ ಸ್ವರೂಪವೇ ಇಲ್ಲ. ಆಕಾಶಾದಿಗಳು ನಿತ್ಯಗಳಾಗಿರುವುದರಿಂದ ಅವುಗಳಿಗೆ ವಿನಾಶವು ಕೂಡುವುದಿಲ್ಲ. ಘಟಾದಿಗಳಿಗೂ ಮುದ್ಗರಾಭಿಘಾತಾದಿಗಳಿಂದಲೇ ವಿನಾಶವು. ಅಧಿಷ್ಠಾನ ತತ್ವಜ್ಞಾನದಿಂದ ಅಲ್ಲ, ಎಂದು ಹಿಂದೆ ಹೇಳಿದ್ದನ್ನು ಸ್ಮರಿಸಿ ಕೊಡುವುದಕ್ಕಾಗಿ '**ವಿದ್ಯಮಾನಂ ಹಿ ಬಾಧ್ಯತೇ । ನ ಹಿ ವಂಧ್ಯಾಸುತೋ ಬಾಧ್ಯಃ**' ಎನ್ನುವಲ್ಲಿ ಅಸತ್ತಿಗೆ ವಿನಾಶವಿಲ್ಲವೆಂದುಕ್ತವಾಗಿದೆ, ಎಂದು ಹಿ ಶಬ್ದವು) (ಅನೇದ್ದನ್ನು ನಿರಾಕರಿಸುತ್ತಾರೆ.) (ತಿರೋಭಾವಾದಿರೂಪವಾದ ನಿವೃತ್ತಿಯು ಆವಿರ್ಭಾವಾದಿ ರೂಪವಾದ ಪ್ರವೃತ್ತಿಯುಳ್ಳದ್ದಕ್ಕೆ ಆಗುವುದು. ಆವಿರ್ಭಾವವು ಸತ್ಪದಾರ್ಥಕ್ಕೆ ಇರುವ ಧರ್ಮವು. ಶುಕ್ತಿರಜತಾದಿಗಳು ಅಸತ್ತೆಂದುಕ್ತವಾಗಿವೆ. ಆದಕಾರಣ) ಅಪ್ರವೃತ್ತಸ್ಯ= ಆವಿರ್ಭಾವರೂಪಪ್ರವೃತ್ತಿಯಿಲ್ಲದಿರುವುದಕ್ಕೆ, ನಿವೃತ್ತಿಶ್ಚ = ತಿರೋಭಾವರೂಪ ನಿವೃತ್ತಿಯು, ಕಥಮೇವ=ಹೇಗೆ ತಾನೇ, ಉಪಪದ್ಯತೇ=ಕೂಡುತದೆ. ಅಥವಾ ಅವಿದ್ಯೆಯೇ ಉಪಾದಾನ ಕಾರಣವಾಗಿ ಉಳ್ಳದ್ದಕ್ಕೆ, ವಿದ್ಯೆಯಿಂದ ವಿಲೀನತಾದಿರೂಪವಾದ ನಿವೃತ್ತಿಯು ಕೂಡುತ್ತದೆ. ಶುಕ್ತಿರಜತಾದಿಗಳು ಅಸತ್ತಾದುದರಿಂದ ಅವಿದ್ಯೋಪಾದಾನಕವಲ್ಲ. ಆದಕಾರಣ ಅವಿದ್ಯೋಪಾದಾನಕವಾಗದಿದ್ದಕ್ಕೆ ನಿವೃತ್ತಿಯೂ ಹೇಗೆ ತಾನೇ ಕೂಡುತ್ತದೆ) (ಇನೇದ್ದನ್ನು ದೂಷಿಸುವುದಕ್ಕಾಗಿ ಅನುವಾದಮಾಡುತ್ತಾರೆ.) (ಇಷ್ಟು ಕಾಲ ತನಕ ಯಾವುದು ತೋರಿತೋ ಅದು) ನಾಸೀತ್=ಇರಲಿಲ್ಲ, ನಾಸ್ತಿ=ಇಲ್ಲ, ನ ಭವಿಷ್ಯತ್=ಮುಂದಕ್ಕೆ ಆಗುವುದಿಲ್ಲ, ಇತಿ=ಹೀಗೆ, ಜ್ಞಾನಮೇಯತಾ=ತ್ರೈಕಾಲಿಕಸತ್ವನಿಷೇಧರೂಪವಾದ ಜ್ಞಾನವಿಷಯತ್ವವು, ಯದಿ=ಯಾವ ಪಕ್ಷದಲ್ಲಿ, ಬಾಧಃ=ಬಾಧವೋ ತದಾ=ಆಗ, ಅಂದರೆ ಹೀಗೆ ತ್ರೈಕಾಲಿಕಸತ್ವರೂಪವಾದ ಬಾಧವು ಆಕಾಶಾದಿಗಳಿಗೂ, ಶುಕ್ತಿರಜತಾದಿಗಳಿಗೂ ಅಂಗೀಕರಿಸುವುದಾದರೆ ಆಗ, ತೇನೈವ= ಅಸದ್ವೈಲಕ್ಷಣ್ಯವನ್ನು ಅಂಗೀಕರಿಸತಕ್ಕ ಮಾಯಾವಾದಿಯಿಂದಲೇ, ಪುನಃ=ಮತ್ತು, ಅಸತ್ವಂ= ಅಸತ್ವವು, ಅಂಗೀಕೃತಂ=ಅಂಗೀಕೃತವಾಗುವುದು. ಸತ್ವಾಭಾವವನ್ನು ಬಿಟ್ಟು ಶಶವಿಷಾಣಾದಿಗಳಿಗೂ ಬೇರೆಅಸತ್ವವನ್ನು ನಿರೂಪಿಸಕ್ಕೆ ಸಾಧ್ಯವಿಲ್ಲ. ಅಪಸಿದ್ಧಾಂತವು ಪ್ರಸಕ್ತವಾಗುವುದರಿಂದ **ಈ ಬಾಧವು** ಪರರಿಗೆ ಅಂಗೀಕರಿಸಕ್ಕೆ ಅಶಕ್ಯವು. ॥ ೫೦ ॥ ೫೧ ॥

(1) ಶುಕ್ತಿ ರಜತಾದಿಗಳಿಗೆ ಅಸತ್ವವಿದ್ದಪ್ರಯುಕ್ತ ವಿನಾಶಾದಿರೂಪವಾದ ಬಾಧವು ಕೂಡುವುದಿಲ್ಲವೆಂದು ಯಾವುದು ಹೇಳಲ್ಪಟ್ಟದೋ, ಅದು ಸಿದ್ಧವಲ್ಲ. 'ವಿಮತಂನಾಸತ್ ಪ್ರತೀಯಮಾನತ್ವಾತ್ ಯತ್ಪ್ರತೀಯತೇ ತನ್ನಾಸತ್ ಯಥಾ ಘಟಃ. ಯಚ್ಚಾಸತ್ ನತತ್ಪ್ರತೀಯತೇ ಯಥಾ ಶಶವಿಷಾಣಂ' ವಿವಾದ ವಿಷಯವಾದುದು ಅಸತ್ತಲ್ಲ, ತೋರುವುದರಿಂದ ಯಾವುದು ತೋರುತ್ತದೋ ಅದು ಅಸತ್ತಲ್ಲ, ಘಟದಂತೆ. ಯಾವುದು ಅಸತ್ತೋ ಅದು ತೋರುವುದಿಲ್ಲ. ಶಶವಿಷಾಣದಂತೆ, ಎನ್ನುವ ಪ್ರಮಾಣದಿಂದ ಅಸತ್ವವಿಲ್ಲವೆನ್ನುವುದು ನಿಶ್ಚಿತವಾಗಿದೆ, (2) ತ್ರೈಕಾಲಿಕ ಸತ್ವವನ್ನು ನಿಷೇಧಮಾಡಿದರೆ ಅಸತ್ವವನ್ನು ಅಂಗೀಕರಿಸಬೇಕಾಗುವುದು ಎಂದು ಯಾವುದು ಹೇಳಲ್ಪಟ್ಟದೋ ಅದೂ ಅಯುಕ್ತವು. ಪ್ರತೀತವಾಗಿರುವುದರಿಂದ ಅಸತ್ವವು ಕೂಡದಿದ್ದಮೇಲೆ ನಿಷೇಧಕ್ಕೆ ಕೇವಲ ಸತ್ವನಿಷೇಧದಲ್ಲಿಯೇ ತಾತ್ಪರ್ಯವು ಕೂಡುತ್ತದೆ. (3) ಸತ್ವಾಭಾವವನ್ನು ಬಿಟ್ಟು ಅಸತ್ವವನ್ನು ನಿರೂಪಿಸಲಿಕ್ಕೆ ಅಶಕ್ಯವೆಂದು ಯಾವುದು ಉಕ್ತವಾಗಿದೆಯೋ ಅದು ಅಯುಕ್ತವು. ನಿರುಪಾಖ್ಯತ್ವವು ಅಸತ್ವವು ಎಂದು ಹೇಳಿರುವೆವು, ಎಂದರೆ—

ಹಾಗೆ ಹೇಳಕೂಡದು. ಅಸತ್ತಿಗೆ ಪ್ರತೀತಿಯಿಲ್ಲವಾದರೆ ಇದೆಲ್ಲಾ ಆಗಬಹುದಿತ್ತು; ಹೀಗೆ ಇಲ್ಲ. ಅಸತ್ತಿಗೆ ಪ್ರತೀತಿಯನ್ನು ನಿರಾಕರಿಸತಕ್ಕ ನೀನೇ ಅದಕ್ಕೆ ಪ್ರತೀತಿಯನ್ನು ಅಂಗೀಕರಿಸಬೇಕಾಗುವುದು ಎನ್ನುತ್ತಾರೆ.

ಮೂ || ಪ್ರತೀತಿರ್ನಾಸತಃ ಇತಿ ವದನ್ನಂಗೀಕರೋತಿ ತಾಂ |
ನಿಷೇಧೋ ಹ್ಯಪ್ರತೀತಸ್ಯ ಕಥಂಚಿನ್ನೋಪಪದ್ಯತೇ || ೫೨ ||

ಅ || ಅಸತಃ=ಅಸತ್ತಿಗೆ, ಪ್ರತೀತಿಃ=ಪ್ರತೀತಿಯು, ನ=ಇಲ್ಲ. ಇತಿ=ಹೀಗೆ, ವದನ್=ಹೇಳುವವನು ಮತ್ತು ತಿಳಿಯುವವನು, ತಾಂ=ಪ್ರತೀತಿಯನ್ನು, ಅಂಗೀಕರೋತಿ=ಅಂಗೀಕರಿಸುತ್ತಾನೆ. (ಅಸತ್ತಿಗೆ ಪ್ರತೀತಿಯು ಇಲ್ಲವೆಂದು ನಿಷೇಧಮಾಡತಕ್ಕವನು ಏಕೆ ಅಸತ್ತಿಗೆ ಪ್ರತೀತಿಯನ್ನು ಅಂಗೀಕರಿಸಬೇಕೆಂದರೆ—) (ಅಸತ್ತಿಗೆ ಪ್ರತೀತಿಯು ಇಲ್ಲ ಎಂದು (೧) ಅಸತ್ತಿಗೆ ಪ್ರತೀತಿಯು ನಿಷೇಧಿಸಲ್ಪಡುತ್ತದೋ, (೨) ಅಥವಾ ಪ್ರತೀತಿಗೆ ಅಸದ್ವಿಷಯಕತ್ವವು ನಿಷೇಧಿಸಲ್ಪಡುತ್ತದೋ, ೧ನೇ ಕಲ್ಪದಲ್ಲಿ ಪ್ರತಿಷೇಧವಿಷಯವಾಗಿಯೂ, ೨ನೇ ಕಲ್ಪದಲ್ಲಿ ಪ್ರತಿಷೇಧ್ಯದಲ್ಲಿ ಪ್ರವಿಷ್ಟವಾಗಿಯೂ ಅವಶ್ಯವಾಗಿ ಅಸತ್ತಿಗೆ ಪ್ರತೀತಿಯನ್ನು ಅಂಗೀಕರಿಸಬೇಕು. ಆದಕಾರಣ) ಕಥಂಚಿತ್=ಹಿಂದೆ ಹೇಳಿದ ಎರಡು ಪ್ರಕಾರಗಳಿಂದ, ಅಪ್ರತೀತಸ್ಯ=ಆವಿರ್ಭಾವರೂಪಪ್ರವೃತ್ತಿ ಇಲ್ಲದಿರುವುದರ ಸಂಬಂಧಿಯಾದುದು, ನಿಷೇಧಃ=ನಿಷೇಧವು, ನೋಪಪದ್ಯತೇ=ಕೂಡುವುದಿಲ್ಲ. (ಅಪ್ರತೀತವಾದ ಭೂತಲದಲ್ಲಿ ಆಗಲೀ, ಘಟದಲ್ಲಿ ಆಗಲೀ 'ಭೂತಲೇ ಘಟೋ ನಾಸ್ತಿ' ಎನ್ನುವ ಪ್ರತಿಷೇಧವು ಕಾಣಲ್ಪಡಲಿಲ್ಲವಷ್ಟೆ? ಇದರಿಂದ 'ವಿಮತಃ ಅಸತ್ಪ್ರತೀತಿಮಾನ್ ತತ್ಸಂಬಂಧಿನಿಷೇಧಕರ್ತೃತ್ವಾತ್ ತದ್ವ್ಯವಹರ್ತೃತ್ವಾದ್ವಾ ಸಮ್ಮತವತ್' ವಿವಾದವಿಷಯೀಭೂತನಾದವನು ಅಸತ್ತಿನ ಪ್ರತೀತಿಯುಳ್ಳವನು. ಅಸತ್ಸಂಬಂಧಿಯಾದ ನಿಷೇಧವನ್ನು ಮಾಡತಕ್ಕವನಾದುದರಿಂದ ಅಥವಾ ಅಸದ್ವಿಷಯಕ ವ್ಯವಹಾರವನ್ನು ಮಾಡುವುದರಿಂದ ನಿಶ್ಚಿತನಂತೆ ಎನ್ನುವ ಪ್ರಮಾಣವು ಸೂಚಿತವಾಯಿತು. ಪ್ರಾಮಾಣಿಕವಾದುದನ್ನು ಪರೀಕ್ಷಕರು ಅವಶ್ಯವಾಗಿ ಅಂಗೀಕರಿಸಬೇಕು. || ೫೨ ||

ಹೀಗೆ ಅರ್ಥಾಪತ್ತಿಯನ್ನು ನಿರಾಕರಿಸಿ ಉಪಮಾನವನ್ನೂ ನಿರಾಕರಿಸುತ್ತಾರೆ—

ಮೂ || ನ ಚೋಪಮಾ ಭವೇದತ್ರ ಪ್ರತ್ಯಕ್ಷಾತ್ಸತ್ವಮೇವ ಚ ।
ಶಾಸ್ತ್ರಗಮ್ಯ ಪರೇಶಾನಾದ್ಭೇಧಃ ಸ್ವಾತ್ಮನ ಈಯತೇ || ೫೩ ||

ಅ || ಅತ್ರ = ಅನಿರ್ವಚನೀಯಾರ್ಥವಿದೆ ಎನ್ನುವ ವಿಷಯದಲ್ಲಿ, ಉಪಮಾ = ಉಪಮಾನವು, ನ ಚ ಭವೇತ್=ಪ್ರಮಾಣವು ಆಗಲಾರದು. (ಉಪಮಾನಕ್ಕೆ ಸಾದೃಶ್ಯ ಮೊದಲಾದ ವಿಷಯವೇ ನಿಯತವಾಗಿದೆ.) (ಅಭಾವರೂಪ ಪ್ರಮಾಣವನ್ನು ತಿರಸ್ಕರಿಸುತ್ತಾರೆ.) (ಆಕಾಶಾದಿಗಳಲ್ಲಿ ಆಗಲೀ, ಶುಕ್ತಿರಜತಾದಿಗಳಲ್ಲಿ ಆಗಲೀ, ಪ್ರತ್ಯಕ್ಷದಿಂದಲಾಗಲೀ, ಅನುಪಲಬ್ಧಿಯಿಂದಲಾಗಲೀ ಸತ್ವ-ಅಸತ್ವಗಳು ಇಲ್ಲವೆಂದು ಸಿದ್ಧಿಸುವಾಗ ಅನಿರ್ವಚನೀಯವಾದ ಅರ್ಥವು ಸಿದ್ಧಿಸುತ್ತದೆಂದು ಹೇಳಬೇಕು. ಅದು ಯುಕ್ತವಲ್ಲ. ಏಕೆಂದರೆ— ಆಕಾಶಾದಿಗಳಲ್ಲಿ) ಪ್ರತ್ಯಕ್ಷಾತ್=ಪ್ರತ್ಯಕ್ಷ ಪ್ರಮಾಣದ್ವಾರೆಯಿಂದ, ಸತ್ವಮೇವ=ಸತ್ವವೇ ನಿಶ್ಚಿತವಾಗುತ್ತದೆ. ಚ= ಶುಕ್ತಿರಜತಾದಿಗಳಲ್ಲಿ ಅಸತ್ವವೂ ನಿಶ್ಚಿತವಾಗುತ್ತದೆ. (ಹೀಗೆ ಅನುಮಾನಾದಿಗಳಿಗೆ ಪ್ರತ್ಯೇಕವಾಗಿ ದೂಷಣವನ್ನು ಹೇಳಿ, ಸಾಧಾರಣ ದೂಷಣವನ್ನು ಹೇಳುತ್ತಾರೆ.) ಪ್ರತ್ಯಕ್ಷದಿಂದ ಗಗನಾದಿಗಳಲ್ಲಿ ಸತ್ವವೇ ಶುಕ್ತಿರಜತಾದಿಗಳಲ್ಲಿ ಆದರೂ ಅಸತ್ವವೇ ನಿಶ್ಚಿತವಾಗುತ್ತದೆ. ('ಸತ್ ಗಗನಂ, ಅಸ್ತಿಮೇಽಜ್ಞಾನಂ, ಅಸದೇವ ರಜತಂ ಪ್ರತ್ಯಭಾತ್' ಎಂದು ಎಲ್ಲಾ ಜನರಿಗೂ

ಬರತಕ್ಕ ಸಾಕ್ಷಾತ್ಕಾರಿಪ್ರತ್ಯಯುವನ್ನು ಅಪಲಾಪಮಾಡಲಿಕ್ಕೆ ಅಶಕ್ಯವು. ಆದಕಾರಣ ವಿಯದಾದಿಗಳಿಗೆ ಅನಿರ್ವಾಚ್ಯತ್ವವಿಷಯದಲ್ಲಿ ಪ್ರಮಾಣವೆಂದು ಹೇಳಲ್ಪಟ್ಟ ಅನುಮಾನಾದಿಗಳು ಪ್ರತ್ಯಕ್ಷದಿಂದ ಬಾಧಿತಗಳು ಆದಪ್ರಯುಕ್ತ 'ನೋಭಯಂ ಚೇನ್ನಸಿದ್ಧಂ ತತ್' ಎನ್ನುವುದು ಯುಕ್ತವು.) (ಅಥವಾ 'ಜೀವೇಶ್ವರಯೋರ್ಭೇದೋ ಮಿಥ್ಯಾಭೇದತ್ವಾತ್' ಇದು ಮೊದಲಾದ ಅನುಮಾನಕ್ಕೆ ದೂಷಣಾಂತರವನ್ನು ಹೇಳುತ್ತಾರೆ.) ಪ್ರತ್ಯಕ್ಷಾತ್=ಪ್ರತ್ಯಕ್ಷದ್ದೆಶೆಯಿಂದ ಜೀವೇಶ್ವರಭೇದಕ್ಕೆ, ಸತ್ವಮೇವ=ಸತ್ವವೇ ನಿಶ್ಚಿತವಾಗುತ್ತದೆ. (ಆದುದರಿಂದ ಪ್ರತ್ಯಕ್ಷವಿರುದ್ಧವಾಗಿರುವುದರಿಂದ ಜೀವೇಶ್ವರ ಭೇದಮಿಥ್ಯಾತ್ವಾದಿ ಸಾಧಕವಾದ ಅನುಮಾನಕ್ಕೆ ಬಾಧವು.) (ಈಶ್ವರನು ಶಾಸ್ತ್ರೈಕಸಮಧಿಗಮ್ಯನೆಂದಂಗೀಕರಿಸಿದರಿಂದ ಪ್ರತ್ಯಕ್ಷ ಸಿದ್ಧನಲ್ಲ. ಒಬ್ಬನಿಗೆ ಮತ್ತೊಬ್ಬನು ಪ್ರತ್ಯಕ್ಷನಾಗುತ್ತಾನೆಂದು ಅಂಗೀಕರಿಸದೆ ಇರುವುದರಿಂದ ಎಲ್ಲಾ ಜೀವರೂ ಇನ್ನೊಬ್ಬರಿಗೆ ಪ್ರತ್ಯಕ್ಷ ಸಿದ್ಧರಾಗಲಾರರು. ಅಪ್ರತ್ಯಕ್ಷವಾದ ವಸ್ತುವಿನಲ್ಲಿರುವ ಭೇದವು ಪ್ರತ್ಯಕ್ಷ ಸಿದ್ಧವಾಗಲಾರದು. ಅದಕ್ಕೆ ಸತ್ಯತ್ವವಾದರೂ ಸುತರಾಂ ಕೂಡಲಾರದು. ಎಂದಾಶಂಕಿಸಿದರೆ) ಶಾಸ್ತ್ರಗಮ್ಯ ಪರೇಶಾನಾತ್= ಶಾಸ್ತ್ರೈಕಸಮಧಿಗಮ್ಯನಾದ ಶ್ರೀ ಹರಿಯದ್ದೆಶೆಯಿಂದ ಸ್ವಾತ್ಮನಃ= ತನಗೆ, ಭೇದಃ=ಭೇದವು, ಈಯತೇ=ಪ್ರತ್ಯಕ್ಷದಿಂದ ತಿಳಿಯಲ್ಪಡುತ್ತದೆ.

**ತಾ || ನ್ಯಾಯಸುಧಾ—** (1) ಒಂದೇ ಭೇದವು ಅನೇಕತ್ರ ವ್ಯಾಪಿಸಿಕೊಂಡಿರುವುದಿಲ್ಲ. ಮತ್ತೆ ಏಕಪ್ರತಿಯೋಗಿಕವಾಗಿ, ಅಪರಧರ್ಮಿಕವಾಗಿ ಭೇದವು ಇರುವುದು. ಆ ಭೇದವು ಪ್ರತ್ಯಕ್ಷವಾಗಬೇಕಾದರೆ ಧರ್ಮಿಗೆ ಪ್ರತ್ಯಕ್ಷತ್ವವೇ ಪ್ರಯೋಜಕವಾಗಿದೆ. ಪ್ರತಿಯೋಗಿ ವಿಷಯಕಜ್ಞಾನಮಾತ್ರವೇ ಭೇದಪ್ರತ್ಯಕ್ಷದಲ್ಲಿ ಕಾರಣವು. ಪ್ರತಿಯೋಗಿಗೆ ಪ್ರತ್ಯಕ್ಷತ್ವವು ಅಗತ್ಯವಿಲ್ಲ. ಹೀಗೆ ಇರಲು ಈಶ್ವರನು ಇತರ ಜೀವರೂ ಪ್ರತ್ಯಕ್ಷರಾಗದಿರುವುದರಿಂದ ತದ್ಧರ್ಮಿಕವಾದ ಭೇದವನ್ನು ಪ್ರತ್ಯಕ್ಷದಿಂದ ತಿಳಿಯಲಿಕ್ಕೆ ಅಸಾಧ್ಯವಾದರೂ ಈಶ್ವರ ಪ್ರತಿಯೋಗಿಕವಾದ ಸ್ವಾತ್ಮಧರ್ಮಿಕವಾದ ಭೇದವನ್ನು ಪ್ರತ್ಯಕ್ಷದಿಂದ ತಿಳಿಯಲಿಕ್ಕೆ ಶಕ್ಯವೇ ಆಗುತ್ತದೆ. ಧರ್ಮಿಭೂತನಾದ ತಾನು ಪ್ರತ್ಯಕ್ಷನಾಗಿರುತ್ತಾನೆ. ಪ್ರತಿಯೋಗಿಭೂತನಾದ ಶ್ರೀಹರಿಯ ಜ್ಞಾನವು ಶಾಸ್ತ್ರದಿಂದುಂಟಾಗುತ್ತದೆ. (2) ಯಾವನು ಶಾಸ್ತ್ರದಿಂದ ಈಶ್ವರನನ್ನು ತಿಳಿಯುವುದಿಲ್ಲವೋ ಆತನು ಈಶ್ವರ ಪ್ರತಿಯೋಗಿಕವಾದ ತನ್ನ ಭೇದವನ್ನು ತಿಳಿಯದಿರಲಿ. ಶಾಸ್ತ್ರದಿಂದ ಈಶ್ವರನನ್ನು ತಿಳಿದವನಿಗೇನೇ ಈಶ್ವರನದ್ದೆಶೆಯಿಂದ ತನಗೆ ಭೇದವದೆ ಎನ್ನುವಲ್ಲಿ ಪ್ರತ್ಯಕ್ಷವು ಪ್ರಮಾಣವೆಂದುಕ್ತವಾಗಿದೆ. || ೫೩ ||

ಆದರೂ ಭೇದಗ್ರಾಹಕವಾದ ಪ್ರತ್ಯಕ್ಷಕ್ಕೆ ಪ್ರಾಬಲ್ಯವನ್ನು ನಿರೂಪಿಸದೆ ಇರುವುದರಿಂದ ಅನುಮಾನಕ್ಕೆ ಬಾಧವು ಹೇಗೆಂದರೆ—

**ಮೂ || ಅನುಭೂತಿವಿರೋಧೇನ ಕಥಮೇಕತ್ವಮುಚ್ಯತೇ ।**
**ಕಿಂಚಿತ್ಕರ್ತಾ ಚ ದುಃಖೀತಿ ಸರ್ವೈರೇವಾನುಭೂಯತೇ || ೫೪ ||**
**ಸರ್ವಜ್ಞೋ ಭಗವಾನ್ವಿಷ್ಣುಃ ಸರ್ವಶಕ್ತಿರಿತಿ ಶ್ರುತಿಃ ।**
**ಅನುಭೂತಾದ್ಧಿ ಭೇದೇನ ಶ್ರುತಿರೇಷಾ ವದತ್ಯಮುಂ || ೫೫ ||**

ಅ || ಅನುಭೂತಿವಿರೋಧೇನ=ಸಾಕ್ಷಿವಿರೋಧದಿಂದ, ಕಥಂ = ಹೇಗೆ, ಏಕತ್ವಂ= ಏಕತ್ವವು, ಉಚ್ಯತೇ=ಅನುಮೇಯಿಸಲ್ಪಡುತ್ತದೆ. (ಸಾಕ್ಷಿಪ್ರತ್ಯಕ್ಷವು ಅನುಮಾನಕ್ಕಿಂತ ಪ್ರಬಲ

ವಾಗಲಿ, ಸಾಕ್ಷಿ ಪ್ರತ್ಯಕ್ಷಕ್ಕೆ ಈಶ್ವರನದ್ವೆಶೆಯಿಂದ ತನಗೆ ಭೇದಗ್ರಾಹಕತ್ವವು ಹೇಗೆ ನಿಶ್ಚಿತವಾಗುವುದು? ಯಾವುದರಿಂದ ಅನುಮಾನವು ಬಾಧಿತ ವಿಷಯವಾಗುವುದು ಎಂದರೆ)ಕಿಂಚಿತ್=ಸ್ವಲ್ಪ, ಕರ್ತಾ=ಮಾಡತಕ್ಕವನು, ದುಃಖೀ ಚ=ದುಃಖವುಳ್ಳವನು, ಅಲ್ಪಜ್ಞಃ=ಅಲ್ಪಜ್ಞನು, ಅಲ್ಪಶಕ್ತಿಶ್ಚ=ಅಲ್ಪಶಕ್ತಿಯುಳ್ಳವನು, ಇತಿ=ಹೀಗೆ ಸ್ವಾತ್ಮನು, ಸರ್ವೈರೇವ=ಎಲ್ಲರಿಂದಲೇ, ಅನುಭೂಯತೇ=ಅನುಭವಿಸಲ್ಪಡುತ್ತಾನೆ ಭಗವಾನ್ವಿಷ್ಣುಃ=ಶ್ರೀಪೂಜ್ಯನಾದ ವಿಷ್ಣುವು, ಸರ್ವಜ್ಞಃ=ಸರ್ವಜ್ಞನು, ಸರ್ವಶಕ್ತಿಃ=ಸಮಸ್ತಶಕ್ತಿಯುಳ್ಳವನು, ಸರ್ವಕರ್ತಾ=ಸರ್ವಜಗತ್ಕರ್ತನು, ನಿರ್ದುಃಖಃ=ದುಃಖಲೇಶಾತ್ಯಂತಾಭಾವವಿರುವವನು, ಇತಿ=ಹೀಗೆ, ಶ್ರುತಃ='**ಯಃ ಸರ್ವಜ್ಞಃ ಪರಾಸ್ಯ ಶಕ್ತಿಃ ಸ ಹಿ ಸರ್ವಸ್ಯ ಕರ್ತಾ, ನಿರನಿಷ್ಟಃ**' ಇತ್ಯಾದಿಗಳಲ್ಲಿ ಹೇಳಲ್ಪಟ್ಟದ್ದಾನೆ. (ಹಾಗಾದರೆ ಜೀವನನ್ನು ಪಕ್ಷೀಕರಿಸಿ ಈಶ್ವರನಿಂದ ಅಭೇದವನ್ನು ಸಾಧಿಸಿದರೆ ಪ್ರತ್ಯಕ್ಷವಿರೋಧವು ಬರಲಿ. ಹೀಗೆ ಅನುಮಿತವಾಗುವುದಿಲ್ಲ. ಆದರೆ ಈಶ್ವರನನ್ನು ಪಕ್ಷೀಕರಿಸಿ ಜೀವಾಭೇದವನ್ನು ಅನುಮೇಯಿಸುತ್ತೇವೆ ಎಂದರೆ) (ಈಶ್ವರನನ್ನು ಪಕ್ಷೀಕರಿಸುವವನು ಈಶ್ವರನ ಸಿದ್ಧಿಯನ್ನು ಅವಶ್ಯವಾಗಿ ಹೇಳಬೇಕು. ಪ್ರತ್ಯಕ್ಷಾದಿಗಳಿಂದ ಈಶ್ವರನು ಸಿದ್ಧಿಸುವುದಿಲ್ಲ ಆದಕಾರಣ ಶ್ರುತಿಯೇ ಈಶ್ವರನನ್ನು ಗ್ರಹಿಸುತ್ತದೆ ಎಂದು ಹೇಳಬೇಕು.) ಏಷಾ ಶ್ರುತಿಃ=ಧರ್ಮಿಗ್ರಾಹಕವಾದ '**ಯಃ ಸರ್ವಜ್ಞಃ**' ಇತ್ಯಾದಿ ಶ್ರುತಿಯು, ಅಮುಂ=ಈಶ್ವರನನ್ನು, ಅನುಭೂತಾದ್ಧಿ=ಅಲ್ಪಜ್ಞತ್ವಾದಿಗಳಿಂದ ಅನುಭೂತನಾದ ಜೀವನದ್ವೆಶೆಯಿಂದ, ಭೇದೇನ=ಭೇದದಿಂದ, ವದತಿ=ಪ್ರತಿಪಾದಿಸುತ್ತದೆ. (ಆದ ಕಾರಣ ಈಶ್ವರನನ್ನು ಧರ್ಮೀಕರಿಸಿಕೊಂಡು ಜೀವನಿಂದ ಅಭೇದವನ್ನು ಸಾಧಿಸತಕ್ಕ ಅನುಮಾನಕ್ಕೆ ಪ್ರತ್ಯಕ್ಷಬಾಧವಿಲ್ಲದದಿದ್ದರೂ ಉಪಜೀವ್ಯ ಶ್ರುತಿವಿರೋಧದಿಂದ ಬಾಧವು ಬಂದೇ ಬರುವುದು. ಯಾವಾಗಲೂ ಅಲ್ಪಜ್ಞತ್ವಾದಿಗಳುಳ್ಳ ಜೀವಸ್ವರೂಪವನ್ನು ಕುರಿತು ಸರ್ವಜ್ಞಾದಿಗಳುಳ್ಳ ಈಶ್ವರ ಸ್ವರೂಪವನ್ನು ಪ್ರತಿಪಾದಿಸತಕ್ಕ ಶ್ರುತಿಯು ಈಶ್ವರನದ್ವೆಶೆಯಿಂದ ಜೀವನನ್ನು ಭಿನ್ನನನ್ನಾಗಿಯೇ ಪ್ರತಿಪಾದಿಸುತ್ತದೆ. ಅನುಭವವನ್ನು ಅಪಲಾಪ ಮಾಡಲಿಕ್ಕೆ ಅಶಕ್ಯವು· ॥ ೫೪ ॥ ೫೫ ॥

ಹೀಗೆ ಅನುಮಾನವನ್ನು ನಿರಾಕರಿಸಿ ಈಗ 'ತದ್ಯೋಽಹಂ' ಇದುಮೊದಲಾದ ಶ್ರುತಿಯನ್ನು ನಿರಾಕರಿಸುತ್ತಾರೆ—

**ಮೂ ॥ ಉಪಜೀವ್ಯವಿರುದ್ಧಂ ತು ಕಥಮೈಕ್ಯಂ ಶ್ರುತಿರ್ವದೇತ್ ।**
**ಅಪ್ರಾಮಾಣ್ಯಂ ಯದಾ ಭೇದವಾಚಕಸ್ಯ ಭವಿಷ್ಯತಿ ॥**
**ಸ ಏವ ಧರ್ಮಿಣೋ ಗ್ರಾಹೀ ತದಭೇದಃ ಕಥಂ ಭವೇತ್ ॥ ೫೬ ॥**

ಅ ॥ ಉಪಜೀವ್ಯವಿರುದ್ಧಂ ಐಕ್ಯಂ=ಉಪಜೀವ್ಯಪ್ರಮಾಣದಿಂದ ವಿರುದ್ಧವಾದ ಜೀವೇಶ್ವರರ ಐಕ್ಯವನ್ನು, ಶ್ರುತಿಃ ತು=ಶ್ರುತಿಯಾದರೂ,(ಅನುಮಾನವು ದುಷ್ಟವಾದರೆ ಅಪ್ರಮಾಣವೇ ಆಗುವುದು. ಶ್ರುತಿಗಾದರೂ ಆಪಾತತಃ ತೋರತಕ್ಕ ಅರ್ಥವನ್ನು ಬಿಡಿಸಿ ಅರ್ಥಾಂತರವನ್ನು ಹೇಳುವುದು ಎಂದು ತು ಶಬ್ದವು ವಿಶೇಷಾರ್ಥವುಳ್ಳದ್ದು.) ಕಥಂ=ಹೇಗೆ, ವದೇತ್=ಹೇಳುವುದು. ಭೇದವಾಚಕಸ್ಯ=ಭೇದವನ್ನು ಹೇಳತಕ್ಕ ಆಗಮಕ್ಕೆ, ಮತ್ತು ಭೇದಕ ಸಾರ್ವಜ್ಞಾದಿಗಳಿಂದ ವಿಶಿಷ್ಟನಾದ ಶ್ರೀಪರಬ್ರಹ್ಮನನ್ನು ಪ್ರತಿಪಾದಿಸತಕ್ಕ ಆಗಮಕ್ಕೆ, (ಭೇದಗ್ರಾಹಿಯಾದ ಪ್ರತ್ಯಕ್ಷಕ್ಕೂ) ಯದಾ=ಯಾವಾಗ, ಅಪ್ರಾಮಾಣ್ಯಂ=ಅಪ್ರಾಮಾಣ್ಯವು, ಭವಿಷ್ಯತಿ=ಬರುವುದೋ, ತದಾ=ಆಗ, ಸ ಏವ=ಆ ಭೇದದ ಸಾಕ್ಷಾತ್ಕಾರವಾಗಲೀ, ಭೇದವಾಚಕವಾದ ಆಗಮವಾಗಲೀ,

ಧರ್ಮಿಣಃ=ಜೀವನನ್ನೂ, ಈಶ್ವರನನ್ನೂ, ಗ್ರಾಹೀ=ಗ್ರಹಿಸತಕ್ಕುದು, (ಇತಿ=ಎನ್ನುವ ಕಾರಣದಿಂದ) ತದಭೇದಃ=ಜೀವೇಶ್ವರರಿಗೆ ಅಭೇದವು, ಕಥಂ=ಹೇಗೆ, (ಬೋಧ್ಯಃ=ಪ್ರತಿಪಾದಿಸಲಿಕ್ಕೆ ಯೋಗ್ಯವು,) ಭವೇತ್=ಆಗುವುದು.

ಶಾ || ನ್ಯಾಯಸುಧಾ— (1) ಶ್ರುತಿಯಿಂದ ಜೀವನನ್ನು ಅನುವಾದಮಾಡಿ ಜೀವನಿಗೆ ಈಶ್ವರೈಕ್ಯವನ್ನು ಬೋಧಿಸಿದರೆ ಆಗ ಜೀವಗ್ರಾಹಕವಾದ ಸಾಕ್ಷಿಪ್ರತ್ಯಕ್ಷವು ಉಪಜೀವ್ಯವಾಗುವುದು. ಆ ಸಾಕ್ಷಿಪ್ರತ್ಯಕ್ಷವು ಭೇದಗ್ರಾಹಕವೆಂದು ಹೇಳಿದರಿಂದ ಉಪಜೀವ್ಯವಿರೋಧವು. (2) ಶ್ರುತಿಯು ಈಶ್ವರನನ್ನು ಅನುವಾದಮಾಡಿಕೊಂಡು ಈಶ್ವರನಿಗೆ ಜೀವಾಭೇದವನ್ನು ವಿಧಿಸುವುದಾದರೆ ಆಗ 'ಯಃ ಸರ್ವಜ್ಞಃ' ಇದುಮೊದಲಾದ ಶ್ರುತ್ಯಂತರವೇ ಉಪಜೀವ್ಯವಾಗುವುದು. ಅದು ಭೇದಗ್ರಾಹಕವೆಂದು ಹೇಳಿದರಿಂದ ಉಪಜೀವ್ಯವಿರೋಧವೇ. (3) ಜೀವೇಶ್ವರರಿಬ್ಬರನ್ನು ಅನುವಾದಮಾಡಿಕೊಂಡು ಅಭೇದಮಾತ್ರವನ್ನು ಬೋಧಿಸುವುದಾದರೆ ಆಗ ಜೀವಗ್ರಾಹಕವಾದ ಸಾಕ್ಷಿಯೂ, ಈಶ್ವರಗ್ರಾಹಕವಾದ 'ಯಃ ಸರ್ವಜ್ಞಃ' ಇತ್ಯಾದಿ ಶ್ರುತಿಯೂ ಉಪಜೀವ್ಯವೇ ಆಗಿರುವುದರಿಂದ ಉಪಜೀವ್ಯಪ್ರಮಾಣವಿರೋಧವು ಸ್ಪಷ್ಟವೇ. (4) ಯದ್ಯಪಿ ಇದೆಲ್ಲವೂ ಪ್ರಥಮ ಸೂತ್ರದಲ್ಲಿಯೇ ಹೇಳಲ್ಪಟ್ಟದೆ. ಆದಾಗ್ಯೂ ಅದನ್ನೇ ವಿಸ್ತರಿಸುವುದಕ್ಕಾಗಿ ಪುನಃ ಆರಂಭ ಮಾಡಿದರಿಂದ ದೋಷವಿಲ್ಲ. (5) ಹಾಗಾದರೆ ಉಪಜೀವ್ಯವಿರೋಧದಿಂದ ಉಪಜೀವಕವು ಬಾಧಿಸಲ್ಪಡುತದೆ ಎನ್ನುವಲ್ಲಿ ನಿಯಾಮಕವು ಏನಿದೆ? ಏನಾದರೂ ನಿಯಾಮಕವಿದ್ದರೆ ಉಪಜೀವ್ಯ-ಪ್ರತ್ಯಕ್ಷ-ಆಗಮಗಳ ವಿರೋಧದಿಂದ ಉಪಜೀವಕ ಅನುಮಾನ ಆಗಮಗಳಿಗೆ ಅಪ್ರಾಮಾಣ್ಯ ಹೇಳಿದ್ದು ಕೂಡುವುದು ಎಂದರೆ— ಇಲ್ಲಿ ಭೇದಾಭೇದವಿಷಯಕಗಳಾದ ಉಪಜೀವ್ಯ ಉಪಜೀವಕಪ್ರಮಾಣಗಳೆರಡಕ್ಕೂ ೧ ಪ್ರಾಮಾಣ್ಯವೇ ಇರುವುದೋ, ೨ ಅಪ್ರಾಮಾಣ್ಯವೇ ಇರುವುದೋ, ೩ ಒಂದಕ್ಕೆ ಪ್ರಾಮಾಣ್ಯವು ಮತ್ತೊಂದಕ್ಕೆ ಅಪ್ರಾಮಾಣ್ಯವೋ? ಅದರಲ್ಲಿಯೂ ಉಪಜೀವಕಕ್ಕೆ ಪ್ರಾಮಾಣ್ಯವು, ಉಪಜೀವ್ಯಕ್ಕೆ ಅಪ್ರಾಮಾಣ್ಯವೋ? ೪ ಉಪಜೀವ್ಯಕ್ಕೆ ಪ್ರಾಮಾಣ್ಯವು, ಉಪಜೀವಕಕ್ಕೆ ಅಪ್ರಾಮಾಣ್ಯವು ಹೀಗೆ ಪಕ್ಷಗಳು ಕೂಡುತ್ತವೆ. ಇವುಗಳಲ್ಲಿ ಪ್ರಾಮಾಣ್ಯವೆನ್ನುವ ೧ನೇ ಪಕ್ಷವು ಕೂಡುವುದಿಲ್ಲ. ವಿರುದ್ಧಗಳಾದ ಎರಡಕ್ಕೂ ಪ್ರಾಮಾಣ್ಯವು ಕೂಡಲಾರದು. ಅಪ್ರಾಮಾಣ್ಯವೇ ಎನ್ನುವ ೨ನೇ ಪಕ್ಷವು ಕೂಡುವುದಿಲ್ಲ. ವಸ್ತುವಿಗೆ ನಿಸ್ಸ್ವಭಾವತ್ವವು ಬರಬೇಕಾದೀತು. ೩ನೇದ್ದನ್ನು 'ಅಪ್ರಾಮಾಣ್ಯಂ ಯದಾ' ಎನ್ನುವುದರಿಂದ ದೂಷಿಸಿದರು. ಅಂದರೆ, ಅಜ್ಞಾನಾದಿವಿಶಿಷ್ಟನಾದ ಜೀವನನ್ನು ಗ್ರಹಿಸತಕ್ಕ ಪ್ರತ್ಯಕ್ಷವಾಗಲೀ, ಸಾರ್ವಜ್ಞಾದಿ ವಿಶಿಷ್ಟನಾದ ಪರಬ್ರಹ್ಮನನ್ನು ಗ್ರಹಿಸತಕ್ಕ ಆಗಮವಾಕ್ಯವಾಗಲೀ, ಅಪ್ರಮಾಣವಾದರೆ ಆಗ ಜೀವೇಶ್ವರರೆಂಬ ಧರ್ಮಿಗೇನೇ ಸಿದ್ಧಿಯಿಲ್ಲದೆ ಇದ್ದುದರಿಂದ ತತ್ತ್ವಮಸ್ಯಾದ್ಯಾಗಮಗಳಿಂದಲೂ ಅನುಮಾನಗಳಿಂದಲೂ ಜೀವೇಶ್ವರರಿಗೆ ಅಭೇದ ಬೋಧನವು ಕೂಡದೆಹೋಗುವುದು. ಆದುದರಿಂದ ಉಪಜೀವಕದ ವಿರೋಧದಿಂದ ಉಪಜೀವ್ಯಕ್ಕೆ ಅಪ್ರಾಮಾಣ್ಯವು ಕೂಡದಿರುವುದರಿಂದ ಪರಿಶೇಷತಃ ಉಪಜೀವ್ಯಕ್ಕೆ ಪ್ರಾಮಾಣ್ಯವು, ಉಪಜೀವಕಕ್ಕೆ ಅಪ್ರಾಮಾಣ್ಯವು ಎನ್ನುವ ೪ನೇ ಪ್ರಕಾರವೇ ಸಿದ್ಧಿಸುತ್ತದೆ. (6) ಉಪಜೀವಕದಿಂದ ಉಪಜೀವ್ಯವು ಪ್ರಬಲವು, ಅದರ ವಿರೋಧದಿಂದ ಉಪಜೀವಕಕ್ಕೆ ಅಪ್ರಾಮಾಣ್ಯವೂ ಯುಕ್ತವೇ. ಆದರೂ ಪ್ರಕೃತದಲ್ಲಿ ಅಭೇದಾಗಮ ರೂಪವಾದ ಉಪಜೀವಕಕ್ಕೆ ಭೇದಗ್ರಾಹಕವಾದ ಪ್ರತ್ಯಕ್ಷ-ಅನುಮಾನರೂಪ ಉಪಜೀವ್ಯ-ವಿರೋಧದಿಂದ ಅಪ್ರಾಮಾಣ್ಯಹೇಳಿದ್ದು ಯುಕ್ತವಲ್ಲ. ಏಕೆಂದರೆ— ಉಪಜೀವ್ಯೋಪಜೀವಕಭಾವವು ಅನೇಕವಿಧವಾಗಿದೆ. (೧) ಕೆಲವುಕಡೆ ಧರ್ಮಿಗ್ರಾಹಕತ್ವದಿಂದ, (೨) ಕೆಲವುಕಡೆ ಸಾಧ್ಯಗ್ರಾಹಕತ್ವದಿಂದ, (೩) ಕೆಲವುಕಡೆ ಪ್ರಾಮಾಣ್ಯೋಪಪಾದಕತ್ವದಿಂದ, (೪) ಕೆಲವುಕಡೆ

ವ್ಯಾಪ್ತ್ಯಾದ್ಯಂಗಪ್ರತಿಪಾದಕತ್ವದಿಂದ ಇವೇ ಮೊದಲಾದ ಪ್ರಕಾರದಿಂದ ಉಪಜೀವ್ಯತ್ವ ಈ ರೀತಿಯಾಗಿ ಉಪಜೀವ್ಯವಾಗಿರುವ ಪ್ರಮಾಣಗಳಿಂದ ವಿರುದ್ಧವಾದ ಉಪಜೀವಕವು ಬಾಧ್ಯವೇ ಆಗುವುದು. ಪ್ರಕೃತದಲ್ಲಿ ಅಭೇದಾಗಮರೂಪ ಉಪಜೀವಕಕ್ಕೆ ಭೇದಾಗಮವಾಗಲೀ, ಭೇದ ಪ್ರತ್ಯಕ್ಷವಾಗಲಿಹೀಗೆ ಧರ್ಮಾದಿಗ್ರಾಹಕವಾಗಿಉಪಜೀವ್ಯವಲ್ಲ. ಮತ್ತೆ ಪ್ರತಿಷೇಧ್ಯಭೇದವಾದ ಸಮ ರ್ಪಕವಾಗಿಯೇ ಉಪಜೀವ್ಯವು. ಇಂತಹಸ್ಥಳದಲ್ಲಿ ಹಿಂದೆಹೇಳಿದ ನ್ಯಾಯುವಿಲ್ಲ. ಮತ್ತೆ ಉಪಜೀವ ಕದಿಂದಲೇ ಉಪಜೀವ್ಯಕ್ಕೆ ಬಾಧವು. ಪ್ರತ್ಯಕ್ಷ ಆಗಮಗಳು ಅನುಮಾನ ಆಗಮಗಳನ್ನು ಕುರಿತು ನಿಷೇಧ್ಯ ಸಮರ್ಪಕವಾಗಿ ಉಪಜೀವ್ಯಗಳಾಗಿವೆ. ಭೇದಪ್ರಾಪ್ತಿಯಿಲ್ಲದೆ ಭೇದ ನಿಷೇಧವು ಕೂಡ ಲಾರದು. ಆದುದರಿಂದ ಇಲ್ಲಿ ಉಪಜೀವಕವಿರೋಧಿಗಳಾದ ಉಪಜೀವ್ಯಗಳಾದ ಪ್ರತ್ಯಕ್ಷ ಆಗ ಮಗಳಿಗೇನೇ ಅಪ್ರಾಮಾಣ್ಯವು ಉಚಿತವಾದುದರಿಂದ 'ಯಃ ಸರ್ವಜ್ಞಃ' ಇದುಮೊದಲಾದ ಉಪಜೀವ್ಯ ಆಗಮಕ್ಕೆ ಅಪ್ರಾಮಾಣ್ಯವೆನ್ನುವುದನ್ನು 'ಅಪ್ರಾಮಾಣ್ಯಂ ಯದಾ' ಇತ್ಯಾದಿಗಳಿಂದ ತಿರಸ್ಕರಿಸಿದರು. ಅಂದರೆ ಪ್ರವೃತ್ತಿಯನ್ನು ಹೊಂದಿದ ವಿರೋಧಿಯಾದ ಅನುಮಾನ ದಿಂದ ಲಾಗಲೀ, ಆಗಮದಿಂದಲಾಗಲೀ 'ಯಃ ಸರ್ವಜ್ಞಃ' ಇದುಮೊದಲಾದ ಆಗಮಕ್ಕೆ ಅಪ್ರಾಮಾಣ್ಯ ವನ್ನು ಹೇಳಬೇಕು. ಈ ಆಗಮಕ್ಕೆ ಅಪ್ರಾಮಾಣ್ಯವಿದ್ದರೆ ಅನುಮಾನಾದಿಗಳಿಗೆ ಪ್ರವೃತ್ತಿಯೇ ಕೂಡಲಾರದು. ಅನುಮಾನಾದಿಗಳಿಂದ ಬಾಧ್ಯತ್ವವು ಸುತರಾಂ ಕೂಡಲಾರದು. ಪರಮಾತ್ಮ ರೂಪಧರ್ಮಿಯು ಕೇವಲ ಆಗಮದಿಂದಲೇ ವೇದ್ಯವಾಗುವುದು. ಏಕೆಂದರೆ— ನಿರಾಶ್ರಯ ವಾದ ಅನುಮಾನಾದಿಗಳಿಗೆ ಪ್ರವೃತ್ತಿಯೇ ಕೂಡಲಾರದು. ॥ ೫೬ ॥

ಆದರೂ ಅಭೇದಾನುಮಾನ ಆಗಮಗಳ ವಿರೋಧದಿಂದ 'ಯಃ ಸರ್ವಜ್ಞಃ' ಇತ್ಯಾದಿ ಶ್ರುತಿಗಳಿಗೇನೇ ಅಪ್ರಾಮಾಣ್ಯವನ್ನುಪಪಾದಿಸಲಿಕ್ಕೆ ಶಕ್ಯವಾಗುವುದು. ಏಕೆಂದರೆ— ಈ ಶ್ರುತಿಯೂ ಬ್ರಹ್ಮಸ್ವರೂಪಮಾತ್ರದಲ್ಲಿಯೇ ಪ್ರಮಾಣವು. ಅದನ್ನು ಮಾತ್ರ ಉಪಜೀವಿಸಿ ಕೊಂಡು ಪ್ರವೃತ್ತಗಳಾದ ಅನುಮಾನ, ಆಗಮಗಳಿಂದ ಸಾರ್ವಜ್ಞ ಮೊದಲಾದ ಭೇದಕಧರ್ಮಾ ಂಶದಲ್ಲಿ ಅಪ್ರಮಾಣವಾಗಿ ಮಾಡಲ್ಪಡುತ್ತದೆ. ತಥಾ ಚ ಯಾವುದು ಧರ್ಮಿಗ್ರಾಹಕವೋ ಅದರ ವಿರೋಧವು ಅನುಮಾನಾದಿಗಳಿಗೆ ಇಲ್ಲವು. ಯಾವುದು ವಿರೋಧಿಯೋ ಅದು ಧರ್ಮಿ ಗ್ರಾಹಕ ಪ್ರಮಾಣವಲ್ಲ, ಎಂದರೆ—

**ಮೂ ॥ ಯತ್ಸ್ವರೂಪಗ್ರಹೇ ಮಾನಂ ತದ್ಧರ್ಮೇ ನ ಕಥಂ ಭವೇತ್ ॥ ೫೭ ॥**
**ಏಕವಿಜ್ಞಾನವಿಜ್ಞಪ್ತ್ಯಾ ದ್ವಯಂ ಮಾನಂ ಭವಿಷ್ಯತಿ ।**
**ನ ಚೇದೇಕಂ ಪ್ರಮಾಣಂ ತದ್ದ್ವಯಮಪ್ಯತ್ರ ನೋ ಭವೇತ್ ॥ ೫೮ ॥**

ಅ ॥ ಯತ್=ಯಾವ 'ಯಃ ಸರ್ವಜ್ಞಃ' ಇತ್ಯಾದಿ ಶ್ರುತಿವಾಕ್ಯವು, ಸ್ವರೂಪಗ್ರಹೇ= ಬ್ರಹ್ಮಸ್ವರೂಪದ ಗ್ರಹಣಕ್ಕಾಗಿ, ಮಾನಂ=ಪ್ರಮಾಣವೆಂದು ಅಂಗೀಕರಿಸಲ್ಪಡುತ್ತದೋ, ತತ್= ಆ ವಾಕ್ಯವು, ಧರ್ಮೇ=ಸಾರ್ವಜ್ಞಾದಿ ಧರ್ಮವೈಶಿಷ್ಟ್ಯಾಕಾರದಲ್ಲಿ, ಕಥಂ=ಹೇಗೆ, ಮಾನಂ= ಪ್ರಮಾಣವು, ನ ಭವೇತ್=ಆಗಲಾರದು. ಏಕವಿಜ್ಞಾನವಿಜ್ಞಪ್ತ್ಯಾ=ಯಃ ಸರ್ವಜ್ಞಃ ಇದು ಮೊದ ಲಾದ ಶ್ರುತಿಗಳಿಂದುಂಟಾದ ವಿಜ್ಞಾನವು ಏಕವಿಧವಾದುದೇ, ಪುನಃ ಶುಕ್ತಿರಜತಾದಿ ಜ್ಞಾನದಂತೆ ಸ್ವರೂಪಮಾತ್ರದಲ್ಲಿ ಪ್ರಮಾಣವೂ, ವಿಶಿಷ್ಟಾಕಾರದಲ್ಲಿ ಅಪ್ರಮಾಣವೂ ಎಂದು ಅನೇಕ ವಿಧ ವಾದುದು ಅಲ್ಲವೆಂದು ಪರೀಕ್ಷಾ ಸಹಕೃತವಾದ ಸಾಕ್ಷಿರೂಪ ವಿಜ್ಞಾನದಿಂದಲೂ, (ಇದಂ ಜ್ಞಾನಂ= ಈ ಜ್ಞಾನವು), ದ್ವಯಂ=ಧರ್ಮ-ಧರ್ಮಿರೂಪ ವಿಶಿಷ್ಟಾಕಾರವನ್ನು ಕುರಿತೂಕೂಡ, ಮಾನಂ=

ಪ್ರಮಾಣವು, ಭವಿಷ್ಯತಿ=ಆಗಿಯೇ ಆಗುವುದು. (ಅಥವಾ) ದ್ವಯಂ=ಪ್ರತೀತಿಗಳೆರಡು ಸ್ವರೂಪದಂತೆ ಧರ್ಮದಲ್ಲಿಯೂ (ಪ್ರಮಾಣವಾಗುವುದು.) (ಅಥವಾ 'ಯಃ ಸರ್ವಜ್ಞಃ' ಇತ್ಯಾದಿ ಶ್ರುತಿಗಳಿಗೆ ಬ್ರಹ್ಮಸ್ವರೂಪಮಾತ್ರದಲ್ಲಿ ಪ್ರಾಮಾಣ್ಯವು. ಸಾರ್ವಜ್ಞಾದಿ ವಿಶಿಷ್ಟಾಕಾರದಲ್ಲಿ ಅಪ್ರಾಮಾಣ್ಯವು ಎಂದು ಹೇಳುವವನ ಅಭಿಪ್ರಾಯವು ಯಾವುದು? ೧ ಶುಕ್ತಿರಜತಾದಿ ಜ್ಞಾನದಂತೆ ಒಂದೇ ಈ ಜ್ಞಾನವು ವಿಷಯಭೇದದಿಂದ ಪ್ರಮಾಣವೂ, ಅಪ್ರಮಾಣವೂ ಎಂದೋ? ೨ ಅಥವಾ ಜ್ಞಾನಗಳೆರಡೋ? ಅದರಲ್ಲಿ ಒಂದು ಪ್ರಮಾಣವು ಮತ್ತೊಂದು ಅಪ್ರಮಾಣವು ಎಂದೋ? ೧ನೇದ್ದನ್ನು 'ಯತ್ಸ್ವರೂಪಗ್ರಹೇ' ಎನ್ನುವುದರಿಂದ ದೂಷಿಸಿದರು.)(೨ನೇದ್ದನ್ನು ನಿರಾಕರಿಸುತ್ತಾರೆ.) ಏಕವಿಜ್ಞಾನವಿಜ್ಞಪ್ತ್ಯಾ=ಒಂದೇ ಇದು ವಿಜ್ಞಾನವು ಎನ್ನುವ ಸಾಕ್ಷಿಜ್ಞಾನದಿಂದ, (ಅನೇಕತ್ವವನ್ನು ಕಲ್ಪಿಸಕೂಡದು.) (ಇದು ಜ್ಞಾನದ್ವಯವಾಗಲಿ, ಆದಾಗ್ಯೂ ಒಂದಕ್ಕೆ ಅಪ್ರಾಮಾಣ್ಯವನ್ನು ಹೇಳಲು ಶಕ್ಯವಾಗುವುದಿಲ್ಲ. ಸ್ವರೂಪಜ್ಞಾನದಂತೆ ಧರ್ಮಜ್ಞಾನವೂ ಅಬಾಧಿತವಾಗಿದೆ ಎನ್ನುತ್ತಾರೆ.) ದ್ವಯಂ=ಜ್ಞಾನಗಳೆರಡೂ, ಮಾನಂ=ಪ್ರಮಾಣವು, ಭವಿಷ್ಯತಿ=ಆಗುವುದು. (ಹೀಗೆ ಬಾಧಾಭಾವಪರೀಕ್ಷಿತತ್ವಗಳು ಸಮಾನಗಳಾದಾಗ್ಯೂ ಶ್ರುತಿಜನ್ಯವಾದುದು ಒಂದು ಜ್ಞಾನ ಅಥವಾ ಎರಡು ಜ್ಞಾನಗಳೆಂದು ಅಂಗೀಕರಿಸಿ, ಅಂಶದಿಂದ ಪ್ರಾಮಾಣ್ಯ-ಅಪ್ರಾಮಾಣ್ಯಗಳನ್ನು ಹೇಳುವವನಿಗೆ ಅತಿಪ್ರಸಂಗವನ್ನು ಹೇಳುತ್ತಾರೆ.) ತತ್=ಶ್ರುತಿಜನ್ಯವಾದ ಜ್ಞಾನವು, ದ್ವಯಂ=ವಿಶಿಷ್ಟಾಕಾರವನ್ನು ಕುರಿತು, ಪ್ರಮಾಣಂ ನ ಚೇತ್=ಪ್ರಮಾಣವಾಗದೆ ಇದ್ದರೆ, ಆಗ, ಅತ್ರ=ಈ ವಿಷಯದಲ್ಲಿ, ಏಕಮಪಿ=ಸ್ವರೂಪಾಂಶವನ್ನೂ ಕೂಡ ಕುರಿತು, ಪ್ರಮಾಣಂ=ಪ್ರಮಾಣವು, ನೋ ಭವೇತ್=ಆಗಲಾರದು. ಅಥವಾ, ತತ್=ವಿಜ್ಞಾನವು, ಅತ್ರ=ಈ ವಿಷಯದಲ್ಲಿ, ಏಕಂ=ವಿಶಿಷ್ಟಾಕಾರವನ್ನು ಕುರಿತು, ಪ್ರಮಾಣಂ ನ ಚೇತ್=ಪ್ರಮಾಣವಾಗದೆ ಇದ್ದರೆ,ಆಗ, ದ್ವಯಮಪಿ ನೋಭವೇತ್=ವಿಶಿಷ್ಟಾಕಾರದಂತೆ ಸ್ವರೂಪದಲ್ಲಿಯೂ ಪ್ರಮಾಣವು ಆಗಲಾರದು. (ಎರಡು ಜ್ಞಾನಗಳನ್ನು ಅಂಗೀಕರಿಸುವುದು ಎನ್ನುವ ವಾದದಲ್ಲಿ ಆದರೂ)ಅತ್ರ=ಈ ಎರಡು ಜ್ಞಾನಗಳಲ್ಲಿ, ತತ್=ವಿಶಿಷ್ಟವಿಷಯಕವಾದ ಜ್ಞಾನವು, ಪ್ರಮಾಣಂ ನ ಚೇತ್ = ಪ್ರಮಾಣವಾಗದೆ ಇದ್ದರೆ, ದ್ವಯಮಪಿ = ಎರಡು ಜ್ಞಾನಗಳೂ ಕೂಡ, ಪ್ರಮಾಣಂ ನೋ ಭವೇತ್=ಪ್ರಮಾಣವು ಆಗಲಾರದು. (ವಿಶಿಷ್ಟ ಜ್ಞಾನದಂತೆ ಸ್ವರೂಪ ಜ್ಞಾನವೂ ಅಪ್ರಮಾಣವಾಗುವುದು.)

**ತಾ** ॥ (1) ರಜತಜ್ಞಾನವು ಇದಮಂಶದಲ್ಲಿ ಪ್ರಮಾಣವು, ರಜತವೈಶಿಷ್ಟ್ಯಾಂಶದಲ್ಲಿ ಅಪ್ರಮಾಣವೆಂದು ಹೇಳಲಿಕ್ಕೆ ಬರುತ್ತದೆ. ವೈಶಿಷ್ಟ್ಯಾಂಶವು ಬಾಧಕಪ್ರಮಾಣದಿಂದ ವಿರುದ್ಧವಾಗಿದೆ. ಇದಮಾಕಾರವೂ ಉತ್ತರಕಾಲದಲ್ಲಿಯೂ ಅನುವೃತ್ತವಾಗಿರುತ್ತದೆ. ಪ್ರಕೃತದಲ್ಲಿ ಹಾಗೆ ಹೇಳಲಿಕ್ಕೆ ಬರುವುದಿಲ್ಲ. ಬ್ರಹ್ಮಸ್ವರೂಪದಂತೆ ಧರ್ಮವೈಶಿಷ್ಟ್ಯಾಂಶದಲ್ಲಿಯೂ ಬಾಧಕವು ಇರುವುದಿಲ್ಲ. ಅಭೇದಾನುಮಾನಗಳೇ ಬಾಧಕಗಳೆಂದು ಹೇಳಕೂಡದು. ಏಕೆಂದರೆ— ಅನುಮಾನಾದಿಗಳ ಬಾಧದಿಂದ 'ಯಃ ಸರ್ವಜ್ಞಃ' ಇತ್ಯಾದಿ ಶ್ರುತಿಗಳಿಗೆ ಅಪ್ರಾಮಾಣ್ಯವು ಸಿದ್ಧವಾದರೆ ಉಪಜೀವ್ಯ ವಿರೋಧವಿಲ್ಲದಿರುವ ಅನುಮಾನಾದಿಗಳಿಗೆ ಬಾಧಕತ್ವವು ಸಿದ್ಧಿಸುವುದು. ಬಾಧಕತ್ವವು ಸಿದ್ಧಿಸಿದರೆ ತದ್ವಿರೋಧಿಯಾದ ಶ್ರುತಿಗೆ ಅಪ್ರಾಮಾಣ್ಯವೆಂದು ಅನ್ಯೋನ್ಯಾಶ್ರಯತ್ವವು ಬರುವುದು. (2) ಮತ್ತು ಯಾವಚ್ಛಕ್ತಿ ಪರೀಕ್ಷಿತವಾದ ವಿರುದ್ಧಾರ್ಥ ವಿಷಯಕವಾದ ಉತ್ತರ ಜ್ಞಾನವು ಅಪರೀಕ್ಷಿತವಾದ ಪೂರ್ವಜ್ಞಾನಕ್ಕೆ ಬಾಧಕವಾಗಿ ಕಂಡದೆ. ಪ್ರಕೃತದಲ್ಲಿ ಅಭೇದಾನುಮಾನಗಳು ಪ್ರಮಾಣಗಳೆಂದು ಪರೀಕ್ಷಿತಗಳೇ ಆಗಲಿಲ್ಲ. ಆದುದರಿಂದ ಪೂರ್ವಪ್ರವೃತ್ತವಾದ ವಿಶಿಷ್ಟಾಂಶದಲ್ಲಿಯೂ ಪ್ರಮಾಣವೆಂದು ಪರೀಕ್ಷಿತವಾದ ಭೇದಶ್ರುತಿಗೆ ಬಾಧಕಗಳಾಗಲಾರವು. ಪ್ರತ್ಯುತ ಉಪಜೀವ್ಯತ್ವದಿಂದ ಪ್ರಬಲವಾದ ಭೇದಾಗಮದಿಂದಲೇ ಅಭೇದಾಗಮವು ಬಾಧಿತವೇ ಆಗುವುದು ॥ ೫೭ ॥ ೫೮ ॥

ಹೀಗೆ ಅಭೇದಾನುಮಾನ ಆಗಮಗಳನ್ನು ಕುರಿತು 'ಯಃ ಸರ್ವಜ್ಞಃ' ಇತ್ಯಾದಿ ಶ್ರುತಿಗೆ ನಿಷೇಧ್ಯಸಮರ್ಪಕವಾಗಿ ಉಪಜೀವ್ಯತ್ವವೆನ್ನುವುದು ತಿರಸ್ಕೃತವಾಯಿತು.

ಆದರೂ ಅನುಮಾನಾಗಮಗಳಿಗೆ ಉಪಜೀವ್ಯ ಪ್ರಮಾಣವಿರೋಧವಿಲ್ಲ. ಏಕೆಂದರೆ—'ಯಃ ಸರ್ವಜ್ಞಃ' ಇತ್ಯಾದಿ ಶ್ರುತಿಸಿದ್ಧ ಬ್ರಹ್ಮಸ್ವರೂಪವನ್ನು ಮಾತ್ರ ಆಶ್ರಯಿಸಿ ಪ್ರವೃತ್ತವಾಗಿದೆ. ಸಾರ್ವಜ್ಞ್ಯಾದಿ ವಿಶಿಷ್ಟಾಕಾರವನ್ನು ಆಶ್ರಯಿಸಿ ಅನುಮಾನಾದಿಗಳು ಪ್ರವೃತ್ತಗಳಾಗಬೇಕೆನ್ನುವ ವಿಷಯದಲ್ಲಿ ನಿಯಾಮಕವಿಲ್ಲ. ಆದಕಾರಣ ವಿರುದ್ಧಾಕಾರಕ್ಕೆ ಉಪಯೋಗವಿಲ್ಲದಿರುವುದರಿಂದ ಉಪಜೀವ್ಯತ್ವವಿಲ್ಲ. ಉಪಜೀವ್ಯವಾದ ಸ್ವರೂಪಮಾತ್ರವಾದರೂ ವಿರೋಧಿ ಆಗದಿರುವುದರಿಂದ ಅನುಮಾನಾದಿಗಳಿಗೆ ಉಪಜೀವ್ಯಪ್ರಮಾಣವಿರೋಧವಿಲ್ಲ. ಪ್ರಮಾಣವಿರೋಧವಾದರೂ ಕಥಂಚಿತ್ ಬರುವುದು, ಎನ್ನುವ ಆಶಂಕೆಯನ್ನು ಪರಿಹರಿಸುತ್ತಾ ಉಪಸಂಹಾರಮಾಡುತ್ತಾರೆ—

**ಮೂ ॥ ಧರ್ಮಿಗ್ರಾಹಿ ವಿರೋಧಸ್ತು ತಸ್ಮಾನ್ಮಾನಸ್ಯ ದೂಷಣಂ ।**
**ನೋಪಜೀವ್ಯೋಹ್ಯಭೇದೋಽತ್ರ ಕ್ವಚಿದ್ಭೇದ ಶ್ರುತೇರ್ಬಲಾತ್ ॥೫೯॥**

**ಅ** ॥ ತಸ್ಮಾತ್=ಆದಕಾರಣ, ಧರ್ಮಿಗ್ರಾಹಿವಿರೋಧಸ್ತು=ಧರ್ಮಿಗ್ರಾಹಿಯಾದ ಶ್ರುತಿಯಿಂದ ವಿರೋಧವಾದರೂ, ಮಾನಸ್ಯ=ಅಭೇದ ಪ್ರಮಾಣವಾದ ಅನುಮಾನ ಆಗಮಗಳಿಗೆ, ದೂಷಣಂ=ದೂಷಣವು,(ಆಗುತ್ತದೆ.)ಅಂದರೆ ಪರಮಾಣುಗಳಿಗೆ ಸಾವಯವತ್ವಸಾಧಕವಾದ ಅನುಮಾನಕ್ಕೆ ನಿರವಯತ್ವದಿಂದಲೇ ಪರಮಾಣುರೂಪಧರ್ಮಿಯನ್ನು ತಿಳಿಸುವ ಧರ್ಮಿಗ್ರಾಹಕ ಪ್ರಮಾಣದಿಂದ ಹೇಗೆ ವಿರೋದವುಬರುವುದೋ ಅದರಂತೆ ಸರ್ವಜ್ಞತ್ವ ಮೊದಲಾದ ಪಾರಮಾರ್ಥಿಕ ಧರ್ಮದಿಂದ ವಿಶಿಷ್ಟವಾದುದನ್ನೇ ಧರ್ಮಿಯನ್ನಾಗಿ ತಿಳಿಸಿಕೊಡುವ ಧರ್ಮಿಗ್ರಾಹಕಪ್ರಮಾಣ ವಿರೋಧವು ಅನುಮಾನಾಗಮಗಳಿಗೆ ಬಂದೇ ಬರುವುದು. (ಹೇಗೆ ಅಭೇದ ಪ್ರಮಾಣಗಳಾದ ಅನುಮಾನ ಆಗಮಗಳಿಗೆ ಉಪಜೀವ್ಯ ವಿರೋಧದಿಂದ ಅಭೇದ ಸಾಧಕತ್ವವಿಲ್ಲವೋ, ಹಾಗೆಯೇ ಉದಾಹೃತವಾದ '**ಭಿನ್ನೋಽಚಿಂತ್ಯಃ**' ಇತ್ಯಾದಿ ಭೇದಶ್ರುತಿಗಳಿಗೂ ಉಪಜೀವ್ಯವಿರೋಧವಿದ್ದುದರಿಂದ ಭೇದಸಾಧಕತ್ವವು ಕೂಡುವುದಿಲ್ಲ. ತಾದಾತ್ಮ್ಯಾಭಾವವೇ ಭೇದವು. ತಾದಾತ್ಮ್ಯವು ಪ್ರಾಪ್ತವಾಗದೆ ಇದ್ದರೆ ತಾದಾತ್ಮ್ಯಾಭಾವವನ್ನು ಬೋಧಿಸುವುದು ಯುಕ್ತವಾಗಲಾರದು. ಆದಕಾರಣ ಅಭೇದ ಪ್ರಾಪಕವಾದ ಪ್ರಮಾಣವನ್ನು ಉಪಜೀವಿಸಿಕೊಂಡು ಪ್ರವೃತ್ತವಾದ ಭೇದಶ್ರುತಿಯು ಹೇಗೆ ಉಜೀವ್ಯ ವಿರುದ್ಧವಾಗದೆ ಇದ್ದೀತು? ಎಂದಾಶಂಕಿಸಿದರೆ) ಅಭೇದಃ=ಅಭೇದಗ್ರಾಹಕವಾದ ಪ್ರಮಾಣವು, ಅತ್ರ ಕ್ವಚಿತ್=ಧರ್ಮಿತತ್ವಾದಿಗಳ ವಿಷಯದಲ್ಲಿ, ಭೇದಶ್ರುತೇಃ=ಭೇದಶ್ರುತಿಗೆ, ಧರ್ಮಿಗ್ರಾಹಕವಾಗಿ ಉಪಜೀವ್ಯವಾಗಿದೆ ಎನ್ನುವುದರಿಂದ, ನೋಪಜೀವ್ಯೋಹಿ=ಉಪಜೀವ್ಯವಾದುದಲ್ಲ. (ಆದುದರಿಂದ ಜೀವೇಶ ಭೇದಶ್ರುತಿಗೆ ಧರ್ಮ್ಯಾದಿಸಿದ್ಧಿವಿಷಯದಲ್ಲಿ ಅಭೇದಶ್ರುತ್ಯನಪೇಕ್ಷತ್ವವಿದ್ದುದರಿಂದ) ಬಲಾತ್= ಅನಪೇಕ್ಷತ್ವರೂಪಸಾಮರ್ಥ್ಯದ್ವೆಶಿಯಿಂದ, (ಭೇದಸಾಧಕತ್ವವು ಯುಕ್ತವು.) (ಮತ್ತು 'ಯಃ ಸರ್ವಜ್ಞಃ' ಇತ್ಯಾದಿ ಶ್ರುತಿಗಳಿಗೆ ಉಪಜೀವ್ಯತ್ವವಿದೆಯೋ ಇಲ್ಲವೋ ಎನ್ನುವ ವಿಚಾರವು ಇರಲಿ, ಉಪಜೀವ್ಯತ್ವವಿಲ್ಲವೆಂದು ಇಟ್ಟುಕೊಂಡರೂ ಅಭೇದಾನುಮಾನ ಆಗಮಗಳನ್ನುಕುರಿತು ಬಾಧಕತ್ವವು ಬಂದೇಬರುವುದು. ಈ ಶ್ರುತಿಯು ಸಾರ್ವಜ್ಞಾದಿಗಳಿಂದ ವಿಶಿಷ್ಟನಾದ ಈಶ್ವರನನ್ನು ಪ್ರತಿಪಾದಿಸತಕ್ಕುದು. ಯಾವುದನ್ನೂ ಅಪೇಕ್ಷಿಸುವುದಿಲ್ಲ. ಅಭೇದಾನುಮಾನಾಗಮಗಳು ಸಾಪೇಕ್ಷಗಳಾಗಿವೆ. ಸಾಪೇಕ್ಷನಿರಪೇಕ್ಷಗಳಲ್ಲಿ ನಿರಪೇಕ್ಷವು ಪ್ರಬಲವು ಎನ್ನುತ್ತಾರೆ.) ಅತ್ರ = ಭೇದಾಭೇದಪ್ರಮಾಣಗಳ ಮಧ್ಯದಲ್ಲಿ, ಭೇದಶ್ರುತೇಃ=ಭೇದಕ ಧರ್ಮವಿಶಿಷ್ಟಧರ್ಮಿಶ್ರುತಿಗೆ, ಅಭೇದಃ=ಅಭೇದಪ್ರಮಾಣವು,

ಉಪಜೀವ್ಯಃ=ಉಪಜೀವ್ಯವು, ಯಾವ ವಿಧದಿಂದಲೂ ಅಪೇಕ್ಷಣೀಯುವಾದುದು) ನ ಹಿ=ಅಲ್ಲ ವಷ್ಟೆ. (ಆದುದರಿಂದ) ಬಲಾತ್=ಅನಪೇಕ್ಷತ್ವರೂಪಬಲದಿಂದಲೇ, (ಭೇದಶ್ರುತಿಗೆ ಅಭೇದ ಪ್ರಮಾಣ ಬಾಧಕತ್ವವು ಕೂಡುತ್ತದೆ).

ಟೀ । ನ್ಯಾಯಸುಧಾ— (1) ಅಭೇದಶ್ರುತಿಯು ಧರ್ಮಿಸಮರ್ಪಕವಾಗಿ ಭೇದಶ್ರುತಿಗೆ ಉಪಜೀವ್ಯವೆಂದು ಹೇಳಕೂಡದು. ಜೀವೇಶ್ವರಸ್ವರೂಪವೇ ಧರ್ಮಿಯು. ಪ್ರಾಮಾಣ್ಯವನ್ನು ಗ್ರಹಿಸಿಕೊಡುವುದರಿಂದಲೂ ಅಲ್ಲ. ಅದು ಪ್ರತ್ಯಕ್ಷದಿಂದಲೇ ಸಿದ್ಧವಾಗುವುದು. ಆದಕಾರಣ ಅಭೇದಶ್ರುತಿಯು ನಿಷೇಧ್ಯಪ್ರಾಪಕವಾಗಿಯೇ ಉಪಜೀವ್ಯವೆನ್ನಬೇಕು. ನಿಷೇಧ್ಯಪ್ರಾಪಕದ ವಿರೋಧವು ನಿಷೇಧಕಶಾಸ್ತ್ರಕ್ಕೆ ಅಪ್ರಾಮಾಣ್ಯವನ್ನು ಹೊಂದಿಸಿಕೊಡಲಾರದು. ಹೀಗಾದರೆ ನಿಷೇಧಶಾಸ್ತ್ರಕ್ಕೆಲ್ಲಾದಕ್ಕೂ ಅಪ್ರಾಮಾಣ್ಯವೇ ಬರಬೇಕಾಗುವುದು. ಮತ್ತು ಭೇದಶ್ರುತಿಯು ಪ್ರಮಾಣ ಪ್ರಾಪ್ತವಾದ ಅಭೇದಕ್ಕೆ ನಿಷೇಧಕವಲ್ಲ. ಮತ್ತೆ ತತ್ತ್ವಮಸಿ ಮೊದಲಾದ ಶ್ರುತಿಗಳ ತಾತ್ಪರ್ಯಗಳ ಅಪರಿಜ್ಞಾನದಿಂದ ಆಪಾತತಃ ತೋರುವ ಅಭೇದಕ್ಕೇನೇ ನಿಷೇಧಕವು. (2) ಮತ್ತು ನಿರ್ಭೇದವಾದ ಸ್ವರೂಪವನ್ನು ಇಟ್ಟುಕೊಂಡು ಭೇದವನ್ನು ಬೋಧಿಸಬೇಕೆಂದು ಯಾವುದು ಹೇಳಿಯದೋ ಅದೂ ಅಯುಕ್ತವು. ಅಲ್ಲಿಯೂ ಯಾವುಗಳಿಗೆ ಭೇದವನ್ನು ಬೋಧಿಸಬೇಕೋ ಅವುಗಳಿಗೆ ಅಭೇದವನ್ನು ಆಶ್ರಯಿಸಬೇಕಾಗಿಲ್ಲ. ಮತ್ತೆ ತನ್ನಿಂದ ಅಭಿನ್ನವಾದ ವಸ್ತುವನ್ನು ಧರ್ಮಿಯಾಗಿಟ್ಟುಕೊಂಡು ಅದಕ್ಕ ಮತ್ತೊಂದರಿಂದ ಭೇದವನ್ನು ಬೋಧಿಸಬೇಕು. ಆದುದರಿಂದ ಜೀವೇಶಭೇದಶ್ರುತಿಯು ಜೀವೇಶಾಭೇದವನ್ನು ಉಪಜೀವಿಸದೆ ಇರುವುದರಿಂದ ಅನಪೇಕ್ಷತ್ವರೂಪವಾದ ಬಲದಿಂದ ಭೇದ ಸಾಧಕತ್ವವು ಯುಕ್ತವು. ॥ ೫೯ ॥

'ಯಃ ಸರ್ವಜ್ಞಃ' ಇತಾದಿ ಶ್ರುತಿಯು ಜೀವಭೇದಕವಾದ ಧರ್ಮದಿಂದ ವಿಶಿಷ್ಟನಾದ ಬ್ರಹ್ಮನನ್ನು ಪ್ರತಿಪಾದಿಸುವುದಿಲ್ಲ. ಮತ್ತು ಅನುವಾದ ಮಾಡುತ್ತದೆ. ಆದುದರಿಂದ ಅನುಮಾನಾದಿಗಳಿಂದಲೇ ಅದಕ್ಕೆ ಬಾಧವು. ಎಂದರೆ—

ಮೂ ॥ ನ ಚ ಮಾನಾಂತರೋಪೇಯಂ ಬ್ರಹ್ಮ ತದ್ಭವತಿ ಕ್ವಚಿತ್ ।
ಯೇನ ಮಾನೇನ ಚೋಪೇಯಂ ಭೇದಸ್ತೇನಾವಗಮ್ಯತೇ ॥ ೬೦ ॥
ಸರ್ವಜ್ಞಾನುಮಯೈವೇಶೋ ಯದ್ಯುಪೇಯಃ ಕಥಂಚನ ।
ಸರ್ವಜ್ಞತ್ವಗುಣೇನೈವ ತಯಾ ಭೇದೋಽವಗಮ್ಯತೇ ॥ ೬೧ ॥

ಅ ॥ ತತ್ ಬ್ರಹ್ಮ=ಸಾರ್ವಜ್ಞಾದಿಗಳಿಂದೊಡಗೂಡಿದ ಬ್ರಹ್ಮನು, ಕ್ವಚಿತ್=ಎಲ್ಲಿಯೂ, ಮಾನಾಂತರೋಪೇಯಂ=ಪ್ರಮಾಣಾಂತರದಿಂದ ಜ್ಞೇಯನು, ನ ಭವತಿ=ಆಗುವುದಿಲ್ಲ. (ಅಂದರೆ ಪರಬ್ರಹ್ಮನು ಶಾಸ್ತ್ರೈಕ ಸಮಧಿಗಮ್ಯನೆಂದು ಸಮರ್ಥಿಸಿದರಿಂದ ಸಾರ್ವಜ್ಞಾದಿ ವಿಶಿಷ್ಟಬ್ರಹ್ಮನು ಶ್ರುತಿವ್ಯತಿರಿಕ್ತಪ್ರಮಾಣಗಳಿಂದ ತಿಳಿಯಲು ಶಕ್ಯನಲ್ಲ. ಎಲ್ಲಿಯಾದರೂ ಒಂದು ಕಡೆ ಪ್ರಮಿತವಾದುದಕ್ಕೇನೇ ಬೇರೆಕಡೆ ಆರೋಪವಿರುವುದರಿಂದ ಬ್ರಹ್ಮನು ಭ್ರಾಂತಿಪ್ರತಿಪನ್ನನೂ ಆಗಲಾರನು. ಪ್ರಮಾಣದಿಂದಲಾಗಲೀ, ಭ್ರಾಂತಿಯಿಂದಲಾಗಲೀ, ಅಪ್ರಾಪ್ತವಾದುದಕ್ಕೆ ಅನುವಾದವು ಕೂಡಲಾರದು. ಆದಕಾರಣ ಈ ಶ್ರುತಿಯು ಅನುವಾದಕವಲ್ಲ. ಮತ್ತೆ ಪರಬ್ರಹ್ಮನು ಸಾರ್ವಜ್ಞಾದಿ ವಿಶಿಷ್ಟನೆಂದೇ ಶ್ರುತಿಯು ಮಹಾತಾತ್ಪರ್ಯದಿಂದ ಪ್ರತಿಪಾದಿಸುತ್ತದೆ.) (ಆದಾಗ್ಯೂ ಅನುಮಾನಾದಿಗಳಿಗೆ ಉಪಜೀವ್ಯ ಪ್ರಮಾಣವಿರೋಧವಿಲ್ಲ. ಶ್ರುತಿಗೆ ಉಪಜೀವ್ಯತ್ವವನ್ನು ಇಟ್ಟುಕೊಂಡರೆ ಉಪಜೀವ್ಯ ಶ್ರುತಿವಿರೋಧವು ಬರುತ್ತಿತ್ತು. ಹಾಗೆ ಹೇಳುವುದಿಲ್ಲ. ಶ್ರುತಿ ವ್ಯತಿರಿಕ್ತವಾದ

ಪ್ರಮಾಣವನ್ನುಪಜೀವಿಸಿಕೊಂಡು ಇದೆ ಎಂದರೆ—) (ವಸ್ತು ವ್ಯವಹಿತವಾದ ವಹ್ನಿಯು ಧೂಮವಿಲ್ಲದಿರುವ ಸ್ಥಳದಲ್ಲಿ ಪ್ರತ್ಯಕ್ಷಾದಿಗಳಿಂದ ವೇದ್ಯವಾಗದೆ ಇದ್ದರೂ ಕೆಲವು ದೇಶದಲ್ಲಿ ಪ್ರತ್ಯಕ್ಷದಿಂದಲಾಗಲೀ, ಅನುಮಾನದಿಂದಲಾಗಲೀ ತಿಳಿಯಲ್ಪಡುತ್ತದೆ. ಪತನಕ್ಕಿಂತ ಮೊದಲು ಗುರುತ್ವವು ತಿಳಿಯಲ್ಪಡದೆ ಇದ್ದರೂ ಕೆಲವು ಕಾಲದಲ್ಲಿ ಅನುಮಾನದಿಂದ ತಿಳಿಯಲ್ಪಡುತ್ತದೆ. ಹೀಗೆ) ತತ್ ಬ್ರಹ್ಮ=ಆ ಬ್ರಹ್ಮನು, ಕ್ವಚಿತ್=ಎಲ್ಲಿಯೂ, ಮಾನಾಂತರೋಪೇಯಂ=ಪ್ರಮಾಣಾಂತರದಿಂದ ಜ್ಞೇಯನು, ನ ಚ ಭವತಿ=ಆಗುವುದಿಲ್ಲ. (ಯಾವುದರಿಂದ ಮಾನಾಂತರವನ್ನು ಉಪಜೀವಿಸಿಕೊಂಡು ಅನುಮಾನಾದಿಗಳ ಪ್ರವೃತ್ತಿಯಾಗುವುದು.) (ಬ್ರಹ್ಮನು ಪ್ರಮಾಣಾಂತರದಿಂದ ವೇದ್ಯನಾಗಲಿ, ಆದಾಗ್ಯೂ ಅಭೇದಾನುಮಾನಾದಿಗಳಿಗೆ ಉಪಜೀವ್ಯಪ್ರಮಾ- ವಿರೋಧವು ಇದ್ದೇ ಇದೆ. ಶ್ರುತಿಯಂತೆ ಆ ಪ್ರಮಾಣವೂ ಭೇದವನ್ನು ತಿಳಿಸಿಕೊಡುತ್ತದೆನ್ನುತ್ತಾರೆ.) ಯೇನ ಮಾನೇನ=ಯಾವ ಪ್ರಮಾಣದಿಂದ, (ಬ್ರಹ್ಮ=ಪರಬ್ರಹ್ಮನು) ಉಪೇಯಂ ಚ=ಜ್ಞೇಯನೋ, ತೇನ=ಆ ಪ್ರಮಾಣದಿಂದಲೇ, ಭೇದಃ=ಭೇದವು, ಅವಗಮ್ಯತೇ=ತಿಳಿಯಲ್ಪಡುತ್ತದೆ. (ಅದು ಹೇಗೆಂದರೆ) ಸರ್ವಜ್ಞಾನುಮಯೈವ='ಧರ್ಮಾದಿಕಂ ಕಸ್ಯ ಚಿತ್ಪ್ರತ್ಯಕ್ಷಂ ಪ್ರಮೇಯತ್ವಾತ್ ಘಟವತ್' ಇದು ಮೊದಲಾದ ಸರ್ವಜ್ಞತ್ವ ಸರ್ವಕರ್ತೃತ್ವ ಮೊದಲಾದುದನ್ನು ಸಾಧಿಸುವ ಅನುಮಾನದಿಂದಲೇ, ಈಶಃ=ಶ್ರೀ ಹರಿಯು, ಯದಿ=ಯಾವ ಪಕ್ಷದಲ್ಲಿ, ಕಥಂಚನ=ಯಾವ ಪ್ರಕಾರದಿಂದಲೂ, ಉಪೇಯಃ=ಜ್ಞೇಯನಾಗುತ್ತಾನೋ, ತಯೈವ=ಅಂತಹ ಅನುಮಾನದಿಂದಲೇ, ಸರ್ವಜ್ಞತ್ವ ಗುಣೇನೈವ=ಸರ್ವಜ್ಞತ್ವ, ಸರ್ವಕರ್ತೃತ್ವ ಮೊದಲಾದ ಗುಣದಿಂದಲೇ, ಭೇದಃ=ಭೇದವು ಅವಗಮ್ಯತೇ=ತಿಳಿಯಲ್ಪಡುತ್ತದೆ. (ಅಂತೂ ಅನುಮಾನಾದಿಗಳಿಗೆ ಉಪಜೀವ್ಯ ವಿರೋಧವು ಸರ್ವಥಾ ತಪ್ಪಿದ್ದಲ್ಲ.) (ಯದ್ಯಪಿ ಅನುಮಾನವು ಸ್ವಾಭಾವಿಕವಾಗಿ ಶ್ರುತಿಗಿಂತ ದುರ್ಬಲವು. ಆದಾಗ್ಯೂ ಉಪಜೀವ್ಯವಾಗಿರುವುದರಿಂದ ಬಾಧಕವು ಆಗಿಯೇ ಆಗುತ್ತದೆ ॥ ೬೦ ॥ ೬೧ ॥

ಈ ಪರ್ಯಂತ ಈಶ್ವರನನ್ನು ತಿಳಿಸಿಕೊಡತಕ್ಕ ಶ್ರುತಿಗೆ ಭೇದಕ ಧರ್ಮದಿಂದ ವಿಶಿಷ್ಟನಾದ ಈಶ್ವರನಲ್ಲಿ ಪ್ರಾಮಾಣ್ಯವು ಉಪಪಾದಿತವಾಯಿತು. ಈಗ ಜೀವನನ್ನು ಗ್ರಹಿಸಿಕೊಡತಕ್ಕ ಪ್ರತ್ಯಕ್ಷಕ್ಕೆ ಈಶ್ವರ ಭೇದಕಧರ್ಮವುಳ್ಳ ಜೀವನಲ್ಲಿ ಪ್ರಾಮಾಣ್ಯವನ್ನು ಸಮರ್ಥಿಸುವರು. ಶ್ರುತಿಯು ದುಃಖಲೇಶಾದ್ಯಂತಾಭಾವ, ಸರ್ವಜ್ಞತ್ವಾದಿಗಳುಳ್ಳ ಈಶ್ವರನಲ್ಲಿ ಪ್ರಮಾಣವಾಗಲಿ, ಆದಾಗ್ಯೂ ಅಭೇದವನ್ನು ತಿಳಿಸಿಕೊಡತಕ್ಕ ಅನುಮಾನ-ಆಗಮಗಳಿಗೆ ಉಪಜೀವ್ಯವಾದ ಪ್ರತ್ಯಕ್ಷ ಪ್ರಮಾಣದಿಂದ ವಿರೋಧವಿದ್ದಪ್ರಯುಕ್ತ ಅಪ್ರಾಮಾಣ್ಯವಿಲ್ಲ. ದುಃಖಿತ್ವಾದಿ ರೂಪವು ಜೀವನಿಗೆ ತಾತ್ವಿಕವಾದರೆ ಹಾಗಾಗುವುದು. ಅದೇವೇ ತಾತ್ವಿಕವಲ್ಲ. ಅಹಂ ದುಃಖೀ ಇತ್ಯಾದ್ಯನುಭವವು ಮಿಥ್ಯಾನುಭವವು. ಹೇಗೆಂದರೆ— ಅಂತಃಕರಣದಲ್ಲಿರತಕ್ಕ ದುಃಖಾದ್ಯನರ್ಥವು ಸ್ವರೂಪತಃ ಮಿಥ್ಯಾಭೂತವಾದುದು. ಕೆಂಪು ದಾಸನಹೂವಿನಲ್ಲಿರುವ ಕೆಂಪು ಬಣ್ಣವು ತತ್ಸಂಬದ್ಧವಾದ ಸ್ಫಟಿಕ ಮಣಿಯಲ್ಲಿ ತೋರುವಂತೆ ಅಂತಃಕರಣೋಪಾಧಿ ವಿಶಿಷ್ಟ ಚೈತನ್ಯದಲ್ಲಿ ತೋರುತ್ತದೆ. ಭ್ರಾಂತಿಪ್ರತಿಪನ್ನವಾದ ಭೇದಕಧರ್ಮದಿಂದ ವಸ್ತುವು ಭಿನ್ನವಾಗುವುದಿಲ್ಲ ಎಂದರೆ—

**ಮೂ ॥ ನ ದುಃಖಾನುಭವಃ ಕ್ವಾಪಿ ಮಿಥ್ಯಾನುಭವತಾಂ ವ್ರಜೇತ್ ।**
**ನ ಹಿ ಬಾಧಃ ಕ್ವಚಿದ್ದೃಷ್ಟೋ ದುಃಖಾದ್ಯನುಭವಸ್ಯ ತು ॥ ೬೨ ॥**
**ಯದಿ ದುಃಖಾನುಭೂತಿಶ್ಚ ಭ್ರಾಂತಿರಿತ್ಯವಸೀಯತೇ ।**
**ಅದುಃಖಿತಾ ಶ್ರುತಿಃ ಕೇನ ನ ಭ್ರಾಂತಿರಿತಿ ಗಮ್ಯತೇ ॥ ೬೩ ॥**

ಅ ॥ ದುಃಖಾನುಭವಃ=ದುಃಖಾನುಭವವು, ಕ್ವಾಪಿ=ಸರ್ವಥಾ, ಮಿಥ್ಯಾನುಭವತಾಂ=ಮಿಥ್ಯಾನುಭವತ್ವವನ್ನು, ನ ವ್ರಜೇತ್=ಹೊಂದಲಾರದು. ('ಅಹಂ ದುಃಖೀ' ಇತ್ಯಾದ್ಯನುಭವವು ಮಿಥ್ಯಾನುಭವವು ಆಗಿದ್ದರೆ ಇದಾಗುತ್ತಿತ್ತು, ಆ ಅನುಭವವು ಮಿಥ್ಯಾನುಭವವಲ್ಲ. ಮತ್ತೆ ಯಥಾರ್ಥಜ್ಞಾನವೇ.) (ಯದ್ಯಪಿ ದುಃಖ ಮೊದಲಾದುದು ಅಂತಃಕರಣದಲ್ಲಿರತಕ್ಕುದು. ಆದಾಗ್ಯೂ ಸ್ವರೂಪತಃ ಸತ್ತೇ ಆಗಿದೆ. ಜೀವಾತ್ಮನು ದುಃಖಾದಿಗಳನ್ನು ಭೋಗಿಸುವುದರಿಂದ ಆತನಿಗೆ ದುಃಖಾದಿಮತ್ವವು ತಾತ್ವಿಕವೇ. ಅಲ್ಪಶಕ್ತಿತ್ವ ಪಾರತಂತ್ರ್ಯ ಮೊದಲಾದುದು ಸ್ವರೂಪದಲ್ಲಿಯೇ ಇರತಕ್ಕುದು. ಏಕೆಂದರೆ)— ದುಃಖಾದ್ಯನುಭವಸ್ಯತು=ದುಃಖ ಮೊದಲಾದ ಅನುಭವಕ್ಕೆ, ಬಾಧಃ=ಬಾಧವು, ಕ್ವಚಿತ್=ಎಲ್ಲಿಯೂ, ನ ತು ದೃಷ್ಟಃ=ಕಾಣಲ್ಪಡಲೇ ಇಲ್ಲ. ಹಿ=ಪ್ರಸಿದ್ಧವು. (ಯಾವಾಗಲೂ ಎಲ್ಲಿಯೂ ಯಾರೊಬ್ಬನೂ ನಾನು ದುಃಖವುಳ್ಳವನಲ್ಲ, ಮತ್ತೆ ಅಂತಃ ಕರಣದಲ್ಲಿಯೇ ಇರತಕ್ಕ ಮಿಥ್ಯಾಭೂತವಾದ ದುಃಖದಿಂದ ದುಃಖಿಯಾಗಿ ತನ್ನನ್ನು ತಿಳಿದಿರುವೆನು ಎಂದು ಬಾಧಕ ಪ್ರತ್ಯಯವುಳ್ಳವನಾಗಿ ಕಾಣಲ್ಪಡುವುದಿಲ್ಲ.) (ಹಾಗಾದರೆ 'ವಿಮುಕ್ತಶ್ಚ ವಿಮುಚ್ಯತೇ, ತತ್ತ್ವಮಸಿ' ಇದುಮೊದಲಾದ ಶ್ರುತಿಯೇ ಈ ಅನುಭವಕ್ಕೆ ಬಾಧಕವಾಗಿದೆ. ಆದಕಾರಣ ದುಃಖಾನುಭವವು ಹೇಗೆ ಭ್ರಾಂತಿಯಲ್ಲ? ಶ್ರುತಿಯಲ್ಲಿ ಆದರೂ ದುಃಖಮೊದಲಾದ ಕೆಡಕುಗಳಿಂದ ವಿರಹಿತವಾದುದೇ ಜೀವಾತ್ಮನಿಗೆ ತಾತ್ವಿಕರೂಪವೆಂದು ಪ್ರತಿಪಾದಿಸಲ್ಪಡುತ್ತದೆ ಎಂದರೆ)— ಯದಿ=ಯಾವಪಕ್ಷದಲ್ಲಿ, ದುಃಖಾನುಭೂತಿಶ್ಚ=ದುಃಖಾನುಭವವು, ಭ್ರಾಂತಿರಿತಿ=ಭ್ರಮೆಯೆಂತೆಂದು, ಅವಸೀಯತೇ= 'ವಿಮುಕ್ತಶ್ಚ ವಿಮುಚ್ಯತೆ' ಎನ್ನುವ ಶ್ರುತಿಯನ್ನು ಆಶ್ರಯಿಸಿ, ನಿಶ್ಚಯಿಸಲ್ಪಡುತ್ತದೋ ಹಾಗಾದರೆ, ಅದುಃಖಿತಾಶ್ರುತಿಃ = ದುಃಖಾವವನ್ನು ಪ್ರತಿಪಾದಿಸತಕ್ಕ ಶ್ರುತಿಯು, ಕೇನ=ಯಾವಕಾರಣದಿಂದ, ಭ್ರಾಂತಿಃ ನ=ಸ್ವರೂಪದಿಂದಲೂ ಅರ್ಥದಿಂದಲೂ ಭ್ರಾಂತಿಯಲ್ಲ. ಇತಿ=ಹೀಗೆ, ಗಮ್ಯತೇ=ಅನುಭವವನ್ನು ಆಶ್ರಯಿಸಿ, ಅಂಗೀಕರಿಸಲ್ಪಡುತ್ತದೆ.

ತಾ ॥ (1) ಈ ಶ್ರುತಿಯು ನಿಶ್ಚಿತಪ್ರಾಮಾಣ್ಯವುಳ್ಳದ್ದು ಆಗಿದ್ದರೆ ಈ ಅನುಭವಕ್ಕೆ ಬಾಧಕವಾಗುವುದು. ಹಾಗೆ ಇಲ್ಲ. ಧರ್ಮಿಗ್ರಾಹಕಾನುಭವವಿರೋಧದಿಂದ ಆಪಾತ ಪ್ರತೀತಾರ್ಥದಲ್ಲಿ, ನಾವು ಅಪ್ರಾಮಾಣ್ಯವನ್ನು ಪ್ರತಿಪಾದಿಸಿರುವೆವು. ಪರರು ಅಪ್ರಾಮಾಣ್ಯವನ್ನು ಪರಿಹರಿಸುವುದಕ್ಕಾಗಿ ಈಗಲೂ ಪ್ರಯತ್ನಮಾಡುತ್ತಿದ್ದಾರೆ. ತಥಾಚ ಶ್ರುತಿಗೆ ಪ್ರಾಮಾಣ್ಯನಿಶ್ಚಯವಾದರೆ ಅನುಭವಕ್ಕೆ ಭ್ರಾಂತಿತ್ವವು. ಅನುಭವಕ್ಕೆ ಭ್ರಾಂತಿತ್ವವಿದ್ದರೆ ಶ್ರುತಿಪ್ರಾಮಾಣ್ಯನಿಶ್ಚಯವು. ಹೀಗೆ ಅನ್ಯೋನ್ಯಾಶ್ರಯವು ಬರಬೇಕಾಗುವುದು ॥ ೬೨ ॥ ೬೩ ॥

ಹೀಗಾದರೆ ಶ್ರುತಿಗೂ ಪ್ರಾಮಾಣ್ಯವು ಪರೀಕ್ಷಾಸಹಕೃತವಾದ ಸಾಕ್ಷಿಯಿಂದ ನಿಶ್ಚಿತವಾಗಿರುವುದರಿಂದ ಅನುಭವಬಾಧಕತ್ವವು ಕೂಡುತ್ತದೆ ಎಂದಭಿಪ್ರಾಯವುಳ್ಳವರಾಗಿ ಆಶಂಕಿಸುತ್ತಾರೆ—

**ಮೂ ॥ ಶ್ರುತಿಸ್ಸ್ವರೂಪಮರ್ಥಶ್ಚ ಮಾನೇನೈವಾವಸೀಯತೇ ।**
**ತಚ್ಚೇನ್ಮಾನಂ ಗೃಹೀತಂ ತೇ ಕಿಂ ದುಃಖಾನುಭವೇಭ್ರಮಃ ॥ ೬೪ ॥**
**ನ ಚ ಬಾಧವಿಶೇಷೋಽಸ್ತಿ ಯದಬಾಧಿತಮೇವ ತತ್ ।**
**ಬಾಧೋ ಯದ್ಯನುಭೂತೇಽರ್ಥೇ ಕಥಂ ನಿರ್ಣಯ ಈಯತೇ ॥ ೬೫ ॥**

ಅ ॥ ಶ್ರುತಿಸ್ವರೂಪಂ=ಶ್ರುತಿಸ್ವರೂಪವು, ಅರ್ಥಶ್ಚ=ಅರ್ಥವೂ ಕೂಡ, ಮಾನೇನೈವ=ಸಾಕ್ಷಿರೂಪಪ್ರಮಾಣದಿಂದಲೇ, ಅವಸೀಯತೇ=ನಿಶ್ಚಯಿಸಲ್ಪಡುತ್ತದೆ. (ಪರಿಹರಿಸುತ್ತಾರೆ.) ತತ್ ಮಾನಂ=ಆ ಪ್ರಮಾಣವು, ತೇ=ನಿನ್ನಿಂದ, ಗೃಹೀತಂ ಚೇತ್=ಸ್ವೀಕರಿಸಲ್ಪಟ್ಟರೆ,

ಕಿಂ= ಯಾವುದಕ್ಕಾಗಿ, ದುಃಖಾನುಭವೇ ಭ್ರಮಃ=ದುಃಖಾನುಭವಕ್ಕೆ ಭ್ರಮತ್ವವು. (ಅಂಗೀಕರಿಸಲ್ಪಡುತ್ತದೆ.) ಅಂದರೆ ಸಾಕ್ಷಿಯಿಂದ ಶ್ರುತಿಪ್ರಾಮಾಣ್ಯವು ನಿಶ್ಚಿತವಾಗಿದೆ ಎಂದು ಪರರಿಗೆ ಅಂಗೀಕರಿಸಲಿಕ್ಕೆ ಶಕ್ಯವಲ್ಲ. ಹಾಗಾದರೆ ಸಾಕ್ಷಿಪ್ರಾಮಾಣ್ಯವನ್ನು ಅಂಗೀಕರಿಸಬೇಕಾಗುವುದು. ಅದನ್ನು ಅಂಗೀಕರಿಸುತ್ತೇವೆ ಎಂದು ಹೇಳ ಕೂಡದು. ಹಾಗಾದರೆ 'ಅಹಂ ದುಃಖೀ' ಎಂದು ದುಃಖಾದಿಗಳನ್ನು ವಿಷಯೀಕರಿಸುವುದೂ ಸಾಕ್ಷಿಯೇ ಆಗಿರುವುದರಿಂದ ಆ ಸಾಕ್ಷಿಗೆ ದುಃಖಾದಿವಿಷಯದಲ್ಲಿಯೂಪ್ರಾಮಾಣ್ಯವನ್ನುಅಂಗೀಕರಿಸಬೇಕಾಗಿರುವುದರಿಂದ ಭ್ರಮತ್ವವನ್ನು ಹೇಳಕೂಡದು. ದುಃಖಾದಿವಿಷಯದಲ್ಲಿ ಭ್ರಮತ್ವವನ್ನು ಒಪ್ಪುವುದಾದರೆ ಶ್ರುತಿಪ್ರಾಮಾಣ್ಯವನ್ನು ವಿಷಯೀಕರಿಸುವಸಾಕ್ಷಿಗೂ ಭ್ರಮತ್ವವುಬರಬೇಕಾಗುವುದು. (ಹಾಗಾದರೆ ಒಂದು ವಿಷಯದಲ್ಲಿ ಒಂದಕ್ಕೆ ಪ್ರಾಮಾಣ್ಯವಿದ್ದರೆ ಅದಕ್ಕೇನೇ ವಿಷಯಾಂತರದಲ್ಲಿಯೂ ಪ್ರಾಮಾಣ್ಯವು ಇರಬೇಕು. ಅಲ್ಲಿ ಅಪ್ರಾಮಾಣ್ಯವಿದ್ದರೆ ವಿಷಯಾಂತರದಲ್ಲಿಯೂ ಅಪ್ರಾಮಾಣ್ಯವು ಆವಶ್ಯಕವೆನ್ನುವುದು ಏಕೆ? ಚಕ್ಷುರಾದಿಗಳಲ್ಲಿಈನಿಯಮವು ಕಂಡಿಲ್ಲವಷ್ಟೆ ಎಂದರೆ) ಯತಃ=ಯಾವ ಕಾರಣದ್ದೆಶೆಯಿಂದ, ಬಾಧವಿಶೇಷಃ=ದುಃಖಾದಿಗಳನ್ನು ವಿಷಯಾಕರಿಸತಕ್ಕ ಸಾಕ್ಷ್ಯನುಭವಕ್ಕೆ ಬಾಧರೂಪವಿಶೇಷವು, ನ ಚಾಸ್ತಿ=ಇಲ್ಲವೇ ಇಲ್ಲವೋ (ಅಂದರೆ ಬಾಧವಿಶೇಷವು ಇದ್ದಿದ್ದರೆ ಸಾಕ್ಷಿಯು ಶ್ರುತಿಪ್ರಾಮಾಣ್ಯವಿಷಯದಲ್ಲಿ ಪ್ರಮಾಣವಾಗಿದ್ದರೂ ದುಃಖಾದಿ ವಿಷಯದಲ್ಲಿ ಭ್ರಮವಾಗುತ್ತಿತ್ತು.) ತತ್=ಆ ಕಾರಣದ್ದೆಶೆಯಿಂದ, ಅಂದರೆ ಬಾಧವಿಶೇಷವಿಲ್ಲದಿರುವುದರಿಂದ ಸಾಕ್ಷಿಸಿದ್ಧವಾದ ಶ್ರುತಿಪ್ರಾಮಾಣ್ಯದಂತೆ, ತತ್=ಆತ್ಮನಿಗೆ ದುಃಖಿತ್ವಾದಿಯೂ ಕೂಡ, ಅಬಾಧಿತಮೇವ=ಸತ್ಯವೇ ಎಂದು ಅಂಗೀಕರಿಸಬೇಕು. (ಹಾಗಾದರೆ ಈ ಶ್ರುತಿಪ್ರಾಮಾಣ್ಯವು ದುಃಖ ಮೊದಲಾದುದೂ ಕೂಡ ಸಾಕ್ಷಿಗೃಹೀತವೇ ಆಗಿದೆ. ಅನ್ಯೋನ್ಯಾಶ್ರಯ ಬರುವುದರಿಂದ ಎರಡು ಕಡೆ ಪ್ರಾಮಾಣ್ಯವು ಸಾಕ್ಷಿಗೆ ಯುಕ್ತವಲ್ಲ. ಆದ ಕಾರಣ ಏಕತ್ರ ಅಪ್ರಾಮಾಣ್ಯವು ಆವಶ್ಯಕವಾದರೆ ದುಃಖಾದಿಗಳಲ್ಲಿಯೇ ಅಪ್ರಾಮಾಣ್ಯವನ್ನೇ ಒಪ್ಪಬೇಕು. ಶ್ರುತಿಪ್ರಾಮಾಣ್ಯವು ಅಪೌರುಷೇಯತ್ವಾದಿ ಪರೀಕ್ಷಾಸಹಕೃತವಾದ ಸಾಕ್ಷಿಯಿಂದ ಗೃಹೀತವಾಗಿದೆ. ಆದುದರಿಂದ ದುಃಖಿತ್ವಾದಿಗಳು ಮಿಥ್ಯಾಭೂತವೇ ಎಂದು ಹೇಳುತ್ತೇವೆ ಎಂದರೆ ಹೀಗೆ ಹೇಳಕೂಡದು. ಏಕೆಂದರೆ-ದುಃಖಾದಿಗಳಲ್ಲಿಯೂ ಸಜಾತೀಯ ವಿಜಾತೀಯ ಸಂವಾದ ರೂಪವಾದ ಪರೀಕ್ಷಾ ಇದೆ. ಹೀಗಾದರೆ ಸಂದೇಹ ಬರುವುದರಿಂದ ದುಃಖಾದಿ ಸತ್ಯತ್ವನಿಶ್ಚಯವು ನಿಮಗೆ ಕೂಡದೆ ಇರೋಣದರಿಂದ ಹೀಗೆ ಶ್ರುತಿಗೆ ಅನುಭವ ಬಾಧವನ್ನು ಹೇಳಲಿಕ್ಕ ಶಕ್ಯವಲ್ಲ. ಎಂದರೆ) ತತ್=ದುಃಖಾದಿಗಳು, ಅಬಾಧಿತಮೇವ=ಸತ್ಯವೇ ಎಂದು (ನಿಶ್ಚಿತಗಳಾಗುತ್ತವೆ.) (ಅಂದರೆ ಶ್ರುತಿಪ್ರಾಮಾಣ್ಯವೂ ದುಃಖಾದಿಗಳೂ ಎರಡೂ ಸಾಕ್ಷಿಗೃಹೀತಗಳೇ. ಏಕೆಂದರೆ- ಎರಡು ವಿಷಯದಲ್ಲಿಯೂ ಬಾಧಕವಿಲ್ಲದಿರುವುದರಿಂದ ಸಾಕ್ಷಿಯು ಎರಡು ಕಡೆಗಳಲ್ಲಿಯೂ ಪ್ರಮಾಣವೇ ಆಗುವುದು. ಹಿಂದೆ ಹೇಳಿದ ವಿರೋಧವೂ ಬರುವುದಿಲ್ಲ. ಏಕೆಂದರೆ-ಶ್ರುತಿಗೆ ಅದ್ವೈತರೂಪ ಅರ್ಥವನ್ನು ಬಿಟ್ಟು ವಿಷಯಾಂತರದಲ್ಲಿಯೇ ಪ್ರಾಮಾಣ್ಯವು ಕೂಡುತ್ತದೆ. ಅಪೌರುಷೇಯತ್ವಾದಿ ಯುಕ್ತಿಗಳು ಶ್ರುತಿಗೆ ಪ್ರಾಮಾಣ್ಯವನ್ನೇ ಸಾಧಿಸಿಕೊಡುತ್ತವೆ. ಅಲ್ಲದೆ ಅದ್ವೈತದಲ್ಲಿಯೇ ಪ್ರಾಮಾಣ್ಯವೆನ್ನುವ ಅರ್ಥವನ್ನು ಸಾಧಿಸಿಕೊಡುವುದಿಲ್ಲ. ಆದುದರಿಂದ ದುಃಖಾದಿಗಳು ಸತ್ಯಗಳೇ.) (ಶ್ರುತಿಯು ಅನುಭವ ಬಾಧಕವಾಗುವುದಿಲ್ಲ. ಮತ್ತೆ ಧರ್ಮಿಗ್ರಾಹಕವಾಗಿ ಪ್ರಬಲವಾದ ಅನುಭವದಿಂದಲೇ ಬಾಧಿತವಾಗುತ್ತದೆ ಎಂದು ಹಿಂದೆ ಉಕ್ತವಾಗಿದೆ. ಈಗ ಕೇವಲ ಧರ್ಮಿಗ್ರಾಹಕತ್ವ ವಿರೋಧದಿಂದಲೇ ಅನುಭವಕ್ಕೆ ಪ್ರಾಬಲ್ಯವಲ್ಲ. ಮತ್ತೆ ಶ್ರುತಿಸ್ವರೂಪ ಪ್ರಾಮಾಣ್ಯಗ್ರಾಹಕತ್ವ ವಿರೋಧದಿಂದಲೂ ಪ್ರಾಬಲ್ಯವು ಎನ್ನುತ್ತಾರೆ.) ಶ್ರುತಿಸ್ವರೂಪಂ= **ಶ್ರುತಿಸ್ವರೂಪವು, ಅರ್ಥಶ್ಚ = ಶ್ರುತಿಪ್ರಾಮಾಣ್ಯವೂ ಕೂಡ, ಮಾನೇನೈವ = ಸಾಕ್ಷಿರೂಪ**

ಪ್ರಮಾಣದಿಂದಲೇ, ಅವಸೀಯತೇ=ನಿಶ್ಚಿತವಾಗುತ್ತದೆ. ಹೀಗೆ ಸಾಕ್ಷಿಗೆ ಪ್ರಮಾಣಾಂತರ ಸಾಧಾರಣ ರೂಪವನ್ನು ಒಪ್ಪಿಕೊಂಡು ಬಾಧಕವಿಲ್ಲದಿರುವುದರಿಂದ ಅಹಂ 'ದುಃಖೀ ಇತ್ಯಾದಿ' ಸಾಕ್ಷಿಗೆ ಭ್ರಮತ್ವವು ಕೂಡಲಾರದೆಂದು ಹೇಳಲ್ಪಟ್ಟಿದೆ. (ಈಗ ಸಾಕ್ಷಿಗೆ ಯಥಾರ್ಥತ್ವ ನಿಯಮವಿದ್ದುದರಿಂದಲೂ ದುಃಖಾದಿ ವಿಷಯದಲ್ಲಿ ಭ್ರಮತ್ವಶಂಕೆಯು ಕೂಡುವುದಿಲ್ಲ. ಬಾಧಕಾಭಾವ ಉಪನ್ಯಾಸದಿಂದ ಏನು ಪ್ರಯೋಜನವು, ಎಂದಭಿಪ್ರಾಯವುಳ್ಳವರಾಗಿ ಸಾಕ್ಷಿಗೆ ಯಥಾರ್ಥತ್ವ ನಿಯಮವನ್ನು ಒಪ್ಪದಿದ್ದರೆ ಬಾಧಕವನ್ನು ಹೇಳಿ ಅದನ್ನು ಸಮರ್ಥಿಸುತ್ತಾರೆ.) ಅನುಭೂತೇ ಅರ್ಥೇ=ಸಾಕ್ಷಿಪ್ರತೀತವಾದ ಅರ್ಥದಲ್ಲಿ, ಯದಿ=ಯಾವ ಪಕ್ಷದಲ್ಲಿ, ಬಾಧಃ=ಬಾಧವು, (ಪ್ರವೃತ್ತವಾಗುವುದೋ, ಅಂದರೆ ಸಾಕ್ಷಿಯು ಎಲ್ಲಿಯಾದರೂ ಅಯಥಾರ್ಥವಾಗುವುದಾದರೆ) ಆಗ, ಕಥಂ=ಹೇಗೆ (ಸ್ತಂಭೋಽಯಂ ಕುಂಭೋಽಯಂ ಎಂದು ಪದಾರ್ಥಗಳ,) ನಿರ್ಣಯಃ=ನಿರ್ಣಯವು, ಈಯತೇ=ಅಂಗೀಕರಿಸಲ್ಪಡುತ್ತದೆ. ॥ ೬೪ ॥ ೬೫ ॥

ಇದನ್ನೇ ವಿಸ್ತರಿಸುತ್ತಾರೆ—

**ಮೂ ॥ ಕೋಽಪಿ ಹ್ಯರ್ಥೋ ನ ನಿಶ್ಚೇತುಂ ಶಕ್ಯತೇ ಭ್ರಮವಾದಿನಾ ।**
**ಭ್ರಮತ್ವಮಭ್ರಮತ್ವಂ ಚ ಯದ್ಯೈವಾನುಭವೋಪಗಂ ॥ ೬೬ ॥**
**ಏಕಸ್ಯ ಭ್ರಮತಾ ತತ್ರ ಪರಸ್ಯಾಭ್ರಮತಾ ಕುತಃ ।**
**ಭ್ರಮತ್ವಮಭ್ರಮತ್ವಂ ಚ ಸರ್ವಂ ವೇದ್ಯಂ ಹಿ ಸಾಕ್ಷಿಣಾ ॥ ೬೭ ॥**
**ಸ ಚೇತ್ಸಾಕ್ಷೀ ಕ್ವಚಿದ್ದುಷ್ಟಃ ಕಥಂ ನಿರ್ಣಯ ಈಯತೇ ।**
**ವಿಶೇಷಾಃ ಸರ್ವ ಏವೈತೇ ಸಾಕ್ಷಿಪ್ರತ್ಯಕ್ಷ (ಯ) ಗೋಚರಾಃ ॥ ೬೮ ॥**

ಅ ॥ ಭ್ರಮವಾದಿನಾ=ಸಾಕ್ಷಿಗೆ ಕೆಲವು ವಿಷಯದಲ್ಲಿ ಭ್ರಮತ್ವವಿದೆ ಎಂದು ಹೇಳತಕ್ಕ ವಾದಿಯಿಂದ, ಕೋಽಪಿ ಅರ್ಥಃ=ಯಾವ ಅರ್ಥವೂ, ನಿಶ್ಚೇತುಂ = ನಿಶ್ಚಯಿಸಲಿಕ್ಕೆ, ನ ಹಿ ಶಕ್ಯತೇ=ಶಕ್ಯವಾಗುವುದಿಲ್ಲ. (ಹಾಗಾದರೆ ಸಾಕ್ಷಿಯು ಕೆಲವುಕಡೆ ಅಯಥಾರ್ಥವಾದರೆ ಆಗ ಪದಾರ್ಥನಿರ್ಣಯವೇ ಆಗದೆ ಹೋದೀತು. **'ಜ್ಞಾನಸ್ಯ ವ್ಯಭಿಚಾರಿತ್ವೇ ವಿಶ್ವಾಸಃ ಕಿಂ ನಿಬಂಧನಃ'** ಎಂದು ಹೇಳಿರುವರು.) (ಸಾಕ್ಷಿಗೆ ಯಾಥಾರ್ಥ್ಯನಿಯಮವನ್ನು ಒಪ್ಪದಿದ್ದರೆ ಪದಾರ್ಥನಿರ್ಣಯವೇ ಕೂಡಲಾರದೆಂದು ಹೇಳಿದ ಬಾಧಕವು ಸರಿಯಲ್ಲ. ಏಕೆಂದರೆ— ಆಯಾಯ ಪದಾರ್ಥನಿರ್ಣಾಯಕ ಸಾಮಗ್ರಿಯಿಂದಲೇ ಪದಾರ್ಥಗಳ ನಿರ್ಣಯವು ಉಂಟಾಗುತ್ತದೆ. ಹೀಗಿರಲು ಸಾಕ್ಷಿಯಾಥಾರ್ಥ್ಯ ನಿಯಮಕ್ಕೆ ಏನು ಉಪಯೋಗವು? ಎಂದರೆ— ಹೀಗೆ ಹೇಳಕೂಡದು. ಏಕೆಂದರೆ— 'ಸ್ತಂಭೋಽಯಂ' ಎಂದು ಏಕಾಕಾರನಿಯತವಾದ ಜ್ಞಾನವು ನಿರ್ಣಯವೆಂದು ಅನ್ನಿಸಿಕೊಳ್ಳುವುದಿಲ್ಲ. ಮತ್ತೆ ಅದರ ಅನಂತರದಲ್ಲಿ ಉಂಟಾಗತಕ್ಕ ಇದು ಸ್ತಂಭವೇ ಎನ್ನುವ ವಸ್ತು ತಥಾತ್ವಾಶ್ವಾಸವೇ ನಿರ್ಣಯವೆಂದು ಅನ್ನಿಸಿಕೊಳ್ಳುತ್ತದೆ. ಈ ಆಶ್ವಾಸರೂಪ ನಿರ್ಣಯವಾದರೂ ವಸ್ತುದರ್ಶನಕ್ಕೆ ಭ್ರಮತ್ವಾಭಾವನಿಶ್ಚಯದಿಂದ ಉಂಟಾಗುತ್ತದೆ. ಅಂದರೆ ಜ್ಞಾನವು ಭ್ರಮವಾದರೆ ಅದರ ವಿಷಯವಾದ ವಸ್ತುವು ಅಯಥಾರ್ಥವೆಂದೇ ನಿಶ್ಚಿತವಾಗುತ್ತದೆ. ಜ್ಞಾನವು ಭ್ರಮವಲ್ಲವೆಂದಾದರೆ ತದ್ವಿಷಯವೂ ಯಥಾರ್ಥವೆಂದೇ ನಿಶ್ಚಿತವಾಗುತ್ತದೆ. ಏವಂಚ ಸಾಕ್ಷಿಯಾಥಾರ್ಥ್ಯನಿಯಮದಿಂದ ಏನು ಪ್ರಯೋಜನವು? ಎಂದರೆ—) ಯದ್ಯೈವ = ಯಾವ ಕಾರಣದಿಂದ, ಭ್ರಮತ್ವಂ=ಶುಕ್ತಿರಜತಾದಿಜ್ಞಾನಕ್ಕೆ ಭ್ರಮತ್ವವು, ಅಭ್ರಮತ್ವಂ ಚ=ಸ್ತಂಭಾದಿ ಜ್ಞಾನಕ್ಕೆ ಅಭ್ರಮತ್ವವೂ ಕೂಡ, ಅನುಭವೋಪಗಂ=ಸಾಕ್ಷ್ಯನುಭವಗಮ್ಯವೋ, (ಆದುದರಿಂದ)

(ಪ್ರತ್ಯಯುಗಳ ಭ್ರಮತ್ವ-ಅಭ್ರಮತ್ವ ನಿರ್ಣಯಾಧೀನವಾದುದು ವಸ್ತುನಿರ್ಣಯವು ಎನ್ನುವುದು ಸತ್ಯವೇ.) ತತ್ರ = ಆ ಪ್ರತ್ಯಯುಗಳ ಮಧ್ಯದಲ್ಲಿ, ಏಕಸ್ಯ = ಸ್ತಂಭಾದಿಗಳಲ್ಲಿ ಪುರುಷಾದಿ ಪ್ರತ್ಯಯಕ್ಕೆ, ಭ್ರಮತಾ=ಭ್ರಮತ್ವವು, ಪರಸ್ಯ=ಸ್ತಂಭದಲ್ಲಿ ಸ್ತಂಭಾದಿಪ್ರತ್ಯಯಕ್ಕೆ, ಅಭ್ರಮತಾ= ಅಭ್ರಮತ್ವವೂ, ಕುತಃ=ಯಾವುದರಿಂದ ನಿಶ್ಚಯಿಸತಕ್ಕದು. ಯಾವುದರಿಂದಲಾದರೂ ಆಗ ಲಾರದು. ಏಕೆಂದರೆ—ಪ್ರತ್ಯಯುಗಳಿಗೆ ಭ್ರಮತ್ವವೂ, ಅಭ್ರಮತ್ವವೂ ಸಾಕ್ಷಿಯಿಂದಲೇ ನಿಶ್ಚಯಿಸ ತಕ್ಕದು. (ಕರಣದೋಷಬಾಧಕಪ್ರತ್ಯಯುಗಳಿಂದ ಶುಕ್ತಿರೂಪ್ಯಾದಿ ಪ್ರತ್ಯಯುಗಳಿಗೆ ಭ್ರಮತ್ವವು ನಿಶ್ಚಿತವಾಗುವುದು. ಸ್ತಂಭಾದಿಪ್ರತ್ಯಯುಗಳಿಗೆ ಅಭ್ರಮತ್ವವಾದರೂ ಮಾನಾಂತರಸಂವಾದದಿಂದ ನಿಶ್ಚಿತವಾಗುವುದು. ಆದಕಾರಣ ಭ್ರಮತ್ವಾಭ್ರಮತ್ವಗಳ ನಿಶ್ಚಯಾಭಾವವು ಹೇಗೆ ಎನ್ನುವ ಆಶಂಕೆಯುನ್ನು ಪರಿಹರಿಸುತ್ತಾ ಹಿಂದೆ ಹೇಳಿದ ಅರ್ಥವನ್ನು ಸ್ಪಷ್ಟವಾಗಿ ಹೇಳುತ್ತಾರೆ.) ಭ್ರಮತ್ವಂ=ಶುಕ್ತಿರೂಪ್ಯಾದಿ ಪ್ರತ್ಯಯುಗಳಿಗೆ ಭ್ರಾಂತಿತ್ವವೂ, ಅಭ್ರಮತ್ವಂ=ಸ್ತಂಭಾದಿಪ್ರತ್ಯಯು ಗಳಿಗೆ ಭ್ರಾಂತಿತ್ವಾಭಾವವೂ, ಸರ್ವಂ ಚ=ಭ್ರಮತ್ವ-ಅಭ್ರಮತ್ವಗಳ ನಿಶ್ಚಯೋಪಯುಕ ವಾದ ಕರಣದೋಷ ಮೊದಲಾದುದೆಲ್ಲವೂ, ಸಾಕ್ಷಿಣಾ=ಸಾಕ್ಷೀಂದ್ರಿಯದಿಂದ, ವೇದ್ಯಂ ಹಿ=ನಿಶ್ಚಯಿಸ ಲಿಕ್ಕೆ ಯೋಗ್ಯವಾಗಿದೆ. (ಅನಿಶ್ಚಿತವಾದ ಕರಣದೋಷಾದಿಗಳು ಭ್ರಮತ್ವಾದಿಗಳ ನಿಶ್ಚಯಕ್ಕೆ ಅಂಗವಾಗಲಾರದು.) ಸಃ ಸಾಕ್ಷೀ = ಆ ಸಾಕ್ಷಿಯು, ಕ್ವಚಿತ್=ಕೆಲವು ದುಃಖಾನುಭವಾದಿ ವಿಷಯದಲ್ಲಿ, ದುಷ್ಟಂ ಚೇತ್=ಅಯಥಾರ್ಥವಾದರೆ ಆಗ, ಕಥಂ=ಹೇಗೆ, (ಕರಣದೋಷಾದಿ ಗಳ ಅದವಾ ಭ್ರಮತ್ವಾದಿಗಳ ಅಥವಾ ವಸ್ತುಯಾಥಾರ್ಥ್ಯಾದಿಗಳ,) ನಿರ್ಣಯಃ=ನಿಶ್ಚಯವು, ಈಯತೇ = ಅಂಗೀಕರಿಸಲ್ಪಡುತ್ತದೆ. (ಹಾಗಾದರೆ ಸಾಕ್ಷಿಗೆ ಯಾಥಾರ್ಥ್ಯನಿಯಮವಿದ್ದರೂ ಪ್ರತ್ಯಯುಗಳಿಗೆ ಭ್ರಮತ್ವ-ಅಭ್ರಮತ್ವಗಳ ನಿರ್ಣಯವು ಕೂಡುವುದಿಲ್ಲ. ಯಾಥಾರ್ಥ್ಯವು ಸ್ವರೂಪ ದಿಂದಲೇ ಉಪಯುಕ್ತವಲ್ಲ. ಮತ್ತೆ ನಿಶ್ಚಿತವಾಗಿಯೇ ಉಪಯುಕ್ತವಾಗುವುದು. ಅದರ ನಿಶ್ಚಯೋಪಾಯವೇ ಇಲ್ಲ. ಆದುದರಿಂದ ನಿಶ್ಚಯವೇ ಆಗದಿರುವುದರಿಂದ ಕರಣದೋಷಾದಿ ಗಳಿಗೆ ಅಥವಾ ಭ್ರಮತ್ವಾದಿಗಳಿಗೆ ಅಥವಾ ಸ್ತಂಭತ್ವಾದಿಗಳಿಗೆ ನಿರ್ಣಯವೇ ಆಗಲಾರದು, ಎಂದಾಶಂಕಿಸಿದರೆ) ಏತೇ ಸರ್ವೇ ವಿಶೇಷಾಃ=ಕರಣದೋಷಮೊದಲಾದ ಈ ಎಲ್ಲಾ ವಿಶೇಷಗಳೂ, ಸಾಕ್ಷಿಪ್ರತ್ಯಕ್ಷ(ಯ)ಗೋಚರಾ ಏವ=(ಸಾಕ್ಷಿಯಾಥಾರ್ಥ್ಯವು ಸಾಕ್ಷಿಯಿಂದಲೇ ನಿಶ್ಚಯವಾಗು ವುದರಿಂದ) ಸಾಕ್ಷಿಪ್ರತ್ಯಕ್ಷ ವಿಷಯುಗಳೇ.

**ಶಾ ॥ ನ್ಯಾಯಸುಧಾ—** (1) ಯದ್ಯಪಿ ಪ್ರತ್ಯಯುಗಳಿಗೆ ಭ್ರಮತ್ವ-ನಿಶ್ಚಯವು ಕರಣ ದೋಷಾದಿಗಳ ಅಧೀನವಾದುದು. ಆದಾಗ್ಯೂ ಸಾಕ್ಷಿಗೆ ಯಾಥಾರ್ಥ್ಯನಿಯಮವಿಲ್ಲವಾದರೆ ಅದು ಸಿದ್ಧವಾಗಲಾರದು. ಕರಣದೋಷಾದಿಗಳು ಸ್ವರೂಪದಿಂದುಪಯುಕ್ತವಾಗಲಾರವು. ಮತ್ತೆ ನಿಶ್ಚಿತವಾಗಿಯೇ ಉಪಯುಕ್ತವಾಗುವುದು. ಕರಣದೋಷಾದಿಗಳ ನಿಶ್ಚಯವಾದರೂ, ಸಾಕ್ಷಾತ್ತಾಗಲೀ, ಪರಂಪರೆಯಿಂದಲಾಗಲೀ, ಸಾಕ್ಷಿಯಿಂದಾಗುತ್ತದೆ. ಸಾಕ್ಷಿಯಾದರೂ ಕರಣ ದೋಷಾದಿಗಳನ್ನು ತಾನೇ ಆಗಲೀ, ಕರಣದೋಷಾದಿಗಳನ್ನು ಗ್ರಹಿಸತಕ್ಕಜ್ಞಾನಕ್ಕೆ ಪ್ರಾಮಾಣ್ಯ ಗ್ರಹಣದಿಂದಲಾಗಲೀ ನಿಶ್ಚಯಿಸಿ ಭ್ರಮತ್ವವನ್ನು ನಿಶ್ಚಯಮಾಡಿಕೊಡುತ್ತದೆ. ಅಂತೂ ಸಾಕ್ಷಿಯು ಕೆಲವುಕಡೆಅಯಥಾರ್ಥವಾದರೆ ಅದಕ್ಕೆ ಅವಿಶ್ವಸನೀಯತ್ವವು ಬರಬೇಕಾಗುವುದರಿಂದ ಅದರಿಂದ ಭ್ರಮತ್ವನಿರ್ಣಯವೇ ಬಾರದೆ ಹೋಗಬೇಕಾಗುವುದು. ಅಭ್ರಮತ್ವ ನಿಶ್ಚಯ ವಾದರೂ ಸಂವಾದಾಧೀನವಲ್ಲ. ಹಾಗಿದ್ದರೆ ಅನವಸ್ಥಾದಿದೋಷಗಳು ಬರುವವು ಎಂದು ಹಿಂದೆ ಹೇಳಲ್ಪಟ್ಟವೆ. ಮತ್ತೆ ಕೇವಲ ಸಾಕ್ಷ್ಯಧೀನವೇ. ಸಾಕ್ಷಿಯು ಅಯಥಾರ್ಥವಾದರೆ ಸ್ತಂಭಾದಿ ಜ್ಞಾನಗಳಿಗೆ ಅಭ್ರಮತ್ವ ನಿರ್ಣಯವೂ ಬಾರದೆಹೋಗಬೇಕಾಗುವುದು ॥ ೬೬ ॥ ೬೭ ॥ ೬೮ ॥

ಸಾಕ್ಷಿಗೆ ಪ್ರಾಮಾಣ್ಯ ನಿಯಮವು ಇಲ್ಲದಿದ್ದರೆ ಆಗ ವಿಶ್ವಾಸಕ್ಕೆ ಅನರ್ಹವಾದ ಸಾಕ್ಷಿಯಿಂದ ಕರಣದೋಷಾದಿಗಳ ನಿಶ್ಚಯವು ಬಾರದೆ ಹೋಗಬೇಕಾಗುವುದು. ಕರಣದೋಷಾದಿಗಳ ನಿಶ್ಚಯವಾಗದೆ ಇದ್ದರೆ ಜ್ಞಾನಗಳಿಗೆ ಭ್ರಮತ್ವಾದಿಗಳು ನಿಶ್ಚಿತಗಳಾಗಲಾರವು. ಅಂತೂ ವಸುಗಳ ನಿರ್ಣಯವೇ ಬಾರದೆಹೋಗಬೇಕಾಗುವುದು. ಕಾರಣವಿಲ್ಲವಾದರೆ ಕಾರ್ಯೋತ್ಪತ್ತಿಯಾಗಲಾರದು ಎಂದುಕ್ತವಾಗಿದೆ. ಭ್ರಮತ್ವಾಭ್ರಮತ್ವಾದಿನಿರ್ಣಯವು ಸಾಕ್ಷಿಯಿಂದ ಆಗುವುದು ಬೇಡ ಎಂದು ಹೇಳಕೂಡದು. ಹಾಗಿದ್ದರೆ ಎಲ್ಲಾ ವ್ಯವಹಾರಗಳೂ ಭ್ರಮತ್ವಾಭ್ರಮತ್ವ ನಿರ್ಣಯಾಧೀನಗಳಾಗಿರುವುದರಿಂದ ಹಾನ ಉಪಾದಾನ ಮೊದಲಾದ ಎಲ್ಲಾ ವ್ಯವಹಾರಗಳೂ ಆಗದೆ ಹೋಗಬೇಕಾಗುವುದು ಎನ್ನುತ್ತಾರೆ—

**ಮೂ॥ ಊರೀಕೃತ್ಯ ಚ ತಾನ್ಸರ್ವಾನ್ ವ್ಯವಹಾರಃ ಪ್ರವರ್ತತೇ ।**
**ಸಾಕ್ಷಿಣೋ ವ್ಯವಸಾಯಿಸ್ತು ವ್ಯವಹಾರೋಽಭಿಧೀಯತೇ ॥ ೬೯ ॥**
**ತಸ್ಮಾತ್ಸರ್ವಪ್ರಸಿದ್ಧಸ್ಯ ವ್ಯವಹಾರಸ್ಯ ಸಿದ್ಧಯೇ ।**
**ಸಾಕ್ಷೀ ನಿರ್ದೋಷ ಏವೈಕಸ್ಸದಾಂಗೀಕಾರ್ಯ ಏವ ನಃ ॥ ೭೦ ॥**
**ಶುದ್ಧಃ ಸಾಕ್ಷೀ ಯದಾ ಸಿದ್ಧೋ ದುಃಖಿತ್ವಂ ವಾರ್ಯತೇ ಕಥಂ ।**
**ಉಪಜೀವ್ಯ ಪ್ರಮಾಣಂ ತದ್ಭೇದಗ್ರಾಹಕಮೇವ ಹಿ ।**
**ಅತೋ ಜೀವೇಶಯೋರ್ಭೇದಃ ಶ್ರುತಿಸಾಮರ್ಥ್ಯಸುಸ್ಥಿರಃ ॥ ೭೧ ॥**

ಅ॥ ತಾನ್ ಸರ್ವಾನ್=ಆ ಎಲ್ಲಾ ಕರಣದೋಷಾದಿಗಳನ್ನು, ಊರೀಕೃತ್ಯ ಚ=ನಿಶ್ಚೈಸಿಯೇ ಕಾರಣವನ್ನಾಗಿ ಮಾಡಿ,ವ್ಯವಹಾರಃ=ವ್ಯವಹಾರವು,ಪ್ರವರ್ತತೇ=ಪ್ರವೃತ್ತವಾಗುತ್ತದೆ. (ಅಂದರೆ) ರಜತಭ್ರಮದಿಂದ ರಜತವನ್ನು ತರಲಿಕ್ಕೆ ಪ್ರವೃತ್ತನಾದ ಪುರುಷನು ಕರಣದೋಷ, ಬಾಧಕಜ್ಞಾನ ಇವುಗಳನ್ನು ತಿಳಿದು ಆ ರಜತಜ್ಞಾನವೂ ಭ್ರಮೆಯೆಂದು ತಿಳಿದು, ಇದು ರಜತವಲ್ಲ, ಮತ್ತೆ ಶುಕ್ತಿಯೇ ಎಂದು ನಿಶ್ಚಯಿಸಿಕೊಂಡು ನಿವೃತ್ತನಾಗುತ್ತಾನೆ. ಹಾಗೆಯೇ ಇದು ನೀರೆಂದು ತಿಳಿದು ಸಂವಾದಾದಿ ಸಹಾಯದಿಂದ ಸಾಕ್ಷಿಯಿಂದ ಆ ಜ್ಞಾನಕ್ಕೆ ಪ್ರಾಮಾಣ್ಯವನ್ನು ನಿಶ್ಚಯಿಸಿಕೊಂಡು ನೀರನ್ನು ಸ್ವೀಕರಿಸುತ್ತಾನೆ. ಅಂತೂ ಈ ಹಾನೋಪಾದಾನಾದಿ ಪ್ರವೃತ್ತಿಗಳು ಭ್ರಮತ್ವಾಭ್ರಮತ್ವನಿಶ್ಚಯಾಧೀನಗಳೇ. (ಹಿಂದೆ ಹೇಳಿದ ಪ್ರಕಾರ ಅರ್ಥ ಯಾಥಾರ್ಥ್ಯನಿಶ್ಚಯವಾಗಿಯೇ ವ್ಯವಹಾರವು ಎನ್ನುವ ನಿಯಮವಿಲ್ಲ. ಅರ್ಥ ಸಂದೇಹದಿಂದಲೂ ವ್ಯವಹಾರವು ಕಂಡದೆ ಎಂದಾ ಶಂಕಿಸಿದರೆ—) ವ್ಯವಸಾಯಿಸ್=ನಿಶ್ಶಂಕವಾದ, ವಿಸಂವಾದಿಯಾಗದಿರುವ, ವ್ಯವಹಾರಸ್ತು=ವ್ಯವಹಾರವಾದರೂ, ಸಾಕ್ಷಿಣಃ=ಸಾಕ್ಷಿಯ, (ಕಾರ್ಯವೆಂದು) ಅಭಿಧೀಯತೇ=ಹೇಳಿಸಿಕೊಳ್ಳಲ್ಪಡುತ್ತದೆ. (ಕೇವಲ ವ್ಯವಹಾರವಲ್ಲ. ನಿಶ್ಶಂಕವಾದ ಅವಿಸಂವಾದಿಯಾದ ವ್ಯವಹಾರವು ಅರ್ಥಯಾಥಾರ್ಥ್ಯ ನಿಶ್ಚಯವಿಲ್ಲದೆ ಆಗಲಾರದು. (ವ್ಯವಹಾರಕ್ಕೆ ಹಾನಿ ಬರಲಿ, ನಮಗೆ ಏನು ಬಾಧಕವು ಎನ್ನುವ ಆಶಂಕೆಯನ್ನು ಪರಿಹರಿಸುತ್ತಾ ಸಾಕ್ಷಿಪ್ರಾಮಾಣ್ಯವನ್ನು ಉಪಸಂಹಾರ ಮಾಡುತ್ತಾರೆ.) ತಸ್ಮಾತ್=(ಯಾವಕಾರಣದ್ದೆಶೆಯಿಂದ ಸಾಕ್ಷಿಗೆ ಕೆಲವು ಕಡೆ ಅಯಥಾರ್ಥತ್ವವಿದ್ದರೆ ಅವಿಶ್ವಾಸವು ಪ್ರಾಪ್ತವಾಗುವುದರಿಂದ ಕರಣದೋಷಾದಿಗಳ ನಿಶ್ಚಯಾಭಾವಪ್ರಯುಕ್ತ ಜ್ಞಾನಗಳಿಗೆ ಭ್ರಮತ್ವ-ಅಭ್ರಮತ್ವ ನಿರ್ಧಾರಣವು ಬಾರದೆ ಹೋಗಬೇಕಾಗುವುದು. ಅದರಿಂದ ಅರ್ಥಗಳ ಯಾಥಾರ್ಥ್ಯ ಅಯಥಾರ್ಥ್ಯ ನಿರ್ಣಯವು ಆಗದಿರುವುದರಿಂದ ನಿಶ್ಶಂಕವಾದ ಅವಿಸಂವಾದಿಯಾದ ವ್ಯವಹಾರವು ಆಗದೆಹೋಗಬೇಕಾಗುವುದು. ಸರ್ವಲೋಕ ಪ್ರಸಿದ್ಧವಾದ

ಪ್ರಯುಕ ವ್ಯವಹಾರ ಲೋಪವನ್ನು ಅಂಗೀಕರಿಸಕೂಡದು. ಸರ್ವಲೋಕ ಪ್ರಸಿದ್ಧವಾದುದನ್ನು ಲೌಕಿಕರೂ, ಪರೀಕ್ಷಕರೂ, ಉಲ್ಲಂಘಿಸಲಾರರು.) ಆದುದರಿಂದ ಸರ್ವಪ್ರಸಿದ್ಧಸ. = ಸರ್ವಲೋಕಪ್ರಸಿದ್ಧವಾದ, ನಿಶ್ಶಂಕವಾದ, ಅವಿಸಂವಾದಿಯಾದ ಕಾರ್ಯಭೂತವಾದ ವ ವ ಹಾರದ, ಸಿದ್ಧಯೇ=ಸಿದ್ಧಿಗೋಸ್ಕರ ಕಾರಣೀಭೂತವಾದ, (ವಸ್ತು ಯಥಾರ್ಥತ್ವ ಅಯಥಾ ರ್ಥತ್ವ ನಿಶ್ಚಯವು ಅಂಗೀಕರಿಸಬೇಕು. ಅದರ ನಿಶ್ಚಯಕ್ಕಾಗಿ ಕರಣದೋಷಾದಿಗಳ ನಿಶ್ಚಯ ದ್ವಾರಾ ಸಾಕ್ಷಿಯಿಂದ ಜ್ಞಾನಗಳಿಗೆ ಭ್ರಮತ್ವ-ಅಭ್ರಮತ್ವನಿರ್ಣಯವನ್ನು ಅಂಗೀಕರಿಸಬೇಕು. ಅದರ ಸಿದ್ಧಿಗಾಗಿ ಸಾಕ್ಷಿಯು ವಿಶ್ವಾಸಾರ್ಹವೆಂದೂ, ಅದರ ಸಿದ್ಧಿಗಾಗಿ) ಸಾಕ್ಷೀ=ಸಾಕ್ಷಿಯು, ಏಕಃ=ಒಂದು, ಸದಾ=ಯಾವಾಗಲೂ, ನಿರ್ದೋಷಃ ಏವ=ಯಥಾರ್ಥವೇ ಎಂದು, ನಃ= ನಮಗೆ ಪರೀಕ್ಷಕರಿಗೆ ಅಂಗೀಕಾರ್ಯ ಏವ=ಅಂಗೀಕಾರಾರ್ಹವೇ. (ಹೀಗಾದರೆ ಪ್ರಾಭಾಕರಾದಿ ರೀತಿಯಿಂದ ಎಲ್ಲಾ ಜ್ಞಾನಗಳಿಗೂ ಯಾಥಾರ್ಥ್ಯನಿಯಮವಿರಲಿ ಎಂದಾಶಂಕಿಸಿದರೆ – ಒಂದಕ್ಕೇನೇ ಯಾಥಾರ್ಥ್ಯವನ್ನು ಇಟ್ಟುಕೊಂಡರೆ ಎಲ್ಲವೂ ಕೂಡುವಾಗ ಅಪ್ರಾಮಾಣಿಕವೂ ಪ್ರಮಾಣವಿರು ದ್ಧವೂ, ಆದ ಸರ್ವಪ್ರತ್ಯಯಗಳ ಯಾಥಾರ್ಥ್ಯನಿಯಮದಿಂದ ಏನು ಪ್ರಯೋಜನವು?) ಶುದ್ಧಃ= ಶುದ್ಧವಾದ ನಿರ್ದುಷ್ಟವಾದ, ಸಾಕ್ಷೀ = ಸಾಕ್ಷಿಯು, ಯದಾ=ಯಾವಾಗ, ಸಿದ್ಧಃ=ಸಿದ್ಧವಾ ಯಿತೋ, ದುಃಖಿತ್ವಂ=ಆ ಸಾಕ್ಷಿಯಿಂದ ಜೀವನಿಗೆ ಪ್ರತೀತವಾದ ದುಃಖಿತ್ವವು, ಕಥಂ=ಹೇಗೆ, ವಾರ್ಯತೇ=ತಡೆಯಲ್ಪಡುತ ದೆ. ಉಪಜೀವ್ಯಪ್ರಮಾಣಂ=ಶು ತ್ಯನುಮಾನಗಳ ಉಪಜೀವ್ಯ ಪ್ರಮಾಣವು, ತತ್=ಆದಕಾರಣ, ಭೇದಗ್ರಾಹಕಮೇವ=ಭೇದವಿಷಯಕ ಯಥಾರ್ಥಜ್ಞಾನ ಜನಕವೇ, ಹಿ=ಪ್ರಸಿದ್ಧವು. (ತಥಾಚ ಉಪಜೀವ್ಯ ಪ್ರಮಾಣವಿರೋಧದಿಂದ ಅಭೇದ ಶು ತ್ಯಾದಿ ಗಳಿಗೆ ಅಪ್ರಾಮಾಣ್ಯವೇ.) ಅತಃ=ಆದಕಾರಣ, ಜೀವೇಶಯೋಃ=ಜೀವೇಶ್ವರರ, ಭೇದಃ=ಭೇದವು, ಶ್ರುತಿಸಾಮರ್ಥ್ಯಸುಸ್ಥಿರಃ='ಭಿನ್ನೋ ಚಿಂತ್ಯಃ' ಇದು ಮೊದಲಾದ ಶ್ರುತಿಗೆ ಸ್ವವಿರುದ್ಧಾರ್ಥವನ್ನು ಪ್ರತಿಪಾದಿಸುವ ಪ್ರಮಾಣಾಂತರರಾಹಿತ್ಯರೂಪಸಾಮರ್ಥ್ಯದಿಂದ ಸುದೃಢವಾದುದು. ॥ ೬೯ ॥ ॥ ೭೦ ॥ ೭೧ ॥

ಹೀಗೆ ಜೀವೇಶರಿಗೆ ಭೇದವೇ ಪಾರಮಾರ್ಥಿಕವಾಗಿ ವ್ಯವಸ್ಥಿತವಾದರೆ ಆಗ ತತ್ತ್ವಮಸ್ಯಾ ದ್ಯದ್ವೈತಶ್ರುತಿಗಳಿಗೂ 'ಅಹಂ ಹರಿಃ' ಇತ್ಯಾದಿ ಸ್ಮೃತಿಗಳಿಗೂ ಏನು ಗತಿಯು? ಆ ಶ್ರುತಿ ಸ್ಮೃತಿಗಳಿಗೆ ಅನುಮಾನದಂತೆ ಸರ್ವಥಾ ಅಪ್ರಾಮಾಣ್ಯವು ಯುಕ್ತವಲ್ಲ. ಶ್ರುತಿಯು ಅಪೌರು ಷೇಯವಾಗಿರುವುದರಿಂದಲೂ, ಸ್ಮೃತಿಯು ಆಪ್ತನು ಹೇಳಿರುವುದರಿಂದಲೂ ಅವುಗಳಿಗೆ ಅಪ್ರಾ ಮಾಣ್ಯಕಾರಣವಿಲ್ಲ ಎನ್ನುವ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಸೂತ್ರವು.

**"ಓಂ ತದ್ಗುಣಸಾರತ್ವಾತ್ತು ತದ್ವ್ಯಪದೇಶಃ ಪ್ರಾಜ್ಞವತ್ ಓಂ"**

**॥ ಸೂ. ೨೯ ॥**

ಜೀವನಿಗೆ ತತ್ತ್ವಮಸಿ ಎಂದು ಬ್ರಹ್ಮಾಭೇದವ್ಯಪದೇಶವು ಬ್ರಹ್ಮಸಂಬಂಧಿಜ್ಞಾನಾನಂದಾದಿ ಗುಣಸದೃಶ ಗುಣಸ್ವರೂಪತ್ವವಿದ್ದುದರಿಂದಲೇ ಅಭೇದದಿಂದ ಅಲ್ಲ. ಬ್ರಹ್ಮನಿಗೆ ಹೇಗೆ '**ಸರ್ವಂ ಖಲ್ವಿದಂ ಬ್ರಹ್ಮ**' ಎಂದು ಜಗದಭೇದವ್ಯಪದೇಶವು ಹೇಗೆ ಗೌಣವೋ ಹಾಗೆಯೇ.

ಅದನ್ನು ವ್ಯಾಖ್ಯಾನಮಾಡುತ್ತಾರೆ –

**ಮೂ ॥ ತಥಾಽಪಿ ತು ಚಿದಾನಂದಪೂರ್ವಾಸ್ತತ್ಸದೃಶಾ ಗುಣಾಃ ॥ ೭೨ ॥**
**ಸಾರಃ ಸ್ವರೂಪಮಸ್ಯಾಪಿ ಮುಕ್ತಾ ವಪ್ಯವಶಿಷ್ಯತೇ ।**

**ಅತೋಽಭೇದವದೇವೈತಾಃ ಶ್ರುತಯಃ ಪ್ರವದಂತಿ ಹಿ ॥ ೭೩ ॥**
**ಪೌರಾಣಾನಿ ಚ ವಾಕ್ಯಾನಿ ಸಾದೃಶ್ಯಾಭೇದಸಂಶ್ರಯಾತ್ ।**
**ಸಾದೃಶ್ಯಾಚ್ಚ ಪ್ರಧಾನತ್ವಾತ್ಸ್ವಾತಂತ್ರ್ಯಾದಪಿ ಚಾಭಿದಾಂ ।**
**ಆಹುರೀಶೇನ ಜೀವಸ್ಯ ನ ಸ್ವರೂಪಾಭಿದಾಂ ಕ್ವಚಿತ್ ॥ ೭೪ ॥**

**ಅ** ॥ (ಯದ್ಯಪಿ ಜೀವಬ್ರಹ್ಮರಿಗೆ ಭೇದವೇ.) ತಥಾಽಪಿ = ಆದಾಗ್ಯೂ, ಚಿದಾನಂದ ಪೂರ್ವಾಃ=ಜ್ಞಾನಾನಂದಗಳೇ ಮೊದಲಾಗಿವುಳ್ಳ, ತತ್ಸದೃಶಾಃ ಗುಣಾಃ = ಪರಮಾತ್ಮಗುಣ ಸದೃಶಗಳಾದ ಗುಣಗಳು, ಅಸ್ಯಾಪಿ=ಈ ಜೀವನಿಗೂ, ಸಾರಃ=ಅಂದರೆ, ಸ್ವರೂಪಂ=ಸ್ವರೂಪವು, ಯತಃ=ಯಾವಕಾರಣದ್ದೆಶೆಯಿಂದ, ಮುಕ್ತಾವಪಿ = ಮುಕ್ತಿಯಲ್ಲಿಯೂ, ಅವಶಿಷ್ಯತೇ= ಉಳಿಯುತ್ತದೆ. ಅತ ಏವ=ಆದಕಾರಣವೇ, ಅಭೇದವದೇವ=ಆಪಾತತಃ ಅಭೇದಪ್ರತಿಪಾದಕಗಳಂತೆ ತೋರುವ, ಏತಾಃ=ಪರೋದಾಹೃತಗಳಾದ, ಶ್ರುತಯಃ=ಶ್ರುತಿಗಳೂ, ಪೌರಾಣಾನಿ ವಾಕ್ಯಾನಿ ಚ=ಪುರಾಣದಲ್ಲಿರುವ ವಾಕ್ಯಗಳೂ ಕೂಡ, ಸಾದೃಶ್ಯಾಭೇದಸಂಶ್ರಯಾತ್=ಸಾದೃಶ್ಯವೆನ್ನುವ ಅಭೇದವನ್ನು ಆಶ್ರಯಿಸಿಕೊಂಡು, ಪ್ರವದಂತಿ = (ಗೌಣಾರ್ಥವನ್ನು) ಹೇಳುತ್ತವೆ. ಹಿ=ಪ್ರಸಿದ್ಧವು ॥ ೭೨ ॥ ೭೩ ॥ ೭೪ ॥

ಸೂತ್ರದಲ್ಲಿ ಮಾಡಿರುವ ಅಭೇದಾಗಮವ್ಯಾಖ್ಯಾನವನ್ನು ಅನುವಾದಮಾಡಿಕೊಂಡು ಸೂತ್ರಕಾರರಿಗೆ ಅಭಿಪ್ರೇತವಾದ ಅರ್ಥಾಂತರವನ್ನೂ ಹೇಳುತ್ತಾರೆ—

**ಮೂ ॥ ಸಾದೃಶ್ಯಾಚ್ಚ ಪ್ರಧಾನತ್ವಾತ್ಸ್ವಾತಂತ್ರ್ಯಾದಪಿ ಚಾಭಿದಾಂ ॥ ೭೫ ॥**
**ಆಹುರೀಶೇನ ಜೀವಸ್ಯ ನ ಸ್ವರೂಪಾಭಿದಾಂ ಕ್ವಚಿತ್ ।**
**ಸ್ಥಾನೈಕ್ಯಮೈಕಮತ್ಯಂ ಚ ಮುಕ್ತಸ್ಯ ತು ವಿಶಿಷ್ಯತೇ ॥ ೭೬ ॥**

**ಅ** ॥ ಸಾದೃಶ್ಯಾಚ್ಚ=**ತತ್ತ್ವಮಸಿ** ಇತ್ಯಾದಿಗಳಲ್ಲಿ ಸಾದೃಶ್ಯದಿಂದಲೂ, ಪ್ರಧಾನತ್ವಾದಪಿ ಸ್ವಾತಂತ್ರ್ಯಾದಪಿ ಚ =**'ನಾನ್ಯೋಽತೋಽಸ್ತಿ ದ್ರಷ್ಟಾ'** ಇತ್ಯಾದಿಗಳಲ್ಲಿ ಶ್ರೀ ಹರಿಗೇನೇ ವೈಶಿಷ್ಟ್ಯದಿಂದಲೂ, ಸ್ವಾತಂತ್ರ್ಯವಿದ್ದುದರಿಂದಲೂ, ಈಶೇನ=ಶ್ರೀ ಹರಿಯಿಂದ, ಜೀವಸ್ಯ=ಜೀವನಿಗೆ, ಅಭಿದಾಂ=ಅಭೇದವನ್ನು, (ಶ್ರುತಿಗಳೂ ಪುರಾಣವಾಕ್ಯಗಳೂ) ಆಹುಃ=ಹೇಳುತ್ತವೆ. ಕ್ವಚಿತ್=ಯಾವ ಪ್ರದೇಶದಲ್ಲಿಯೂ, ಸ್ವರೂಪಾಭಿದಾಂ=ಸ್ವರೂಪಾಭೇದವನ್ನು, ನಾಹುಃ= ಹೇಳುವುದಿಲ್ಲ. (ನಾನ್ಯೋಽತೋಽಸ್ತಿ ಎನ್ನುವ ಶ್ರುತಿಯನ್ನು ಶ್ರೀ ಹರಿಯಿಂದ ಭಿನ್ನನಾದ ಸ್ವತಂತ್ರನಾದ, ಉತ್ತಮನಾದ ಜೀವರೂಪದ್ರಷ್ಟೃ ಇಲ್ಲ. ಎಂದು ಪರಮಾತ್ಮನಿಗೇನೇ ಸ್ವಾತಂತ್ರ್ಯವೂ ಉತ್ತಮತ್ವವೂ ಪ್ರತಿಪಾದಿತವಾಗಿದೆ. ಅಲ್ಲದೆ ಪರಮಾತ್ಮನಿಂದ ಭಿನ್ನನಾದ ಜೀವರೂಪದ್ರಷ್ಟೃ ಇಲ್ಲ. ಅಂತೂ ಜೀವೇಶ್ವರನಿಗೆ ಅಭೇದವೆನ್ನುವಲ್ಲಿ ಈ ಶ್ರುತಿಗೆ ಸರ್ವಥಾ ತಾತ್ಪರ್ಯವಿಲ್ಲ.) (ಹಿಂದೆ ಹೇಳಿದ ರೀತಿಯಿಂದ ಐಕ್ಯವಾಕ್ಯವು ಸಾದೃಶ್ಯಾದಿರೂಪಅರ್ಥಾಂತರ ಪರವಾಗಲಿ ಮುಕ್ತನಿಗೆ ಪರಮಾತ್ಮನಿಂದ ಐಕ್ಯವನ್ನು ಪ್ರತಿಪಾದಿಸತಕ್ಕ ಯತ್ರತ್ವಸ್ಯ ಇತ್ಯಾದಿ ವಿಶೇಷೋಕ್ತಿಯು ಕೂಡಲಾರದು ಎಂದರೆ.) ಸ್ಥಾನೈಕ್ಯಂ=ಈಶನಿಂದ ಸ್ಥಾನೈಕ್ಯವು, ಐಕಮತ್ಯಂ ಚ=ಐಕಮತ್ಯವೂ ಕೂಡ, ಮುಕ್ತಸ್ಯ ತು=ಮುಕ್ತನಿಗೆ, ವಿಶಿಷ್ಯತೇ=ವಿಶೇಷವಾಗಿದೆ. (ಆದುದರಿಂದ) ವಿಶೇಷೇಣ=ವಿಶೇಷದಿಂದ (ಅಭೇದೋಕ್ತಿಯು ಕೂಡುತ್ತದೆ.) (ಅಂದರೆ ಸಂಸಾರ ದೆಶೆಯಲ್ಲಿ ಜೀವನಿಗೆ ಚೇತನತ್ವಾದಿಗಳಿಂದ ಶ್ರೀ ಹರಿಯಿಂದ ಸಾದೃಶ್ಯಮಾತ್ರವು. ಮುಕ್ತಿಯಲ್ಲಿ

ಮುಕ್ತನಿಗಾದರೂ ವೈಕುಂಠಾದಿ ಸ್ಥಾನವಿಶೇಷಗಳಲ್ಲಿ ಪರಮಾತ್ಮನಿಂದ ಕೂಡಿಕೊಂಡು ಇರೋಣದರಿಂದ ಏಕಸ್ಥಾನ ಸ್ಥಿತತ್ವರೂಪವಾದ ಸ್ಥಾನೈಕ್ಯವು ಮತ್ತು ವಿರೋಧವಿಲ್ಲದಿರುವುದರಿಂದ ಐಕಮತ್ಯವು ಎನ್ನುವ ವಿಶೇಷವೂ ಇದೆ. ॥ ೭೫ ॥ ೭೬ ॥

ಯಾವ ಸಾದೃಶ್ಯವು ಸಜ್ಜೀವಮಾತ್ರದಲ್ಲಿ ಸಾಧಾರಣವಾಗಿ ಹೇಳಲ್ಪಟ್ಟದೋ, ಅದು ಸಂಸಾರಿಯಲ್ಲಿ ಅನಭಿವ್ಯಕ್ತವಾಗಿದೆ. ಮುಕ್ತನಲ್ಲಿ ವ್ಯಕ್ತವಾಗಿದೆ. ಈ ಅಭಿಪ್ರಾಯದಿಂದ ಮುಕ್ತಿಯಲ್ಲಿ ವಿಶೇಷವಾಗಿ ಅಭೇದೋಕ್ತಿಯು ಯುಕ್ತವೆಂದಭಿಪ್ರಾಯವುಳ್ಳವರಾಗಿ ಹೇಳುತ್ತಾರೆ.

**ಮೂ ॥ ಸಾದೃಶ್ಯಂ ಚ ವಿಶೇಷೇಣ ಜಡಾನಾಂ ದ್ವಯಮೇವ ತು ।**
**ಭವೇತ್ಸಾದೃಶ್ಯಮತ್ಯಲ್ಪಂ ತೃತೀಯಂ ಪರಮಾತ್ಮನಾ ॥ ೭೭ ॥**
**ಈಶರೂಪಕ್ರಿಯಾಣಾಂ ಚ ಗುಣಾನಾಮಪಿ ಸರ್ವಶಃ ।**
**ತಥೈವಾವಯವಾನಾಂ ತತ್ಸ್ವರೂಪೈಕ್ಯಂ ತು ಮುಖ್ಯತಃ ॥ ೭೮ ॥**

**ಅ ॥** ಸಾದೃಶ್ಯಂಚ= (ಮುಕ್ತನಿಗೆ ಈಶನಿಂದ) ಅಭಿವ್ಯಕ್ತವಾದ ಸಾದೃಶ್ಯವು ಇದೆ. ವಿಶೇಷೇಣ=ಅಭಿವ್ಯಕ್ತಸಾದೃಶ್ಯರೂಪ ವಿಶೇಷದಿಂದ (ಅಭೇದೋಕ್ತಿಯು ಕೂಡುತ್ತದೆ.) (ಹಾಗಾದರೆ ಸಾದೃಶ್ಯವೊದಲಾದುದು ಜಡಗಳಲ್ಲಿಯೂ ಅದೆ. ಆದಕಾರಣ ಜಡಗಳಿಗೆ **'ಸರ್ವಂ ಖಲ್ವಿದಂ ಬ್ರಹ್ಮ' 'ಭೂತಾನಿ ವಿಷ್ಣುರ್ಭುವನಾನಿ ವಿಷ್ಣುಃ ವನಾನಿ ವಿಷ್ಣುಃ ಗಿರಯೋ ದಿಶಶ್ಚ'** ಇತ್ಯಾದಿಗಳಲ್ಲಿ ಜೀವನಿಗೆ ಇದ್ದಂತೆಯೇ ಪ್ರಾಚುರ್ಯವಿಲ್ಲದೆ ಕೆಲವು ಕಡೆಯೇ ಪರಬ್ರಹ್ಮನಿಂದ ಐಕ್ಯ ವ್ಯಪದೇಶವು ಹೇಗೆ? ಎಂದರೆ) ಜಡಾನಾಂತು=ಜಡಗಳಿಗಾದರೂ, ದ್ವಯಮೇವ=ಎರಡೇ, (ಈಶಪ್ರಧಾನಕತ್ವವೂ ಈಶಾಧೀನತ್ವವೂ ಇವು ಎರಡೇ.) ಆದುದರಿಂದ ಅಪ್ರಚುರೋಕ್ತಿಯು ಕೂಡುತ್ತದೆ. (ಸಾದೃಶ್ಯ ಎನ್ನುವ ೩ನೇದ್ದು ಇದ್ದಪ್ರಯುಕ್ತ ಎರಡೇ ಎನ್ನುವುದು ಹೇಗೆ ಕೂಡುತ್ತದೆ ಎಂದರೆ—) ಜಡಾನಾಂ=ಜಡಗಳಿಗೆ, ಪರಮಾತ್ಮನಾ=ಪರಬ್ರಹ್ಮನಿಂದ, ತೃತೀಯಂ=ಮೂರನೇದ್ದಾದ, ಸಾದೃಶ್ಯಂ=ಸಾದೃಶ್ಯವಾದರೂ, ಅತ್ಯಲ್ಪಂ=ಅತ್ಯಲ್ಪವಾದುದೇ, ಭವೇತ್=ಆಗುವುದು. (ಸಾದೃಶ್ಯವಿದೆ ಎನ್ನುವುದು ಸತ್ಯವೇ. ಆದರೆ ಸತ್ತಾದಿಗಳಿಂದಲೇ ಜೀವನಂತೆ ಆನಂದಾದಿಗಳಿಂದ ಅಲ್ಲ, ಆದುದರಿಂದ ಎರಡೇ ಎಂದು ಹೇಳಿದ್ದು ಯುಕ್ತವೇ.) (ಹಾಗಾದರೆ ಆನಂದಾದಿಗಳಿಂದ ಸಾದೃಶ್ಯವು ಜೀವರಲ್ಲಿಯೂ ಇಲ್ಲ. ಕೆಲವು ಜೀವರಿಗೆ ದುಃಖಾದಿರೂಪತ್ವವು ಅಂಗೀಕೃತವಾಗಿದೆ ಎಂದರೆ ಬೇಡ. ಎಲ್ಲಾಜೀವರನ್ನುಕುರಿತು ತತ್ತ್ವಮಸಿ ಎನ್ನುವುದರಿಂದ ಸಾದೃಶ್ಯವನ್ನು ಹೇಳುವುದಿಲ್ಲ. ಎಲ್ಲಾಜೀವರಿಗೆ ವೇದದಲ್ಲಿ ಅಧಿಕಾರವೇ ಇಲ್ಲ. ಮತ್ತೆ ಮೋಕ್ಷಯೋಗ್ಯರಿಗೇನೇ ಅಧಿಕಾರವಿರುವುದು) ಅವರನ್ನು ಕುರಿತು ಜ್ಞಾನಾನಂದಾದಿಗಳಿಂದ ಸಾದೃಶ್ಯವು. (ಸೂತ್ರದಲ್ಲಿ ಪ್ರಾಜ್ಞವತ್ ಎಂದು ಪ್ರಾಜ್ಞನಲ್ಲಿ ಹೇಗೆ ಅಭೇದವ್ಯಪದೇಶವು ಅಮುಖ್ಯವೋ ಹಾಗೆಯೇ ಎಂದು ದೃಷ್ಟಾಂತವು ಹೇಳಲ್ಪಟ್ಟದೆ. ಅಲ್ಲಿ ಅಭೇದದಲ್ಲಿ ಪ್ರತಿಯೋಗಿವಿಶೇಷವನ್ನು ಹೇಳದೆ ಇದ್ದುದರಿಂದ **'ವಿಜ್ಞಾನಮಾನಂದಂಬ್ರಹ್ಮ'** ಇದು ಮೊದಲಾದ ಎಲ್ಲಾ ಅಭೇದವ್ಯಪದೇಶವೂಕೂಡ ಅಮುಖ್ಯವೆಂದು ತಿಳಿಯಬಾರದು ಎನ್ನುವ ಅಭಿಪ್ರಾಯದಿಂದ ಹೇಳುತ್ತಾರೆ.) ಈಶರೂಪ ಕ್ರಿಯಾಣಾಂಚ=ಶ್ರೀಹರಿಯ ಮತ್ಸ್ಯಾದಿರೂಪಗಳಿಗೂ ಸೃಷ್ಟ್ಯಾದಿಕ್ರಿಯೆಗಳಿಗೂ, ಸರ್ವಶಃ=ಎಲ್ಲಾ, ಗುಣಾನಾಂಚ=ಜ್ಞಾನಾನಂದಾದಿ ಗುಣಗಳಿಗೂ, ತಥೈವ=ಹಾಗೆಯೇ, ಅವಯವಾನಾಂಚ=ಹಸ್ತಾದ್ಯವಯವಗಳಿಗೂ, ತತ್ಸ್ವರೂಪೈಕ್ಯಂ=ಈಶಸ್ವರೂಪದಿಂದ ಐಕ್ಯಪ್ರತಿಪಾದಕ ವಾಕ್ಯವು, ಮುಖ್ಯತಃ ತು=ಮುಖ್ಯಾಭೇದಪರವೆಂದೇ ವ್ಯಾಖ್ಯೇಯವು.

(ಜಡಜಗತ್ತಿನಿಂದ ಅಭೇದಪ್ರತಿಪಾದಕವಾದ ' ಸರ್ವಂ ಖಲ್ವಿದಂ ಬ್ರಹ್ಮ ' ಇತ್ಯಾದಿ ವಾಕ್ಯದಂತೆ ಅಮುಖ್ಯಾಭೇದಪರವಲ್ಲ.) ಅಂತೂ ಜಡವಿಷಯಕವಾದುದೇ ಪ್ರಾಜ್ಞವತ್ ಎನ್ನುವ ಸೂತ್ರದಲ್ಲಿರುವ ದೃಷ್ಟಾಂತವು. ॥ ೭೭ ॥ ೭೮ ॥

ಶ್ರೀ ಹರಿಯ ಧರ್ಮಗಳು ಶ್ರೀ ಹರಿಯಿಂದ ಭಿನ್ನಗಳೆಂದು ಕಂಡರೆ ಪ್ರತ್ಯವಾಯವಿದೆ ಎನ್ನುತ್ತಾರೆ—

**ಮೂ ॥ ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ ।**
**ಏವಂ ಧರ್ಮಾನ್ ಪೃಥಕ್ ಪಶ್ಯಂಸ್ತಾನೇವಾನುವಿಧಾವತಿ ॥ ೭೯ ॥**
**ಇತಿ ಶ್ರುತೇರ್ನೋಭಯಂ ಚ ಭೇದಾಭೇದಾಖ್ಯಮಿಷ್ಯತೇ ।**
**ಏಕಮೇವಾದ್ವಿತೀಯಂ ತನ್ನೇಹ ನಾನಾಸ್ತಿ ಕಿಂಚನ ॥ ೮೦ ॥**
**ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ।**
**ಇತಿ ಶ್ರುತಾವಿವೇತ್ಯಸ್ಮಾದ್ಭೇದಾಭೇದನಿರಾಕೃತಿಃ ।**
**ಇವೋಭಯೋಃ ಚ ಸಾದೃಶ್ಯ ಇತಿ ವಾಕ್ ಶಬ್ದನಿರ್ಣಯೇ ॥ ೮೧ ॥**

ಅ ॥ ಪರ್ವತೇಷು=ಪರ್ವತಗಳಲ್ಲಿ, ದುರ್ಗೇ=ದುರ್ಗಸ್ಥಲವಾದ ಶಿಖರದಲ್ಲಿ, ವೃಷ್ಟಂ=ಸುರಿಸಲ್ಪಟ್ಟ, ಉದಕಂ=ನೀರು, ಯಥಾ=ಹೇಗೆ,(ಕೆಳಗೆ)ವಿಧಾವತಿ=ಓಡುತ್ತದೋ, ಏವಂ=ಹೀಗೆ, ಧರ್ಮಾನ್=ಪಾರಮೇಶ್ವರಧರ್ಮಗಳನ್ನು, ಪೃಥಕ್ = ಈಶ್ವರನಿಂದ ಪ್ರತ್ಯೇಕವಾಗಿ, ಪಶ್ಯನ್=ನೋಡತಕ್ಕವನು, ತಾನೇವ = ಅವುಗಳನ್ನೇ, ಅನು = ದರ್ಶನಾನಂತರದಲ್ಲಿಯೇ, ವಿಧಾವತಿ=ಶೀಘ್ರದಲ್ಲಿಯೇ ನರಕವನ್ನು ಕುರಿತು ಓಡುತ್ತಾನೆ. ಇತಿ ಶ್ರುತೇಃ=ಈ ಶ್ರುತಿಯುದ್ದೇಶಿಯಿಂದ (ಪರಮಾತ್ಮಧರ್ಮಗಳಿಗೆ ಭೇದವನ್ನು ಕಂಡರೆ ಪ್ರತ್ಯವಾಯವು ತಿಳಿದುಬರುತ್ತದೆ.) (ಹಾಗಾದರೆ ಈಶ್ವರಧರ್ಮಗಳಿಗೆ ಭೇದಾಭೇದಗಳು ಇರಲಿ. ಈ ಶ್ರುತಿಯು ಅತ್ಯಂತ ಭೇದವನ್ನು ಕಂಡರೆ ನಿಂದಾಪ್ರತಿಪಾದಕವಾಗಲಿ, ಎಂದರೆ) ಭೇದಾಭೇದಾಖ್ಯಂ=ಭೇದ ಅಭೇದವೆಂದು ಹೆಸರುಳ್ಳ, ಉಭಯಂ ಚ=ಎರಡೂ ಕೂಡ, ನೇಷ್ಯತೇ=ಸೂತ್ರಕಾರರಿಂದ ಅಂಗೀಕರಿಸಲ್ಪಡುವುದಿಲ್ಲ. (ಏಕೆ ಅಂಗೀಕರಿಸಲ್ಪಡುವುದಿಲ್ಲವೆಂದರೆ) ತತ್=ಆ {ಬ್ರಹ್ಮವು, ಏಕಂ = ಅಭಿನ್ನವೆ, ಏವ= ಘಟಾದಿಗಳಂತೆ ಅವಯವಾದಿಗಳಿಂದ ಭೇದವುಳ್ಳದ್ದಲ್ಲ. ಅದ್ವಿತೀಯಂ = ಸಮಾಧಿಕರಹಿತವಾದುದು, ಇಹ=ಬ್ರಹ್ಮನಲ್ಲಿ, ಕಿಂಚನ=ಗುಣಾದಿಗಳೂ ಕೂಡ, ನಾನಾ=ಭಿನ್ನವಾದುದು, ನಾಸ್ತಿ=ಇಲ್ಲ. ಯಃ=ಯಾವಾತನು, ಇಹ=ಬ್ರಹ್ಮನಲ್ಲಿರತಕ್ಕ ಗುಣಾದಿಗಳನ್ನು, ನಾನಾ= ಭಿನ್ನವಾದುದನ್ನಾಗಿಯೂ, ಇವ=ಅಭಿನ್ನವನ್ನಾಗಿಯೂ, ಪಶ್ಯತಿ=ನೋಡುತ್ತಾನೋ, ಸಃ= ಆತನು, ಮೃತ್ಯೋಃ=ಮರಣಾನಂತರದಲ್ಲಿ, ಮೃತ್ಯುಂ=ನರಕವನ್ನು, ಆಪ್ನೋತಿ = ಹೊಂದುತ್ತಾನೆ. ಇತಿ ಶ್ರುತೌ=ಈ ಶ್ರುತಿಯಲ್ಲಿ, ಇವೇತ್ಯಸ್ಮಾತ್=ಇವ ಎನ್ನುವ ಶಬ್ದವಿದ್ದ ಪ್ರಯುಕ್ತವೂ, ಏವ ಶಬ್ದದ್ವೇಶಿಯಿಂದಲೂ, ಭೇದಾಭೇದನಿರಾಕೃತಿಃ=ಭೇದಾಭೇದನಿರಾಕರಣವು, (ಮಾಡಲ್ಪಟ್ಟಿತು ಎಂದು ತಿಳಿಯುತ್ತದೆ). ಆದಕಾರಣ ಭೇದಾಭೇದವು ಅಂಗೀಕರಿಸಲ್ಪಡುವುದಿಲ್ಲ. ಇವ=ಇವ ಎನ್ನುವ ಶಬ್ದವು, ಉಭಯೋಃ ಚ=ಭೇದಾಭೇದರೂಪ ಎರಡರಲ್ಲಿಯೂ, ಸಾದೃಶ್ಯೇ = ಸಾದೃಶ್ಯದಲ್ಲಿಯೂ ಇದೆ. ಇತಿ=ಹೀಗೆ, ಶಬ್ದನಿರ್ಣಯೇ = ಶಬ್ದನಿರ್ಣಯಾಖ್ಯಗ್ರಂಥದಲ್ಲಿ, ವಾಕ್= ವಚನವು, ಅಸ್ತಿ=ಇದೆ ॥ ೭೯ ॥ ೮೦ ॥ ೮೧ ॥ ಸೂ. ೨೮ ॥ ೨೯ ॥ ಅಧಿ. ೧೪ ॥

**ಪೃಥಗಧಿಕರಣವು ಸಮಾಪ್ತವಾಯಿತು.**

---

## ಯಾವದಧಿಕರಣವು.

### "ಓಂ ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್ ಓಂ"

|| ಸೂ. ೩೦ || ಅಧಿ. || ೧೫ ||

**'ನಿತ್ಯಃ ಪರಃ ನಿತ್ಯಃ ಜೀವಃ'** ಎನ್ನುವ ಶ್ರುತಿಯಿಂದಲೂ, **'ಆತ್ಮಾ ನಿತ್ಯಃ ಸುಖ ದುಃಖೇ ತ್ವನಿತ್ಯೇ'** ಎನ್ನುವ ಸ್ಮೃತಿಯಿಂದಲೂ, ಜೀವನೂ ಜೀವಸ್ವರೂಪರೂಪವಾದ ಉಪಾಧಿಯೂ ಅನಾದಿನಿತ್ಯವಾಗಿರುವುದರಿಂದ **'ಸೋಽನಾದಿನಾ ಪುಣ್ಯೇನ ಪಾಪೇನಾನುಬದ್ಧಃ'** ಇದುಮೊದಲಾದ ಅನಾದಿಪುಣ್ಯಾದಿ ಸಂಬಂಧವನ್ನು ಬೋಧಿಸತಕ್ಕ ಶ್ರುತಿಗೆ ಅಪ್ರಾಮಾಣ್ಯಾಖ್ಯ ದೋಷವಿಲ್ಲ. || ಸೂ. ೩೦ || ಅಧಿ. ೧೫ ||

**ಯಾವದಧಿಕರಣವು ಸಮಾಪ್ತವಾಯಿತು.**

---

## ಪುಂಸ್ತ್ವಾದಿಕರಣವು.

### "ಓಂ ಪುಂಸ್ತ್ವಾದಿವತ್ತ್ವಸ್ಯ ಸತೋಽಭಿವ್ಯಕ್ತಿಯೋಗಾತ್ ಓಂ"

|| ಸೂ. ೩೧ ||

ಯೌವನದೆಶೆಯಿಂದ ಮೊದಲೇ ಅಂದರೆ ಬಾಲ್ಯಾವಸ್ಥೆಯೇ ಇರತಕ್ಕ ಪುಂಸ್ತ್ವ-ಸ್ತ್ರೀತ್ವಾದಿಗಳಿಗೆ ಯೌವನದಲ್ಲಿ ಹೇಗೆ ಅಭಿವ್ಯಕ್ತಿಯೋ ಹಾಗೆಯೇ ಜೀವನಿಗೆ ಮೊದಲೇ ಇರತಕ್ಕ ಜ್ಞಾನಾನಂದಾದಿಸ್ವರೂಪತ್ವಕ್ಕೆ ಅಭಿವ್ಯಕ್ತಿಕೂಡುವುದರಿಂದಲೇ **'ದುಃಖಾದ್ವಿಮುಕ್ತಃ ಆನಂದೀ ಭವತಿ'** ಇತ್ಯಾದಿ ಮುಕ್ತಿಕಾಲಿಕವ್ಯಪದೇಶವು.

### "ಓಂ ನಿತ್ಯೋಪಲಬ್ಧ್ಯನುಪಲಬ್ಧಿಪ್ರಸಂಗೋಽನ್ಯತರನಿಯಮೋವಾನ್ಯಥಾ ಓಂ" || ಸೂ. ೩೨ ||

ಆವರಣವನ್ನು ಅಂಗೀಕರಿಸದಿದ್ದರೆ ಮುಕ್ತಿಯೋಗ್ಯರಾದ ಜೀವರಿಗೆ ನಿರಂತರದಲ್ಲಿಯೂ ಆನಂದಾನುಭವವು ಬರಬೇಕಾಗುವುದು. ತಮೋಯೋಗ್ಯರಿಗೆ ದುಃಖಾದಿಗಳ ಉಪಲಬ್ಧಿಯು ಬರಬೇಕಾದೀತು. ಮಧ್ಯಮ ಜೀವರಿಗೆ ಏಕಕಾಲದಲ್ಲಿ ಸುಖ-ದುಃಖ ಎರಡರ ಅನುಭವವೂ ಬರಬೇಕಾದೀತು || ೩೧ || ೩೨ || ಅಧಿ. ೧೬ ||

**ಪುಂಸ್ತ್ವಾಧಿಕರಣವು ಸಮಾಪ್ತವಾಯಿತು.**

---

## ಕರ್ತೃತ್ವಾಧಿಕರಣವು.

### "ಓಂ ಕರ್ತಾ ಶಾಸ್ತ್ರಾರ್ಥವತ್ತ್ವಾತ್ ಓಂ" || ಸೂ. ೩೩ ||

ವಿಧಿನಿಷೇಧರೂಪಶಾಸ್ತ್ರಗಳಿಗೆ ಸಾರ್ಥಕ್ಯವು ಆವಶ್ಯಕವಾದುದರಿಂದ. ಜೀವನೂ ಕೂಡ ತನಗೆಉಚಿತವಾದ ಕ್ರಿಯಾವಿಷಯದಲ್ಲಿ ಕರ್ತೃತ್ವವುಳ್ಳವನು.

"ಓಂ ವಿಹಾರೋಪದೇಶಾತ್ ಓಂ" ॥ ಸೂ. ೩೪ ॥

**'ಜಕ್ಷನ್ ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ'** ಎಂದು ಮುಕ್ತಿಯಲ್ಲಿ ಕ್ರೀಡಾಕರ್ತೃತ್ವವನ್ನು ಹೇಳಿರುವುದರಿಂದ ಜೀವನು ವಾಸ್ತವಕರ್ತೃತ್ವವುಳ್ಳವನು.

"ಓಂ ಉಪಾದಾನಾತ್ ಓಂ" ॥ ಸೂ. ೩೫ ॥

ಮೋಕ್ಷಾದಿಗಳ ಉದ್ದೇಶದಿಂದ ಸಾಧನಾದಿಗಳನ್ನು ಉಪಾದಾನಮಾಡುವುದರಿಂದ ಜೀವನು ಸಂಸಾರದಲ್ಲಿಯೂ ವಾಸ್ತವಕರ್ತನು.

"ಓಂ ವ್ಯಪದೇಶಾಚ್ಚ ಕ್ರಿಯಾಯಾಂ ನ ಚೇನ್ನಿರ್ದೇಶ ವಿಪರ್ಯಯಃ ಓಂ" ॥ ಸೂ. ೩೬ ॥

**'ಆತ್ಮಾನಮೇವ ಲೋಕಮುಪಾಸೀತ'** ಎಂದು ಉಪಾಸನಾದಿಕ್ರಿಯೆಯಲ್ಲಿ ಜೀವನಿಗೆ ಕರ್ತೃತ್ವವನ್ನು ಹೇಳಿರುವುದರಿಂದಲೂ ಜೀವನು ಕರ್ತನು. ಜೀವನು ಕರ್ತನಲ್ಲವೆಂದಾದರೆ ಪರಮಾತ್ಮನಿಗೇನೇ ಕರ್ತೃತ್ವವು ಬರಬೇಕಾಗುವುದರಿಂದ 'ಆತ್ಮೈವ' ಎನ್ನುವ ನಿರ್ದೇಶವು ಬರಬೇಕಾಗುವುದು.

"ಓಂ ಉಪಲಬ್ಧಿವದನಿಯಮಃ ಓಂ" ॥ ಸೂ. ೩೭ ॥

'ಇದಂ ಜ್ಞಾಸ್ಯಾಮಿ' ಎಂದು ಜೀವನು ಸಂಕಲ್ಪಿಸಿದರೂ ಹೇಗೆ ಕೆಲವುಕಡೆ ವಿವಕ್ಷಿತ ವಿಷಯಕಜ್ಞಾನಲಾಭವು ಆಗುವುದಿಲ್ಲವೋ ಹಾಗೆಯೇ 'ಇದಂ ಕುರ್ಯಾಂ' ಎಂದು ಸಂಕಲ್ಪಿಸಿದರೂ ವಿವಕ್ಷಿತಕ್ರಿಯಾಲಾಭವು ಆಗುವುದಿಲ್ಲ. ಆದುದರಿಂದ ಜೀವನಿಗೆ ಸ್ವತಂತ್ರಕರ್ತೃತ್ವವಿಲ್ಲ.

"ಓಂ ಶಕ್ತಿವಿಪರ್ಯಯಾತ್ ಓಂ" ॥ ಸೂ. ೩೮ ॥

ಜೀವನಿಗೆ ಈಶ್ವರನ ಶಕ್ತಿಗಿಂತ ಅಲ್ಪಶಕ್ತಿಯಿದ್ದುಪ್ರಯುಕ್ತ ಅಸ್ವಾತಂತ್ರ್ಯವು.

"ಓಂ ಸಮಾಧ್ಯಭಾವಾಚ್ಚ ಓಂ" ॥ ಸೂ. ೩೯ ॥

ಅಪೂರ್ಣ ಕಾಮನಾದ ಪ್ರಯುಕ್ತವೂ (ಅಲಂ ಬುದ್ಧಿಯಿಲ್ಲದಿರುವುದರಿಂದಲೂ) ಜೀವನಿಗೆ ಅಸ್ವಾತಂತ್ರ್ಯವು.

"ಓಂ ಯಥಾ ಚ ತಕ್ಷೋಭಯಥಾ ಓಂ" ॥ ಸೂ. ೪೦ ॥

ಹೇಗೆ ಬಡಗಿಯು ಗೃಹಮೊದಲಾದುವನ್ನು ಮಾಡಿಸುವವನಿಂದ ನಿಯುತನೆಂದೂ ಸ್ವಯಂ ಕರ್ತನೆಂದೂ ಹೇಳಲ್ಪಡುತ್ತಾನೋ, ಹಾಗೆಯೇ ಜೀವನೂ ಈಶನಿಂದ ನಿಯುತನಾದಾಗ್ಯೂ ಕರ್ತನೆಂದೂ ಹೇಳಲ್ಪಡುತ್ತಾನೆ.

"ಓಂ ಪರಾತ್ತು ತಚ್ಛ್ರುತೇಃ ಓಂ" ॥ ಸೂ. ೪೧ ॥

**'ಕರ್ತೃತ್ವಂ ಕರಣತ್ವಂ ಚ'** ಎಂದು ಈಶ್ವರಾಧೀನತ್ವವನ್ನು ಹೇಳತಕ್ಕ ಶ್ರುತಿಯಿದ್ದುಪ್ರಯುಕ್ತ ಕರ್ತೃತ್ವಸಾಮರ್ಥ್ಯವು ಜೀವನಿಗೆ ಈಶ್ವರಾಧೀನವೇ ಆದುದು.

"ಓಂ ಕೃತಪ್ರಯತ್ನಾಪೇಕ್ಷಸ್ತು ವಿಹಿತಪ್ರತಿಷೇಧಾ ವೈಯರ್ಥ್ಯಾದಿಭ್ಯಃ ಓಂ" ॥ ಸೂ. ೪೨ ॥

ಶ್ರೀ ಹರಿಯು ವಿಧಿನಿಷೇಧ ಶಾಸ್ತ್ರಗಳಿಗೆ ವೈಯರ್ಥ್ಯವು ಬರಬಾರದು ಎನ್ನುವುದಕ್ಕಾಗಿಯೂ, ತನಗೆ ವೈಷಮ್ಯನೈರ್ಘೃಣ್ಯವು ಬಾರದೆ ಇರುವುದಕ್ಕಾಗಿಯೂ ಜೀವಸಂಬಂಧಿಯಾದ ಅನಾದಿಕರ್ಮ, ಪ್ರಯತ್ನ, ಯೋಗ್ಯತೆಗಳನ್ನು ಅಪೇಕ್ಷಿಸಿಯೇ ಜೀವನನ್ನು ಪ್ರೇರಿಸುತ್ತಾನೆ॥ ಸೂ. ॥ ೩೩ ॥ ೩೪ ॥ ೩೫ ॥ ॥ ೩೬ ॥ ೩೭ ॥ ೩೮ ॥ ೩೯ ॥ ೪೦ ॥ ೪೧ ॥ ೪೨ ॥ ಅಧಿ. ೧೭ ॥

**ಕರ್ತೃತ್ವಾಧಿಕರಣವು ಸಮಾಪ್ತವಾಯಿತು.**

---

## ಅಂಶಾಧಿಕರಣವು.

"ಓಂ ಅಂಶೋ ನಾನಾವ್ಯಪದೇಶಾದನ್ಯಥಾಽಪಿ ದಾಶಕಿತವಾದಿತ್ವಮಧೀಯತ ಏಕೇ ಓಂ" ॥ ಸೂ. ೪೩ ॥

'**ಮಾಂ ರಕ್ಷತು**' ಎನ್ನುವ ಸ್ಮೃತಿಯಲ್ಲಿಯೂ '**ದ್ವಾಸುಪರ್ಣಾ**' ಎನ್ನುವ ಶ್ರುತಿಯಲ್ಲಿಯೂ ಪಿತೃತ್ವ ಪುತ್ರತ್ವ ಸಖಿತ್ವಾದಿ ನಾನಾಪ್ರಕಾರವಾಗಿ ಸಂಬಂಧವನ್ನು ಹೇಳಿರುವುದರಿಂದಲೂ, '**ನಾಸಾವಸ್ಯ ಕುತಶ್ಚನ ನೈವಾಂಶೋ ನ ಸಂಬಂಧಃ**' ಎಂದು ಸಂಬಂಧಾಭಾವದಿಂದಲೂ ವ್ಯಪದೇಶವಿದ್ದ ಪ್ರಯುಕ್ತವೂ, ಜೀವನು ಪರಮಾತ್ಮನ ಅಂಶನೇ. (ಈ ಎರಡರ ಬಲದಿಂದ ಜೀವನು ಕೇವಲ ಪರಬ್ರಹ್ಮನಿಂದ ಉಪಕಾರ್ಯನೇ. ಯಾವಾಗಲೂ ಶ್ರೀ ಹರಿಗೆ ಉಪಕಾರಕನಲ್ಲ.) ಕಲವು ಶಾಖಿಯವರು '**ಬ್ರಹ್ಮ ದಾಶಾಃ ಬ್ರಹ್ಮ ಕಿತವಾಃ ಬ್ರಹ್ಮೈವೇಮೇ ದಾಶಾಃ**' ಎಂದು ಜೀವನಿಗೆ ಬ್ರಹ್ಮಾಭೇದವನ್ನೂ, ಕಲವರು '**ಅನ್ಯಃ ಪರೋಽನ್ಯೋ ಜೀವಃ**' ಎಂದು ಭೇದವನ್ನು ಅಧ್ಯಯನಮಾಡುತ್ತಾರೆ. '**ಈಶ್ವರನ್ಯೂನತ್ವೇ ಸತಿ ಕಿಂಚಿತ್ತತ್ಸದೃಶತ್ವಂ ಅಂಶತ್ವಂ**' ಎಂದುಕ್ತವಾಯಿತು.

"ಓಂ ಮಂತ್ರವರ್ಣಾತ್ ಓಂ" ॥ ಸೂ. ೪೪ ॥

'**ಪಾದೋಽಸ್ಯ ವಿಶ್ವಾ ಭೂತಾನಿ**' ಎನ್ನುವ ಶ್ರುತಿಯಿಂದಲೂ ಜೀವನು ಪರಮಾತ್ಮನ ಅಂಶನೇ.

"ಓಂ ಅಪಿ ಸ್ಮರ್ಯತೇ ಓಂ" ॥ ಸೂ. ೪೫ ॥

ಜೀವನು ಪರಮಾತ್ಮನ ಅಂಶನೆಂದು '**ಮಮೈವಾಂಶಃ**' ಎನ್ನುವ ಸ್ಮೃತಿಯಿಂದಲೂ ಪ್ರತಿಪಾದಿಸಿಕೊಳ್ಳಲ್ಪಡುತ್ತಾನೆ.

"ಓಂ ಪ್ರಕಾಶಾದಿವನ್ನೈವಂ ಪರಃ ಓಂ" ॥ ಸೂ. ೪೬ ॥

ಮತ್ಸ್ಯಾದಿರೂಪಿಯಾದ ಪರಮಾತ್ಮನು ಅಂಶತ್ವದಿಂದ ವಿಶೇಷವಿಲ್ಲವನಾದರೂ ಭಿನ್ನಾಂಶನಲ್ಲ. ತೇಜೋಂಶವಾದ ಕಾಲ ಅಗ್ನ್ಯಾದಿಗಳಂತೆಯೇ.

**"ಓಂ ಸ್ಮರಂತಿ ಚ ಓಂ"** ॥ ಸೂ. ೪೭ ॥

ಜೀವನಿಗೆ ಭಿನ್ನಾಂಶತ್ವವನ್ನೂ ಮತ್ಸ್ಯಾದಿಗಳಿಗೆ ಅಭಿನ್ನಾಂಶತ್ವವನ್ನೂ ವ್ಯಾಸಾದಿಗಳು **'ಏತೇ ಸ್ವಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಂ'** ಇತ್ಯಾದಿ ಸ್ಮೃತಿಯಿಂದ ಬೋಧಿಸುತ್ತಾರೆ—

ಕೆಲವರು **'ಅಂಶೋನಾನಾವ್ಯಪದೇಶಾತ್'** ಎನ್ನುವ ಸೂತ್ರವನ್ನು ಹೀಗೆ ವ್ಯಾಖ್ಯಾನ ಮಾಡುತ್ತಾರೆ. ಜೀವನು ಶ್ರೀಹರಿಯ ಅಂಶನು. ಅಂಶತ್ವವೆಂದರೆ ಭಿನ್ನಾಭಿನ್ನತ್ವವು. ಇದರಲ್ಲಿ ಭೇದವು ಔಪಾಧಿಕವು, ಅಭೇದವು ಸ್ವಾಭಾವಿಕವು ಏಕೆಂದರೆ—**'ದ್ವಾಸುಪರ್ಣಾ ನಿತ್ಯೋನಿತ್ಯಾನಾಂ'** ಇದುಮೊದಲಾದ ಪ್ರಕಾರ ಭೇದವ್ಯಪದೇಶವಿದೆ. **'ತತ್ತ್ವಮಸಿ ಅಹಂ ಬ್ರಹ್ಮಾಸ್ಮಿ'** ಇತ್ಯಾದ್ಯ ಭೇದ ವ್ಯಪದೇಶವೂ ಇದೆ. ಒಬ್ಬ ಜೀವನಿಗೇನೇ ಬ್ರಹ್ಮನಿಂದ ಭೇದಾಭೇದಗಳು ಇರಲಾರವು. ಮತ್ತೆ ಸರ್ವ ಜೀವರಿಗೂ ಭೇದಾಭೇದಗಳು ಎನ್ನಬೇಕು. ಏಕೆಂದರೆ—**'ಬ್ರಹ್ಮದಾಶಾಃ ಬ್ರಹ್ಮ ಕಿತವಾಃ'** ಎಂದು ಬ್ರಹ್ಮನಿಗೆ ದಾಶಕಿತವಾದಿತ್ವವನ್ನು ಅಧ್ಯಯನಮಾಡುತ್ತಾರೆ. ಇತ್ಯಾದಿ ಹೇಳುತ್ತಾರೆ. ಈ ವ್ಯಾಖ್ಯಾನವು ಅಯುಕ್ತವು. ಏಕೆಂದರೆ— ಜೀವನಿಗೆ ಪರಮಾತ್ಮನಿಂದ ಅಭೇದವು ೧ ಮುಖ್ಯವಾದುದೋ, ೨ ಸಾದೃಶ್ಯಾದಿರೂಪವಾದ ಅಮುಖ್ಯವಾದುದೋ, ೧ನೇದ್ದನ್ನು ನಿರಾಕರಿಸುತ್ತಾರೆ—

**ಮೂ ॥ ಭೇದಸ್ಯ ಮುಕ್ತಾವಪಿ ವಚನಾದಪಿ ತತ್ಪಕ್ಷನಿಗ್ರಹಃ ॥ ೮೨ ॥**
**ಚೇತನತ್ವಾದಿ ಸಾದೃಶ್ಯಂ ಯದ್ಯಭೇದ ಇತೀಷ್ಯತೇ ।**
**ಅಂಗೀಕೃತಂ ತದಸ್ಮಾಭಿರ್ನಸ್ವರೂಪೈಕತಾ ಕ್ವಚಿತ್ ॥ ೮೩ ॥**

**ಅ ॥** ಮುಕ್ತಾವಪಿ=ಮುಕ್ತಿಯಲ್ಲಿಯೂಕೂಡ, ಭೇದಸ್ಯ=ಭೇದವನ್ನು ಪ್ರತಿಪಾದಿಸತಕ್ಕ, ವಚನಾತ್—ಆಗಮವಿದ್ದಪ್ರಯುಕ್ತ, ತತ್ಪಕ್ಷನಿಗ್ರಹಃ=ಮುಖ್ಯಾಭೇದಪಕ್ಷಕ್ಕೆ ನಿರಾಸವು ಆಗುವುದು. (ಅಂದರೆ ಜೀವನಿಗೆ ಪರಮಾತ್ಮನಿಂದ ಭೇದವು ಔಪಾಧಿಕವೇ. ಅಭೇದವು ಸ್ವಾಭಾವಿಕವು. ಹೀಗೆ ಹೇಳುವವರು ಮುಕ್ತಿಯಲ್ಲಿ ಭೇದಾಭಾವವನ್ನು ಹೇಳಬೇಕು. ಮುಕ್ತಿಯಲ್ಲಿ ಅವಿದ್ಯಾರೂಪ ಉಪಾಧಿಯಾಗಲೀ, ಅಂತಃಕರಣಾದಿರೂಪ ಉಪಾಧಿಯಾಗಲೀ, ಇಲ್ಲವಾದುದರಿಂದ ಭೇದವಿಲ್ಲವೆಂದೇ ಹೇಳಬೇಕು. ಅದಾದರೂ ಕೂಡಲಾರದು. ಮುಕ್ತಿಯಲ್ಲಿಯೂ ಕೂಡ ಜೀವ-ಬ್ರಹ್ಮರಿಗೆ ಭೇದವದೆ ಎಂದು ಮೊದಲು ಉದಾಹರಿಸಿದ ಶ್ರುತಿ ಸ್ಮೃತಿಗಳಿಂದ ಹೇಳಲ್ಪಟ್ಟದೆ. ಆದುದರಿಂದ ಪ್ರಮಾಣವಿರುದ್ಧವಾಗಿರುವ ಪ್ರಯುಕ್ತ ಈ ಪಕ್ಷವು ಹೇಯವೇ ಆಗಿದೆ.) (೨ನೇದ್ದನ್ನು ನಿರಾಕರಿಸುತ್ತಾರೆ.) ಚೇತನತ್ವಾದಿ ಸಾದೃಶ್ಯಂ = ಚೇತನತ್ವಾದಿಗಳಿಂದ ಸಾದೃಶ್ಯವು, ಬ್ರಹ್ಮಪ್ರಧಾನಕತ್ವಾದಿಗಳೂ, ಅಭೇದಃ ಇತಿ = ಅಭೇದವೆಂತೆಂದು, ಇಷ್ಯತೇ ಯದಿ = ಅಂಗೀಕರಿಸಲ್ಪಡುವುದಾದರೆ, ತತ್ = ಅದು, ಅಸ್ಮಾಭಿಃ = ನಮ್ಮಿಂದ, ಅಂಗೀಕೃತಂ = ಅಂಗೀಕರಿಸಲ್ಪಟ್ಟದೆ. (ಅಭೇದವು ಅಂಗೀಕರಿಸಲ್ಪಡುವುದಾದರೆ ಆ ಪಕ್ಷವನ್ನು ನಿರಾಕರಿಸಿದ್ದು ಹೇಗೆಂದರೆ) ಕ್ವಚಿತ್= ಸಂಸಾರದಲ್ಲಿಯೂ, ಮುಕ್ತಿಯಲ್ಲಿಯೂ, ಸ್ವರೂಪೈಕತಾ=ಸ್ವರೂಪೈಕ್ಯರೂಪವಾದ ಮುಖ್ಯಾಭೇದವು, ನ=ಇಲ್ಲವೇ ಇಲ್ಲ ॥ ೮೨ ॥ ೮೩ ॥

ಜೀವ-ಬ್ರಹ್ಮರ ಭೇದಾಭೇದಾಂಗೀಕಾರವು ಯುಕ್ತಿವಿರುದ್ಧವಾದುದು ಮಾತ್ರವಲ್ಲ. ಶ್ರುತಿವಿರುದ್ಧವೂ ಆಗಿದೆ ಎನ್ನುತ್ತಾರೆ—

**ಮೂ ॥ ನ ಕೇನಚಿದಭೇದೋಽಸ್ತಿ ಭೇದಾಭೇದೋಽಪಿ ವಾ ಕ್ವಚಿತ್ ।**
**ಸಮುದಾಯವ್ಯೃತೇ ವಿಷ್ಣೋಃ ಸ್ವಗುಣಾದೀನ್ವಿನಾಽಪಿ ವಾ ॥ ೮೪ ॥**
**ಇತಿ ಶ್ರುತೇರ್ನ ತಸ್ಯಾಸ್ತಿ ಭೇದಾಭೇದೋಽಪಿ ಕೇನಚಿತ್ ॥**
**ಅಭೇದಶ್ರುತಯೋಽಂಶತ್ವಾತ್ಸಾದೃಶ್ಯಂ ಚಾಂಶತಾಽಸ್ಯ ತು ॥ ೮೫ ॥**

ಅ ॥ ಸಮುದಾಯಂ=ದ್ವಿತ್ವತ್ರಿತ್ವಾದಿಧರ್ಮವನ್ನು, ಋತೇ=ಹೊರತು, ಕೇನಚಿತ್ ಅಪಿ=ಯಾವುದರಿಂದಲೂ, ವಿಷ್ಣೋಃ=ಶ್ರೀ ಹರಿಗೆ, ಭೇದಾಭೇದೋಽಪಿ=ಭೇದದಿಂದ ಕೂಡಿದ ಅಭೇದವೂ ಕೂಡ, ಕ್ವಚಿದಪಿ=ಎಲ್ಲಿಯೂ, ನಾಸ್ತಿ=ಇಲ್ಲ. ಸ್ವಗುಣಾದೀನ್ ವಿನಾಪಿ=ತನ್ನ ಗುಣಾದಿಗಳನ್ನು ಹೊರತೂ, ಕೇನಚಿದಪಿ=ಯಾವುದರಿಂದಲೂ ಕೂಡ, ಅಭೇದಃ=ಅಭೇದವು, ನಾಸ್ತಿ ವಾ=ಇಲ್ಲವೇ ಇಲ್ಲ. ಇತಿ ಶ್ರುತೇಃ=ಈ ಶ್ರುತಿಯುದ್ದೆಶೆಯಿಂದ, ತಸ್ಯ = ಶ್ರೀ ಹರಿಗೆ, ಕೇನಚಿತ್=ಯಾರಿಂದಲೂ, ಭೇದಾಭೇದೋಽಪಿ=ಭೇದಾಭೇದವು, ಅಭೇದವೂ ಕೂಡ, ನಾಸ್ತಿ=ಇಲ್ಲವೇ ಇಲ್ಲ. (ಹೀಗೆ ಜೀವ-ಬ್ರಹ್ಮರಿಗೆ ಭೇದಾಭೇದಗಳು ಇಲ್ಲವಾದರೆ ಸೂತ್ರದಲ್ಲಿ ಭೇದಾಭೇದಶ್ರುತ್ಯುದಾಹರಣವು ಹೇಗೆ ಎಂದರೆ— ಸಿದ್ಧಾಂತ ರೀತಿಯಿಂದ ಸೂತ್ರ ತಾತ್ಪರ್ಯವನ್ನು ಹೇಳುತ್ತಾರೆ.) ಅಭೇದ ಶ್ರುತಯಃ=ಅಭೇದ ಪ್ರತಿಪಾದಕ ಶ್ರುತಿಗಳೂ, ಭೇದ ಶ್ರುತಿಗಳೂ ಕೂಡ, ಅಂಶತ್ವಾತ್=ಅಂಶತ್ವದಿಂದಲೇ, (ಕೂಡುತ್ತವೆ.) ಅಸ್ಯ=ಜೀವನಿಗೆ, ಅಂಶತಾ ತು= ಪರಮೇಶ್ವರಾಂಶತ್ವವಾದರೂ, ಸಾದೃಶ್ಯಂ ಚ=ಶ್ರೀ ಹರಿಯ ಸಾದೃಶ್ಯವೇ. ಮತ್ಸ್ಯಾದಿಗಳಂತೆ ಸ್ವರೂಪಾಂಶತ್ವವಲ್ಲ.

**ತಾ ॥ ನ್ಯಾಯಸುಧಾ—** (1) ಜೀವನು ಶ್ರೀ ಹರಿಯ ಅಂಶನೆಂದು ಪ್ರತಿಜ್ಞಾತವಾದ ಅರ್ಥದಲ್ಲಿ ನಾನಾವ್ಯಪದೇಶಾತ್ ಎಂದು ಪುತ್ರ ಭ್ರಾತೃತ್ವಾದಿ ನಾನಾವಿಧ ಸಂಬಂಧ ವ್ಯಪದೇಶ ರೂಪವಾದ ಹೇತುವನ್ನು ಹೇಳಿ 'ಅನ್ಯಥಾಚಾಪಿ' ಇತ್ಯಾದಿಗಳಿಂದ ಅರ್ಥಾಪತ್ತಿಯೂ ಹೇಳಲ್ಪಡುತ್ತದೆ. ಹೇಗೆಂದರೆ— ಜೀವ-ಬ್ರಹ್ಮರಿಗೆ ಭೇದವನ್ನೂ, ಅಭೇದವನ್ನೂ ಹೇಳತಕ್ಕ ಶ್ರುತಿಗಳು ಇವೆ. ಅವುಗಳು ಜೀವನಿಗೆ ಬ್ರಹ್ಮಾಂಶತ್ವವಿದ್ದುದರಿಂದಲೇ ಕೂಡುತ್ತವೆ. ಇಲ್ಲವಾದರೆ ಕೂಡಲಾರವು. ಜೀವನು ಬ್ರಹ್ಮನಿಂದ ಘಟ-ಪಟಗಳಂತೆ ಅತ್ಯಂತ ಭಿನ್ನನಾದರೆ ಆಗ ಅಭೇದ ಶ್ರುತಿಗಳು ಕೂಡದೆ ಹೋಗಬೇಕಾಗುವುವು. ಮತ್ತು ಬ್ರಹ್ಮನಿಂದ ಅಭಿನ್ನನಾದರೆ ಭೇದ ಶ್ರುತಿಗಳು ಕೂಡದೆ ಹೋಗಬೇಕಾಗುವವು. ಭೇದಾಭೇದವನ್ನು ಆಶ್ರಯಿಸಿಕೊಂಡು ಎರಡು ಶ್ರುತಿಗಳೂ ಸಮಂಜಸಗಳಾಗುತ್ತವೆಂದು ಹೇಳಕೂಡದು. ನ ಕೇನಚಿತ್ ಎಂದು ಉದಾಹರಿಸಿದ ಶ್ರುತಿ ವಿರೋಧವೂ ಬರುತ್ತದೆ. ಆದಕಾರಣ ಭೇದಾಭೇದ ಶ್ರುತಿಗಳು ಬೇರೆಪ್ರಕಾರ ಕೂಡದೆ ಇರುವುದರಿಂದ ಜೀವನು ಬ್ರಹ್ಮನ ಅಂಶನೆಂದು ಅಂಗೀಕರಿಸಬೇಕೆಂದು ಸೂತ್ರಾರ್ಥವು. '**ಯತೋ ಭೇದೇನ ತಸ್ಯಾಯಮಭೇದೇನ ಚ ಗೀಯತೇ । ಅತಶ್ಚಾಂಶತ್ವಮುದ್ದಿಷ್ಟಂ ಭೇದಾಭೇದೌ ನ ಮುಖ್ಯತಃ ।**' ಎಂದು ಜೀವನು ಪರಮಾತ್ಮನ ಅಂಶನೆಂದಂಗೀಕರಿಸಿದರೆ ಭೇದಾಭೇದಾಂಗೀಕಾರವು ಹೇಗೆ ಬಾರದೆ ಹೋಗುವುದು. ಅಂಶತ್ವವನ್ನು ರೀತ್ಯಂತರದಿಂದ ನಿರ್ವಚನ ಮಾಡಲಿಕ್ಕೆ ಬರುವುದಿಲ್ಲ. ಮತ್ತೂ ಶ್ರೀ ಪರಮಾತ್ಮನ ಅಂಶರಾದ ಮತ್ಸ್ಯಾದಿಗಳಲ್ಲಿ ಅಭೇದವೂ ಅಂಗೀಕೃತವಾಗಿದೆ ಎಂದರೆ— ಜೀವನಿಗೆ ಶ್ರೀ ಹರಿಯ ಅಂಶತ್ವವೆಂದರೆ— ಶ್ರೀ ಹರಿಯ ಸಾದೃಶ್ಯವೇ ಜೀವನಿಗೆ ಪರಮಾತ್ಮನಿಂದ ಭೇದಾಭೇದವನ್ನು ಅಂಗೀಕರಿಸದೆ ಇದ್ದರೂ ಇಂತಹ ಅಂಶತ್ವವು ಕೂಡುತ್ತದೆ ॥ ೮೪ ॥ ೮೫ ॥

ಅಂಶ ಶಬ್ದಕ್ಕೆ ಅನೇಕಾರ್ಥವು. ಅದರಲ್ಲಿಯೂ ಮತ್ಸ್ಯಾದಿಗಳಿಗೆ ಸ್ವರೂಪಾಂಶತ್ವವೂ, ಜೀವರಿಗೆ ಸ್ವರೂಪಾಂಶತ್ವಾಭಾವವು ಎನ್ನುವುದು ಯಾವುದರಿಂದ ಸಿದ್ಧವಾಗುತ್ತದೆಂದರೆ— ಈ ವಿಷಯದಲ್ಲಿ ಆಗಮ ವಾಕ್ಯವನ್ನು ಹೇಳುತ್ತಾರೆ—

**ಮೂ ||** **ಅಂಶಸ್ತು ದ್ವಿವಿಧೋಜ್ಞೇಯಃ ಸ್ವರೂಪೋಂಶೋऽನ್ಯ ಏವ ಚ ।**
**ವಿಭಿನ್ನಾಂಶೋऽಲ್ಪಶಕ್ತಿಃ ಸ್ಯಾತ್ಕಿಂಚಿತ್ಸಾದೃಶ್ಯಮಾತ್ರಯುಕ್ ॥ ೮೬ ॥**
**ಅಂಶಿನೋಯತ್ತುಸಾಮರ್ಥ್ಯಂ ಯತ್ಸ್ವರೂಪಂ ಯಥಾಸ್ಥಿತಿಃ ।**
**ಸ ಏವ ಚೇತ್ಸ್ವರೂಪಾಂಶಃ ಪ್ರಾದುರ್ಭಾವೋ ಹರೇರ್ಯಥಾ॥೮೭॥**
**ಸೂರ್ಯಮಂಡಲಮಾನ್ಯೇಕಃ ತತ್ಪ್ರಕಾಶಾಭಿಮಾನವಾನ್ ।**
**ಸೂರ್ಯೋऽಥ ಸಪ್ತಮಾಬ್ಧೇಶ್ಚ ಬಾಹ್ಯೋದಸ್ಯ ಚ ವಾರಿಪಃ ॥೮೮॥**
**ಕಠಿಣತ್ವೇನ ಮೇರ್ವಾದೇಃ ಪೃಥಿವ್ಯಾ ಅಪಿ ದೇವತಾ ।**
**ಧರಾದೇವ್ಯೇವಮೇವೈಕೋ ಭಗವಾನ್ ವಿಷ್ಣುರವ್ಯಯಃ ॥ ೮೯ ॥**
**ನಾನಾವತಾರರೂಪೇಣ ಸ್ಥಿತಃ ಪೂರ್ಣಗುಣಃ ಸದಾ ।**
**ವಿಣ್ಮೂತ್ರಾಕ್ಷ್ಯಭಿ(ಕ್ಷ್ಯಾದಿ)ಮಾನಿನ್ಯೋ ಯಥಾಪಭ್ರಷ್ಟದೇವತಾಃ ।**
**ಸೂರ್ಯಾದಿಭ್ಯಸ್ತಥೈವಾಯಂ ಸಂಸಾರೀ ಪರಮಾತ್ಪೃಥಕ್ ॥೯೦॥**

**ಅ ||** ಅಂಶಸ್ತು = ಅಂಶವಾದರೂ, ಸ್ವರೂಪಃ ಅಂಶಃ = ಸ್ವರೂಪವಾದ ಅಂಶವು, ಅನ್ಯಶ್ಚ=ವಿಭಿನ್ನಾಂಶವು ಹೀಗೆ, ದ್ವಿವಿಧಏವ ಜ್ಞೇಯಃ = ಎರಡು ಪ್ರಕಾರವೇ ಎಂದು ತಿಳಿಯತಕ್ಕದು. (ಒಂದೇ ಪ್ರಕಾರವಲ್ಲ) ವಿಭಿನ್ನಾಂಶಃ=ವಿಭಿನ್ನಾಂಶವು, ಅಲ್ಪಶಕ್ತಿಃಸ್ಯಾತ್=ಅಲ್ಪವಾದ ಶಕ್ತಿಯುಳ್ಳದ್ದಾಗುವುದು. ಕಿಂಚಿತ್=ಸ್ವಲ್ಪ, ಸಾದೃಶ್ಯಮಾತ್ರಯುಕ್=ಸಾದೃಶ್ಯಮಾತ್ರದಿಂದ ಕೂಡಿದ್ದು (ಇಂತಹ ಅಲ್ಪಶಕ್ತಿಯುಳ್ಳ ವಿಭಿನ್ನಾಂಶರು, ಜೀವರು.) ಅಂಶಿನಃ=ಅಂಶಿಗೆ, ಯತ್ತು= ಯಾವುದು, ಸಾಮರ್ಥ್ಯಂ=ಸೃಷ್ಟ್ಯಾದಿ ಕರ್ತೃತ್ವಾದಿ ರೂಪವಾದ ಸಾಮರ್ಥ್ಯವೋ, ಯತ್= ಯಾವುದು, ಸ್ವರೂಪಂ=ಪೂರ್ಣಾನಂದಾದಿ ರೂಪವಾದುದೋ, ಯಥಾ=ಹೇಗೆ, ಸ್ಥಿತಿಃ=ಸರ್ವಗತತ್ವಾದಿ ಪರಿಮಾಣವೋ, ಸ ಏವ ಚೇತ್=ಅಂಶವು ಆ ಸಾಮರ್ಥ್ಯಾದಿಗಳಿಂದ ಯುಕ್ತವಾಗಿದ್ದರೆ ಆಗ ಇದು, ಸ್ವರೂಪಾಂಶಃ = ಅದರ ಸ್ವರೂಪಾಂಶವೆಂದು ತಿಳಿಯತಕ್ಕದು. ಯಥಾ = ಹೇಗೆಂದರೆ, ಹರೇಃ=ಶ್ರೀ ಹರಿಯ, ಪ್ರಾದುರ್ಭಾವಃ=ಮತ್ಸ್ಯಾದಿ ಪ್ರಾದುರ್ಭಾವರೂಪಗಳು. (ಮತ್ಸ್ಯಾದಿಗಳಿಗೂ, ಜೀವರಿಗೂ ಪರಮೇಶ್ವರಾಂಶತ್ವದಿಂದ ಸಾಮ್ಯವಿದ್ದರೂ ಅವುಗಳಿಗೆ ಏಕಪ್ರಕಾರತ್ವವಿಲ್ಲ. ಮತ್ತೆ ಮತ್ಸ್ಯಾದಿಗಳು ಸ್ವರೂಪಾಂಶರೇ ಜೀವರು. ವಿಭಿನ್ನಾಂಶರೇ ಎನ್ನುವಲ್ಲಿ ಅಸಂಭಾವನಾನಿರಾಸಕ್ಕಾಗಿ '**ಪ್ರಕಾಶಾದಿವತ್**' ಎಂದು ಸೂತ್ರಕಾರರು ದೃಷ್ಟಾಂತಗಳನ್ನು ಹೇಳಿದ್ದಾರೆ. ಆ ದೃಷ್ಟಾಂತಗಳನ್ನು ಸ್ಪಷ್ಟೀಕರಿಸುತ್ತಾರೆ.) ಯಥಾ=ಹೇಗೆ, ಸೂರ್ಯಮಂಡಲಮಾನೀ=ಸೂರ್ಯ ಮಂಡಲಕ್ಕೆ ಅಭಿಮಾನಿಯಾದ, ಸೂರ್ಯಃ=ಅಂಶಿಯಾದ ಸೂರ್ಯನು, ತತ್ಪ್ರಕಾಶಾಭಿಮಾನವಾನ್ ಅಥ=ಸೂರ್ಯಪ್ರಕಾಶಕ್ಕೆ ಅಭಿಮಾನಿಯಾದ ಸೂರ್ಯನ ಅಂಶವೂ ಕೂಡ, ಏಕಃ=ಅಭಿನ್ನವೋ, ಯಥಾ=ಹೇಗೆ, ಬಾಹ್ಯೋದಸ್ಯ=ಬಾಹ್ಯ ಜಲಕ್ಕೆ, ಅಭಿಮಾನಿಯಾದ ಅಂಶಿಯಾದ, ವಾರಿಪಃ=ವರುಣನು, ಸಪ್ತಮಾಬ್ಧೇಃ=ಏಳನೇ ಸಮುದ್ರಕ್ಕೆ ಅಭಿಮಾನಿಯಾದ ವರುಣಾಂಶನೂ ಕೂಡ, ಏಕ ಏವ=ಒಬ್ಬನೇ, ಯಥಾ=ಹೇಗೆ, ಪೃಥಿವ್ಯಾಃ= ಐವತ್ತು ಕೋಟಿ ವಿಸ್ತೀರ್ಣವಾದ ಪೃಥಿವಿಗೆ, ಅಭಿಮಾನಿಯಾದ, ಅಂಶಿಭೂತವಾದ, ಧರಾದೇವೀ= ಭೂದೇವಿಯು, ಕಠಿಣತ್ವೇನ=ಕಠಿಣವಾಗಿರುವುದರಿಂದ, ಮೇರ್ವಾದೇಃ ಅಪಿ=ಮೇರು ಪರ್ವತವೇ ಮೊದಲಾದುದಕ್ಕೂ ಅಭಿಮಾನಿಯಾದ, ದೇವತಾಽಪಿ = ದೇವತೆಯೂ ಕೂಡ, ಅಂಶರೂಪವಾದುದು, ಏಕೈವ=ಒಂದೇ (ಮೇರುಪರ್ವತ, ಹಿಮವತ್ಪರ್ವತ ಮೊದಲಾದವುಗಳಿಗೆ ಪುರುಷರು ಅಭಿಮಾನಿಗಳೆಂದು ಪುರಾಣಗಳಲ್ಲಿ ಪ್ರಸಿದ್ಧಿಯಿದೆ ಎಂದರೆ— '**ಯತ್ಕಠಿಣಂ ಸಾ ಪೃಥಿವೀ**'

ಎನ್ನುವ ಶ್ರುತಿಯಿಂದ ಧರಾದೇವಿಯೇ ಎಲ್ಲಾ ಪೃಥಿವಿಗೂ ಅಭಿಮಾನಿಯು. ಇತರರಾದ ಪುರುಷರು ಅವಾಂತರಾಭಿಮಾನಿಗಳು. ಇದರಿಂದ ಸ್ವರೂಪಾಂಶವು ತೋರಿಸಲ್ಪಟ್ಟಿತು.) (ದಾರ್ಷ್ಟಾಂತಿಕ ವನ್ನು ತೋರಿಸುತ್ತಾರೆ.) ಏವಮೇವ=ಹೀಗೆಯೇ, ಅವ್ಯಯಃ=ಅವಿನಾಶಿಯಾದ, ಪೂರ್ಣಗುಣಃ= ಪರಿಪೂರ್ಣ ಗುಣಗಳುಳ್ಳ, ಭಗವಾನ್ = ಪೂಜ್ಯನಾದ, ವಿಷ್ಣುಃ=ಅಂಶಿಯಾದ ಶ್ರೀ ಹರಿಯು, ನಾನಾವತಾರರೂಪೇಣ=ಅನೇಕ ಅವತಾರ ರೂಪಗಳಿಂದ, ಸ್ಥಿತಃ=ಇರತಕ್ಕ ಅಂಶವೂ ಕೂಡ, ಸದಾ ಏಕಏವ=ಯಾವಾಗಲೂ ಭೇದವಿಲ್ಲದಿರುವವನೇ (ವಿಭಿನ್ನಾಂಶದಲ್ಲಿ ದೃಷ್ಟಾಂತವನ್ನು ವಿವರಿ ಸುತ್ತಾ ದಾರ್ಷ್ಟಾಂತಿಕವನ್ನು ವಿವರಿಸುತ್ತಾರೆ.) ವಿಣ್ಮೂತ್ರಾಕ್ಷ್ಯಭಿಮಾನಿನ್ಯಃ=ಮಲ ಮೂತ್ರ ನಯನಗಳಿಗೆ ಅಭಿಮಾನಿಗಳಾದ, ಅಪಭ್ರಷ್ಟದೇವತಾಃ=ಅಪಭ್ರಷ್ಟನಾಮಕರಾದ, ಅಂಶರೂಪರಾದ ದೇವತೆಗಳು, ಸೂರ್ಯಾದಿಭ್ಯಃ=ಸೂರ್ಯ, ವರುಣ, ಪೃಥಿವೀ ಎನ್ನುವ ಅಂಶಿಗಳಿಂದ, ಯಥಾ= ಹೇಗೆ, ಪೃಥಕ್=ವ್ಯುತ್ಕ್ರಮದಿಂದ ಭಿನ್ನರೋ,(ಅಂದರೆ ಮಲಾಭಿಮಾನಿಯು ಪೃಥಿವಿಯಿಂದಲೂ, ಮೂತ್ರಾಭಿಮಾನಿಯು ವರುಣನಿಂದಲೂ, ನಯನಾಭಿಮಾನಿಯು ಸೂರ್ಯನಿಂದಲೂ ಹೇಗೆ ಭಿನ್ನರೋ) ತಥೈವ=ಹಾಗೆಯೇ, ಅಯಂ ಸಂಸಾರೀ=ಈ ಜೀವನೂ ಕೂಡ, ಪರಮಾತ್=ಶ್ರೀ ಹರಿಯದ್ದೆಶೆಯಿಂದ, ಪೃಥಕ್=ಭಿನ್ನನೇ ॥ ೮೬ ॥ ೮೭ ॥ ೮೮ ॥ ೮೯ ॥ ೯೦ ॥

ಜೀವಾಂಶರಿಗೆ ಅಂಶಿಯಾದ ಶ್ರೀ ಹರಿಯುದ್ದೆಶೆಯಿಂದ ಭೇದವನ್ನು ಯುಕ್ತಿಯಿಂದ ಸಮರ್ಥಿ ಸುವುದಕ್ಕಾಗಿ ಸೂತ್ರವು.

## " ಓಂ ಅನುಜ್ಞಾಪರಿಹಾರೌ ದೇಹಸಂಬಂಧಾಜ್ಜ್ಯೋತಿರಾದಿವತ್ ಓಂ " ॥ ಸೂ ॥ ೪೮ ॥

ಜೀವನಿಗೆ ದೇಹಸಂಬಂಧವಿದ್ದಪ್ರಯುಕ್ತ ಈಶಾನುಜ್ಞಾಧೀನಗಳಾದ ಪ್ರವೃತ್ತಿ ಮೋಕ್ಷ ಗಳು ಆಗುತ್ತವೆ. ಅಕ್ಷ್ಯಭಿಮಾನಿಯಾದ ಅಪಭ್ರಷ್ಟದೇವತೆಗೂ ಶ್ಲೇಷ್ಮಾಭಿಮಾನಿಯಾದ ಅಪ ಭ್ರಷ್ಟದೇವತೆಗೂ ಆವಾವ ದೇಹಸಂಬಂಧದಿಂದ ಸೂರ್ಯ ವರುಣಾನುಜ್ಞೆಯಿಂದ ಆವಾವ ಪ್ರವೃತ್ತ್ಯಾದಿಗಳು ಹೇಗೋ ಹಾಗೆಯೇ. ಇಲ್ಲಿಯೂ ಕೂಡ ದೃಷ್ಟಾಂತಗಳಿಗೆ ಅಸಂಗತಿಯನ್ನು ಆಶಂಕಿಸಿಕೊಂಡು ಅಭಿಮಾನಿ ವಿಷಯವಾಗಿ ವ್ಯಾಖ್ಯಾನಮಾಡುತ್ತಾರೆ.

**ವ್ಯಾ ॥ ದೇಹದೋಷೈಶ್ಚ ದುಷ್ಟತ್ವಾದಪಭ್ರಷ್ಟಾಖ್ಯದೇವತಾಃ ॥ ೯೧ ॥**
**ಅನ್ಯಾಃ ಸೂರ್ಯಾದಿದೇವೇಭ್ಯೋ ಹ್ಯನುಗ್ರಾಹ್ಯಾಶ್ಚ ತೈಃ ಸದಾ ।**
**ಏವಮೇವಪರಾದ್ವಿಷ್ಣೋಃ ಪೃಥಕ್ ಸಂಸಾರಿಣೋ ಮತಾಃ ॥ ೯೨ ॥**
**ಅನುಗ್ರಾಹ್ಯಾಶ್ಚ ತೇನೈವ ತತ್ಪ್ರಸಾದಾಚ್ಚ ಮೋಕ್ಷಿಣಃ ।**
**ನ ತು ಮತ್ಸ್ಯಾದಿರೂಪಾಣಾಮನುಗ್ರಾಹ್ಯತ್ವಮಿಷ್ಯತೇ ॥ ೯೩ ॥**

ಅ ॥ ದೇಹದೋಷೈಶ್ಚ = ಪರದೇಹಗಳಲ್ಲಿರತಕ್ಕ ದೋಷಗಳಿಂದ, ದುಷ್ಟತ್ವಾತ್ = ದುಷ್ಟತ್ವವಿದ್ದಪ್ರಯುಕ್ತ, ಅಪಭ್ರಷ್ಟಾಖ್ಯದೇವತಾಃ=ಅಪಭ್ರಷ್ಟರೆಂದು ಹೆಸರುಳ್ಳ ದೇವತೆಗಳು, (ದೇವತಾತ್ವವೆಂದರೆ— ಅಂತರ್ಧಾನಾದಿಶಕ್ತಿಯೋಗವು.) ಸೂರ್ಯಾದಿದೇವೇಭ್ಯಃ=ಸೂರ್ಯ ಮೊದಲಾದ ದೇವತೆಗಳಿಂದ, ಅನ್ಯಾಃ=ಭಿನ್ನರು, ಹಿ=ಯಾವಕಾರಣದ್ದೆಶೆಯಿಂದ, ತೈಶ್ಚ= ಸೂರ್ಯಾದಿಗಳಿಂದಲಾದರೂ, ಸದಾ=ಯಾವಾಗಲೂ, (ಸೂರ್ಯಾದಿಗಳ ಪ್ರಸಾದಾಧೀನ ವಾಗಿ ಪ್ರತಿಬಂಧ ನಿವೃತ್ತಿಯಿದ್ದಪ್ರಯುಕ್ತವೂ, ದೇಹದೋಷಲೇಪವಿದ್ದಪ್ರಯುಕ್ತವೂ)

ಅನುಗ್ರಾಹ್ಯಾಶ್ಚ = ಅನುಗ್ರಾಹ್ಯರೂ ಆಗಿರುತ್ತಾರೋ, ಏವಮೇವ=ಹೀಗೆಯೇ, ಪರಾತ್ = ಸರ್ವೋತ್ತಮನಾದ, ವಿಷ್ಣೋಃ=ಶ್ರೀ ಪರಮಾತ್ಮನದ್ವೆಶೆಯಿಂದ, ಸಂಸಾರಿಣಃ=ಸಂಸಾರಿಗಳು, ಪೃಥಕ್=ಭಿನ್ನರೆಂದು, ಮತಾಃ=ಸಂಮತರು, ತೇನೈವ=ಶ್ರೀಹರಿಯಿಂದಲೇ, ಅನುಗ್ರಾಹ್ಯಾಶ್ಚ= ಅನುಗ್ರಹಿಸಿಕೊಳ್ಳಲರ್ಹರು. ತತ್ಪ್ರಸಾದಾಚ್ಚ=ಆ ಶ್ರೀಹರಿಯ ಅನುಗ್ರಹದಿಂದಲೇ, ಮೋಕ್ಷಿಣಃ= ಮುಕ್ತಿಯನ್ನು ಹೊಂದುವರು. (ಹಾಗಾದರೆ ಅನುಜ್ಞಾಮೊದಲಾದ ಹೇತುಗಳು ಸ್ವರೂಪಾಂಶ ರಾದ ಮತ್ಸ್ಯಾದಿಗಳಲ್ಲಿದ್ದಪ್ರಯುಕ್ತ ವ್ಯಭಿಚಾರಿಯಾದುದು ಜೀವಾಂಶರಿಗೆ ಭೇದವನ್ನು ಸಾಧಿಸ ಲಿಕ್ಕೆ ಸಮರ್ಥವಲ್ಲವೆಂದಾಶಂಕಿಸಿದರೆ—) ಮತ್ಸ್ಯಾದಿರೂಪಾಣಾಂ=ಮತ್ಸ್ಯಮೊದಲಾದರೂಪ ಗಳಿಗೆ, ಅನುಗ್ರಾಹ್ಯತ್ವಂ=ಶ್ರೀ ಹರಿಯಿಂದ ಅನುಗ್ರಾಹ್ಯತ್ವವು, ನ ತು ಇಷ್ಯತೇ= **'ನೈವತೇ ಜಾಯಂತೇ'** ಇತ್ಯಾದಿ ಶ್ರುತಿಬಲದಿಂದ ಅಂಗೀಕರಿಸಲ್ಪಡುವುದೇ ಇಲ್ಲ. ॥ ೯೧ ॥ ೯೨ ॥ ೯೩ ॥

### "ಓಂ ಅಸಂತತೇಶ್ಚಾವ್ಯತಿಕರಃ ಓಂ" ॥ ಸೂ ॥ ೪೯ ॥

ಜೀವನಿಗೆ ಶಕ್ತಿಯಿಂದ ಅಪೂರ್ಣತ್ವವಿದ್ದಪ್ರಯುಕ್ತವೂ ಮತ್ಸ್ಯಾದಿಗಳಿಗೆ ಶಕ್ತಿಪೂರ್ಣತ್ವ ವಿದ್ದಪ್ರಯುಕ್ತವೂ ಹಿಂದೆ ಹೇಳಿದ್ದಕ್ಕೆ ವ್ಯತ್ಯಾಸವಿಲ್ಲ. ಅಂದರೆ ವೈಲಕ್ಷಣ್ಯವಿದೆ. ಈ ಸೂತ್ರವು ಜೀವಾಂಶರಿಗೆ ಶ್ರೀ ಹರಿಯಿಂದ ಭೇದವನ್ನೇ ಸಾಧಿಸುವುದಾಗಿ ತೋರುವುದು. ಮತ್ಸ್ಯಾದಿಗಳಿಗೆ ಅಭೇದವನ್ನೂ ಸಾಧಿಸುವುದಕ್ಕಾಗಿ ತೋರುವುದಿಲ್ಲ. ಅಂದರೆ— ಆ ಸೂತ್ರವು ಉಪಲಕ್ಷಣವೆ ನ್ನುವ ಅಭಿಪ್ರಾಯದಿಂದ ವ್ಯಾಖ್ಯಾನಮಾಡುತ್ತಾರೆ.

**ಮೂ ॥ ಗುಣೈರಶೇಷೈಃ ಪೂರ್ಣತ್ವಾತ್ ಮುಖ್ಯಾಭೇದೋಽಪರೈರ್ನ ಚ॥೯೪॥**

ಅ ॥ (ಮತ್ಸ್ಯಾದಿರೂಪಾಣಾಂ=ಮತ್ಸ್ಯಾದಿರೂಪಗಳಿಗೆ) ಅಶೇಷೈಃ ಗುಣೈಃ=ಎಲ್ಲಾ ಗುಣಗಳಿಂದ, ಪೂರ್ಣತ್ವಾತ್ = ಪರಿಪೂರ್ಣತ್ವವಿದ್ದುದರಿಂದ, ಮುಖ್ಯಾಭೇದಃ=ಅಂಶಿಯಿಂದ ಮುಖ್ಯಾಭೇದವು, ಅಪರೈಃ=ಜೀವರಿಂದ, ನ ಚ (ಈಶ್ವರನಿಗೆ ಅಭೇದವು) ಇಲ್ಲ. (ಜೀವರಿಗೆ ಅಪರಿಪೂರ್ಣ ಗುಣವಿದ್ದ ಪ್ರಯುಕ್ತ) ॥ ೯೪ ॥

### "ಓಂ ಆಭಾಸಏವಚ ಓಂ" ॥ ಸೂ ॥ ೫೦ ॥

ಜೀವನು ಈಶನ ಪ್ರತಿಬಿಂಬನೇ, ಮತ್ಸ್ಯಾದಿಗಳು ಈಶಪ್ರತಿಬಿಂಬರಲ್ಲ. ಹೀಗೆ ಅಂಶ ನಾದಾಗ್ಯೂ ಜೀವನಿಗೆ, ಪ್ರಮಾಣಗಳಿಂದ ಈಶ್ವರನಿಂದ ಭೇದವನ್ನು ಸಮರ್ಥಿಸಿದರು. ಯಾವನು ಅಂಶತ್ವವಿದ್ದಪ್ರಯುಕ್ತವೇ ಅಭೇದವನ್ನು ಸಾಧಿಸುವನೋ ಆತನಿಗೆ ಅಂಶಶಬ್ದವಾಚ್ಯತ್ವ ಮಾತ್ರ ತ್ವವು ಹೇತುವಾದರೆ ಆಗ ವ್ಯಭಿಚಾರವನ್ನು ಮೊದಲೇ ಹೇಳಿರುವೆವು. ಮುಖ್ಯಾಂಶತ್ವವು ಹೇತುವಾದರೆ ಆಗ ಅಸಿದ್ಧಿಯು ಎಂದು ಪ್ರತಿಪಾದಿಸತಕ್ಕ **'ಆಭಾಸ ಏವಚ'** ಎನ್ನುವ ೫೦ನೇ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ.

**ಮೂ ॥ ಅಂಶಾಭಾಸಾಶ್ಚ ಸರ್ವೇಽಪಿ ಪರಸ್ಯಾಂಶಾ ನ ಮುಖ್ಯತಃ ।**
**ಯಥೈಷಾಪುರುಷೇ ಛಾಯಾ ಏತಸ್ಮಿನ್ನೇತದಾತತಂ ।**
**ನ ತು ಪುಂಪಾದವತ್ಪಾದಾಜೀವಾ ಏತೇ ಪರಾತ್ಮನಃ ॥ ೯೫ ॥**
**ಪೂರ್ಣಾಸ್ತಸ್ಯ ಗುಣಾಏವ ಪ್ರಾದುರ್ಭಾವತಯಾಸ್ಥಿತಾಃ ।**
**ಏವಂ ಜಗಾದ ಪರಮಾ(ಮು)ಶ್ರುತಿರ್ನಾರಾಯಣಂ ಪರಂ ॥ ೯೬ ॥**

ಅ ॥ ಸರ್ವೇಽಪಿ = ಎಲ್ಲಾ ಜೀವರೂ ಕೂಡ, ಅಂಶಾಭಾಸಾಶ್ಚ = ಅಂಶಾಭಾಸರು, ಮುಖ್ಯತಃ = ಮುಖ್ಯವಾಗಿ, ಪರಸ್ಯ = ಪರಮಾತ್ಮನ, ಅಂಶಾಃ = ಅಂಶರು, ನ = ಅಲ್ಲ. (ಜೀವರಿಗೆ ಅಂಶಾಭಾಸತ್ವವನ್ನು ಶ್ರುತ್ಯಂತರದಿಂದ ದೃಢೀಕರಿಸುತ್ತಾರೆ.) ಯಥಾ = ಹೇಗೆ, ಏಷಾಛಾಯಾ = ಈ ನೆರಳು, ಪುರುಷೇ = ಜೀವನಲ್ಲಿ, (ವ್ಯಾಪ್ತವಾಗಿದೆಯೋ, ತಥಾ = ಹಾಗೆಯೇ) ಏತಸ್ಮಿನ್ = ಈ ಪುರುಷೋತ್ತಮನಲ್ಲಿ, ಏತತ್ = ಈ ಜೀವರ ಸಮುದಾಯವು, ಆತತಂ = ವ್ಯಾಪ್ತವಾಗಿದೆ. (ಇದೇವೇ ಜೀವರಿಗೆ ಈಶ್ವರನ ಅಂಶತ್ವವು.) (ಹಾಗಾದರೆ '**ಪಾದೋಽಸ್ಯ ವಿಶ್ವಾಭೂತಾನಿ ತ್ರಿಪಾದಸ್ಯಾಮೃತಂ ದಿವಿ**' ಎನ್ನುವ ಮಂತ್ರವರ್ಣದಲ್ಲಿ ದ್ಯುಶಬ್ದವಾಚ್ಯಗಳಾದ ಅನಂತಾಸನ ಶ್ವೇತದ್ವೀಪ ವೈಕುಂಠಗಳಲ್ಲಿರತಕ್ಕ ಮೂರು ರೂಪಗಳಂತೆಯೇ ಭೂತಶಬ್ದವಾಚ್ಯರಾದ ಜೀವರಿಗೂ ಪರಮ ಪುರುಷಪಾದತ್ವವನ್ನು ಹೇಳಿರುವುದರಿಂದ, ಇದು ಶ್ರುತಿವಿರುದ್ಧವು ಎಂದರೆ— ವಿಶೇಷಶ್ರುತಿಬಲದಿಂದ ಪಾದ ಶಬ್ದಕ್ಕೆ ಅನೇಕಾರ್ಥತ್ವವನ್ನು ಕಲ್ಪಿಸುವುದು ನ್ಯಾಯವೆನ್ನುತ್ತಾರೆ) ಪುಂಪಾದವತ್ = ಪರಮಪುರುಷನ ಅಮೃತಾಖ್ಯವಾದ ಪಾದತ್ರಯದಂತೆ, ಏತೇ ಜೀವಾಃ = ಈ ಜೀವರು, ಪರಮಾತ್ಮನಃ = ಶ್ರೀ ಹರಿಯ, ಪಾದಾಃ = ಅಂಶರು, ನ ತು ಇಲ್ಲ. ಪ್ರಾದುರ್ಭಾವತಯಾ = ಪ್ರಾದುರ್ಭಾವರೂಪದಿಂದ, ಸ್ಥಿತಾಃ = ಇರತಕ್ಕ ಮತ್ಸ್ಯಾದಿರೂಪಗಳು. ತಸ್ಯೈವ = ಆ ಶ್ರೀಹರಿಯ, ಗುಣಾಃ = ಗುಣ(ರೂಪ)ಗಳು, ಪೂರ್ಣಾಃ = ಪರಿಪೂರ್ಣಗಳಾದವುಗಳು. ಏವಂ = ಹೀಗೆ, ಪರಮಶ್ರುತಿಃ = ಪರಮಶ್ರುತಿಯು, ನಾರಾಯಣಂ = ಪ್ರಾದುರ್ಭಾವರೂಪವನ್ನು ಪರಂ = ಜೀವಾಂಶಗಳಿಂದ ವಿಲಕ್ಷಣವಾದುದನ್ನಾಗಿ, ಜಗಾದ = ಹೇಳಿಯದೆ. ॥ ೯೫ ॥ ೯೬ ॥

ಅಧಿದೈವಾದಿಗಳ ಸ್ವರೂಪವನ್ನು ನಿಶ್ಚಯಿಸುವುದಕ್ಕಾಗಿ ಈ ಪಾದವನ್ನು ಆರಂಭಿಸಿದ್ದು ಎಂದುಕ್ತವಾಗಿದೆ. ಅದರಲ್ಲಿ ಎಂತಹ ನಿರ್ಣಯವು ಉಂಟಾಯಿತೆಂದರೆ ಅದನ್ನು ಬುದ್ಧಿಯಲ್ಲಿ ಆರೂಢವಾಗುವುದಕ್ಕಾಗಿ ಸಂಕಲೀಕರಿಸಿ ಹೇಳುತ್ತಾರೆ.

**ಮೂ ॥ ಅಕ್ಷಯೋ ಭಗವಾನ್ವಿಷ್ಣುರ್ಲಕ್ಷ್ಮ್ಯಾವಾಸೋ ಲಯೇ ಸ್ಥಿತಃ ।**
**ಮುಕ್ತೈಸ್ಸದಾ ಚಿಂತ್ಯಮಾನೋ ಬ್ರಹ್ಮಾದ್ಯೈಸ್ತಾರತಮ್ಯಗೈಃ ॥ ೯೭ ॥**
**ಪ್ರಕೃತಿಃ ಪುರುಷಃ ಕಾಲೋ ವೇದಾಶ್ಚೇತಿ ಚತುಷ್ಟಯಂ ।**
**ನಿತ್ಯಂ ಸ್ವರೂಪತೋ ವಿಷ್ಣೋರ್ವಿಶೇಷಾವಾಪ್ತಿಮಾತ್ರತಃ ॥ ೯೮ ॥**
**ಉತ್ಪತ್ತಿಮದಿತಿ ಪ್ರೋಕ್ತಂ ಲಕ್ಷ್ಮೀಸ್ತದಭಿಮಾನಿನೀ ।**
**ತತೋ ಜಾತಃ ಪುಮಾನ್ನಾಮ ಬ್ರಹ್ಮಾಸ್ಯಾಂ ವಾಸುದೇವತಃ ॥ ೯೯ ॥**
**ಸೂತ್ರಾತ್ಮಾ ಪ್ರಾಣನಾಮಾ ಚ ದೇವ್ಯಾಂ ಪ್ರಕೃತಿಮಾನಿನೀ ।**
**ತತೋ ರೂಪಂ ಮಹ (ಹಾ) ನ್ನಾಮ ಬ್ರಹ್ಮಣೋಽಹಂಕೃತಿಃ ಶಿವಃ ॥ ೧೦೦ ॥**
**ಬ್ರಹ್ಮಣೋ ಬುದ್ಧಿನಾಮ್ನೋಮಾ ತತ ಇಂದ್ರೋ ಮನೋಭಿಧಃ ।**
**ಸ್ಕಂದಶ್ಚ ತತ ಏವಾನ್ಯೇ ಸರ್ವೇ ದೇವಾಃ ಪ್ರಜಜ್ಞಿರೇ ॥ ೧೦೧ ॥**

ಅ ॥ ಲಕ್ಷ್ಮ್ಯಾವಾಸಃ = ಲಕ್ಷ್ಮಿಗೆ ಆವಾಸಭೂತನಾದ, ಭಗವಾನ್ = ಪೂಜ್ಯನಾದ, ವಿಷ್ಣುಃ = ಶ್ರೀ ಪರಮಾತ್ಮನು, ಅಕ್ಷಯಃ = ದೇಹಾದಿ ಕ್ಷಯರಹಿತನಾಗಿಯೇ, ಲಯೇ = ಪ್ರಲಯ ಕಾಲದಲ್ಲಿ, ಸ್ಥಿತಃ = ಇದ್ದಾನೆ. (ಇದರಿಂದ '**ಅಸಂಭವಸ್ತು ಸತೋಽನುಪಪತ್ತೇಃ ನಾತ್ಮಾ ಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ**' ಎನ್ನುವ ಅಧಿಕರಣದ ತಾತ್ಪರ್ಯವನ್ನು ಹೇಳಿದಹಾಗಾ

ಯಿತು.) (ಲಕ್ಷ್ಮಿಯೂ ಪ್ರಲಯಕಾಲದಲ್ಲಿದ್ದಾಳೆ ಎಂದು ಹೇಳಿರುವುದರಿಂದ ಜೀವನಂತೆಯೇ ಉತ್ಪತ್ತಿಯು ಇಲ್ಲ.) (ವಿಯದಾದಿ ಪದವನ್ನು ತೆಗೆದುಕೊಂಡದರಿಂದ ವಿಯದಾದ್ಯಭಿಮಾನಿತ್ವವಿರುವಾಗಲೇ ಬ್ರಹ್ಮಾದಿಗಳಿಗೆ ದೇಹಾದ್ಯುತ್ಪತ್ತಿಯು. ಮುಕ್ತಿಯಲ್ಲಿ ದೇಹಾದ್ಯುತ್ಪತ್ತಿಯು ಇಲ್ಲ ಎಂದು ಸೂಚಿತವಾಯಿತು. ಅದನ್ನೇ ಸೂಚಿಸುತ್ತಾರೆ.) ತಾರತಮ್ಯಗೈಃ = ತರತಮ (ನೀಚೋಚ್ಚ) ಭಾವವನ್ನು ಹೊಂದಿದ, ಬ್ರಹ್ಮಾದ್ಯೈಃ = ಬ್ರಹ್ಮನೇ ಮೊದಲಾಗಿವುಳ್ಳ, ಮುಕ್ತೈಃ = ಮುಕ್ತರಿಂದ, ವಿಷ್ಣುಃ = ಶ್ರೀ ಪರಮಾತ್ಮನು, ಸದಾ = ಯಾವಾಗಲೂ, ಚಿಂತ್ಯಮಾನಃ = ಧ್ಯಾನಿಸಿಕೊಳ್ಳಲ್ಪಡುತ್ತಾನೆ. (**'ವಿಪರ್ಯಯೇಣ ತು ಕ್ರಮೋಽತಃ'** ಎಂದು ಸೃಷ್ಟಿಕ್ರಮಕ್ಕಿಂತ ವ್ಯತ್ಯಾಸವಾಗಿ ಪ್ರಲಯಕಾಲದಲ್ಲಿ ಕ್ರಮವು ಹೇಳಲ್ಪಟ್ಟದೆ. ಅದರಲ್ಲಿ ಸೃಷ್ಟಿಯಲ್ಲಿ ಯಾವ ಕ್ರಮವು ಎಂದರೆ— ಅದನ್ನು ತೋರಿಸುತ್ತಾ ವಿಯದಧಿಕರಣದ ತಾತ್ಪರ್ಯವನ್ನು ಹೇಳುತ್ತಾರೆ.) ಪ್ರಕೃತಿಃ = ಪ್ರಕೃತಿಯು, ಪುರುಷಃ = ಜೀವನು, ಕಾಲಃ = ಕಾಲವು, ವೇದಾಶ್ಚ = ವೇದಗಳೂ, ಇತಿ = ಹೀಗೆ, ಚತುಷ್ಟಯಂ = ನಾಲ್ಕು, ಸ್ವರೂಪತಃ = ಸ್ವರೂಪದಿಂದ, ನಿತ್ಯಂ = ನಿತ್ಯವು. ವಿಶೇಷಾವಾಪ್ತಿಮಾತ್ರತಃ = ವಿಶೇಷಪ್ರಾಪ್ತಿಮಾತ್ರದಿಂದ, ವಿಷ್ಣೋಃ = ಶ್ರೀ ಹರಿಯದ್ದೆಶೆಯಿಂದ, ಉತ್ಪತ್ತಿಮದಿತಿ = ಉತ್ಪತ್ತಿಯುಳ್ಳದ್ದೆಂದು, ಪ್ರೋಕ್ತಂ = ಹೇಳಲ್ಪಟ್ಟದೆ. ತದಭಿಮಾನಿನೀ = ಪ್ರಕೃತ್ಯಾದಿಗಳಿಗೆ ಅಭಿಮಾನಿಯಾದ, ಲಕ್ಷ್ಮೀಃ = ಲಕ್ಷ್ಮಿಯೂ ಕೂಡ, (ಪರಾಧೀನವಿಶೇಷಪ್ರಾಪ್ತಿರೂಪ ಉತ್ಪತ್ತಿಯುಳ್ಳವಳು.) ತತಃ = ಆಮೇಲೆ, ಅಸ್ಯಾಂ = ಈ ಮಾಯಾಖ್ಯಳಾದ ಲಕ್ಷ್ಮೀದೇವಿಯಲ್ಲಿ, ವಾಸುದೇವತಃ = ವಾಸುದೇವನದ್ದೆಸೆಯಿಂದ, ಪುಮಾನ್ನಾಮ = ಪುರುಷನೆಂದು ಪ್ರಸಿದ್ಧನಾದ, ಬ್ರಹ್ಮಾ = ಚತುರ್ಮುಖನು, ಜಾತಃ = ಹುಟ್ಟಿದನು. ಸೂತ್ರಾತ್ಮಾ = ಸೂತ್ರರೂಪನಾದ, ಪ್ರಾಣನಾಮಾ ಚ = ಪ್ರಾಣನೆಂದು ಹೆಸರುಳ್ಳ ವಾಯುದೇವರು, (ಸಂಕರ್ಷಣರೂಪಿಯಾದ ಶ್ರೀ ಹರಿಯದ್ದೆಶೆಯಿಂದ ಜಯಾಖ್ಯ ಲಕ್ಷ್ಮೀದೇವಿಯಲ್ಲಿ ಹುಟ್ಟಿದರು) ಪ್ರಕೃತಿಮಾನಿನೀ = ಜಡಪ್ರಕೃತಿಗೆ ಅವಾಂತರಾಭಿಮಾನಿಯರಾದ, ದೇವ್ಯೌ = ಸರಸ್ವತೀಭಾರತಿಯರು, (ಪ್ರದ್ಯುಮ್ನನದ್ದೆಶೆಯಿಂದ ಕೃತಿನಾಮಕಳಾದ ಲಕ್ಷ್ಮೀದೇವಿಯಲ್ಲಿ ಹುಟ್ಟಿದರು.) ತತಃ ವಾಸುದೇವನದ್ದೆಶೆಯಿಂದಲೇ, ಮಹಾನ್ನಾಮ = ಮಹತ್ತತ್ವಕ್ಕೆ ಅಭಿಮಾನಿಯಾಗಿರುವುದರಿಂದ ಮಹತ್ ಎಂದು ಪ್ರಸಿದ್ಧವಾದ, ಬ್ರಹ್ಮಣಃ ರೂಪಂ = ಚತುರ್ಮುಖ ಬ್ರಹ್ಮನ ರೂಪವು, (ಹುಟ್ಟಿತು.) ಬ್ರಹ್ಮಣಃ = ಮಹತ್ತತ್ವಾಭಿಮಾನಿಯಾದ ಚತುರ್ಮುಖನದ್ದೆಶೆಯಿಂದ (ಸರಸ್ವತೀದೇವಿಯಲ್ಲಿ) ಅಹಂಕೃತಿಃ = ಅಹಂಕಾರ ತತ್ವಕ್ಕೆ ಅಭಿಮಾನಿಯಾದ, ಶಿವಃ = ರುದ್ರನು, (ಹುಟ್ಟಿದನು) ಬುದ್ಧಿನಾಮ್ನಾ = ಬುದ್ಧಿತತ್ವಕ್ಕೆ ಅಭಿಮಾನಿಯಾಗಿರುವಪ್ರಯುಕ್ತ ಬುದ್ಧಿನಾಮದಿಂದ, ಉಮಾ = ಪಾರ್ವತಿಯು, (ಹುಟ್ಟಿದಳು) ತತಃ = ಅಹಂಕಾರಾಭಿಮಾನಿಯಾದ ರುದ್ರನದ್ದೆಶೆಯಿಂದ, ಮನೋಭಿಧಃ = ಮನಸ್ತತ್ವಾಭಿಮಾನಿಯಾದ, ಇಂದ್ರಃ = ಇಂದ್ರನು, ಸ್ಕಂದಶ್ಚ = ಸ್ಕಂದನೂ ಕೂಡ, (ಹುಟ್ಟಿದರು.) ತತಏವ = ಇಂದ್ರಸ್ಕಂದರಿಂದಲೇ, ಅನ್ಯೇ = ಇತರರಾದ, ತತ್ವಾಭಿಮಾನಿಗಳಾದ, ಸರ್ವೇ = ಎಲ್ಲಾ, ದೇವಾಃ = ದೇವತೆಗಳು, ಪ್ರಜಜ್ಞಿರೇ = ಹುಟ್ಟಿದರು. ॥ ೯೭ ॥ ೯೮ ॥ ೯೯ ॥ ೧೦೦ ॥ ೧೦೧ ॥

ಸೃಷ್ಟಿಪ್ರಲಯಗಳಲ್ಲಿ ಕ್ರಮ ವ್ಯತ್ಯಾಸ ಸಮರ್ಥನದ ತಾತ್ಪರ್ಯವನ್ನು ಹೇಳುತ್ತಾರೆ—

**ಮೂ ॥ ತತ್ರ ಪೂರ್ವತನಃ ಶ್ರೇಯಾನ್ ಗುಣೈಃ ಸರ್ವೈಃ ಸಮಸ್ತಶಃ ।**
**ತೇಭ್ಯಶ್ಚ ಭಗವಾನ್ವಿಷ್ಣುಸ್ತದಧೀನಾ ಇಮೇ ಸದಾ ॥ ೧೦೨ ॥**
**ಜನ್ಮಸ್ಥಿತಿಲಯಾಜ್ಞಾನ ನಿಯತಿ ಜ್ಞಾನಸಂಸೃತಿಃ ।**
**ಮೋಕ್ಷಶ್ಚ ತದಧೀನತ್ವಮೇತೇಷಾಂ ನೈವ ಹೀಯತೇ ॥ ೧೦೩ ॥**

**ಮುಕ್ತಾವಪಿ ಸ ಏವೈಕಃ ಸ್ವತಂತ್ರಃ ಪೂರ್ಣಸದ್ಗುಣಃ ।**
**ಇತಿ ಶ್ರುತ್ಯುಪಪತ್ತಿಭ್ಯಾಂ ಪಾದೇಽಸ್ಮಿನ್ ಪ್ರಭುಣೋದಿತಂ ॥೧೦೪॥**

ಅ ॥ ತತ್ರ ಸಮುಸ್ತಶಃ=ಹಿಂದೆ ಹೇಳಿದ ಎಲ್ಲಾ ದೇವತೆಗಳಲ್ಲಿಯೂ, ಪೂರ್ವತನಃ= ಮೊದಲಿನವನು, ಸರ್ವೈಃ = ಎಲ್ಲಾ, ಗುಣೈಃ = ಗುಣಗಳಿಂದ, ಶ್ರೇಯಾನ್ = ಶ್ರೇಷ್ಠನು. (**'ತೇಜೋಽತಃ'** **'ತದಭಿಧ್ಯಾನಾತ್'** ಇತ್ಯಾದಿಗಳ ತಾತ್ಪರ್ಯವನ್ನು ಹೇಳುತ್ತಾರೆ.) ತೇಭ್ಯಶ್ಚ=ಆ ದೇವತೆಗಳದ್ದೆಶೆಯಿಂದ, ಭಗವಾನ್ ವಿಷ್ಣುಃ=ಪೂಜ್ಯನಾದ ವಿಷ್ಣುವು, ಶ್ರೇಯಾನ್= ಶ್ರೇಷ್ಠನು. (ಎಲ್ಲಾವಸ್ತುಗಳ ಉತ್ಪತ್ತಿನಾಶಗಳು ಶ್ರೀ ಹರಿಯ ಅಧೀನಗಳೆಂದು ಹೇಳಲ್ಪಟ್ಟವೆ. **'ಪರಾತ್ತು ತಚ್ಛ್ರುತೇಃ'** ಇತ್ಯಾದಿಗಳಿಂದ ಶ್ರೀ ಹರಿಯಿಂದಲೇ ಪ್ರವೃತಿಯೆಂದೂ ಹೇಳಲ್ಪಟ್ಟದೆ. ಅದರ ತಾತ್ಪರ್ಯವನ್ನು ಹೇಳುತ್ತಾರೆ.) ಜನ್ಮಸ್ಥಿತಿ ಲಯಾಜ್ಞಾನ ನಿಯತಿಜ್ಞಾನಸಂಸೃತಿಃ=ಉತ್ಪತ್ತಿ, ಸ್ಥಿತಿ, ನಾಶ, ಅಜ್ಞಾನ, ನಿಯಮನ, ಜ್ಞಾನ, ಸಂಸಾರವು, ಮೋಕ್ಷಶ್ಚ= ಮುಕ್ತಿಯೂ ಕೂಡ, ಇಮೇ=ಇವುಗಳು, ಸದಾ=ಯಾವಾಗಲೂ, ತದಧೀನಾಃ=ಶ್ರೀ ಹರಿಯ ಅಧೀನಗಳು. (ಮುಕ್ತಿಯಲ್ಲಿ ಉತ್ಪತಿಯಿಲ್ಲದಿದ್ದರೂ ಸ್ಥಿತ್ಯಾದಿಗಳಲ್ಲಿ ಶ್ರೀ ಹರಿಯ ಅಧೀನತ್ವವು ಇದ್ದೇ ಇದೆ ಎನ್ನುತ್ತಾರೆ.) ಏತೇಷಾಂ=ಬ್ರಹ್ಮಾದಿಗಳಿಗೆ, ತದಧೀನತ್ವಂ=ಶ್ರೀ ಹರಿಯ ಅಧೀನತ್ವವು, ನೈವ ಹೀಯತೇ=ತಪ್ಪಲಾರದು. (ಪರಮ ಪ್ರಮೇಯವನ್ನು ಹೇಳುತ್ತಾರೆ) ಮುಕ್ತಾವಪಿ=ಮುಕ್ತಿಯಲ್ಲಿಯೂಕೂಡ, ಸ ಏಕ ಏವ=ಅವನೊಬ್ಬನೇ, ಸ್ವತಂತ್ರಃ=ಸರ್ವ ಸ್ವತಂತ್ರನು, ಪೂರ್ಣ ಸದ್ಗುಣಃ=ಪರಿಪೂರ್ಣಗಳಾದ ನಿರ್ದುಷ್ಟಗಳಾದ ಗುಣಗಳುಳ್ಳವನು. ಇತಿ=ಹೀಗೆ, ಶ್ರುತ್ಯುಪಪತ್ತಿಭ್ಯಾಂ=ಶ್ರುತಿಯುಕ್ತಿ, ಇವುಗಳಿಂದ, ಅಸ್ಮಿನ್ ಪಾದೇ=ಈ ಪಾದದಲ್ಲಿ, ಪ್ರಭುಣಾ= ಶ್ರೀ ಹರಿಯಿಂದ, ಉದಿತಂ=ಹೇಳಲ್ಪಟ್ಟದೆ. ॥ ೧೦೨ ॥ ೧೦೩ ॥ ೧೦೪ ॥ ಸೂ ॥ ೪೩ ॥ ೪೪ ॥ ॥ ೪೫ ॥ ೪೬ ॥ ೪೭ ॥ ೪೮ ॥ ೪೯ ॥ ೫೦ ॥ ಅಧಿ ॥ ೧೮ ॥

**ಅಂಶಾಧಿಕರಣವು ಸಮಾಪ್ತವಾಯಿತು.**

---

## ಅದೃಷ್ಟಾಧಿಕರಣವು.

**"ಓಂ ಅದೃಷ್ಟಾನಿಯಮಾತ್ ಓಂ"** ॥ ಸೂ. ೫೧ ॥

ವಿದ್ಯಾಕರ್ಮಸಂಸ್ಕಾರಾದಿ ವೈಚಿತ್ರ್ಯವಿದ್ದಪ್ರಯುಕ್ತ, ಜೀವನು ಈಶಪ್ರತಿಬಿಂಬನೇ.

**"ಓಂ ಅಭಿಸಂಧ್ಯಾದಿಷ್ವಪಿ ಚೈವಂ ಓಂ"** ॥ ಸೂ. ೫೨ ॥

ರಾಗ-ದ್ವೇಷ-ಮೋಹಾದಿ ದೋಷಗಳಲ್ಲಿಯೂ ಅದೃಷ್ಟಾನಿಯಮದ್ದೆಶೆಯಿಂದ ಹೀಗೆಯೇ ವೈಚಿತ್ರ್ಯವನ್ನು ಅಂಗೀಕರಿಸತಕ್ಕದು.

**"ಓಂ ಪ್ರದೇಶಾದಿತಿ ಚೇನ್ನಾಂತರ್ಭಾವಾತ್ ಓಂ"** ॥ ಸೂ. ೫೩ ॥

ಸ್ವರ್ಗ ಮೊದಲಾದ ಪ್ರದೇಶವೈಚಿತ್ರ್ಯವಿದ್ದಪ್ರಯುಕ್ತ ಜೀವನಿಗೆ ಹೀಗೆ ವೈಚಿತ್ರ್ಯವಿರಲಿ, ಎಂದು ಹೇಳಕೂಡದು. ಸ್ವರ್ಗಾದಿ ಪ್ರದೇಶವೈಚಿತ್ರ್ಯವೂ ಅದೃಷ್ಟವೈಚಿತ್ರ್ಯದಲ್ಲಿಯೇ ಅಂತರ್ಭೂತವಾಗುತ್ತದೆ ॥ ಸೂ. ೫೧ ॥ ೫೨ ॥ ೫೩ ॥ ಅಧಿ ೧೯ ॥

**ಅದೃಷ್ಟಾಧಿಕರಣವು ಸಮಾಪ್ತವಾಯಿತು.**

---

## ೨ನೇ ಅಧ್ಯಾಯದ ೩ನೇ ಪಾದದ ಸಾರಾಂಶ—

೧ನೇ ವಿಯದಧಿಕರಣದಲ್ಲಿ— ಆಕಾಶಾನುತ್ಪತ್ತಿಶ್ರುತಿವಿರೋಧವನ್ನೂ,
೨ನೇ ಮಾತರಿಶ್ವಾಧಿಕರಣದಲ್ಲಿ— ವಾಯ್ವನುತ್ಪತ್ತಿಶ್ರುತಿವಿರೋಧವನ್ನೂ,
೩ನೇ ಅಸಂಭವಾಧಿಕರಣದಲ್ಲಿ— ಪರಬ್ರಹ್ಮೋತ್ಪತ್ತಿಶ್ರುತಿವಿರೋಧವನ್ನೂ,
೪ನೇ ತೇಜೋಽಧಿಕರಣದಲ್ಲಿ- ತೇಜಸ್ಸಿಗೆ ವಾಯೂತ್ಪತ್ತಿಶ್ರುತಿವಿರೋಧವನ್ನೂ,
೫ನೇ ಅಬಧಿಕರಣದಲ್ಲಿ— ಜಲಗಳಿಗೆ ತೇಜೋಜನ್ಯತ್ವಶ್ರುತಿವಿರೋಧವನ್ನೂ,
೬ನೇ ಪೃಥಿವ್ಯಧಿಕರಣದಲ್ಲಿ— ಜಲಗಳಿಗೆ ಅನ್ನಕಾರಣತ್ವಪೃಥಿವೀಕಾರಣತ್ವ-ಶ್ರುತಿವಿರೋಧವನ್ನೂ,
೭ನೇ ತದಭಿಧ್ಯಾನಾಧಿಕರಣದಲ್ಲಿ— ರುದ್ರನಿಗೆ ಸಂಹಾರಕರ್ತೃತ್ವಶ್ರುತಿವಿರೋಧವನ್ನೂ,
೮ನೇ ವಿಪರ್ಯಾಧಿಕರಣದಲ್ಲಿ— ಆದಿಸೃಷ್ಟಿಕ್ರಮದಿಂದ ಲಯಬೋಧಕ ಶ್ರುತಿವಿರೋಧವನ್ನೂ,
೯ನೇ ಅಂತರಾಧಿಕರಣದಲ್ಲಿ— ವಿಜ್ಞಾನತತ್ತ್ವ ಮನಸ್ತತ್ತ್ವಗಳಿಗೆ ವ್ಯುತ್ಕ್ರಮದಿಂದ ಲಯಾಭಾವಶ್ರುತಿವಿರೋಧವನ್ನೂ,
೧೦ನೇ ನಾತ್ಮಾಧಿಕರಣದಲ್ಲಿ— ಪರಮಾತ್ಮಲಯಶ್ರುತಿವಿರೋಧವನ್ನೂ,
೧೧ನೇ ಜ್ಞಾಧಿಕರಣದಲ್ಲಿ— ಜೀವಾನುತ್ಪತ್ತಿಶ್ರುತಿವಿರೋಧವನ್ನೂ,
೧೨ನೇ ಉತ್ಕ್ರಾಂತ್ಯಧಿಕರಣದಲ್ಲಿ— ಜೀವವ್ಯಾಪಕತ್ವಶ್ರುತಿವಿರೋಧವನ್ನೂ,
೧೩ನೇ ವ್ಯತಿರೇಕಾಧಿಕರಣದಲ್ಲಿ— ಜೀವನಿಗೆ ಏಕರೂಪತ್ವ ಅನೇಕರೂಪತ್ವಶ್ರುತಿ ವಿರೋಧವನ್ನೂ,
೧೪ನೇ ಪೃಥಗಧಿಕರಣದಲ್ಲಿ— ಜೀವರಿಗೆ ಬ್ರಹ್ಮಾಭಿನ್ನತ್ವಶ್ರುತಿವಿರೋಧವನ್ನೂ,
೧೫ನೇ ಯಾವದಧಿಕರಣದಲ್ಲಿ— ಜೀವನಿತ್ಯತ್ವಶ್ರುತಿವಿರೋಧವನ್ನೂ,
೧೬ನೇ ಪುಂಸ್ತ್ವಾಧಿಕರಣದಲ್ಲಿ— ಜೀವನಿಗೆ ಸುಖಾದಿ ರೂಪತ್ವ ತದಭಾವಶ್ರುತಿ ವಿರೋಧವನ್ನೂ,
೧೭ನೇ ಕರ್ತೃತ್ವಾಧಿಕರಣದಲ್ಲಿ— ಈಶ್ವರೈಕಕರ್ತೃತ್ವ ಜೀವಕರ್ತೃತ್ವಶ್ರುತಿ ವಿರೋಧವನ್ನೂ,
೧೮ನೇ ಅಂಶಾಧಿಕರಣದಲ್ಲಿ— ಜೀವನಿಗೆ ಈಶಾಂಶತ್ವ ಅನಂಶತ್ವಶ್ರುತಿವಿರೋಧವನ್ನೂ,
೧೯ನೇ ಅದೃಷ್ಟಾಧಿಕರಣದಲ್ಲಿ— ಜೀವನಿಗೆ ಈಶಾಭಾಸತ್ವ ಅನಾಭಾಸತ್ವಪರಗಳಾದ ಶ್ರುತಿಗಳವಿರೋಧವನ್ನೂ, ಪರಿಹರಿಸಿದರು.

ಆದಕಾರಣ ಪ್ರಥಮಾಧ್ಯಾಯದಲ್ಲಿ ಹೇಳಿದ ಸಮನ್ವಯದಲ್ಲಿ ಯಾವ ಶ್ರುತಿ ವಿರೋಧವೂ ಇಲ್ಲದಿರುವುದರಿಂದ ಶ್ರುತಿಸಮನ್ವಯ ಬಲದಿಂದ ಶ್ರೀ ಹರಿಗೇನೇ ಜಗಜ್ಜನ್ಮಾದಿಕಾರಣತ್ವವೂ, ಗುಣಪರಿಪೂರ್ಣತ್ವವೂ, ನಿರ್ದೋಷತ್ವವೂ ಸಿದ್ಧನಾಯಿತು.

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯವಿರಚಿತೇ
ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನೇ ದ್ವಿತೀಯಾಧ್ಯಾಯಸ್ಯ
ತೃತೀಯಃ ಪಾದಃ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿತವಾದ
ಬ್ರಹ್ಮಸೂತ್ರಾನುವ್ಯಾಖ್ಯಾನದಲ್ಲಿ
೨ನೇ ಅಧ್ಯಾಯದ ೩ನೇ ಪಾದವು ಸಮಾಪ್ತವಾಯಿತು.

ಇತಿ ಶ್ರೀಮತ್ಪರಿಪೂರ್ಣ ಪ್ರಮತಿ ಭಗವತ್ಪಾದ ಸುಕೃತೇ ।
ರನುವ್ಯಾಖ್ಯಾನಸ್ಯ ಪ್ರಗುಣ ಜಯತೀರ್ಥಾಖ್ಯ ಯತಿನಾ ॥
ಕೃತಾಯಾಂ ಟೀಕಾಯಾಂ ವಿಷಮಪದನಾಖ್ಯಾರ್ಥ ವಿವೃತೌ ।
ದ್ವಿತೀಯೋಽಧ್ಯಾಯೋಽಸ್ಮಿನ್ ಗಗನ ಚರಣಃ ಪರ್ಯವಸಿತಃ ॥

ಇಂದೀವರದಲಶ್ಯಾಮಮಿಂದಿರಾನಂದವರ್ಧನಂ ।
ವಂದೇ ನಂದಸುತಂ ಸಾಂದ್ರಾನಂದಸುಂದರವಿಗ್ರಹಂ ॥
ಯದ್ವ್ಯಾಖ್ಯಾ ಸರ್ವಗೀರ್ವಾಣೈರಚಿಂತ್ಯಾತ್ಯದ್ಭುತಾಮಲಾ ।
ನಿಜಪ್ರತಿಭಯೋದ್ಭೂತಾ ತಂ ಸರ್ವಜ್ಞಗುರುಂ ಭಜೇ ॥

ಅಧ್ಯಾ. ೨. ಪಾ. ೩. ಅಧಿ. ॥ ೧೮ ॥ ೧೯ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥



॥ ಶ್ರೀಃ ॥

# ಶ್ರೀಮದನುವ್ಯಾಖ್ಯಾನವು.



## ನಾಲ್ಕನೇ ಪಾದವು.

ದುರಂತದುರಿತಧ್ವಾಂತವಿಪಾಟನಪಟೀಯಸೇ ।
ಬಾದರಾಯಣಸಂಜ್ಞಾಯ ಪರಸ್ಮೈ ಮಹಸೇ ನಮಃ ॥
ನಮಾಮಿ ಶ್ರೀಮದಾನಂದತೀರ್ಥಾಚಾರ್ಯಂ ಪರಂ ಗುರುಂ ।
ಯಸ್ಯ ವಾಣೀ ಕೃಪಾಣೀಯಂ ನಿಕೃಂತತಿ ಭವಾಟವೀಂ ॥

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತ ರಾಮಕೃಷ್ಣವೇದವ್ಯಾಸಾತ್ಮಕ
ಶ್ರೀ ಲಕ್ಷ್ಮೀಹಯಗ್ರೀವಾಯ ನಮಃ । ಹರಿಃ ಓಂ ॥

ಮೂ ॥ ಶ್ರುತ್ಯರ್ಥಃ ಶ್ರುತಿಯುಕ್ತಿಭ್ಯಾಂ ವಿರುದ್ಧ ಇವ ದೃಶ್ಯತೇ ।
ಯತ್ರ ತನ್ನಿರ್ಣಯಂ ದೇವಃ ಸುವಿಶಿಷ್ಟೋಪಪತ್ತಿಭಿಃ ।
ಕರೋತ್ಯನೇನ ಪಾದೇನ (ತತ್ರಸ್ಪಷ್ಟಾರ್ಥವಚ್ಛ್ರುತಿಃ) ॥ ೧ ॥

ಅ ॥ ಯತ್ರ = ಯಾವ ಪ್ರಾಣಾದಿ ವಿಷಯದಲ್ಲಿ, ಶ್ರುತ್ಯರ್ಥಃ = ಶ್ರುತಿಯ ಅರ್ಥವಾದ ಜನ್ಮಾದಿಯು, ಶ್ರುತಿಯುಕ್ತಿಭ್ಯಾಂ = ಯುಕ್ತ್ಯುಪೇತ್ಯಗಳಾದ ಶ್ರುತಿಗಳಿಂದ, ವಿರುದ್ಧ ಇವ = ವಿರುದ್ಧದಂತೆ, ದೃಶ್ಯತೇ = ಕಾಣಲ್ಪಡುತ್ತದೋ, ತನ್ನಿರ್ಣಯಂ = ಶ್ರುತ್ಯರ್ಥನಿರ್ಣಯವನ್ನು, ದೇವಃ = ಶ್ರೀವೇದವ್ಯಾಸರು, ಸುವಿಶಿಷ್ಟೋಪಪತ್ತಿಭಿಃ = ಅತ್ಯುತ್ತಮಗಳಾದ ಯುಕ್ತಿಗಳಿಂದ, ಅನೇನ ಪಾದೇನ = ಬುದ್ಧಿಸನ್ನಿಹಿತವಾದ ೪ನೇ ಪಾದದಿಂದ, ಕರೋತಿ = ಮಾಡುತ್ತಾರೆ.

ತಾ ॥ ಅಧಿಭೂತಾದಿ ವಿಷಯದಲ್ಲಿ ಪರಸ್ಪರ ವಿರುದ್ಧ್ಯಮಾನಗಳಾದ ಶ್ರುತಿಗಳ ವಿರೋಧವನ್ನು ಹಿಂದಿನ ಪಾದಗಳಲ್ಲಿ ಪರಿಹರಿಸಿದರು. ಈ ಪಾದದಲ್ಲಿ ಅಧ್ಯಾತ್ಮವಿಷಯದಲ್ಲಿ ಶ್ರುತಿಯುಕ್ತಿಗಳಿಂದ ವಿರುದ್ಧದಂತೆ ತೋರುವ ಶ್ರುತಿಗಳಿಗೆ ಬಲವತ್ತರ ಯುಕ್ತಿಗಳಿಂದ ವಿರೋಧವನ್ನು ಪರಿಹರಿಸುತ್ತಾರೆ. ॥ ೧ ॥

## ಪ್ರಾಣೋತ್ಪತ್ತ್ಯಧಿಕರಣವು.

### "ಓಂ ತಥಾ ಪ್ರಾಣಾಃ ಓಂ" ॥ ಸೂ. ೧ ॥

ಹೇಗೆ ಆಕಾಶಾದಿಗಳು ಹುಟ್ಟುತ್ತವೋ, ಹಾಗೆಯೇ ಇಂದ್ರಿಯಗಳೂ ಶ್ರೀ ಹರಿಯಿಂದಲೇ ಹುಟ್ಟುತ್ತವೆ.

### "ಓಂ ಗೌಣ್ಯಸಂಭವಾತ್ ಓಂ" ॥ ಸೂ. ೨ ॥

ಮುಖ್ಯಾನಾದಿತ್ವವು ಕೂಡದೆ ಇದ್ದ ಪ್ರಯುಕ್ತ ಪ್ರಾಣಾನಾದಿತ್ವಶ್ರುತಿಯು ಅನಾದಿ ಸೂಕ್ಷ್ಮೇಂದ್ರಿಯಪರವಾದುದು.

"ಓಂ ಪ್ರತಿಜ್ಞಾನುಪರೋಧಾಚ್ಚ ಓಂ" ॥ ಸೂ. ೩ ॥

'ಇದಂ ಸರ್ವಮಸೃಜತ' ಎನ್ನುವ ಪ್ರತಿಜ್ಞೆಯನ್ನು ಅನುಸರಿಸಿಯೂ ಪ್ರಾಣಗಳು ಉತ್ಪತ್ತಿಯುಳ್ಳವುಗಳು. 'ಸ ಪ್ರಾಣಮಸೃಜತ' 'ಸ ಪ್ರಾಣಾನ್' 'ಏತಸ್ಮಾಜ್ಜಾಯತೇ ಪ್ರಾಣಃ' ಇತ್ಯಾದಿ ವಿಶೇಷ ಶ್ರುತಿಯಿದ್ದಪ್ರಯುಕ್ತ. ॥ ಸೂ. ೧ ॥ ೨ ॥ ೩ ॥ ಅಧಿ. ೧ ॥

**ಪ್ರಾಣೋತ್ಪತ್ತ್ಯಧಿಕರಣವು ಸಮಾಪ್ತವಾಯಿತು.**

---

# ತತ್ಪ್ರಾಗಧಿಕರಣವು.

"ಓಂ ತತ್ಪ್ರಾಕ್ ಶ್ರುತೇಶ್ಚ ಓಂ" ॥ ಸೂ. ೪ ॥

ಇಂದ್ರಿಯವು ಹುಟ್ಟುವುದಕ್ಕಿಂತ ಮೊದಲು ಉತ್ಪತ್ತಿಪ್ರತಿಪಾದಕವಾದ, 'ಮನಃ ಸರ್ವೇಂದ್ರಿಯಾಣಿ ಚ' ಎನ್ನುವ ಶ್ರುತಿಯಿಂದಲೂ, 'ಪೂರ್ವಂ ಮನಃ ಸಮುತ್ಪನ್ನಂ' ಎನ್ನುವ ಸ್ಮೃತಿಯಿಂದಲೂ, ಮನೋರೂಪವಾದ ಇಂದ್ರಿಯವು ಈಶನದ್ವೆಶೆಯಿಂದ ಉತ್ಪತ್ತಿಯುಳ್ಳದ್ದು. ॥ ಸೂ ॥ ೪ ॥ ಅಧಿ ॥ ೨ ॥

**ತತ್ಪ್ರಾಗಧಿಕರಣವು ಸಮಾಪ್ತವಾಯಿತು.**

---

# ತತ್ಪೂರ್ವಕತ್ವಾಧಿಕರಣವು.

"ಓಂ ತತ್ಪೂರ್ವಕತ್ವಾದ್ವಾಚಃ ಓಂ" ॥ ಸೂ. ೫ ॥

ವಾಗಿಂದ್ರಿಯಕ್ಕೆ 'ತಸ್ಮಾನ್ಮನ ಏವ ಪೂರ್ವರೂಪಂ । ವಾಗುತ್ತರರೂಪಂ' ಎನ್ನುವ ಶ್ರುತಿಯಿಂದ ಮನೋಜನ್ಯತ್ವವನ್ನು ಹೇಳಿರುವುದರಿಂದ ವಾಗಿಂದ್ರಿಯವು ಉತ್ಪತ್ತಿಯುಳ್ಳದ್ದೇ. ॥ ಸೂ ॥ ೫ ॥ ಅಧಿ ॥ ೩ ॥

**ತತ್ಪೂರ್ವಕತ್ವಾಧಿಕರಣವು ಸಮಾಪ್ತವಾಯಿತು.**

---

# ಸಪ್ತಗತ್ಯಧಿಕರಣವು.

"ಓಂ ಸಪ್ತಗತೇರ್ವಿಶೇಷಿತತ್ವಾಚ್ಚ ಓಂ" ॥ ಸೂ. ೬ ॥

ಜ್ಞಾನವನ್ನು ಹುಟ್ಟಿಸತಕ್ಕ ಇಂದ್ರಿಯಗಳು ಏಳೇ. 'ಸಪ್ತಪ್ರಾಣಾಃ ಪ್ರಭವಂತಿ' ಎನ್ನುವ ಶ್ರುತಿಯಲ್ಲಿ ಮೇಲೆ 'ಗುಹಾಶಯಾಂ ನಿಹಿತಾಃ ಸಪ್ತಸಪ್ತ' ಎಂದು ಜ್ಞಾನೇಂದ್ರಿಯಗಳಿಗೇನೇ ಸಪ್ತ (೭) ಎಂದು ವಿಶೇಷಣವನ್ನು ಕೊಟ್ಟಪ್ರಯುಕ್ತ.

**"ಓಂ ಹಸ್ತಾದಯಸ್ತು ಸ್ಥಿತೇಽತೋ ನೈವಂ ಓಂ" ॥ ಸೂ. ೭ ॥**

ಹಸ್ತ-ಪಾದ-ಪಾಯು-ಗುಹ್ಯ-ವಾಕ್-ಗಳಾದರೂ ಕರ್ಮೇಂದ್ರಿಯಗಳು. ಅಂದರೆ— ಕರ್ಮಕ್ಕೆ ಉಪಯುಕ್ತಗಳು, ಕರ್ಮಾರ್ಥತ್ವ ರೂಪವೈಲಕ್ಷಣ್ಯವಿದ್ದಪ್ರಯುಕ್ತವೇ ಜ್ಞಾನೇಂದ್ರಿಯ ಗಳಿಂದ ಕೂಡಿಕೊಂಡು ಸಹಪಾಠ ಮಾಡಲಿಲ್ಲ. ॥ ಸೂ ॥ ೬ ॥ ೭ ॥ ಅಧಿ ॥ ೪ ॥

**ಸಪ್ತಗತ್ಯಧಿಕರಣವು ಸಮಾಪ್ತವಾಯಿತು.**

---

# ಅಣ್ವಧಿಕರಣವು.

**"ಓಂ ಅಣವಶ್ಚ ಓಂ" ॥ ಸೂ. ೮ ॥**

ಪ್ರಾಣಗಳು ಸ್ವರೂಪತಃ ಅಣುರೂಪಗಳು, ತೇಜಸ್ಸಿನಿಂದ ವ್ಯಾಪ್ತಗಳೂ ಆಗಿವೆ. '**ತದ್ಯಥಾ**' ಎನ್ನುವ ಶ್ರುತಿಯಲ್ಲಿ ಹಾಗೆ ಪ್ರತಿಪಾದಿಸಿಯದೆ. ॥ ಸೂ ॥ ೮ ॥ ಅಧಿ ॥ ೫ ॥

**ಅಣ್ವಧಿಕರಣವು ಸಮಾಪ್ತವಾಯಿತು.**

---

# ಶ್ರೇಷ್ಠಾಧಿಕರಣವು.

**"ಓಂ ಶ್ರೇಷ್ಠಶ್ಚ ಓಂ" ॥ ಸೂ. ೯ ॥**

ಇಂದ್ರಿಯಗಳು ಮಾತ್ರ ಉತ್ಪತ್ತಿಯುಳ್ಳವುಗಳಲ್ಲ, ಮತ್ತೆ '**ಆತ್ಮತ ಏಷ ಪ್ರಾಣೋ ಜಾಯತೇ**' ಇತ್ಯಾದಿ ಶ್ರುತಿಗಳದ್ದೆಶೆಯಿಂದ ಮುಖ್ಯಪ್ರಾಣನೂ ಕೂಡ ಉತ್ಪತ್ತಿಯುಳ್ಳವನೇ.

**"ಓಂ ನ ವಾಯುಕ್ರಿಯೇ ಪೃಥಗುಪದೇಶಾತ್ ಓಂ" ॥ ಸೂ. ೧೦ ॥**

'**ಸ ಪ್ರಾಣಮಸೃಜತ**' ಎಂದು ಹೇಳಿ '**ಪ್ರಾಣಾಚ್ಛ್ರದ್ಧಾಂ ಖಂ ವಾಯುರ್ಜ್ಯೋತಿರಾಪಃ ಪೃಥಿವೀಂದ್ರಿಯಂ ಮನೋಽನ್ನಮನ್ನಾದ್ವೀರ್ಯಂ ತಪೋಮಂತ್ರಾಃ ಕರ್ಮ**' ಎಂದು ಬಾಹ್ಯವಾಯು ಚೇಷ್ಟಾರೂಪಕ್ರಿಯಾ ಈ ಎರಡರ ಉತ್ಪತ್ತಿಯನ್ನು ಪ್ರತ್ಯೇಕವಾಗಿ ಹೇಳಿರುವುದರಿಂದ ಬಾಹ್ಯವಾಯು, ಚೇಷ್ಟಾರೂಪಕ್ರಿಯೆಗಳು ಪ್ರಾಣೋತ್ಪತ್ತಿ ಶ್ರುತಿಯಲ್ಲಿರತಕ್ಕ ಪ್ರಾಣ ಶಬ್ದ ಪ್ರತಿಪಾದ್ಯಗಳಲ್ಲ. ॥ ಸೂ ॥ ೯ ॥ ೧೦ ॥ ಅಧಿ ॥ ೬ ॥

**ಶ್ರೇಷ್ಠಾಧಿಕರಣವು ಸಮಾಪ್ತವಾಯಿತು.**

---

# ಚಕ್ಷುರಾದ್ಯಧಿಕರಣವು.

**"ಓಂ ಚಕ್ಷುರಾದಿವತ್ತು ತತ್ಸಹಶಿಷ್ಟ್ಯಾದಿಭ್ಯಃ ಓಂ" ॥ ಸೂ. ೧೧ ॥**

**'ಸರ್ವಂ ಹ್ಯೇವೈತತ್ಪರಮೋಽವತಿಷ್ಠತೇ ಪ್ರಾಣಶ್ಚ ಪ್ರಾಣಾಶ್ಚ ಪ್ರಾಣಿನಶ್ಚ'** ಎಂದು ಪ್ರಾಣಗಳಿಂದೊಡಗೂಡಿಕೊಂಡು ಪ್ರಾಣನು ಈಶನ ವಶದಲ್ಲಿರುತ್ತಾನೆಂದು, ಪಾಠಮಾಡಿರುವುದರಿಂದ ಮುಖ್ಯಪ್ರಾಣನೂ ಕೂಡ ಚಕ್ಷುರಾದಿ ಇಂದ್ರಿಯಗಳಂತೆ ಶ್ರೀ ಹರಿಯ ಅಧೀನನೇ.

ಮುಖ್ಯಪ್ರಾಣನೂ ಈಶಾಧೀನನಾದರೆ ಚಕ್ಷುರಾದಿಗಳಂತೆಯೇ ಆತನಿಗೆ ಅವಾಂತರೇಶ್ವರತ್ವವೂ ಬಾರದೆ ಹೋಗಬೇಕಾಗುವುದು ಎಂದರೆ—

**"ಓಂ ಅಕರಣತ್ವಾಚ್ಚ ನ ದೋಷಸ್ತಥಾ ಹಿ ದರ್ಶಯತಿ ಓಂ"** ॥ ಸೂ. ೧೨ ॥

ಮುಖ್ಯಪ್ರಾಣನಿಗೆ ಕರಣತ್ವ (ಕರ್ತೃಪ್ರಯೋಜ್ಯತ್ವ) ವಿಲ್ಲದಿರುವುದರಿಂದಲೂ ಚಕ್ಷುರಾದಿಗಳಿಗೆ ಕರಣತ್ವಪಿದ್ಧಪ್ರಯುಕ್ತವೂ ಚಕ್ಷುರಾದಿಗಳಂತೆಯೇ ಅವಾಂತರೇಶ್ವರತ್ವಾಭಾವರೂಪ ದೋಷವಿಲ್ಲ. ಏಕೆಂದರೆ—**'ತಾನಿವಾ ಏತಾನಿ ಕರಣಾನಿ ಅಥ ಪ್ರಾಣ ಏವಾಕರಣಃ'** ಎನ್ನುವ ಶ್ರುತಿಯು ಹಾಗೆಯೇ ತೋರಿಸುತ್ತದೆ. ॥ ಸೂ ॥ ೧೧ ॥ ೧೨ ॥ ಅಧಿ ॥ ೭ ॥

**ಚಕ್ಷುರಾದ್ಯಧಿಕರಣವು ಸಮಾಪ್ತವಾಯಿತು.**

---

## ಪಂಚವೃತ್ತ್ಯಧಿಕರಣವು.

**"ಓಂ ಪಂಚವೃತ್ತಿರ್ಮನೋವದ್ವ್ಯಪದಿಶ್ಯತೇ ಓಂ"** ॥ ಸೂ ॥ ೧೩ ॥

ಹೇಗೆ ಮನಸ್ಸು, ಮನೋ, ಬುದ್ಧಿ, ಅಹಂಕಾರ, ಚಿತ್ತ, ಚೇತನಾಖ್ಯ—ಐದು ಸ್ವರೂಪವುಳ್ಳದ್ದೋ ಮತ್ತು ಅದರಿಂದ ಹುಟ್ಟದ ಮನಸ್ಸೇ ಮೊದಲಾದ ಐದು ವೃತ್ತಿಗಳುಳ್ಳದ್ದೋ ಹಾಗೆಯೇ ಮುಖ್ಯಪ್ರಾಣನೂ ಕೂಡ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ಎನ್ನುವ ಐದು ಸ್ವರೂಪವುಳ್ಳವನು, ಮತ್ತು ಪ್ರಾಣಾದಿ ಐದು ದಾಸರುಳ್ಳವನು.॥ ಸೂ ॥ ೧೩ ॥ ಅಧಿ ॥ ೮ ॥

**ಪಂಚವೃತ್ತ್ಯಧಿಕರಣವು ಸಮಾಪ್ತವಾಯಿತು.**

---

## ಅಣ್ವಧಿಕರಣವು.

**"ಓಂ ಅಣುಶ್ಚ ಓಂ"** ॥ ಸೂ ॥ ೧೪ ॥

ಮುಖ್ಯಪ್ರಾಣನು ದೇಹಾಂತರ್ಗತರೂಪದಿಂದ ಅಣುವಾಗಿದ್ದಾನೆ. ಹೊರಗೆ ಮುಖ್ಯವಾಯುರೂಪದಿಂದ ವ್ಯಾಪ್ತನೂ ಆಗಿರುತ್ತಾನೆ. ॥ ಸೂ ॥ ೧೪ ॥ ಅಧಿ ॥ ೯ ॥

**ಅಣ್ವಧಿಕರಣವು ಸಮಾಪ್ತವಾಯಿತು.**

---

# ಜ್ಯೋತಿರಧಿಕರಣವು

**" ಓಂ ಜ್ಯೋತಿರಾದ್ಯಧಿಷ್ಠಾನಂತು ತದಾಮನನಾತ್ ಓಂ "**
|| ಸೂ || ೧೫ ||

'**ಯೋಗ್ನೌ ತಿಷ್ಠನ್ ಯಸ್ತೇಜಸಿತಿಷ್ಠನ್**' ಇತ್ಯಾದಿ ಶ್ರುತಿಗಳದ್ದೇಶೆಯಿಂದ ಅಗ್ನ್ಯಾದಿ ಭೂತನಿಯಾಮಕನಾದ ಬ್ರಹ್ಮನೇ ಅಗ್ನ್ಯಾದ್ಯಂಶವಾದ ಚಕ್ಷುರಾದಿಗಳಿಗೆ ನಿಯಾಮಕನು. '**ಯಶ್ಚಕ್ಷುಷಿ ತಿಷ್ಠನ್**' ಇತ್ಯಾದಿ ಶ್ರುತಿಗಳಲ್ಲಿ ಹಾಗೆ ಹೇಳಿರುತ್ತದೆ.

**" ಓಂ ಪ್ರಾಣವತಾ ಶಬ್ದಾತ್ ಓಂ "** || ಸೂ. || ೧೬ ||

ಆ ಬ್ರಹ್ಮನು ಇಂದ್ರಿಯಗಳುಳ್ಳ ಜೀವನಿಂದ ತನ್ನ ಕರಣಗಳಾದ ಇಂದ್ರಿಯಗಳಿಂದ ದರ್ಶನಾದಿಗಳನ್ನು ಮಾಡಿಸುತ್ತಾನೆ, '**ಏಷ ಹ್ಯೇನೇನಾತ್ಮನಾ ಚಕ್ಷುಷಾ ದರ್ಶಯತಿ**' ಇತ್ಯಾದಿ ಶಬ್ದಗಳದ್ದೇಶೆಯಿಂದ.

**" ಓಂ ತಸ್ಯ ಚ ನಿತ್ಯತ್ವಾತ್ ಓಂ "** || ಸೂ. ೧೭ ||

ಜೀವಕರಣ ಸಂಬಂಧಗಳಿಗೆ ಅನಾದಿ ನಿತ್ಯತ್ವಸಿದ್ಧಪ್ರಯುಕ್ತ ಜೀವಕರಣತ್ವ ಶ್ರುತಿಯು ಉಪಚರಿತಾರ್ಥವುಳ್ಳದ್ದು. || ಸೂ || ೧೫ || ೧೬ || ೧೭ || ಅಧಿ || ೧೦ ||

**ಜ್ಯೋತಿರಧಿಕರಣವು ಸಮಾಪ್ತವಾಯಿತು.**

---

# ತಇಂದ್ರಿಯಾಧಿಕರಣವು.

**" ಓಂ ತ ಇಂದ್ರಿಯಾಣಿ ತದ್ವ್ಯಪದೇಶಾದನ್ಯತ್ರ ಶ್ರೇಷ್ಠಾತ್ ಓಂ "**
|| ಸೂ. ೧೮ ||

ಮುಖ್ಯಪ್ರಾಣನದ್ದೇಶೆಯಿಂದ ಇತರಗಳಾದ ಪ್ರಾಣಶಬ್ದವಾಚ್ಯಗಳೇ ಇಂದ್ರಿಯಗಳು, ಮುಖ್ಯಪ್ರಾಣನಲ್ಲ, '**ದ್ವಾದಶೈವೇಂದ್ರಿಯಾಣ್ಯಾಹುಃ ಮುಖ್ಯಪ್ರಾಣಸ್ತ್ವನಿಂದ್ರಿಯಂ**' ಎಂದು ಮುಖ್ಯಪ್ರಾಣನದ್ದೇಶೆಯಿಂದ ಇತರರಿಗೆ ಇಂದ್ರಿಯತ್ವವನ್ನೂ ಮುಖ್ಯಪ್ರಾಣನಿಗೆ ಅನಿಂದ್ರಿಯತ್ವವನ್ನೂ ವ್ಯಪದೇಶಮಾಡಿರುವುದರಿಂದ.

**" ಓಂ ಭೇದಶ್ರುತೇಃ ಓಂ "** || ಸೂ. ೧೯ ||

ದ್ವಾದಶಪ್ರಾಣಗಳಿಗೂ ಮುಖ್ಯಪ್ರಾಣನಿಗೂ ಭೇದವನ್ನು ಹೇಳಿರುವುದರಿಂದ ಹನ್ನೆರಡು (೧೨) ಪ್ರಾಣಗಳೇ ಇಂದ್ರಿಯಗಳು.

"ಓಂ ವೈಲಕ್ಷಣ್ಯಾಚ್ಚ ಓಂ" ॥ ಸೂ. ೨೦ ॥

ಪ್ರಾಣಗಳಿಗೂ ಮುಖ್ಯಪ್ರಾಣನಿಗೂ ಜೀವಪ್ರಯತ್ನಾಧೀನತ್ವ, ಜೀವಪ್ರಯತ್ನಾನಧೀನತ್ವ ರೂಪವೈಲಕ್ಷಣ್ಯ ವಿದ್ದಪ್ರಯುಕ್ತ ಅವುಗಳೇ ಇಂದ್ರಿಯಗಳು. ॥ ಸೂ ॥ ೧೮ ॥ ೧೯ ॥ ೨೦ ॥ ॥ ಅಧಿ ॥ ೧೧ ॥

**ಇಂದ್ರಿಯಾಧಿಕರಣವು ಸಮಾಪ್ತವಾಯಿತು.**

---

# ಸಂಜ್ಞಾಧಿಕರಣವು.

**"ಓಂ ಸಂಜ್ಞಾಮೂರ್ತಿಕ್ಲೃಪ್ತಿಸ್ತು ತ್ರಿವೃತ್ಕುರ್ವತಉಪದೇಶಾತ್ ಓಂ"** ॥ ಸೂ ॥ ೨೧ ॥

ನಾಮಪ್ರಪಂಚ, ದೇಹಾದಿರೂಪ ಪ್ರಪಂಚಗಳ ಸೃಷ್ಟಿಯು ಪೃಥಿವ್ಯಪ್‌ತೇಜಸ್ಸುಗಳನ್ನು ಮಿಶ್ರೀಕರಿಸತಕ್ಕ ಶ್ರೀ ಹರಿಯಿಂದಲೇ ಆಗುತ್ತದೆ. ವಿರಿಂಚನಿಂದ ಆಗುವುದಿಲ್ಲ. '**ಸರ್ವಾಣಿ ರೂಪಾಣಿ ವಿಚಿತ್ಯಧೀರಃ ನಾಮಾನಿಕೃತ್ವಾಽಭಿವದನ್ ಯ ಆಸ್ತೇ**' ಎನ್ನುವ ಶ್ರುತಿಯಿದ್ದ ಪ್ರಯುಕ್ತ. ॥ ಸೂ ॥ ೨೧ ॥ ಅಧಿ ॥ ೧೨ ॥

**ಸಂಜ್ಞಾಧಿಕರಣವು ಸಮಾಪ್ತವಾಯಿತು.**

---

# ಮಾಂಸಾಧಿಕರಣವು

**"ಓಂ ಮಾಂಸಾದಿಭೌಮಂ ಯಥಾಶಬ್ದಮಿತರಯೋಶ್ಚ ಓಂ"** ॥ ಸೂ ॥ ೨೨ ॥

ದೇಹದಲ್ಲಿರತಕ್ಕ ಮಾಂಸ ಮೊದಲಾದ ಕಠಿನ ವಸ್ತುವೇ ಪಾರ್ಥಿವವು. ಸರ್ವಶರೀರವಲ್ಲ, ಮಜ್ಜಾದಿಗಳು ಜಲ ತೇಜಸ್ಸುಗಳ ಕಾರ್ಯವೆಂದೂ '**ಯತ್ಕಠಿನಂ ಸಾ ಪೃಥಿವೀ ಯದ್ದ್ರವಂ ತದಾಪೋ ಯದುಷ್ಣಂ ತತ್ತೇಜಃ**' ಇತ್ಯಾದಿ ಶ್ರುತ್ಯನುಸಾರವಾಗಿ ಅಂಗೀಕರಿಸತಕ್ಕುದು.

**"ಓಂ ವೈಶೇಷ್ಯಾತ್ತು ತದ್ವಾದಸ್ತದ್ವಾದಃ ಓಂ"** ॥ ಸೂ ॥ ೨೩ ॥

ಪಾರ್ಥಿವ, ಆಪ್ಯ, ತೈಜಸವೆನ್ನುವ ವ್ಯವಹಾರವು ಭೂಮಿಮೊದಲಾದ ಭೂತ ಸಂಯೋಗಾಧಿಕ್ಯದಿಂದ ಕೂಡುತ್ತದೆ. ॥ ಸೂ ॥ ೨೨ ॥ ೨೩ ॥ ಅಧಿ ॥ ೧೩ ॥

**ಮಾಂಸಾಧಿಕರಣವು ಸಮಾಪ್ತವಾಯಿತು.**

---

ತಥಾ ಪ್ರಾಣಾಃ ಇದು ಮೊದಲಾದ ಸೂತ್ರಗಳ ಅರ್ಥವು ಹಿಂದೆ ಹೇಳಿದ ಪ್ರಕಾರ ಭಾಷ್ಯದಲ್ಲಿಯೇ ಸ್ಪಷ್ಟವಾಗಿರುವುದರಿಂದ ಪುನಃ ಆ ಸೂತ್ರಗಳನ್ನು ಅನುವ್ಯಾಖ್ಯಾನದಲ್ಲಿ ವ್ಯಾಖ್ಯಾನ ಮಾಡದೆ ಪೂರ್ವೋತ್ತರ ಪಕ್ಷ ಯುಕ್ತಿಗಳನ್ನು ಮಾತ್ರ ಸಂಗ್ರಹಿಸಿ ಹೇಳುತ್ತಾರೆ—

**ಮೂ ॥ (ಕರೋತ್ಯನೇನ ಪಾದೇನ) ತತ್ರ ಸ್ಪಷ್ಟಾರ್ಥವಚ್ಛ್ರುತಿಃ ।**
**ವಿಶೇಷಶ್ರುತಿವೈರೂಪ್ಯಂ ಮಾಹಾತ್ಮ್ಯಂ ವ್ಯಕ್ತಸದ್ಗುಣಃ ॥ ೨ ॥**
**ದೃಷ್ಟಾಯುಕ್ತಿಃ ಸಮಾನತ್ವಂ ಕರ್ತೃಶಕ್ತಿರ್ವಿಮಿಶ್ರಿ(ಶ್ರ)ತಾ ।**
**ಯುಕ್ತಯಃ ಪೂರ್ವಪಕ್ಷೇಷು ಸುನಿರ್ಣೀತಾಸ್ತು ತಾದೃಶಾಃ ॥**
**ಯುಕ್ತಯೋ ನಿರ್ಣಯಸ್ಯೈವ ಸ್ವಯಂ ಭಗವತೋದಿತಾಃ ॥ ೩ ॥**

**ಅ ॥** ತತ್ರ=ಆ ನಾಲ್ಕನೇ ಪಾದದಲ್ಲಿ, * (೧ನೇ ಅಧಿಕರಣದಲ್ಲಿ) ಸ್ಪಷ್ಟಾರ್ಥವಚ್ಛ್ರುತಿಃ= ಸ್ಪಷ್ಟಾರ್ಥವುಳ್ಳ ಶ್ರುತಿಯು, (೨. ೩. ೪. ೫.) ವಿಶೇಷಶ್ರುತಿವೈರೂಪ್ಯಂ=ವಿಶೇಷಶ್ರುತಿವಿರೋಧವು, (೬. ೭.) ಮಾಹಾತ್ಮ್ಯಂ=ವಿಷ್ಣುವಿಗೆ ಮಹಿಮಾತಿಶಯವು, (೮.) ವ್ಯಕ್ತಸದ್ಗುಣಃ=ಅಭಿವ್ಯಕ್ತ ಸದ್ಗುಣಗಳುಳ್ಳವನು, (೯. ೧೦.) ದೃಷ್ಟಾಯುಕ್ತಿಃ = ಪ್ರಾಣಾಣುತ್ವವಿಷಯದಲ್ಲಿ ನಿಶ್ಚಿತವಾದ ಸಕಲಜಗದ್ವ್ಯಾಪ್ತಿಯು ಕೂಡದಿರುವಿಕೆಯು (೧೧ ) ಸಮಾನತ್ವಂ=ಈಶಸಾಮ್ಯವು. (೧೨.) ಕರ್ತೃಶಕ್ತಿಃ=ಈಶ್ವರನಿಗೇನೇ ಕರ್ತೃತ್ವಶಕ್ತಿಯು. (೧೩.) ವಿಮಿಶ್ರತಾ=ಪರಸ್ಪರ ಮಿಶ್ರೀಭಾವವು, (ಇವುಗಳು) ಪೂರ್ವಪಕ್ಷೇಷು=ಪೂರ್ವಪಕ್ಷಗಳಲ್ಲಿ, ಯುಕ್ತಯಃ=ಯುಕ್ತಿಗಳು. ಸುನಿರ್ಣೀತಾಸ್ತು=ಚೆನ್ನಾಗಿ ನಿರ್ಣೀತಗಳಾದ, ತಾದೃಶಾಃ=ಹಿಂದ ಹೇಳಿದ ಶಬ್ದಗಳಿಂದಲೇ ವಾಚ್ಯಗಳಾದ, ಯುಕ್ತಯಃ=ಯುಕ್ತಿಗಳು, ಸ್ವಯಮೇವ = ತಾನಾಗಿಯೇ, ಭಗವತಾ=ವೇದವ್ಯಾಸರಿಂದ, ನಿರ್ಣಯಸ್ಯ=ಸಿದ್ಧಾಂತಕ್ಕಾಗಿಯೇ, ಉದಿತಾಃ=ಹೇಳಲ್ಪಟ್ಟವೆ.

**ತಾ ॥** ೧ನೇ ಪ್ರಾಣೋತ್ಪತ್ತ್ಯಧಿಕರಣದಲ್ಲಿ **'ಪ್ರಾಣಾ ಏವೇದಮಗ್ರ ಆಸುಃ ಅಥ ಪ್ರಾಣಾ ಏವಾನಾದಯಃ'** ಎಂದು, **'ಏತಸ್ಮಾಜ್ಜಾಯತೇ ಪ್ರಾಣಃ'** ಎಂದೂ ಶ್ರುತಿ ವಿರೋಧವಿದ್ದುದರಿಂದ ಪ್ರಾಣಗಳಿಗೆ ಉತ್ಪತ್ತಿಯಿದೆಯೋ ಇಲ್ಲವೋ ಎಂದು ಸಂದೇಹವು ಬಂದರೆ-ಉತ್ಪತ್ತಿಯಿಲ್ಲವೆಂದು ಪೂರ್ವಪಕ್ಷವು, ಉತ್ಪತ್ತಿಯಿದೆ ಎಂದು ಸಿದ್ಧಾಂತವು. ಅದರಲ್ಲಿ 'ಸ್ಪಷ್ಟಾರ್ಥವಚ್ಛ್ರುತಿಃ' ಎನ್ನುವುದು ಪೂರ್ವಪಕ್ಷಸಿದ್ಧಾಂತಯುಕ್ತಿಯು. ಅಂದರೆ ಪ್ರಾಣಗಳಿಗೆ ಉತ್ಪತ್ತಿಯನ್ನು ಅಂಗೀಕರಿಸಿದರೆ— ಅನಾದಿತ್ವರೂಪಸ್ಪಷ್ಟಾರ್ಥವನ್ನು ಪ್ರತಿಪಾದಿಸತಕ್ಕ **'ಪ್ರಾಣಾ ಏವಾನಾದಯಃ'** ಎಂದು ಪ್ರಾಣರೂಪಅರ್ಥವಿಶೇಷವನ್ನು ಅಧಿಕರಿಸಿ ಪ್ರವೃತ್ತವಾದ ಶ್ರುತಿಯಿಂದ ವಿರೋಧವು. ಏವಂಚ ಸ್ಪಷ್ಟಾರ್ಥವುಳ್ಳ ಶ್ರುತಿಯಿಂದ ಪ್ರಾಣಗಳಿಗೆ ಅನಾದಿತ್ವವನ್ನು ಅಂಗೀಕರಿಸುತ್ತಿರಲು ವಿಷ್ಣುವಿಗೆ ಸರ್ವಕರ್ತೃತ್ವವು ಯುಕ್ತವಲ್ಲ, ಎಂದರೆ— ಹೀಗೆ ಹೇಳಕೂಡದು. ಏಕೆಂದರೆ— **'ಆತ್ಮೈವೇದಮಗ್ರ ಆಸೀತ್ ಸ ಪ್ರಾಣಮಸೃಜತ ಸ ಪ್ರಾಣಾನ್'** ಇತ್ಯಾದಿ ವಚನಗಳದ್ವೇಶಿಯಿಂದ ಪ್ರಾಣಗಳಿಗೆ ಅನಾದಿತ್ವವನ್ನು ಅಂಗೀಕರಿಸಿದರೇನೇ ಸ್ಪಷ್ಟಾರ್ಥವುಳ್ಳ ವಿಶೇಷ ಶ್ರುತಿಯಿಂದ ಅಂದರೆ ಪ್ರಾಣಗಳಿಗೆ ಉತ್ಪತ್ತಿಯನ್ನು ಪ್ರತಿಪಾದಿಸತಕ್ಕ ಶ್ರುತಿಯಿಂದ ವಿರೋಧವು. **'ಇದಂ ಸರ್ವಮಸೃಜತ'** ಎಂದು ಸಾಮಾನ್ಯ ವಚನಕ್ಕೆ ಸಿದ್ಧಾಂತದಲ್ಲಿ ಆಧಿಕ್ಯವು

---

* ಪೂರ್ವಪಕ್ಷಸಿದ್ಧಾಂತಯುಕ್ತಿಗಳ ವಿವರಣವನ್ನು ಶ್ರೀಮದಾಚಾರ್ಯರೇ ನ್ಯಾಯವಿವರಣದಲ್ಲಿ ವಿವರಿಸಿರುವುದರಿಂದ ಟೀಕಾಕಾರರು ನ್ಯಾಯಸುಧಾದಲ್ಲಿ ವಿವರಿಸಲಿಲ್ಲ. ಆದಕಾರಣ ನ್ಯಾಯವಿವರಣಾನುಸಾರವಾಗಿ ವಿವರಿಸುವೆವು.

ವಿಶೇಷಶ್ರುತಿಮಾತ್ರದ್ವೇಶಿಯಿಂದ ಸೂಕ್ಷ್ಮರೂಪವಾದ ಅನಾದಿತ್ವವನ್ನು ಪ್ರತಿಪಾದಿಸುವುದರಿಂದ ಸಾವಕಾಶವಾದ ಉಭಯಶ್ರುತಿಗೆ ಪ್ರಾಬಲ್ಯವು. ಏವಂಚ ಸಾಮಾನ್ಯ ಶ್ರುತಿಸಾಹಿತ್ಯದಿಂದ ಪ್ರಬಲವಾದ ಸ್ಪಷ್ಟಾರ್ಥವುಳ್ಳ ವಿಶೇಷಶ್ರುತಿಯಿಂದ ಪ್ರಾಣೋತ್ಪತ್ತಿಯು ಸಿದ್ಧಿಸುವ ಪ್ರಯುಕ್ತ ಈಶ್ವರನಿಗೆ ಶ್ರುತಿಸಮನ್ವಯದಿಂದ ಜಗತ್ಕರ್ತೃತ್ವವು ಯುಕ್ತವು. (2) ೨ನೇ ತತ್ಪ್ರಾಗಧಿಕರಣದಲ್ಲಿ '**ಏತಸ್ಮಾಜ್ಜಾಯತೇ ಪ್ರಾಣೋ ಮನಃ**' ಎಂದೂ, '**ತತ್ರ ನಿತ್ಯಂ ಮನೋಽನಾದಿತ್ವಾತ್**' ಎನ್ನುವ ಶ್ರುತಿವಿರೋಧವಿಂದ ಮನಸ್ಸಿಗೆ ಉತ್ಪತ್ತಿ ಇದೆಯೋ, ಇಲ್ಲವೋ ಎಂದು ಸಂದೇಹವು ಬಂದರೆ ಉತ್ಪತ್ತಿಯಿಲ್ಲವೆಂದು ಪೂರ್ವಪಕ್ಷವು, ಉತ್ಪತ್ತಿಯಿದೆ ಎಂದು ಸಿದ್ಧಾಂತವು. ಅದರಲ್ಲಿ 'ವಿಶೇಷಶ್ರುತಿವೈರೂಪ್ಯಂ' ಎಂದು ಪೂರ್ವಪಕ್ಷಸಿದ್ಧಾಂತ ಯುಕ್ತಿಯು. ಅಂದರೆ— ಮನಸ್ಸಿಗೆ ಉತ್ಪತ್ತಿಯಿದ್ದರೆ 'ನಿತ್ಯಂ ಮನೋಽನಾದಿತ್ವಾತ್' ಎನ್ನುವ ವಿಶೇಷಶ್ರುತಿಯಿಂದ ವಿರೋಧವು. ಏವಂಚ ವಿಶೇಷಶ್ರುತಿಯ ವಿರೋಧವಿದ್ದುದರಿಂದ ಮನಸ್ಸಿಗೆ ಅನಾದಿತ್ವವಿದ್ದುದರಿಂದ ವಿಷ್ಣುವಿಗೆ ಸರ್ವಕರ್ತೃತ್ವವು ಯುಕ್ತವಲ್ಲ. ಎಂದರೆ— ಹೀಗೆ ಹೇಳಕೂಡದು. ಮನೋಽನಾದಿತ್ವಕ್ಕೆ '**ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ**' ಎನ್ನುವ ವಿಶೇಷಶ್ರುತಿವಿರೋಧವಿದೆ. ಅನಾದಿತ್ವ ಶ್ರುತಿವಿರೋಧವಿಲ್ಲ. ಆ ಶ್ರುತಿಯು ಸೂಕ್ಷ್ಮರೂಪದಿಂದ ಅನಾದಿತ್ವಪರವಾಗಿದೆ. ಏವಂಚ ಮನಸ್ಸಿಗೆ ಉತ್ಪತ್ತಿಪ್ರತಿಪಾದಕವಾದ ವಿಶೇಷಶ್ರುತಿಯಿಂದ ವಿರೋಧವಿದ್ದಪ್ರಯುಕ್ತ ಮನಸ್ಸಿಗೆ ಅನಾದಿತ್ವವಿಲ್ಲ. ಆದ ಪ್ರಯುಕ್ತ ಶ್ರೀಹರಿಗೆ ಸರ್ವಕರ್ತೃತ್ವವು ಯುಕ್ತವು. (3) ೩ನೇ ತತ್ಪೂರ್ವಕತ್ವಾಧಿಕರಣದಲ್ಲಿ '**ಮನಃ ಸರ್ವೇಂದ್ರಿಯಾಣಿ ಚ, ನ ಹ್ಯೇಷೋತ್ಪದ್ಯತೇ**' ಎನ್ನುವ ಶ್ರುತಿವಿವಾದದಿಂದ ವಾಗಿಂದ್ರಿಯವು ಹುಟ್ಟುತ್ತದೋ ಇಲ್ಲವೋ ಎಂದು ಸಂದೇಹವು ಬಂದರೆ ಹುಟ್ಟುವುದಿಲ್ಲವೆಂದು ಪೂರ್ವಪಕ್ಷವು. ಹುಟ್ಟುತ್ತದೆಂದು ಸಿದ್ಧಾಂತವು. ಅದರಲ್ಲಿ 'ವಿಶೇಷಶ್ರುತಿವೈರೂಪ್ಯಂ' ಎನ್ನುವುದೇ ಪೂರ್ವಪಕ್ಷಸಿದ್ಧಾಂತ ಯುಕ್ತಿಯು. ಅಂದರೆ ವಾಗುತ್ಪತ್ತಿಗೆ '**ವಾಗ್ವಾ ಅನಿತ್ಯಾ**' ಎನ್ನುವ ವಿಶೇಷಶ್ರುತಿಯಿಂದ ವಿರೋಧವು. ಏವಂಚ ವಿಶೇಷಶ್ರುತಿವಿರೋಧವಿದ್ದುದರಿಂದ ವಾಗಿಂದ್ರಿಯಕ್ಕೆ ಅನಾದಿತ್ವವನ್ನು ಅಂಗೀಕರಿಸುತ್ತಿರಲು ಈಶನಿಗೆ ಸರ್ವಕರ್ತೃತ್ವವು ಅಯುಕ್ತವು. ಎಂದರೆ— ಹಾಗೆ ಹೇಳಕೂಡದು. ವಾಗನಾದಿತ್ವಕ್ಕೆ '**ಮನಸೋ ವಾವ ವಾಗುತ್ಪದ್ಯತೇ, ವಾಚೋ ವ್ಯಾಹರಣಾಂ**' ಎನ್ನುವ ವಿಶೇಷಶ್ರುತಿವಿರೋಧವಿದೆ. ವಾಗಿಂದ್ರಿಯಕ್ಕೆ ಉತ್ಪತ್ತಿಯಿಲ್ಲವೆಂದು ಹೇಳಕೂಡದು. '**ಮನಸೋ ವಾವ ವಾಕ್**' ಎನ್ನುವ ಮನೋಜನ್ಯತ್ವ ಶ್ರುತಿವಿರೋಧವಿದೆ. ವಾಕ್‌ಪದವು ವ್ಯಾಹರಣಪರವೆಂದು ಹೇಳಕೂಡದು. '**ವಾಚೋ ವ್ಯಾಹರಣಂ**' ಎಂದು ವ್ಯಾಹರಣಹೇತುತ್ವವು ಶ್ರುತವಾಗಿದೆ. ಏವಂಚ ಉದಾಹೃತವಚನಸಾಹಿತ್ಯದಿಂದ ಪ್ರಬಲವಾದ ವಿಶೇಷಶ್ರುತಿಯಿಂದ ವಾಗಿಂದ್ರಿಯಕ್ಕೆ ಉತ್ಪತ್ತಿಯು ಸಿದ್ಧಿಸುವ ಪ್ರಯುಕ್ತ ಶ್ರೀಹರಿಗೆ ಜಗತ್ಕಾರಣತ್ವವು ಯುಕ್ತವು. (4) ೪ನೇ ಸಪ್ತಗತ್ಯಧಿಕರಣದಲ್ಲಿ '**ಸಪ್ತ ಪ್ರಾಣಾಃ ಪ್ರಭವಂತಿ ತಸ್ಮಾತ್**', '**ದಶೇಮೇ ಪುರುಷೇ ಪ್ರಾಣಾಃ**' ಎನ್ನುವ ಶ್ರುತಿವಿಗಾನದಿಂದ ಪ್ರಾಣಗಳು ಏಳೋ ಅಥವಾ ಹತ್ತೋ ಎಂದು ಸಂದೇಹ ಬಂದರೆ— ಪ್ರಾಣಗಳು ಏಳೇ, ಹತ್ತೇ ಎಂದು ಸಂಖ್ಯಾ ನಿರ್ಣಯವು ಆಗುವುದಿಲ್ಲ ಎಂದು ಪೂರ್ವಪಕ್ಷವು. ಹತ್ತೇ ಎಂದು ನಿರ್ಣಯವು ಎಂದು ಸಿದ್ಧಾಂತವು. ಅದರಲ್ಲಿ 'ವಿಶೇಷಶ್ರುತಿವೈರೂಪ್ಯಂ' ಎನ್ನುವುದೇ ಪೂರ್ವಪಕ್ಷಸಿದ್ಧಾಂತ ಯುಕ್ತಿಯು. ಅಂದರೆ- '**ದಶೇಮೇ ಪುರುಷೇ ಪ್ರಾಣಾಃ, ಸಪ್ತ ಪ್ರಾಣಾಃ**' ಎಂದು ಪ್ರಾಣಗತ ದಶತ್ವಸಪ್ತತ್ವರೂಪಸಂಖ್ಯಾವಿಶೇಷಶ್ರುತಿಗಳಿಗೇನೇ ಪರಸ್ಪರ ವಿರೋಧವು. ತಥಾಚ ದಶತ್ವಸಪ್ತತ್ವರೂಪ ವಿಶೇಷಗಳನ್ನು ಪ್ರತಿಪಾದಿಸತಕ್ಕ ಶ್ರುತಿಗಳಿಗೆ ಪರಸ್ಪರ ವಿರೋಧದಿಂದ ಅಪ್ರಾಮಾಣ್ಯ

ಬರುವ ಪ್ರಯುಕ್ತ ಶ್ರುತಿಯಿಂದ ಈಶ್ವರನಿಗೆ ಜಗತ್ಕರ್ತೃತ್ವವು ಸಿದ್ಧಿಸುವುದಿಲ್ಲ. ಎಂದರೆ— ಹಾಗೆ ಹೇಳಕೂಡದು. ಸಂಖ್ಯಾಶ್ರುತಿಗಳಿಗೆ ಪರಸ್ಪರ ವಿರೋಧದಿಂದ ಅಪ್ರಾಮಾಣ್ಯವಿಲ್ಲ. ದಶತ್ವ ಶ್ರುತಿಯು ಪಂಚಕರ್ಮೇಂದ್ರಿಯ, ಪಂಚಜ್ಞಾನೇಂದ್ರಿಯಪರವಾಗಿದೆ. ಸಪ್ತತ್ವಶ್ರುತಿಯು ಮನೋಬುದ್ಧಿಸಹಿತವಾದ ಶ್ರೋತ್ರಾದಿ ಸಪ್ತ (ಏಳು) ಜ್ಞಾನೇಂದ್ರಿಯಪರವಾಗಿದೆ. ಹೀಗೆ ವಿಷಯವೈಲಕ್ಷಣ್ಯವಿದೆ. **'ಸಪ್ತ ಪ್ರಾಣಾಃ'** ಎಂದು ಹೇಳಲ್ಪಟ್ಟವುಗಳಿಗೆ ಜ್ಞಾನೇಂದ್ರಿಯತ್ವ ವನ್ನು ಏಕೆ ಇಟ್ಟುಕೊಳ್ಳಬೇಕು? ಎಂದು ಹೇಳಕೂಡದು. ಶ್ರೋತ್ರ, ಚಕ್ಷುಸ್ಸು, ಸ್ಪರ್ಶನ, ರಸನ, ಘ್ರಾಣ, ಮನಸ್ಸು, ಬುದ್ಧಿರೂಪಗಳಾದವುಗಳು ಪ್ರತಿಶರೀರದಲ್ಲಿಯೂ ಏಳು ಏಳು ನಿಹಿತಗಳಾಗಿವೆ ಎಂದು **'ಗುಹಾಶಯಾಂ ನಿಹಿತಾಃ ಸಪ್ತ ಸಪ್ತ'** ಎನ್ನುವ ಶ್ರುತಿಯಲ್ಲಿ ಸಪ್ತತ್ವ ಸಂಖ್ಯೆಯು ಜ್ಞಾನಸಾಧನವಾದ ಇಂದ್ರಿಯದಲ್ಲಿರತಕ್ಕದು ಎಂದು ವಿಶೇಷಣ ಕೊಟ್ಟದೆ. ಏವಂಚ ಸಂಖ್ಯಾವಿಶೇಷಶ್ರುತಿಗಳ ವಿಲಕ್ಷಣ ವಿಷಯದಿಂದ ಕೂಡಿರುವ ಪ್ರಯುಕ್ತ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲದಿರುವುದರಿಂದ ಸಂಖ್ಯಾವಿಶೇಷದ ನಿರ್ಣಯವಾಗುತ್ತದೆ. ಆದುದರಿಂದ ಶ್ರುತಿಪ್ರಾಮಾಣ್ಯವು ಕೂಡುವ ಪ್ರಯುಕ್ತ ಶ್ರೀ ಹರಿಗೆ ಸರ್ವಕರ್ತೃತ್ವವು ಯುಕ್ತವು. (5) ೫ನೇ ಅಣ್ವಧಿಕರಣದಲ್ಲಿ **'ದಿವೀವ ಚಕ್ಷುರಾತತಂ'** **'ಅಣುಭಿಃ ಪಶ್ಯತಿ'** ಎನ್ನುವ ಶ್ರುತಿವಿಗಾನದಿಂದ ಪ್ರಾಣಗಳು ವ್ಯಾಪ್ತಗಳೋ ಅಣುಗಳೋ ಎಂದು ಸಂದೇಹವು ಬಂದರೆ— ವ್ಯಾಪ್ತಗಳೆಂದು ಪೂರ್ವಪಕ್ಷವು. ಅಣುಗಳೇ ಎಂದು ಸಿದ್ಧಾಂತವು. ಅದರಲ್ಲಿಯೂ ವಿಶೇಷಶ್ರುತಿ ವೈರೂಪ್ಯಂ ಎನ್ನುವುದೇ ಪೂರ್ವಪಕ್ಷಸಿದ್ಧಾಂತಯುಕ್ತಿಯು. ಅಂದರೆ ಪ್ರಾಣಾಣುತ್ವಕ್ಕೆ **'ದಿವೀವ ಚಕ್ಷುರಾತತಂ'** ಎಂದು ವ್ಯಾಪ್ತ್ಯಾಖ್ಯವಾದ ವಿಶೇಷವನ್ನು ಹೇಳತಕ್ಕ ಶ್ರುತಿಯಿಂದ ವಿರೋಧವು. ಏವಂಚ ವಿಶೇಷಶ್ರುತಿವಿರೋಧವಿಲ್ಲದಿರುವಪ್ರಯುಕ್ತ ಅಣುತ್ವವು ಇಲ್ಲದಿರುವುದರಿಂದ ಅಣುತ್ವಶ್ರುತಿಗೆ ಪ್ರಾಮಾಣ್ಯವೇ ಇಲ್ಲ. ಆದಪ್ರಯುಕ್ತ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವಲ್ಲ ಎಂದರೆ— ಹೀಗೆ ಹೇಳಕೂಡದು. ದಿವೀವ ಎನ್ನುವ ಶ್ರುತಿಗಿಂತಲೂ **'ಅಣೂನಿ ವಾ ಇಂದ್ರಿಯಾಣಿ ತೇಷಾಂ ಪ್ರಕಾಶೋ ವ್ಯಾತತಃ'** ಎಂದು ಅಣುತ್ವವಾಚಕ ವಾದ ವಿಶೇಷಶ್ರುತಿಯಿಂದ ವಿರೋಧವಿದೆ. ಏವಂಚ ವಿಶೇಷಶ್ರುತಿವಿರೋಧವಿದ್ದಪ್ರಯುಕ್ತ ಪ್ರಾಣಗಳಿಗೆ ಅಣುತ್ವವು ಸಿದ್ಧವಾಗುವಪ್ರಯುಕ್ತ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕಾರಣ ತ್ವವು ಯುಕ್ತವು. (6) ೬ನೇ ಶ್ರೇಷ್ಠಾಧಿಕರಣದಲ್ಲಿ **'ನೈಷ ಪ್ರಾಣ ಉದೇತಿ'** **'ಆತ್ಮತ ಏಷ ಪ್ರಾಣೋ ಜಾಯತೇ'** ಎನ್ನುವ ಶ್ರುತಿವಿಗಾನದಿಂದ ಮುಖ್ಯಪ್ರಾಣನು ಉತ್ಪತ್ತಿಯುಳ್ಳವನೋ ಅಲ್ಲವೋ ಎಂದು ಸಂದೇಹವು ಬಂದರೆ— ಉತ್ಪತ್ತಿಯುಳ್ಳವನಲ್ಲವೆಂದು ಪೂರ್ವಪಕ್ಷವು, ಉತ್ಪತ್ತಿ ಯುಳ್ಳವನೇ ಎಂದು ಸಿದ್ಧಾಂತವು. ಅದರಲ್ಲಿ 'ಮಾಹಾತ್ಮ್ಯಂ' ಎನ್ನುವುದು ಪೂರ್ವಪಕ್ಷಸಿದ್ಧಾಂತ ಯುಕ್ತಿಯು. ಅಂದರೆ— **'ಯತ್ಪ್ರಾಪ್ತಿರ್ಯತ್ಪರಿತ್ಯಾಗ ಉತ್ಪತ್ತಿರ್ಮರಣಂ ತಥಾ । ತಸ್ಯೋತ್ಪತ್ತಿರ್ಮೃತಿಶ್ಚೈವ ಕಥಂ ಪ್ರಾಣಸ್ಯ ಯುಜ್ಯತೇ'** ಇತ್ಯಾದಿ ಮಹಿಮಾಪ್ರತಿ ಪಾದಕವಚನವಿದ್ದುದರಿಂದ ಮುಖ್ಯಪ್ರಾಣನಿಗ ಉತ್ಪತ್ತಿಯಿಲ್ಲ. ಏವಂಚ ಸರ್ವಜನ್ಮಾದಿಹೇತುತ್ವ ರೂಪ ಮಾಹಾತ್ಮ್ಯರೂಪಯುಕ್ತಿಸಹಿತವಾದ ಅನಾದಿತ್ವಶ್ರುತಿವಿರೋಧದಿಂದ ಉತ್ಪತ್ತಿಶ್ರುತಿಗೆ ಪ್ರಾಮಾಣ್ಯವೇ ಇಲ್ಲದಿರುವುದರಿಂದ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತ ವಲ್ಲ ಎಂದರೆ ಹೀಗೆ ಹೇಳಕೂಡದು. **'ಮಹತ್ಮ್ಯಾನ್ಮಹತಾಂ ವಿಷ್ಣುಃ ಕರ್ತಾ ಪ್ರಾಣಸ್ಯ ಚೈಕರಾಟ್ । ಕಿಂ ನಾಮ ನ ಸೃಜೇದೇಷ ಯೇನ ಶಕ್ತ್ಯೇದಮಾವೃತಂ'** ॥ ಯಾವ ಶ್ರೀ ಹರಿಯಿಂದ ತನ್ನ ಶಕ್ತಿಯಿಂದಲೇ ಈ ಎಲ್ಲಾ ಜಗತ್ತು **ವಶೀಕೃತವೇ** ಆಗಿದೆಯೋ ಇಂತಹ ವಿಷ್ಣುವು ಯಾವುದನ್ನು ಸೃಷ್ಟಿಮಾಡಲಾರನು. ಸರ್ವವನ್ನೂ ಸೃಷ್ಟಿಮಾಡುವನು, ಎನ್ನುವ

ಶ್ರುತಿಯುದ್ದೇಶಿಯಿಂದ ಪ್ರಾಣನದ್ದೇಶಿಯಿಂದಲೂ ವಿಷ್ಣುವಿಗೆ ಅಧಿಕಮಾಹಾತ್ಮ್ಯವು ಉಕ್ತವಾಯಿತು. ಏವಂಚ ಪ್ರಾಣನು ಪ್ರಾಣೋತ್ಪಾದಕತ್ವರೂಪ ಅತಿ ಮಾಹಾತ್ಮ್ಯವುಳ್ಳ ವಿಷ್ಣುವಿನಿಂದ ಹುಟ್ಟಿದ್ದಾನೆನ್ನುವುದು ಕೂಡುವಪ್ರಯುಕ್ತ ಶ್ರುತಿಸಮನ್ವಯದಿಂದ ಶ್ರೀ ಹರಿಗೆ ಜಗತ್ಕಾರಣತ್ವವು ಯುಕ್ತವು. (7) ೭ನೇ ಚಕ್ಷುರಾದ್ಯಧಿಕರಣದಲ್ಲಿ **'ನ ಪ್ರಾಣಃ ಕಿಂಚಿದಾಶ್ರಿತಃ'** **'ಪ್ರಾಣಸ್ಯೈತದ್ವಶೇಸರ್ವಂ ಪ್ರಾಣಃ ಪರವಶೇಸ್ಥಿತಃ'** ಎನ್ನುವ ಶ್ರುತಿ ವಿವಾದದಿಂದ ಮುಖ್ಯಪ್ರಾಣನು ಸ್ವತಂತ್ರನೋ, ಪರತಂತ್ರನೋ ಎಂದು ಸಂದೇಹವು ಬಂದರೆ— ಸ್ವತಂತ್ರನೇ ಎಂದು ಪೂರ್ವಪಕ್ಷವು. ಪರತಂತ್ರನೇ ಎಂದು ಸಿದ್ಧಾಂತವು. ಈ ಅಧಿಕರಣದಲ್ಲಿಯೂ ಮಾಹಾತ್ಮ್ಯಂ ಎನ್ನುವುದೇ ಪೂರ್ವಪಕ್ಷ ಸಿದ್ಧಾಂತಯುಕ್ತಿಯು. ಅಂದರೆ— **'ಯದಾಶ್ರಯಾದಸ್ಯ ಚೇಷ್ಟಾ ಸೋಽನ್ಯಂ ಕಥಮುಪಾಶ್ರಯೇತ್'** ಎಂದು ಹೇಳಿದ ಸರ್ವ ಚೇಷ್ಟಕತ್ವರೂಪವಾದ ಮಹಿಮೆಯು ಇದ್ದುದರಿಂದ ಸ್ವತಂತ್ರನೇ ಎಂದು ಪೂರ್ವಪಕ್ಷವು ಬಂದರೆ— **'ಸರ್ವಕರ್ತಾಽಪಿ ಸನ್ ಪ್ರಾಣಃ ಪರಮಾಧಾರತಃ ಸ್ಥಿತಃ'** ಮುಖ್ಯಪ್ರಾಣನು ಸರ್ವ ಕರ್ತನಾದಾಗ್ಯೂ ಶ್ರೀ ಹರಿಯನ್ನು ಆಶ್ರಯಿಸಿರುತ್ತಾನೆಂದು ಪರಮತ್ವರೂಪ ಮಾಹಾತ್ಮ್ಯವಿದ್ದುದರಿಂದಲೇ ಪರತಂತ್ರನು ಆದಕಾರಣ ಶ್ರೀ ಹರಿಗೆ ಸರ್ವ ಜಗತ್ಕಾರಣತ್ವವು ಯುಕ್ತವು. (8) ೮ನೇ ಪಂಚವೃತ್ತ್ಯಧಿಕರಣದಲ್ಲಿ **'ಸರ್ವೇ ವಾ ಏತೇ ಮುಖ್ಯದಾಸಾಃ'** **'ಮುಖ್ಯಸ್ಯೈವ ಸ್ವರೂಪಾಣಿ'** ಎನ್ನುವ ಶ್ರುತಿ ವಿವಾದದಿಂದ ಪ್ರಾಣಾದಿಗಳು ಐವರು ಮುಖ್ಯಪ್ರಾಣನ ದಾಸರೋ, ಸ್ವರೂಪಗಳೋ, ಎಂದು ಸಂದೇಹವು ಬಂದರೆ, ದಾಸ(ಭೃತ್ಯ)ರೇ ಎಂದಾಗಲೀ, ಸ್ವರೂಪಗಳೇ ಎಂದಾಗಲೀ, ಅನ್ಯತರಪಕ್ಷ ನಿಯಮವೇ ಎಂದು ಪೂರ್ವಪಕ್ಷವು ಉಭಯರೂಪರೆಂದು ಸಿದ್ಧಾಂತವು. ಅದರಲ್ಲಿ ವ್ಯಕ್ತ ಸದ್ಗುಣಃ ಎಂದು ಪೂರ್ವಪಕ್ಷಸಿದ್ಧಾಂತ ಯುಕ್ತಿಯು. ಅಂದರೆ— **'ಪ್ರಾಣೋಽಪಾನೋ ವ್ಯಾನಃ ಉದಾನಃ ಸಮಾನಃ'** ಎಂದು ಪ್ರಾಣಾದಿ ಐವರಿಗೆ **'ಪಾಯೂಪಸ್ಥೇ ಅಪಾನಂ ಚಕ್ಷುಃ ಶ್ರೋತ್ರೇ ಮುಖನಾಸಿಕಾಭ್ಯಾಂ ಪ್ರಾಣಃ ಸ್ವಯಂ ಪ್ರವಿಷ್ಟತೇ ಮಧ್ಯೇ ತೇ ಸಮಾನಃ ಏಷ ಹ್ಯೇತದ್ಧುತಮನ್ನಂ ಸಮಂ ನಯತಿ ತಸ್ಮಾದೇತಾಃ ಸಪ್ತಾರ್ಚಿಷೋ ಭವಂತಿ'** ಇತ್ಯಾದಿ ವ್ಯಕ್ತಸದ್ಗುಣತ್ವವಿದ್ದಪ್ರಯುಕ್ತ ಮುಖ್ಯಪ್ರಾಣನ ಸ್ವರೂಪತ್ವವೇ. ದಾಸತ್ವವಲ್ಲ. ದಾಸರಿಗೂ ಸದ್ಗುಣಗಳು ವ್ಯಕ್ತಗಳಾಗುವುದಾದರೆ ಮುಖ್ಯಪ್ರಾಣನ ಸಾಮ್ಯವೇ ಬರುವುದರಿಂದ ದಾಸತ್ವವೇ ಬಾರದೆ ಹೋಗಬೇಕಾಗುವುದು. ಏವಂಚ ವ್ಯಕ್ತಸದ್ಗುಣಗಳಿಂದ ಪ್ರಾಣಾದಿ ಐವರಿಗೆ ಮುಖ್ಯಪ್ರಾಣ ಸ್ವರೂಪತ್ವವನ್ನು ಅಂಗೀಕರಿಸಬೇಕಾಗುತ್ತಿರಲು, ದಾಸತ್ವ ಶ್ರುತಿಗೆ ಅಪ್ರಾಮಾಣ್ಯವಿದ್ದಪ್ರಯುಕ್ತ ಶ್ರುತಿ ಸಮನ್ವಯದಿಂದ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವಲ್ಲ ಎಂದರೆ— ಹೀಗೆ ಹೇಳಕೂಡದು. ಏಕೆಂದರೆ— **'ಅಶೇಷಗುಣಪೂರ್ಣಾನಿ ಮುಖ್ಯರೂಪಾಣಿ ಪಂಚ ಚ। ತದ್ದಾಸಾಃ ಪಂಚಚಾನ್ಯೇಽಪಿ ಪ್ರಾಣಾದ್ಯಾಃ ಸದ್ಗುಣೈರ್ಯುತಾಃ'।** ಎನ್ನುವ ಶ್ರುತಿಯುದ್ದೇಶಿಯಿಂದ ಪ್ರಾಣಾದಿ ಸ್ವರೂಪವುಳ್ಳ ಮುಖ್ಯಪ್ರಾಣನಿಗೆ ದಾಸರದ್ದೇಶಿಯಿಂದಲೂ ವ್ಯಕ್ತ ಸದ್ಗುಣತ್ವವಿದೆ. ಅಂತೂ ಮುಖ್ಯಪ್ರಾಣನ ದಾಸರಾದ ಪ್ರಾಣಾದಿಗಳಿಗೆ ವ್ಯಕ್ತ ಸದ್ಗುಣತ್ವವಿದ್ದರೂ ಮುಖ್ಯಪ್ರಾಣನ ಸಾಮ್ಯವು ಬರಬೇಕಾದೀತು ಎನ್ನುವುದು ಇಲ್ಲ. ಏವಂಚ ಮುಖ್ಯಪ್ರಾಣನ ಭೃತ್ಯರಾದ ಪ್ರಾಣಾದಿಗಳದ್ದೇಶಿಯಿಂದ ಸ್ವರೂಪಗಳಿಗೆ ಅಧಿಕ ವ್ಯಕ್ತ ಸದ್ಗುಣತ್ವವಿದ್ಯಪ್ರಯುಕ್ತ ಆಧಿಕ್ಯವು ಕೂಡುವುದರಿಂದ ಪ್ರಾಣಾದಿಗಳಿಗೆ ದಾಸತ್ವ-ಸ್ವರೂಪತ್ವಗಳು ಕೂಡುವುದು. ಆದಕಾರಣ ಶ್ರುತಿ ಪ್ರಾಮಾಣ್ಯವು ಉಪಪನ್ನವಾಗುವುದರಿಂದ ಶ್ರುತಿ ಸಮನ್ವಯದಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವು. (9) ೯ನೇ ಅಣ್ವಧಿಕರಣದಲ್ಲಿ **'ಪ್ರಾಣ ಏವಾಥಸ್ತಾತ್ ಅಣಾನ್ನೈತತ್ಸ್ಪೃಶ್ಯತೇ'** ಇತ್ಯಾದಿ ಶ್ರುತಿವಿಗಾನದಿಂದ ಮುಖ್ಯಪ್ರಾಣನು ವ್ಯಾಪ್ತನೋ, ಅಲ್ಲವೋ?

ಎಂದು ಸಂದೇಹವು ಬಂದರೆ— ಮುಖ್ಯಪ್ರಾಣನು ವ್ಯಾಪ್ತನೇ ಎಂದು ಪೂರ್ವಪಕ್ಷವು, ಅಣುವೇ ಎಂದು ಸಿದ್ಧಾಂತವು. ಅದರಲ್ಲಿ ದೃಷ್ಟಾಯುಕ್ತಿಃ ಎಂದು ಪೂರ್ವಪಕ್ಷ ಸಿದ್ಧಾಂತ ಯುಕ್ತಿಯು. ಅಂದರೆ— ಪ್ರಾಣನಿಗೆ ಅಣುತ್ವವಿದ್ದರೆ **'ಮಹಾನ್ಹ್ಯೇಷ ಮುಖ್ಯಪ್ರಾಣೋ ಯೇನ ವ್ಯಾಪ್ತಂ ಚರಾಚರಂ, ಸಪ್ತಸ್ಕಂಧಗತೋ ಲೋಕಾನ್ ಯೋ ಬಿಭರ್ತಿ ಮಹಾಬಲಃ'** ಇತ್ಯಾದಿ ರೂಪ ಪ್ರಮಾಣದಿಂದ ನಿಶ್ಚಿತವಾದ ಸಕಲ ಜಗದ್ವ್ಯಾಪಕತ್ವವು ಕೂಡದೆ ಹೋಗಬೇಕಾಗುವುದು. ಏವಂಚ ದೃಷ್ಟವಾದುದು ಕೂಡದೆ ಇರುವುದರಿಂದ ಮುಖ್ಯನಿಗೇನೇ ವ್ಯಾಪ್ತಿಯು ಸಿದ್ಧಿಸುವ ಪ್ರಯುಕ್ತ ಅಣುತ್ವಶ್ರುತಿಗೆ ಅಪ್ರಾಮಾಣ್ಯವು ಬರುವುದರಿಂದ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವಲ್ಲ ಎಂದರೆ— ಹಾಗೆ ಹೇಳಕೂಡದು. **'ಅಣುರ್ವೈ ಮುಖ್ಯಪ್ರಾಣೋ ಯ ಉತ್ಕ್ರಾಮತಿ ನಾಡೀಭಿಃ'** ಎಂದು ಪ್ರಮಾಣದೃಷ್ಟವಾದ ಅಣುತ್ವವು ಪ್ರಾಣನಿಗೆ ವ್ಯಾಪ್ತತ್ವವಿದ್ದರೆ ಕೂಡಲಾರದು. ಮಹಾನ್ಹ್ಯೇ ಇತ್ಯಾದಿ ಶ್ರುತಿ ವಿರೋಧವಿಲ್ಲ. ಏಕೆಂದರೆ— ದೇಹದ್ದೇಶೆಯಿಂದ ಹೊರಗೆ ಇರತಕ್ಕ ಮುಖ್ಯ ವಾಯುರೂಪದಿಂದ ವ್ಯಾಪ್ತನಾಗಿದ್ದಾನೆಂದು ಅರ್ಥವು. ಏವಂಚ ಮಹತ್ವವನ್ನೂ, ಅಣುತ್ವವನ್ನೂ ರೂಪವಿಭೇದದಿಂದ ಅಂಗೀಕರಿಸಬೇಕಾಗುವುದರಿಂದ ಶ್ರುತಿ ಸಮನ್ವಯದಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವು. (10) ೧೧ನೇ ಜ್ಯೋತಿರಧಿಕರಣದಲ್ಲಿ **'ಜೀವಸ್ಯ ಕರಣಾನ್ಯಾಹುಃ ಪ್ರಾಣಾನ್' 'ಬ್ರಹ್ಮಣೋ ವಾ ಏತಾನಿ ಕರಣಾನಿ ಚಕ್ಷುಃ ಶ್ರೋತ್ರಂ ಮನೋವಾಗಿತಿ'** ಎನ್ನುವ ಶ್ರುತಿ ವಿವಾದದಿಂದ ಇಂದ್ರಿಯಗಳು ಜೀವಕರಣಗಳೋ, ಬ್ರಹ್ಮಕರಣಗಳೋ ಎಂದು ಸಂದೇಹ ಬಂದರೆ— ಜೀವಕರಣಗಳೆಂದು ಪೂರ್ವಪಕ್ಷವು, ಬ್ರಹ್ಮಕರಣಗಳೆಂದು ಸಿದ್ಧಾಂತವು. ಅದರಲ್ಲಿ ದೃಷ್ಟಾಯುಕ್ತಿಃ ಎನ್ನುವುದೇ ಪೂರ್ವಪಕ್ಷಸಿದ್ಧಾಂತಯುಕ್ತಿಯು. ಅಂದರೆ— ಅದರಲ್ಲಿ ಇಂದ್ರಿಯಗಳಿಗೆ ಜೀವಾಪ್ರಯೋಜ್ಯತ್ವವಿದ್ದರೆ, ಅನುಭವದಿಂದ ದೃಷ್ಟವಾದ ಜೀವಾಧೀನತ್ವವು ಕೂಡಲಾರದು. ಏವಂಚ ಜೀವಕರಣತ್ವವಿಲ್ಲವಾದರೆ ದೃಷ್ಟವಾದದ್ದು ಕೂಡದೆ ಇರುವುದರಿಂದ ಬ್ರಹ್ಮಕರಣತ್ವವಿಲ್ಲದಿರುವ ಪ್ರಯುಕ್ತ ಬ್ರಹ್ಮಕರಣತ್ವ ಶ್ರುತಿಯು ಅಪ್ರಮಾಣವೇ, ಆದಪ್ರಯುಕ್ತ ಶ್ರುತಿ ಸಮನ್ವಯದಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವಲ್ಲ ಎಂದರೆ— ಹೀಗೆ ಹೇಳಕೂಡದು. ಏಕೆಂದರೆ— ವಿಷಯ ವಿಶೇಷದಲ್ಲಿ ಆಗಲೀ, ಕಾಲವಿಶೇಷದಲ್ಲಿ ಆಗಲೀ ಇಂದ್ರಿಯಗಳಿಗೆ ಜೀವಾನಧೀನತ್ವವೂ ಅನುಭವಸಿದ್ಧವಾಗಿರುವುದರಿಂದ ಜೀವಕರಣತ್ವವಿಲ್ಲ. ಎಂದರೆ— **'ಯಶ್ಚಕ್ಷುಷಿ ತಿಷ್ಠನ್ ಯೋ ವಾಚಿ ತಿಷ್ಠನ್'** ಇತ್ಯಾದಿ ಶ್ರುತಿಯಿಂದ ಪ್ರಮಿತವಾದ ಈಶಾಧೀನಕರಣತ್ವವನ್ನು ಅಂಗೀಕರಿಸದಿದ್ದರೆ ಕೂಡಲಾರದು. ಹಾಗಾದರೆ ಚಕ್ಷುಷಾ ಪಶ್ಯಾಮಿ ಇದು ಮೊದಲಾದ ಅನುಭವಕ್ಕೂ **'ಜೀವಸ್ಯ ಕರಣಾನ್ಯಾಹುಃ'** ಎನ್ನುವ ಶ್ರುತಿಗೂ ಈಶನಿಂದಲೇ ಜೀವಾಧೀನತ್ವವು ಕ್ಲಪ್ತವಾಗಿದೆ. ತಥಾಚ ಇಂದ್ರಿಯಗಳಿಗೆ ನಿಯಮದಿಂದ ಜೀವಾನಧೀನತ್ವವು. 'ಇದಮಹಂ ಚಕ್ಷುಷಾ ಪಶ್ಯಾಮಿ' ಎಂದು ಇಚ್ಛೆಯಿದ್ದರೂ ಅದು ಕಾಣಲಾರದು. ಏವಂಚ ದೃಷ್ಟವಾದುದೂ ಕೂಡದೆ ಇರುವುದರಿಂದ ಬ್ರಹ್ಮಕಾರಣತ್ವವನ್ನೇ ಅಂಗೀಕರಿಸಬೇಕು. ಆದಪ್ರಯುಕ್ತ ಶ್ರುತಿ ಸಮನ್ವಯದಿಂದ ಜಗತ್ಕಾರಣತ್ವವು ಯುಕ್ತವೇ. (11) ೧೧ನೇ ತಇಂದ್ರಿಯಾಧಿಕರಣದಲ್ಲಿ **'ಅಥೇಂದ್ರಿಯಾಣಿ ಪ್ರಾಣಾ ವಾ ಇಂದ್ರಿಯಾಣಿ ದ್ವಾದಶೈವೇಂದ್ರಿಯಾಣ್ಯಾಹುರ್ಮನೋಬುದ್ಧೀ ತು ದ್ವಾದಶೇ'** ಎನ್ನುವ ಶ್ರುತಿವಿಪ್ರತಿಪತ್ತಿಯಿಂದ ಹದಿಮೂರು (೧೩) ಪ್ರಾಣಗಳಿಗೂ ಇಂದ್ರಿಯತ್ವವೋ? ಅಥವಾ ಹನ್ನೆರಡೇ (೧೨) ಪ್ರಾಣಗಳಿಗೋ ಎಂದು ಸಂದೇಹವು ಬಂದರೆ—ಎಲ್ಲಾ ಪ್ರಾಣಗಳೂ ಇಂದ್ರಿಯಗಳೆಂದು ಪೂರ್ವಪಕ್ಷವು. ಮುಖ್ಯಪ್ರಾಣನನ್ನು ಹೊರತು ಹನ್ನೆರಡೇ ಎಂದು ಸಿದ್ಧಾಂತವು, ಸಮಾನತ್ವಂ ಎಂದು ಪೂರ್ವಪಕ್ಷಸಿದ್ಧಾಂತಯುಕ್ತಿಯು. ಅಂದರೆ ಮುಖ್ಯಪ್ರಾಣನಿಗೆ

ಈಶಾಧೀನತ್ವವು ಸಮಾನವಾಗಿರುವುದರಿಂದ ಇಂದ್ರಿಯತ್ವಾದಿಗಳಿಂದ, ಚಕ್ಷುರಾದಿಗಳಿಂದ ಸಾಮ್ಯವು. ಏವಂಚ ಮುಖ್ಯಪ್ರಾಣನಿಗೂ ಚಕ್ಷುರಾದಿಗಳಿಂದ, ಸಮಾನತ್ವದಿಂದ ಇಂದ್ರಿಯತ್ವವಿದ್ದ ಪ್ರಯುಕ್ತ ತ್ರಯೋದಶತ್ವ ಶ್ರುತಿವಿರೋಧದಿಂದ, ದ್ವಾದಶತ್ವ ಶ್ರುತಿಯು ಅಪ್ರಮಾಣವಾದ ಪ್ರಯುಕ್ತ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವಲ್ಲ. ಎಂದರೆ ಹೀಗೆಹೇಳ ಕೂಡದು. **'ಯದಸ್ಮಿನ್ನಿದಂ ಸರ್ವಮಧ್ಯಾಧ್ಯೋರ್ನತ್'** **'ಪ್ರಾಣಸ್ಯೇತದ್ವಶೇ ಸರ್ವಂ ತ್ರಿದಿವೇಯತ್ಪ್ರತಿಷ್ಠಿತಂ'** ಇತ್ಯಾದಿ ಶ್ರುತಿಗಳದ್ದೆಶೆಯಿಂದ ಈಶನ ಸಾಮ್ಯವೂ ಇದೆ. **'ಪ್ರಾಣಸ್ಯೈತದ್ವಶೇ ಸರ್ವಂ ಪ್ರಾಣಃಪರವಶೇ ಸ್ಥಿತಃ'** ಎಂದು ಮಧ್ಯಮತ್ವವೂ ಕೂಡುತ್ತದೆ. ಏವಂಚ ಮುಖ್ಯಪ್ರಾಣನಿಗೆ ಸರ್ವಜಗತ್ಕರ್ತೃ ಈಶ್ವರನಿಂದ ಕಾರಯಿತೃತ್ವವಿದ್ದಪ್ರಯುಕ್ತ ಈಶನ ಸಾಮ್ಯವಿದ್ದುದರಿಂದ ಇಂದ್ರಿಯತ್ವವಿಲ್ಲದಿರುವಪ್ರಯುಕ್ತ ದ್ವಾದಶತ್ವಶ್ರುತಿಗೆ ಅಪ್ರಾಮಾಣ್ಯವು ಕೂಡಲಾರದು. ಆದುದರಿಂದ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವು. (12) ೧೨ನೇ ಸಂಜ್ಞಾಧಿಕರಣದಲ್ಲಿ **'ವಿರಿಂಚೋ ವಾ ಇದಂ ವಿರೇಚಯತಿ'** **'ಅಥ ಕಸ್ಮಾದುಚ್ಯತೇ ಪರಮ ಇತಿ ಪರಮಾದ್ಧ್ಯೇತೇ ನಾಮ ರೂಪೇ ವ್ಯಾಕ್ರಿಯೇತೇ'** ಎನ್ನುವ ಶ್ರುತಿವಿವಾದದಿಂದ ಶರೀರಾದಿಗಳು ಚತುರ್ಮುಖನಿಂದ ಸೃಷ್ಟಿಸಲ್ಪಟ್ಟವುಗಳೋ ಪರಬ್ರಹ್ಮನಿಂದಲೋ ಎಂದು ಸಂದೇಹವು ಬಂದರೆ ಚತುರ್ಮುಖನಿಂದ ಸೃಷ್ಟಿಸಲ್ಪಟ್ಟದ್ದು ಎಂದು ಪೂರ್ವಪಕ್ಷವು, ಪರಬ್ರಹ್ಮಸೃಷ್ಟವೇ ಎಂದು ಸಿದ್ಧಾಂತವು. ಅದರಲ್ಲಿ **'ಕರ್ತೃಶಕ್ತಿಃ'** ಎಂದು ಪೂರ್ವಪಕ್ಷ ಸಿದ್ಧಾಂತಯುಕ್ತಿಯು. ಅಂದರೆ— ಚತುರ್ಮುಖನಿಗೂ ನಾಮ ರೂಪಾತ್ಮಕ ದೇಹಾದಿಸರ್ಜಕತ್ವಶಕ್ತಿಯಿದ್ದಪ್ರಯುಕ್ತ ವಿರಿಂಚನೇ ಸ್ವತಂತ್ರವಾಗಿ ಶರೀರಾದಿಗಳನ್ನು ಸೃಷ್ಟಿಮಾಡಿದವನು. ಏವಂಚ ವಿರಿಂಚನಿಗೂ ಕರ್ತೃತ್ವಶಕ್ತಿಯಿದ್ದಪ್ರಯುಕ್ತ **'ವಿರಿಂಚೋ ವಾ'** ಎನ್ನುವ ಪ್ರಬಲ ಶ್ರುತಿವಿರೋಧದಿಂದ **'ಅಥ ಕಸ್ಮಾತ್ ಉಚ್ಯತೇ'** ಎನ್ನುವ ಶ್ರುತಿಯು ಅಪ್ರಮಾಣವಾದ ಪ್ರಯುಕ್ತ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವಲ್ಲ, ಎಂದರೆ ಹೀಗೆ ಹೇಳಕೂಡದು. **'ತ್ರಿವೃತ್ಕ್ರಿಯಾ ಯತೋ ವಿಷ್ಣೋ ರೂಪಂ ಚ ತದಪೇಕ್ಷಯಾ । ರೂಪಾಪೇಕ್ಷಂ ತಥಾ ನಾಮ ವ್ಯವಹಾರಸ್ತದಾತ್ಮಕಃ । ಅತೋ ರೂಪಸ್ಯ ನಾಮ್ನಶ್ಚ ವ್ಯವಹಾರಸ್ಯ ಚೈಕರಾಟ್ । ಹರಿರೇವ ಯತಃ ಕರ್ತಾ ಪಿತಾಽತೋ ಭಗವಾನ್ ಪ್ರಭುಃ'** ॥ ಇತ್ಯಾದಿಗಳದ್ದೆಶೆಯಿಂದ ಈಶ್ವರನಿಗೇನೇ ಮುಖ್ಯವಾಗಿ ಕರ್ತೃತ್ವಶಕ್ತಿಯಿರುವುದು. ಏವಂಚ ವಿಷ್ಣುವಿಗೇನೇ ಕರ್ತೃತ್ವಶಕ್ತಿಯಿದ್ದಪ್ರಯುಕ್ತ ಶ್ರುತಿಪ್ರಾಮಾಣ್ಯವು ಕೂಡುತ್ತದೆ. ಆದಕಾರಣ ವಿಷ್ಣುವಿಗೇನೇ ಜಗತ್ಕರ್ತೃತ್ವವು ಯುಕ್ತವು. (13) ೧೩ನೇ ಮಾಂಸಾಧಿಕರಣದಲ್ಲಿ **'ಅದ್ಭ್ಯೋ ಹೀದಮುತ್ಪದ್ಯತೇ ಆಪೋ ವಾವ ಮಾಂಸಂ'** **'ಪೃಥಿವೀಂ ಶರೀರಂ'** **'ಸೋಽಗ್ನೇರ್ದೇವಯೋನ್ಯಾ ಆಹುತಿಭ್ಯೋ ಹಿರಣ್ಯಶರೀರಃ ಇಮಾಸ್ತಿಸ್ರೋ ದೇವತಾಃ'** ಎನ್ನುವ ಶ್ರುತಿವಿಗಾನದಿಂದ ಶರೀರವು ಆಪ್ಯವೋ, ಪಾರ್ಥಿವವೋ, ತೈಜಸವೋ, ಭೂತತ್ರಯಾತ್ಮಕವೋ ಎಂದು ಸಂದೇಹವು ಬಂದರೆ, ಆಪ್ಯವೇ, ಪಾರ್ಥಿವವೇ, ತೈಜಸವೇ ಎಂದಾಗಲೀ ಪೂರ್ವಪಕ್ಷವು. ಭೂತತ್ರಯಾತ್ಮಕವೆಂದು ಸಿದ್ಧಾಂತವು. ಅದರಲ್ಲಿ ವಿಮಿಶ್ರತಾ ಎಂದು ಪೂರ್ವಪಕ್ಷಸಿದ್ಧಾಂತನ್ಯಾಯವು. ಅಂದರೆ ಶರೀರದಲ್ಲಿರತಕ್ಕ ಪೃಥಿವ್ಯಪ್ ತೇಜೋರೂಪಗಳಾದ ಭೂತಗಳಿಗೆ ಪರಸ್ಪರವಾಗಿ ಮಿಶ್ರೀಭಾವವನ್ನು ಅಂಗೀಕರಿಸಿದರೆ ಮಿಶ್ರತ್ವವಿದ್ದಪ್ರಯುಕ್ತವೇ 'ಆಪಃ ಶರೀರಂ' ಇತ್ಯಾದಿ ಶರೀರಕ್ಕೆ ಅಪ್‌ತ್ವಾದಿಗಳಿಂದ ವಿಶೇಷೋಕ್ತಿಯು ಬಾರದೆ ಹೋಗಬೇಕಾಗುವುದು. ಏವಂಚ ಭೂತಗಳಿಗೆ ಮಿಶ್ರತ್ವವಿರೋಣದರಿಂದ ವಿಶೇಷೋಕ್ತಿಯು ಕೂಡದೆ ಇರುವುದರಿಂದ ಅದನ್ನು ಪ್ರತಿಪಾದಿಸತಕ್ಕ ಶ್ರುತಿಯು ಅಪ್ರಮಾಣವೇ, ಆದಕಾರಣ

ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವಲ್ಲ ಎಂದರೆ— ಹೀಗೆ ಹೇಳ ಕೂಡದು. **'ಅನ್ನಮಶಿತಂ ತ್ರೇಧಾವಿಧೀಯತೇ'** ಇತ್ಯಾದಿಗಳಿಂದ ಮಿಶ್ರತ್ವವಿದ್ದರೂ ವಿಶೇಷೋಕ್ತಿಯು ಇದೆ. **'ಸರ್ವಂ ಚ ಭೌತಿಕಂ ಮಿಶ್ರಂ ಮಿಶ್ರತ್ವೇಽಪಿ ವಿಶೇಷಿತಾ । ಭೌಮಂ ಮಾಂಸಮಸೃಗ್ವಾರಿ ತೇಜೋಮಜ್ಜಾ ವಿಶೇಷತಃ । ಪಾರ್ಥಿವಾನಾಂ ಶರೀರಾಣಾಮರ್ಥೇನ ಪೃಥಿವೀ ಸ್ಮೃತಾ'** ॥ ಇತ್ಯಾದಿ ವಿಶೇಷೋಕ್ತಿಯೂ ಇದೆ. ಏವಂಚ ವಿಮಿಶ್ರವಾಗಿರುವುದರಿಂದ ದೇಹವು ಪಾಂಚಭೌತಿಕವಾದಾಗ್ಯೂ ಶ್ರುತಿಪ್ರಾಮಾಣ್ಯವು ಕೂಡುವುದರಿಂದ ಶ್ರೀ ಹರಿಗೆ ಶ್ರುತಿಸಮನ್ವಯದಿಂದ ಜಗತ್ಕರ್ತೃತ್ವವು ಯುಕ್ತವೇ.



## ೨ನೇ ಅಧ್ಯಾಯದ ೪ನೇ ಪಾದದ ಸಾರಾಂಶ.

೧ನೇ **ಪ್ರಾಣೋತ್ಪತ್ತ್ಯಧಿಕರಣದಲ್ಲಿ**—ಇಂದ್ರಿಯಾನುತ್ಪತ್ತಿ ಶ್ರುತಿವಿರೋಧವನ್ನೂ,
೨ನೇ **ತತ್ಪ್ರಾಗಧಿಕರಣದಲ್ಲಿ**—ಮನೋಽನುತ್ಪತ್ತಿ ಶ್ರುತಿವಿರೋಧವನ್ನೂ,
೩ನೇ **ತತ್ಪೂರ್ವಕತ್ವಾಧಿಕರಣದಲ್ಲಿ**—ವಾಗನುತ್ಪತ್ತಿ ಶ್ರುತಿವಿರೋಧವನ್ನೂ,
೪ನೇ **ಸಪ್ತಗತ್ಯಧಿಕರಣದಲ್ಲಿ**—ಇಂದ್ರಿಯಸಂಖ್ಯಾವಿಷಯ ಶ್ರುತಿವಿರೋಧವನ್ನೂ,
೫ನೇ **ಅಣ್ವಧಿಕರಣದಲ್ಲಿ**—ಪ್ರಾಣಪರಿಮಾಣ ಶ್ರುತಿವಿರೋಧವನ್ನೂ,
೬ನೇ **ಶ್ರೇಷ್ಠಾಧಿಕರಣದಲ್ಲಿ**—ಮುಖ್ಯಪ್ರಾಣಾನುತ್ಪತ್ತಿ ಶ್ರುತಿವಿರೋಧವನ್ನೂ,
೭ನೇ **ಚಕ್ಷುರಾದ್ಯಧಿಕರಣದಲ್ಲಿ**—ಮುಖ್ಯಪ್ರಾಣಸ್ವಾತಂತ್ರ್ಯ ಶ್ರುತಿವಿರೋಧವನ್ನೂ,
೮ನೇ **ಪಂಚವೃತ್ಯಧಿಕರಣದಲ್ಲಿ**—ಪ್ರಾಣಾಪಾನಾದಿಗಳಿಗೆ ಮುಖ್ಯದಾಸತ್ವ ತತ್ಸ್ವರೂಪತ್ವ ಶ್ರುತಿವಿರೋಧವನ್ನೂ,
೯ನೇ **ಅಣ್ವಧಿಕರಣದಲ್ಲಿ**—ಮುಖ್ಯಪ್ರಾಣಪರಿಮಾಣ ಶ್ರುತಿವಿರೋಧವನ್ನೂ,
೧೦ನೇ **ಜ್ಯೋತಿರಧಿಕರಣದಲ್ಲಿ**- ಚಕ್ಷುರಾದಿಗಳಿಗೆ ಜೀವಕರಣತ್ವ ಶ್ರುತಿವಿರೋಧವನ್ನೂ,
೧೧ನೇ **ತಇಂದ್ರಿಯಾಧಿಕರಣದಲ್ಲಿ**—ಮುಖ್ಯಪ್ರಾಣನಿಗೆ ಇಂದ್ರಿಯತ್ವ ಶ್ರುತಿವಿರೋಧವನ್ನೂ,
೧೨ನೇ **ಸಂಜ್ಞಾಧಿಕರಣದಲ್ಲಿ**—ಶರೀರಾದಿ ರೂಪನಾಮಾತ್ಮಕಪ್ರಪಂಚಕ್ಕೆ ಚತುರ್ಮುಖ ಸೃಷ್ಟತ್ವ ಶ್ರುತಿವಿರೋಧವನ್ನೂ,
೧೩ನೇ **ಮಾಂಸಾಧಿಕರಣದಲ್ಲಿ**—ಶರೀರಕ್ಕೆ ಪೃಥಿವ್ಯಪ್‌ತೇಜಸ್ಸುಗಳ ಮಧ್ಯದಲ್ಲಿ ಅನ್ಯತಮ ವಿಕಾರತ್ವ ಶ್ರುತಿವಿರೋಧವನ್ನೂ, ಪರಿಹರಿಸಿದರು.

ಆದುದರಿಂದ ೧ ಯುಕ್ತಿವಿರೋಧ. ೨ ಸಮಯವಿರೋಧ. ೩ ಶ್ರುತಿವಿರೋಧ. ೪ ನ್ಯಾಯೋಪೇತ ಶ್ರುತಿವಿರೋಧ ಎಂದು ನಾಲ್ಕು ವಿಧವಾದ ವಿರೋಧವನ್ನೂ, ಈ ನಾಲ್ಕು ಪಾದಗಳಲ್ಲಿ ಪರಿಹರಿಸಿರುವುದರಿಂದ ಅವಿರುದ್ಧವಾದ ನಿಖಿಲಶ್ರುತಿಸಮನ್ವಯದಿಂದ ಶ್ರೀಹರಿಯುಜಗತ್ಕರ್ತನೂ ಸಕಲ ಗುಣಪರಿಪೂರ್ಣನೂ ನಿರ್ದೋಷನೆಂದೂ ಸಿದ್ಧವಾಯಿತು. ॥ ೨ ॥ ೩ ॥

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ
ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನೇ ದ್ವಿತೀಯಾಧ್ಯಾಯಸ್ಯ
ಚತುರ್ಥಃ ಪಾದಃ ।

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ
ಶ್ರೀಮತ್ ಬ್ರಹ್ಮಸೂತ್ರಾನು ವ್ಯಾಖ್ಯಾನದಲ್ಲಿ
೨ನೇ ಅಧ್ಯಾಯದಲ್ಲಿ ೪ನೇ ಪಾದವು ಸಮಾಪ್ತವಾಯಿತು.

ಇತಿ ಶ್ರೀಮತ್ಪೂರ್ಣಪ್ರಮತಿ ಭಗವತ್ಪಾದಸುಕೃತೇ
ರನುವ್ಯಾಖ್ಯಾನಸ್ಯ ಪ್ರಗುಣಜಯತೀರ್ಥಾಖ್ಯಯತಿನಾ ।
ಕೃತಾಯಾಂ ಟೀಕಾಯಾಂ ವಿಷಮ ಪದವಾಕ್ಯಾರ್ಥ ವಿವೃತೌ ॥
ದ್ವಿತಿಯೋಽಧ್ಯಾಯೋಽಸ್ಮಿನ್ ಚರಮಚರಣಃ ಪರ್ಯವಸಿತಃ ॥
ಶ್ರೀಮತ್ಪರಿಮಲಸ್ಯಾರ್ಥಂ ನಯಚಂದ್ರಿಕಯೇರಿತಂ ।
ನ್ಯಾಯರತ್ನಾವಳೀ ಸಾರಮಪಿ ಸಂಗೃಹ್ಯ ಸನ್ಮುದೇ ॥
ಅನುವ್ಯಾಖ್ಯಾಸುಧಾಗ್ರಂಥ ದ್ವಿತೀಯಾಧ್ಯಾಯ ಸನ್ಮಣಿಃ ।
ತಂತ್ರಿನಾರಾಯಣಾಖ್ಯೇನ ಮಧ್ವೇಶಚರಣಾರ್ಪಿತಃ ॥
ಭಾಷಾಟೀಕಾನುಸಾರೇಣ ಗ್ರಥಿತೋ ಜಯತಾದ್ಭುವಿ ॥

ಅವಿರೋಧ್ಯಾಯವು ಸಮಾಪ್ತವಾಯಿತು.

